ಅಂತರ ಭಾರತೀಯ ಪುಸ್ತಕ ಮಾಲೆ

# ಕುರ್ರತುಲ ಐನ ಹೈದರ ಅವರ ಆಯ್ದ ಕತೆಗಳು

ಅನುವಾದ

ಪಂಚಾಕ್ಷರಿ ಹಿರೇಮಠ




ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಸೌಜನ್ಯ : ಈ ಸಂಕಲನದಲ್ಲಿನ 'ನಿರ್ಲಿಪ್ತ', 'ಕಾರಮನ್' ಮತ್ತು 'ಡಾಲನವಾಲಾ' ಕತೆಗಳು ಡಾ. ಪಂಚಾಕ್ಷರಿ ಹಿರೇಮಠ ಅವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಸಂಕಲನವೊಂದಕ್ಕೆ ಮೊದಲೇ ಅನುವಾದ ಮಾಡಿದಂಥವು. ಕೇಂದ್ರ ಸಾಹಿತ್ಯ ಅಕಾಡೆಮಿಯ ಅನುಮತಿ ಪಡೆದು ಈ ಕತೆಗಳನ್ನು ಇಲ್ಲಿ ಸೇರಿಸಲಾಗಿದೆ.

ISBN 81-237-3652-5

ಮೊದಲ ಮುದ್ರಣ : 2001 (ಶಕ 1923)



Original Title: Qurratul Ain Hyder Kee Muntakhab Kahaniyan (Urdu)
Kannada Translation: Qurratul Ain Hyder Avara Ayda Kathegalu

**ರೂ. 85.00**

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸದೆಹಲಿ-110 016 ಇವರಿಂದ ಪ್ರಕಟಿತ.

# ಪರಿವಿಡಿ

# ನಿರ್ಲಿಪ್ತ

ಗಾಜೀಪುರದ ಗೌರ್ನಮೆಂಟ್ ಹೈಸ್ಕೂಲಿನ ಫುಟ್‌ಬಾಲ್ ಟೀಮ್, ಇನ್ನೊಂದು ಹೈಸ್ಕೂಲಿನೊಂದಿಗೆ ಮ್ಯಾಚ್ ಆಡಲು ಹೋಗಿತ್ತು. ಅಲ್ಲಿ ಆಟಕ್ಕಿಂತ ಮೊದಲೇ ಹುಡುಗರಲ್ಲಿ ಯಾವುದೋ ಸಣ್ಣ ಮಾತಿಗಾಗಿ ಜಗಳವಾಯಿತು, ಹೊಡೆದಾಟ ಬಡಿದಾಟ ಸುರುವಾಯಿತು. ಆಟದ ಯಾವುದೋ ಪಾಯಿಂಟ್ ಮೇಲೆ ಜಗಳ ಆರಂಭವಾಗಿತ್ತು. ನೋಡಲು ಬಂದವರು, ಸ್ಟಾಫ್‌ನವರು ಕೂಡ ಇದರಲ್ಲಿ ಆಸಕ್ತಿ ವಹಿಸಿದರು. ಯಾವ ಹುಡುಗರು ಜಗಳ ಬಿಡಿಸಲು ಹೋದರೋ ಅವರಿಗೂ ಗಾಯವಾಯಿತು. ಅವರಲ್ಲಿ ನನ್ನ ಸೋದರನೂ ಇದ್ದ. ಗೌರ್ನಮೆಂಟ್ ಹೈಸ್ಕೂಲಿನ ಒಂಭತ್ತನೆಯ ಕ್ಲಾಸಿನ ವಿದ್ಯಾರ್ಥಿಯಾಗಿದ್ದ ಅವನ ಹಣೆಯಲ್ಲಿ ಗಾಯವಾಗಿತ್ತು ಹಾಗೂ ಮೂಗಿನಿಂದ ರಕ್ತ ಸುರಿಯಲಾರಂಭಿಸಿತ್ತು. ಈಗ ಉಪದ್ರವ ಇಡೀ ಮೈದಾನದಲ್ಲಿ ಹಬ್ಬಿತು. ಹೀಗಾಗಿ ಜನ ಚಲ್ಲಾಪಿಲ್ಲಿ ಆಗತೊಡಗಿದರು. ಈ ಗದ್ದಲದಲ್ಲಿ ನಿಜವಾಗಿ ಗಾಯಗೊಂಡವನನ್ನು ಯಾರೂ ದರಕಾರು ಮಾಡಲಿಲ್ಲ.

ಈ ಹಿಂದುಳಿದ ಜಿಲ್ಲೆಯಲ್ಲಿ ಟೆಲಿಫೋನ್ ದುರ್ಲಭದ್ದಾಗಿತ್ತು. ಇಡೀ ನಗರದಲ್ಲಿ ಕೇವಲ ಆರು ಕಾರುಗಳಿದ್ದವು. ಹೀಗಿರುವಾಗ ಹಾಸ್ಪಿಟಲ್ ಎಂಬೊಲೆನ್ಸದ ಪ್ರಶ್ನೆಯೇ ಬರುವುದಿಲ್ಲ. ಅಂದು ರವಿವಾರ ಬೇರೆ. ಹೊರಗೆ ಜನರೇ ಇರಲಿಲ್ಲ. ಗಾಳಿಯಲ್ಲಿ ಹಳದಿ ಎಲೆಗಳು ಉದುರಿ ಹಾರಾಡುತ್ತಿದ್ದವು. ಹಿಂದಿನ ಪಡಸಾಲೆಯಲ್ಲಿ ಯಾರೂ ಇರಲಿಲ್ಲ. ನಾನೊಬ್ಬಳೇ ಕುಳಿತು ಗೊಂಬೆಗಳೊಂದಿಗೆ ಆಟವಾಡುತ್ತಿದ್ದೆ. ಅಷ್ಟರಲ್ಲಿ ಟಕ್..... ಟಕ್..... ಮಾಡುತ್ತ ಒಂದು ಟಾಂಗಾ ಬಂತು. ಹದಿನೇಳು ಹದಿನೆಂಟು ವರ್ಷದ ಓರ್ವ ಅಪರಿಚಿತ ಹುಡುಗ ನನ್ನ ಸೋದರನನ್ನು ಟಾಂಗಾದಿಂದ ಕೆಳಗಿಳಿಸಿ, ತನ್ನ ಆಸರೆ ನೀಡಿ ಕರೆದುಕೊಂಡು ಬಂದ. ಸೋದರನ ಹಣೆಯಲ್ಲಿಂದ ರಕ್ತ ಹರಿಯುವುದನ್ನು ಕಂಡು ನಾನು ಹೆದರಿದ್ದೆ. ಆ ಕೂಡಲೇ ಒಂದು ಕಂಬದ ಮರೆಯಲ್ಲಿ ಅಡಗಿಕೊಂಡೆ. ಇಡೀ ಮನೆಯಲ್ಲಿ ಕೋಲಾಹಲವಾಯಿತು. ತಾಯಿ ಹೌಹಾರಿ ಹೊರಗೆ ಬಂದರು. ಅಪರಿಚಿತ ಹುಡುಗ ಅತ್ಯಂತ ಸಹಜತೆಯಿಂದ ತಾಯಿಗೆ ಹೇಳತೊಡಗಿದ– ''ಇಲ್ಲಿ ನೋಡಿ, ಗಾಬರಿಯಾಗಬೇಕಾಗಿಲ್ಲ. ನಾನು ಹೇಳುತ್ತಿದ್ದೇನಲ್ಲ ಗಾಬರಿಯಾಗಬೇಕಾಗಿಲ್ಲವೆಂದು.....'' ಮತ್ತು ಆ ಹುಡುಗ ನನ್ನತ್ತ ತಿರುಗಿ– ''ಮುನ್ನಿ, ಓಡಿ ಹೋಗಿ ಅಣ್ಣನಿಗೆ ಒಂದು ಲೋಟ ನೀರು ತೆಗೆದುಕೊಂಡು ಬಾ'' ಎಂದಾಗ ಅದೆಷ್ಟೋ ಆಳುಗಳು ನೀರಿನ ಜಗ್ ಮತ್ತು ಗ್ಲಾಸು ತೆಗೆದುಕೊಂಡು ಅಣ್ಣನ ಸುತ್ತ ನಿಂತರು. ಹುಡುಗ ಅವರಿಗೆ ಕೇಳಿದ– ''ಸಾಹೇಬರು ಎಲ್ಲಿದ್ದಾರೆ ?''

''ಸಾಹೇಬರು ಹೊರಗೆ ಹೋಗಿದ್ದಾರೆ'' ಎಂದು ಕೆಲವರು ಹೇಳಿದರು. ಆಗ ಇನ್ನೊಬ್ಬ ''ಸಾಹೇಬರು ತಮ್ಮ ಕಚೇರಿಯಲ್ಲಿದ್ದಾರೆ'' ಎಂದ. ಹುಡುಗ ತಡಮಾಡದೇ

ತಂದೆಯ ಕಚೇರಿಗೆ ಹೋದ. ತಂದೆಯವರು ಬಾಗಿಲು ಹಾಕಿಕೊಂಡು ಯಾವುದೋ ಮಹತ್ವಪೂರ್ಣ ಕೇಸಿನ ತೀರ್ಪು ಬರೆಯುವಲ್ಲಿ ಮಗ್ನರಾಗಿದ್ದರು. ಹುಡುಗ ಬಾಗಿಲು ತಟ್ಟಿದ ಹಾಗೂ ಒಳಗೆ ಹೋಗಿ ಮೇಜಿನ ಎದುರಿಗೆ ನಿಂತು ತುಂಬ ಆತ್ಮ ವಿಶ್ವಾಸದಿಂದ ಹಾಗೂ ನಮ್ರತೆಯಿಂದ ಹೇಳಿದ– ''ಸಾಹೇಬರೆ, ತಮ್ಮ ಚಿರಂಜೀವಿ ನಮ್ಮ ಸ್ಕೂಲಿಗೆ ಮ್ಯಾಚ್ ಆಡಲು ಬಂದಿದ್ದ. ಆತನಿಗೆ ಕೊಂಚ ಗಾಯವಾಗಿದೆ. ಆಟ ಆಟದಲ್ಲಿ ಅದೇಕೋ ಜಗಳವಾಯಿತು. ನನ್ನ ಹೆಸರು ಇಕಬಾಲ್ ಬಖ್ತ್. ನಾನು ಮುನ್ಷಿ ಖುಶ್ ಬಖ್ತರಾಯ್ ಸಕ್ಸೇನಾರವರ ಮಗ, ಅವರು ಸಿಟಿ ಕೋರ್ಟಿನಲ್ಲಿ ಮುಖ್ತಾರ ಆಗಿದ್ದಾರೆ. ತಮ್ಮಲ್ಲಿ ನನ್ನ ನಮ್ರ ವಿನಂತಿಯೇನೆಂದರೆ ನಮ್ಮ ಸ್ಕೂಲ್ ಬಂದ್ ಮಾಡಲು ಆಜ್ಞೆ ನೀಡಬೇಡಿರಿ. ಹುಡುಗರಿಗೂ ದಂಡವನ್ನು ಹಾಕಬೇಡಿ. ಮೊದಲನೆಯ ಮಾತೆಂದರೆ ನಮ್ಮ ಪರೀಕ್ಷೆ ನಡೆಯಲಿದೆ, ಎರಡನೆಯದು ನಮ್ಮ ಹುಡುಗರೆಲ್ಲ ಬಹಳ ಬಡವರಾಗಿದ್ದಾರೆ....''

ತಂದೆಯವರು ಬರೆಯುವುದನ್ನು ನಿಲ್ಲಿಸಿ ತಲೆಯೆತ್ತಿ ಹುಡುಗನನ್ನು ನೋಡಿದರು. ಆತನ ಧೈರ್ಯ, ಆತ್ಮ ವಿಶ್ವಾಸ ಹಾಗೂ ವಿಷಯ ಪ್ರತಿಪಾದಿಸಿದ ರೀತಿಯನ್ನು ಕಂಡು ತಂದೆಯವರು ಬಹಳ ಪ್ರಭಾವಿತರಾಗಿದ್ದರು, ಸಂತುಷ್ಟರಾಗಿದ್ದರು. ಅವರು ಅವನನ್ನು ಕರೆದು ಅಪಾರ ಪ್ರೀತಿಯಿಂದ ತಮ್ಮ ಹತ್ತಿರ ಕೂಡಿಸಿಕೊಂಡರು.

ಈ ರೀತಿಯಾಗಿ ಇಕ್ಬಾಲಮಿಯ್ಯಾ ನಮ್ಮಲ್ಲಿ ಬರು–ಹೋಗುವುದು ಆರಂಭವಾಯಿತು. ಸೋದರನೊಂದಿಗೆ ಆತನ ದೋಸ್ತಿ ಗಾಢವಾಯಿತು. ಆದರೆ ಆತ ಹೆಚ್ಚಾಗಿ ಮನೆಯ ಹೆಂಗಸರ ಹತ್ತಿರ ಕುಳ್ಳಿರುತ್ತಿದ್ದ. ಮನೆತನದ ವಿಷಯಗಳಲ್ಲಿ ಸಲಹೆ–ಸೂಚನೆ ನೀಡುತ್ತಿದ್ದ. ಪೇಟೆಯ ಧಾರಣಿ, ಲೋಕದ ಸ್ಥಿತಿ–ಗತಿಗಳ ಬಗ್ಗೆ ತಿಳಿವಳಿಕೆ ಮೂಡಿಸುತ್ತಿದ್ದ. ಹಾಸ್ಯ ಚಟಾಕಿ ಹಾರಿಸುತ್ತಿದ್ದ. ಎರಡನೆಯ ಸಲ ನಮ್ಮಲ್ಲಿಗೆ ಆತ ಬಂದಾಗ ಅಣ್ಣನಿಗೆ ಆತ ಬಂದುದ ತಿಳಿಸಲು ''ಇಕ್ಬಾಲಮಿಯ್ಯಾ ಬಂದಿದ್ದಾರೆ'' ಎಂದಿದ್ದೆ. ಆತ ಆ ಕೂಡಲೇ ತುಂಬ ಕೋಪದಿಂದ ನಡೆಯುತ್ತ ನನ್ನ ಹತ್ತಿರ ಬಂದ ಹಾಗೂ ಜೋರಾಗಿ ಹೇಳಿದ– ''ನೋಡು ಮುನ್ನಿ, ನಾನು ನಿನಗಿಂತ ಬಹಳ ದೊಡ್ಡವನಿರುವೆ, ನನಗೆ ನೀನು ಇಕ್ಬಾಲ ಭಾಯೀ ಎನ್ನು....ಏನೆಂದು ಕರೆವೆ ?''

''ಇಕ್ಬಾಲ ಭಾಯೀ'' ಎಂದು ನಾನು ಕೊಂಚ ಹೆದರುತ್ತಲೇ ಹೇಳಿದೆ.

ಇಕ್ಬಾಲ ಭಾಯೀ ನನಗೆ ಸದಾ ''ಮುನ್ನಿ'' ಎಂದೇ ಕರೆಯುತ್ತಿದ್ದ. ನನಗೆ ಆತ ನೀಡಿದ ಈ ಹೆಸರಿನ ಬಗೆಗೆ ತುಂಬ ಬೇಸರವಿತ್ತು. ಆದರೆ, ಆತನಿಗೆ ನನ್ನ ನಿಜ ಹೆಸರಿನಿಂದಲೇ ಕರೆ ಎಂದು ಹೇಳಲು ಧೈರ್ಯವಾಗುತ್ತಿರಲಿಲ್ಲ. ಈಗ ಆತ ಇಡೀ ಮನೆಯವರಿಗೆ ''ಇಕ್ಬಾಲ ಮಿಯ್ಯಾ'', ''ಇಕ್ಬಾಲ ಭಾಯಿ'' ಮತ್ತು ''ಇಕ್ಬಾಲ ಭಯ್ಯಾ'' ಆಗಿದ್ದ. ಹಿಂದಿನ ಲಾನ್‌ದಲ್ಲಿರುವ ದೊಡ್ಡದಾದ ಅರಳೆಮರ ನಮಗೆ ತುಂಬ ಮಹತ್ವದ್ದಾಗಿತ್ತು. ಅದರ ನೆರಳಿನಲ್ಲಿ ಹೊರಸು ಹಾಕಿಕೊಂಡು ಪುರಸೊತ್ತಿನ ಸಮಯದಲ್ಲಿ ಮಹಫಿಲ್ (ಸಭೆ) ನಡೆಸುತ್ತಿದ್ದೆವು. ಅದರ ಅಧ್ಯಕ್ಷತೆಯನ್ನು ಡ್ರೈವರ್ ಸಾಹೇಬ ವಹಿಸುತ್ತಿದ್ದರು. ಉಪಾಧ್ಯಕ್ಷ ಸ್ವಯಂ ಇಕ್ಬಾಲಭಾಯಿ ಆದರು. ಈ

ಮಹಫಿಲ್ಲಿನ ಇನ್ನುಳಿದ ಸದಸ್ಯರೆಂದರೆ ಉಸ್ತಾದ ಯುಸೂಫಖಾನ್, ಜಮುನಾ ಪಾಂಡೆ, ಮಹಾರಾಜ ಚಪರಾಸಿ, ಅಬ್ದುಲ್ ಬೇರಾ ಮತ್ತು ಅಣ್ಣ. ನಾನು ಆಮಂತ್ರಣವಿಲ್ಲದ ಅತಿಥಿಯಾಗಿ ಅತ್ತ ಇತ್ತ ಅಡ್ಡಾಡುತ್ತಿರುತ್ತೇನೆ. ಉಸ್ತಾದ ಯುಸೂಫಖಾನ್ ಅವರ ಕೋಣೆಯು ಪ್ರತ್ಯೇಕವಾಗಿತ್ತು, ಮನೆಯ ಉಳಿದ ಕೋಣೆಗಳೊಂದಿಗೆ ಸಂಬಂಧ ವಿರಲಿಲ್ಲ. ಅದರ ಬಾಗಿಲು ಲಾನ್ ಇದ್ದ ಕಡೆಯೇ ಇತ್ತು. ಉಸ್ತಾದ ಈ ಹಿಂದೆ ಸ್ಕೂಲಿನಲ್ಲಿ ಸಂಗೀತ ಶಿಕ್ಷಕರಾಗಿ ಕೆಲಸ ಮಾಡಿ, ಸಂಗೀತದಲ್ಲಿ ನಿಷ್ಣಾತರಾದ ವ್ಯಕ್ತಿಯಾಗಿದ್ದರು. ಈ ಹಿಂದೆ ರಾಮಪುರ ದರ್ಬಾರದೊಂದಿಗೆ ಅವರ ಸಂಬಂಧವಿತ್ತು. ಕಾವ್ಯ ರಚನೆಯನ್ನೂ ಮಾಡುತ್ತಿದ್ದರು. ಇಡೀ ದಿನ ನವಲ ಕಿಶೋರ ಪ್ರೆಸ್‌ನಲ್ಲಿ ಮುದ್ರಣಗೊಂಡ ಹಳೆಯ ಕಾದಂಬರಿಗಳನ್ನು ಓದುತ್ತಿದ್ದರು. ಮುದುಕರಾಗಿದ್ದರು. ಕಣ್ಣುಗಳಿಗೆ ಸುರಮಾ ಹಚ್ಚಿಕೊಳ್ಳುತ್ತಿದ್ದರು. ಚೂಪಾದ ಮೀಸೆ ಬಿಟ್ಟಿದ್ದರು. ಎರಡು ಹೊತ್ತಿನ ಊಟ ಹಾಗೂ ನಾಷ್ಟಾ (ಉಪಹಾರ) ಚಹಾ ಒಳ್ಳೆಯ ರೀತಿಯಲ್ಲಿ ತಟ್ಟೆಯಲ್ಲಿರಿಸಿಕೊಂಡು ಅವರ ಕೋಣೆಗೆ ಹೋಗಿ ತಲುಪಿಸಲಾಗುತ್ತಿತ್ತು. ಅಪರಾಹ್ನ ಅವರು ಒಳಗೆ ಬಂದು ತುಂಬ ಶಿಷ್ಟಾಚಾರದಿಂದ ತಾಯಿಗೆ ಭೈರವೀ ಮತ್ತು ಪಲಾಸ್ ರಾಗಗಳನ್ನು ಕಲಿಸುತ್ತಿದ್ದರು. ತಾಯಿ ಸಿತಾರ ನುಡಿಸುತ್ತಿದ್ದರು. ಇಕ್ಬಾಲ ಭಾಯೀ ಉಸ್ತಾದರ ಪ್ರಿಯ ಮಿತ್ರರಾಗಿ ಬಿಟ್ಟಿದ್ದರು. 'ಆರಾಯಿಶೆ ಮಹಫಿಲ್'[1], 'ತಿಲಸ್ಮಿ ಹೋಶರೂಬಾ'[2], 'ಅಸರಾರೆ ಲಂಡನ್'[3] ಮತ್ತು 'ಶರರ'[4] ಅವರ ಕಾದಂಬರಿಗಳ ಕೊಡಕೊಳ್ಳುವಿಕೆ ಇಬ್ಬರ ನಡುವೆ ನಡೆಯುತ್ತಲಿರುತ್ತಿತ್ತು. ಇಕ್ಬಾಲಭಾಯಿ ಈ ವರ್ಷ ಎಂಟ್ರೆನ್ಸ್ ಪರೀಕ್ಷೆಗೆ ಕೂಡುವವರಿದ್ದರು.

ಒಂದು ದಿನ ಗಿಡದ ಟೊಂಗೆಗೆ ನಾನು ಜೋತು ಬಿದ್ದುದನ್ನು ನೋಡಿದ ಅವರು ತಾಯಿಗೆ ಹೇಳಿದರು– ''ಮುನ್ನಿ ಓದು–ಬರಹ ಏನೂ ಮಾಡುತ್ತಿಲ್ಲ. ಯಾವಾಗಲೂ ಅದು ಇದು ಆಡುತ್ತಿರುತ್ತಾಳೆ'' ಎಂದು. ಅದಕ್ಕೆ ತಾಯಿ – ''ಇಲ್ಲಿ ಯಾವುದೂ ಶಾಲೆಯಿಲ್ಲವಲ್ಲ, ಎಲ್ಲಿ ಓದಬೇಕು ?'' ಎಂದು ಉತ್ತರಿಸಿದಳು. ಈ ಮುಂಚೆ ನನ್ನೋರ್ವ ಸಂಬಂಧಿ ನನಗೆ ಗಣಿತ ಕಲಿಸುವ ಪ್ರಯತ್ನ ಸಾಕಷ್ಟು ಮಾಡಿದ. ಆದರೆ ಆತನಿಗೆ ಅದರಲ್ಲಿ ಯಶಸ್ಸು ಸಿಕ್ಕಲಿಲ್ಲ. ಈಗ ಇಕ್ಬಾಲ ಭಾಯೀ... ಕೂಡಲೇ ವಾಲಂಟೀಯರ್ ಆಗಿ ಬಿಟ್ಟರು....

''ನನ್ನ ಪರೀಕ್ಷೆ ಮುಗಿದ ಕೂಡಲೇ ನಾನು ಮುನ್ನಿಗೆ ಪಾಠ ಹೇಳಿ ಕೊಡುತ್ತೇನೆ...''

ಒಂದು ರವಿವಾರ ಇಕ್ಬಾಲ ಭಾಯೀ ಬಂದು ನನ್ನ ಇಂಟರವ್ಯೂ ತೆಗೆದು ಕೊಂಡರು. ನಂತರ– ''ಇಂಗ್ಲೀಷ್ ಪರವಾಯಿಲ್ಲ, ಆದರೆ ಉರ್ದು, ಫಾರಸಿಗಳಲ್ಲಿ ತುಂಬ ಕಚ್ಚಾ ಇದ್ದಾಳೆ'' ಎಂದು ತಾಯಿಗೆ ರಿಪೋರ್ಟು ಒಪ್ಪಿಸಿದರು. ಇದಾದ ನಂತರ ಇಕ್ಬಾಲಭಾಯೀ ದಿನವೂ ಪ್ರತ್ಯಕ್ಷರಾಗತೊಡಗಿದರು. ಟ್ಯೂಷನ್‌ಗಾಗಿ ಅವರಿಗೆ ಪ್ರತಿ

1. 2. 3. ಪ್ರಸಿದ್ಧ ಉರ್ದು ಕಾದಂಬರಿಗಳು
4. ಪ್ರಸಿದ್ಧ ಉರ್ದು ಕಾದಂಬರಿಕಾರ

ತಿಂಗಳು ಹತ್ತು ರೂಪಾಯಿ ಕೊಡಬೇಕೆಂದು ನಿರ್ಣಯಿಸಲಾಯಿತು. ದಿನಾಲೂ ಸಾಯಂಕಾಲ ನಾಲ್ಕು ಗಂಟೆಗೆ ಅವರು ಕುಳಿತ ಟಾಂಗಾ ಮೇನ್‌ಗೇಟಿನೊಳಗೆ ಬರುವುದನ್ನು ನೋಡಿದರೆ ಸಾಕು ನನ್ನ ಎದೆ ಡವ ಡವ ಹೊಡೆದುಕೊಳ್ಳ ಲಾರಂಭಿಸುತ್ತಿತ್ತು. ಬೇಸಿಗೆ ಆರಂಭವಾಗಿತ್ತು. ಇಕ್ಬಾಲಭಾಯಿಯ ಆಜ್ಞೆಯಾಯಿತು– ''ನಾವು ಹೊರಗೆ ತೋಟದಲ್ಲಿ ಕುಳಿತು ನಿನಗೆ ಓದಿಸುತ್ತೇವೆ. ನಿನ್ನ ತಲೆ, ಅದರಲ್ಲಿ ಬರೀ ಬೂಸಾ ತುಂಬಿದೆ, ತಂಪು ಹವೆಯಲ್ಲಿ ಕೊಂಚ ಫ್ರೆಶ್ ಆಗಬಹುದು.'' ಈ ಕಾರಣದಿಂದಾಗಿ ಹಿಂದಿನ ತೋಟದಲ್ಲಿ ಒಂದು ಮರದ ಕೆಳಗೆ ನನಗಾಗಿ ಬೆತ್ತದ ಸಣ್ಣ ಕುರ್ಚಿ ಮತ್ತು ಮೇಜು ಇರಿಸಲಾಯಿತು. ಮಾಲಿಯಿಂದ ದೊಡ್ಡ ಕಸಬರಿಗೆ ಇಸಗೊಂಡು ಬಂದು ಗಿಡದ ಬುಡದಲ್ಲಿಯ, ಅದರಲ್ಲೂ ಇಕ್ಬಾಲಭಾಯಿಯ ಕುರ್ಚಿಯ ಕೆಳಗೆ ಸ್ವಚ್ಛವಾಗಿ ಕಸ ಹೊಡೆಯುತ್ತೇನೆ. ಹಾಗೆ ನೋಡಿದರೆ ನನಗೆ ಓದುವುದಕ್ಕಿಂತ ತೋಟದಲ್ಲಿ ಕಸಗುಡಿಸುವುದು ಅದೆಷ್ಟೋ ಒಳ್ಳೆಯದೆನ್ನಿಸುತ್ತದೆ.

ಇಕ್ಬಾಲಭಾಯಿ ಜಮಾ–ಖರ್ಚಿನ ಲೆಕ್ಕ ಕಲಿಸುವುದರಲ್ಲಿ ತಲೆ ಕೆಡಿಸಿಕೊಂಡ ನಂತರ ''ಕಪ್ಪು ಹಲಗೆ ತೆಗೆದುಕೊಂಡು ಬಾ'' ಎಂದು ಆಜ್ಞೆಯಾಯಿತು. ಹಲಗೆ ತಂದ ನಂತರ ಅದರ ಮೇಲೆ ಅತ್ಯಂತ ಸುಂದರವಾಗಿ ಬರೆಯುತ್ತಾರೆ.

> ಲೋಕದ ಚಕ್ರವರ್ತಿ ನಾನಾಗಿದ್ದೇನೆಂದು, ಲೆಕ್ಕಣಿಕೆ ಹೇಳುತ್ತದೆ,
> ಯಾವಾತ ಲೆಕ್ಕಣಿಕೆಯೊಂದಿಗೆ ತನ್ನ ಸಂಬಂಧವಿರಿಸಿಕೊಳ್ಳುವನೋ ಆತನನ್ನು
> ನಾನು ಸೌಭಾಗ್ಯದ ಅತ್ಯುಚ್ಚ ಪದವಿವರೆಗ ತಲುಪಿಸುತ್ತೇನೆಂದು, ಲೆಕ್ಕಣಿಕೆ
> ಹೇಳುತ್ತದೆ.

ನನ್ನ ಸೊಟ್ಟ–ಪಟ್ಟ ಅಕ್ಷರಗಳಲ್ಲಿ ಈ ಕವಿತೆಯ ಸಾಲುಗಳನ್ನು ಅದೆಷ್ಟೋ ಸಲ ಬರೆದೆ. ನನ್ನ ಬೆರಳುಗಳು ನೋವಾಗುವವರೆಗೂ ಬರೆದೆ. ಆಗ ನಾನು ದೇವರಲ್ಲಿ ಪ್ರಾರ್ಥಿಸುತ್ತೇನೆ– ''ದೇವರು ಇಕ್ಬಾಲಭಾಯಿ ಸಾಯುವಂತೆ ಕೃಪೆದೋರಲಿ'' ಎಂದು.

ಒಮ್ಮೆ ಪಾಠ ಒಪ್ಪಿಸುವ ಬದಲಾಗಿ ಒಂಟಿಕಾಲಿನಿಂದ ಕುರ್ಚಿಯ ಮೇಲೆ ನರ್ತಿಸುತ್ತಲಿದ್ದೆ. ಆಗ ಇಕ್ಬಾಲಭಾಯಿಗೆ ಒಮ್ಮೆಲೇ ವಿಪರೀತ ಸಿಟ್ಟು ಬಂತು. ನನ್ನ ಕಿವಿ ಹಿಡಿದು ಜೋರಾಗಿ ಹಿಂಡಿದರು. ನನ್ನ ಮುಖವೆಲ್ಲ ಕೆಂಪಗಾಯಿತು. ನಾನಾಗ ಬೋರಾಡಿ ಅಳತೊಡಗಿದೆ. ಅನಂತರ ನನ್ನ ಹುಡುಗಾಟ ಕಡಿಮೆ ಮಾಡಿದೆ.

ಇಕ್ಬಾಲ್‌ಭಾಯಿ ನನಗೆ ಕೇವಲ ಐದಾರು ತಿಂಗಳು ಕಲಿಸಿರಬೇಕು. ಅಷ್ಟರಲ್ಲಿ ತಂದೆಯವರಿಗೆ ಗಾಜೀಪುರದಿಂದ ಇಟಾವಾಕ್ಕೆ ವರ್ಗವಾಯಿತು.

ನಾವು ಇಟಾವಾಕ್ಕೆ ಹೋದ ನಂತರ ಎರಡು ಮೂರು ವರ್ಷದವರೆಗೂ ಆಗಾಗ ಇಕ್ಬಾಲಭಾಯಿ ನನ್ನ ತಾಯಿಯವರಿಗೆ ಪತ್ರ ಬರೆಯುತ್ತಿದ್ದರು–''ನಾನೀಗ ಎಫ್. ಎ. ಓದುವ ವಿಚಾರ ಬಿಟ್ಟುಬಿಟ್ಟಿದ್ದೇನೆ. ಎಂಟ್ರೆನ್ಸ್‌ದಲ್ಲಿ ಥರ್ಡ್ ಡಿವಿಜನ್ ಬಂದಿದೆ. ಹೀಗಾಗಿ ನನ್ನ ಮನಸ್ಸಿಗೆ ತುಂಬ ಬೇಜಾರಾಗಿದೆ. ಈಗ ನಾನು ಕೂಡ ಕ್ಲರ್ಕ್, ಪೇಷಕಾರ, ಕಾನೂನು ಬಲ್ಲ ಯಾವುದಾದರೂ ಕೆಲಸ ಹುಡುಕಿಕೊಂಡು ಜೀವನ ಸಾಗಿಸಬೇಕೆಂದಿದ್ದೇನೆ. ಬಹಳವೆಂದರೆ ತಂದೆಯವರಂತೆ 'ಮುನ್ಷಿ' ಆಗಬಹುದು.

ಇದಕ್ಕಾಗಿ ಕಾನೂನು ಪರೀಕ್ಷೆ ಕೊಡಬೇಕೆಂದಿದ್ದೇನೆ. ಆದರೆ ಇಲ್ಲಿದ್ದು ಏನು ಮಾಡಲು ಸಾಧ್ಯ ?''

ಇದರ ನಂತರ ಇಕ್ಬಾಲ ಭಾಯಿಯ ಪತ್ರ ಬರಲಿಲ್ಲ.

ನಾನು ಐ.ಟಿ. ಕಾಲೇಜು ಲಖನೌದಲ್ಲಿ ಫಸ್ಟ್ ಇಯರ್ ಓದುತ್ತಿದ್ದೆ. ಆ ದಿನ ಕೆಲ ಅತಿಥಿಗಳು ನಮ್ಮಲ್ಲಿಗೆ ಚಹಾಕ್ಕಾಗಿ ಬಂದಿದ್ದರು. ಎಲ್ಲರೂ ಡ್ರಾಯಿಂಗ್ ರೂಮಿನಲ್ಲಿ ಕುಳಿತಿದ್ದರು. ಮೊಗಸಾಲೆಯಲ್ಲಿ ಬಂದು ಯಾರೋ ಕೂಗಿದರು–

''ಅರೆ ಭಾಯೀ ಕೋಯಿ ಹೈ .... ಯಾರಾದರೂ ಇದ್ದೀರಾ.....''

''ಯಾರು ?.....'' ಎಂದು ತಾಯಿಯವರು ಕೋಣೆಯೊಳಗಿನಿಂದಲೇ ಕೇಳಿದರು.

''ನಾವು ಬಂದಿದ್ದೇವೆ.....ಇಕ್ಬಾಲ ಬಖ್ತ....''

ಈ ಮಾತು ಕೇಳಿದ ತಾಯಿಯವರು ಅಪಾರ ಸಂತೋಷದಿಂದ ಇಕ್ಬಾಲಭಾಯಿಯನ್ನು ಒಳಗೆ ಕರೆದರು. ಹಾಲ್‌ನಲ್ಲಿ ಬಹಳ ಶ್ರೀಮಂತ ಜನರಿದ್ದರು. ಇಕ್ಬಾಲಭಾಯಿ ಸುತ್ತಲೂ ಕಣ್ಣಾಡಿಸುತ್ತ ಕೊಂಚ ಸಂಕೋಚದಿಂದ ಮುದುಡಿದರು. ಆದರೆ ಕೂಡಲೇ ಗಂಭೀರತೆಯಿಂದ ತಾಯಿಯ ಹತ್ತಿರ ಹೋಗಿ ಕುಳಿತರು. ನಂತರ ಇಕ್ಬಾಲಭಾಯಿಯ ದೃಷ್ಟಿ ನನ್ನ ಮೇಲೆ ಬಿತ್ತು. ಕೂಡಲೇ ತುಂಬ ಖುಷಿಯಿಂದ ''ಅರೇ ಮುನ್ನಿ.....ನೀನಿಷ್ಟು ದೊಡ್ಡವಳಾಗಿ ಬಿಟ್ಟಿರುವೆಯಾ ?'' ಎಂದರು.

ನಾನು ಆಗ ತಾನೇ ಕಾಲೇಜಿಗೆ ಹೋಗತೊಡಗಿದ್ದೆ. ನಾನು ಈಗ ಕಾಲೇಜ್ ಸ್ಟೂಡೆಂಟ್ ಎನ್ನುವ ಅಭಿಮಾನ ಮೂಡಿತ್ತು. ಇಕ್ಬಾಲಭಾಯಿ ಎಲ್ಲ ಜನರೆದುರಿಗೆ ಈ ರೀತಿ 'ಅರೇ ಮುನ್ನಿ' ಎಂದು ಕರೆದುದು, ನನಗೆ ತುಂಬ ಸಿಟ್ಟು ಬರಿಸಿತ್ತು.

ಇಕ್ಬಾಲಭಾಯಿ ಹೊಲಸಾದ ಪೈಜಾಮಾ ಮುದುಡಿದ ಷೇರವಾನಿ ಹಾಕಿಕೊಂಡಿದ್ದರು. ಇಕ್ಬಾಲಭಾಯಿಯ ಆರ್ಥಿಕ ಸ್ಥಿತಿ ಚೆನ್ನಾಗಿಲ್ಲವೆಂದು ಇದರಿಂದ ತಿಳಿಯುತ್ತಲಿತ್ತು. ಇಕ್ಬಾಲಭಾಯಿ ಸಂಕ್ಷಿಪ್ತವಾಗಿ ಇಷ್ಟು ಮಾತ್ರ ಹೇಳಿದರು– ''ಕಾನಪುರ ದಲ್ಲಿ ನೌಕರಿ ಸಿಕ್ಕಿದೆ, ಖಾಸಗಿಯಾಗಿ ಎಫ್.ಎ.ಸಿ.ಟಿ. ಪಾಸು ಮಾಡಿರುವೆ.''

ಕೆಲಹೊತ್ತಿನ ನಂತರ ತಂದೆಯವರ ಕೋಣೆಗೆ ಹೋದರು. ಅಲ್ಲಿ ಅವರೊಂದಿಗೆ ಬಹಳ ಹೊತ್ತಿನವರೆಗೂ ಇದ್ದರು.

ಹೀಗೆ ಬಂದು ಹೋದ ನಂತರ ಇಕ್ಬಾಲಭಾಯಿ ಮತ್ತೆ ಕಾಣಿಸಿಕೊಳ್ಳಲಿಲ್ಲ.

ಹತ್ತು ವರ್ಷದ ನಂತರ ನಾನು ಲಂಡನ್ ತಲುಪಿ ಆರೇಳು ದಿನಗಳು ಮಾತ್ರ ಆಗಿದ್ದವು. ನಾನು ಬಿ.ಬಿ.ಸಿ.ಯ ಉರ್ದು ಸೆಕ್ಷನ್‌ನಲ್ಲಿ ಕುಳಿತಿದ್ದೆ. ಯಾರೋ ಕೇಳಿದರು– ''ಅರೆ ಭಾಯೀ, ಸಕ್ಸೇನಾ ಸಾಹೇಬ ಬಂದರೋ ಇಲ್ಲೋ ?'' ಎಂದು.

''ಬಂದರು.....'' ಎನ್ನುತ್ತ ಇಕ್ಬಾಲ ಬಖ್ತ ಸಕ್ಸೇನಾ, ಕರ್ಟನ್ ತೆಗೆದು ಕೋಣೆಯಲ್ಲಿ ಹಾಜರಾದರು. ಹಳೆಯ ರೇನ್‌ಕೋಟ್, ಕೈಯಲ್ಲಿ ಪತ್ರಿಕೆಗಳ ಗಂಟು,

ಒಂದು ದಪ್ಪಗಿನ ಪೋರ್ಟ್‌ಫೋಲಿಯೋ ನನ್ನೆದುರಿಗೇ ಹಾದು ಬಂದು ಮೇಜಿನ ಕಡೆ ಹೋದರು. ಅಲ್ಲಿ ಕುಳಿತ ನಂತರ ಹೊರಳಿ ನನ್ನನ್ನು ನೋಡಿದರು. ಮೊದಮೊದಲು ಅವರಿಗೆ ನಾನು ಗುರುತು ಸಿಕ್ಕಲಿಲ್ಲವೆಂದು ತೋರುತ್ತದೆ. ಕೆಲಕ್ಷಣಗಳವರೆಗೆ ನನ್ನನ್ನು ದಿಟ್ಟಿಸಿ ಒಂದೇ ಸವನೆ ನೋಡುತ್ತಲಿದ್ದರು....ಹೀಗೆ ನೋಡುತ್ತಿರುವಂತೆಯೇ ಸಂತೋಷದಿಂದ...'ಅರೇ ಮುನ್ನಿ' ಎಂದು ಕರೆದರು. ಅವರ ಗಂಟಲು ತುಂಬಿ ಬಂದಿತ್ತು.

ಅಲ್ಲಿಂದ ಎದ್ದು ಬಂದು ನನ್ನ ಹತ್ತಿರ ಕುಳಿತರು. ತಂದೆಯವರ ಯೋಗಕ್ಷೇಮ ಕೇಳಿದರು. ''ತಂದೆಯವರು ತೀರಿ ಬಹಳ ವರ್ಷಗಳಾದವು, ಇಕ್ಬಾಲಭಾಯಿ'' ಎಂದೆ. ಈ ಮಾತು ಕೇಳಿದ ಅವರು ಮಕ್ಕಳಂತೆ ಬಿಕ್ಕಿ ಬಿಕ್ಕಿ ಅಳತೊಡಗಿದರು.

ಉರ್ದುಸೆಕ್ಷನ್‌ದಲ್ಲಿದ್ದ ಬೇರೆ ಕರ್ಮಚಾರಿಗಳು ಇಕ್ಬಾಲಭಾಯಿ ಅಳುವುದನ್ನು ಕಂಡು ಮೌನವಾಗಿ ತಮ್ಮ ಕೆಲಸದಲ್ಲಿ ಮಗ್ನರಾದರು. ಇಕ್ಬಾಲಭಾಯಿ ಕಾನಪುರದ ತಮ್ಮ ನೌಕರಿ ನಮ್ಮಲ್ಲಿಗೆ ಬಂದ ವರ್ಷವೇ ಕಳೆದುಕೊಂಡರು. ಅನಂತರ ಇಡೀ ದೇಶದಲ್ಲಿ ಅವರು ನೌಕರಿಗಾಗಿ ತಿರುಗಿ ಬೇಸತ್ತರು. ಅದೇ ಕಾಲದಲ್ಲಿ ಅವರ ತಂದೆ ತೀರಿ ಹೋದರು. ಇಕ್ಬಾಲಭಾಯಿ ಒಬ್ಬರೇ ಮಗ, ಇದ್ದೊಬ್ಬ ತಂಗಿಯ ಮದುವೆಯಾಗಿ ಆಕೆ ಗಂಡನ ಮನೆಯಲ್ಲಿದ್ದಳು. ಸ್ವಾತಂತ್ರ್ಯ ಬಂದ ನಂತರ ಹಣೆಬರಹ ಪರೀಕ್ಷಿಸಲು ಇಂಗ್ಲೆಂಡ್, ಕೆನಡಾ, ಅಮೇರಿಕಾಕ್ಕೆ ಹೋಗುವ ಗಾಳಿ ಬೀಸಿತ್ತು. ಇಕ್ಬಾಲ ಭಾಯಿ ಒಂದು ದಿನ ಗಾಜೀಪುರಕ್ಕೆ ಹೋದರು. ತಮ್ಮ ಪೂರ್ವಜರ ಮನೆ ಮಾರಾಟ ಮಾಡಿದರು. ಅದರ ಹಣದಿಂದ ಹಡಗಿನ ಟಿಕೆಟ್ ಖರೀದಿಸಿ ಲಂಡನ್ ತಲುಪಿದರು. ನಾಲ್ಕು ವರ್ಷಗಳಿಂದ ಲಂಡನ್‌ನಲ್ಲಿದ್ದಾರೆ. ಇಲ್ಲಿಯೂ ಕೂಡ ನಾನಾ ರೀತಿಯ ತೊಂದರೆ ಅನುಭವಿಸಿದ್ದಾರೆ.

ಯಾರಿಗೂ ಇಲ್ಲಿ ಅವರ ಬಗ್ಗೆ ಸರಿಯಾದ ತಿಳಿವಳಿಕೆ ಇಲ್ಲ. ಅವರು ಏನು ಮಾಡುತ್ತಾರೆಂಬುದು ಯಾರಿಗೂ ತಿಳಿಯದು. ನನಗೂ ಕೂಡ ಅವರು ಒಮ್ಮೆ ಗೋಲ ಗೋಲ ಶಬ್ದಗಳಲ್ಲಿ ಹೇಳಿದ್ದರು–''ರಿಜೆಂಟ್‌ಸ್ಟ್ರೀಟ್ ಪೊಲಿಟೆಕ್‌ನಿಕ್‌ದಲ್ಲಿ ಎಕನಾಮಿಕ್ಸ್ ಓದುತ್ತಿರುವೆ''. ಈ ಸಂಸ್ಥೆಯ ಶ್ರೇಷ್ಠತೆ ಬಗ್ಗೆ ನಾನು ಕೇಳಿ ತಿಳಿದಿದ್ದೆ. ಹೀಗಾಗಿ ಈ ಸಂಸ್ಥೆಯಲ್ಲಿ ಯಾರಾದರೂ ಜರ್ನಾಲಿಜಮ್ ಓದುತ್ತಿರುವುದಾಗಿ ಹೇಳಿದರೆ, ಎಕನಾಮಿಕ್ಸ್ ಓದುತ್ತಿರುವುದಾಗಿ ಹೇಳಿದರೆ, ಶಿಲ್ಪಕಲೆ ಕಲಿಯುತ್ತಿರುವುದಾಗಿ ತಿಳಿಸಿದರೆ, ಫೋಟೋಗ್ರಾಫಿ ಕೋರ್ಸ್ ಮಾಡುತ್ತಿರುವುದಾಗಿ ಹೇಳಿದರೆ, ವಿಶೇಷವಾದ ಸಂಶಯಕ್ಕೆ ಅವಶ್ಯಕತೆ ಉಳಿಯುತ್ತಿರಲಿಲ್ಲ.

ಆದರೆ, ಇಕ್ಬಾಲಭಾಯಿ ಹಿಂದೂಸ್ತಾನಿ ಹಾಗೂ ಪಾಕಿಸ್ತಾನಿ ವಿದ್ಯಾರ್ಥಿಗಳ ಸಮುದಾಯದಲ್ಲಿ ಬಹು ಮಹತ್ವಪೂರ್ಣ ಸ್ಥಾನ ಪಡೆದಿದ್ದಾರೆಂಬುದು ನನಗೆ ತೀವ್ರ ತಿಳಿಯಿತು. ಯಾವುದಾದರೂ ಗಲಾಟೆ, ಉತ್ಸವ ಮೆರವಣಿಗೆ, ದಂಗೆ, ಚುನಾವಣೆ, ಹಬ್ಬ–ಹರಿದಿನಗಳು ಇಕ್ಬಾಲಭಾಯಿಯಿಲ್ಲದೆ ಅವು ಪೂರ್ಣಗೊಳ್ಳುತ್ತಿರಲಿಲ್ಲ. ಪೇಂಟಿಂಗ್‌ಗಳ ಪ್ರದರ್ಶನವಿದ್ದಲ್ಲಿ ಇಕ್ಬಾಲಭಾಯಿ ಹಾಲ್ ಸಿಂಗರಿಸುತ್ತಾರೆ. ಸಂಗೀತ,

ನೃತ್ಯ ಕಾರ್ಯಕ್ರಮವಿದ್ದಲ್ಲಿ ಮೈಕ್ರೊಫೋನ್ ರೆಡಿ ಮಾಡುತ್ತಿರುತ್ತಾರೆ. ಡ್ರಾಮಾ ಇದ್ದರೆ ರಿಹರ್ಸಲ್‌ಗಾಗಿ ನಟ–ನಟಿಯರನ್ನು ಹುಡುಕುತ್ತಿರುತ್ತಾರೆ. ಔತಣಕೂಟ ಇದ್ದರೆ ಡೈನಿಂಗ್ ಹಾಲ್‌ನಲ್ಲಿ ವ್ಯವಸ್ಥೆಗೆ ನಿಂತಿರುತ್ತಾರೆ. ಆಗಾಗ ಯಾರ ಕಣ್ಣಿಗೂ ಬೀಳದೆ ಮಾಯವಾಗುವುದುಂಟು. ರವಿವಾರ ದಿನ ಪೆಟಿಕೋಟ್‌ಲೇನ್‌ದಲ್ಲಿರುವ ಪೇಟೆಯಲ್ಲಿ ಜನರಿಗೆ ಭವಿಷ್ಯ ಹೇಳುತ್ತಿರುತ್ತಾರೆ ಅಥವಾ ಗ್ಲಾಸ್‌ಗೋದ ಯಾವುದೋ ಪೇಟೆಯಲ್ಲಿ ಹಿಂದುಸ್ತಾನವ ಗಿಡಮೂಲಿಕೆ ಮಾರುತ್ತ ಕುಳಿತಿರುವುದು ಕಂಡುಬರುತ್ತದೆ. ಒಂದು ಫ್ಯಾಶನೇಬಲ್ ಓಣಿಯಲ್ಲಿಯ ಒಂದು ಭವ್ಯ ಫ್ಲ್ಯಾಟದಲ್ಲಿ ವಾಸವಾಗಿರುವುದು ತಿಳಿದು ಬರುತ್ತದೆ. ಕೆಲವೊಮ್ಮೆ ದೊಡ್ಡ ರೆಸ್ಟೋರೆಂಟ್‌ದಲ್ಲಿ ಕಾಣಸಿಕ್ಕರೆ, ಕೆಲವೊಮ್ಮೆ ಕೂಲಿಗಳ ಚಹಾದ ಅಂಗಡಿಯಲ್ಲಿ ಕಂಡುಬರುತ್ತಾರೆ ಇಕ್ಬಾಲಭಾಯಿ. ಇಕ್ಬಾಲಭಾಯಿ ಕವಿತೆಗಳನ್ನು ಬರೆಯುತ್ತಾರೆ. ಆಸ್ಟ್ರೇಲಿಯಾ ಮತ್ತು ಎಂ.ಸಿ.ಸಿ.ಯ ಐತಿಹಾಸಿಕ ಮ್ಯಾಚಿನ ದಿನಗಳಲ್ಲಿ ಅವರು ಒಂದು ಚರಮಗೀತ ರಚಿಸಿದ್ದರು....

ಪ್ರತಿಯೊಂದು ಹೊಸ ವಿಕೆಟ್‌ಗೆ ಹಮ್‌ತನ್ ನಡುಗುತ್ತಿದ್ದಾನೆ.
ಬೋಲರ್ ತುಂಬ ಶಕ್ತಿಶಾಲಿ, ಹಟನ್ ನಡುಗುತ್ತಿದ್ದಾನೆ.
ಯಾವ ಹುಲಿಯ ಬರವು, ರನ್ ನಡುಗುತ್ತಿದೆ.

ಇಕ್ಬಾಲಭಾಯಿ ಸಂಗೀತಕಲೆ, ಜ್ಯೋತಿಷ್ಯಶಾಸ್ತ್ರ, ಪಾಮಿಸ್ಟ್ರಿ, ಹೋಮಿಯೊಪೆಥಿ, ಯೂನಾನಿ ಔಷಧಗಳ ಜ್ಞಾನ, ಆಯುರ್ವೇದ ವೈದ್ಯಕೀಯ ಜ್ಞಾನ ಇವಲ್ಲದೆ ಪೌಲ್ಟ್ರಿ ಫಾರ್ಮಿಂಗ್, ಒಕ್ಕಲುತನ, ತೋಟಗಾರಿಕೆ ಒಟ್ಟಾಗಿ ಎಲ್ಲದರಲ್ಲೂ ಪರಿಣಿತರಾಗಿದ್ದರು. ಮಿತ್ರರ ಸಭೆ ಸಮ್ಮೇಳನಗಳಲ್ಲಿ ಯಾವುದೇ ಆಮಂತ್ರಣ ಬಯಸದೆ ಅವುಗಳಲ್ಲಿ ಭಾಗಿಯಾಗುತ್ತಿದ್ದರು. ನಾವು ಮೂರು ನಾಲ್ಕು ಜನ ಸೇರಿ ಒಂದು ಫಿಲ್ಮ್ ಸೊಸೈಟಿ ಮಾಡಿದೆವು. ಅದರ ಮುಖಾಂತರ ನಾವು ಮುಂಬೈಯಿಂದ ಫಿಲ್ಮ್ ತರಿಸಿಕೊಂಡು ಇಲ್ಲಿರುವ ಹಿಂದೂಸ್ತಾನಿ, ಪಾಕಿಸ್ತಾನಿಗಳಿಗೆ ತೋರಿಸುತ್ತಿದ್ದೆವು. ಆ ದಿನ ಇಕ್ಬಾಲಭಾಯಿ ಮೆರವಣಿಗೆಯಲ್ಲಿ ಬರುವ ಮದುಮಗನಾಗಿರುತ್ತಾನೆ. ಟಿಕೇಟ್ ಮಾರುತ್ತಾನೆ. ಅತಿಥಿಗಳನ್ನು ಕರೆದು ತಂದು ಕೂಡಿಸುತ್ತಾನೆ. ಫಿಲ್ಮ್ ಆರಂಭವಾಗುವುದಕ್ಕಿಂತ ಮೊದಲೇ ಸ್ಟೇಜ್ ಮೇಲೆ ಹೋಗಿ ಮಿಸ್ ಮೆಹತಾಬ ಅಥವಾ ಮಿಸ್ ನಸೀಮ ಅಥವಾ ಮಿಸ್ ನಿಮ್ಮಿಗೆ ಹೂಗುಚ್ಛ ಸಲ್ಲಿಸುತ್ತಾನೆ. ಈ ಕಾಲದಲ್ಲಿ ಇಕ್ಬಾಲಭಾಯಿ ಒಂದು ಇತ್ಯರ್ಥಕ್ಕೆ ಬಂದಿದ್ದರು–ಮುಂಬೈಗೆ ಹೋಗಿ ತನ್ನ ಕಾಲದ ಅತ್ಯಂತ ಶ್ರೇಷ್ಠ ಫಿಲ್ಮ್ ಮಾಡುವುದಾಗಿ, ಅದರ ಕಥೆ, ಸಂವಾದ ಮತ್ತು ಗೀತ ಸ್ವತಃ ಅವರೇ ಬರೆಯುವುದಾಗಿ ಹಾಗೂ ಡೈರೆಕ್ಟ ಕೂಡ ತಾವೇ ಮಾಡುವುದಾಗಿ ನಿಶ್ಚಯಿಸಿದ್ದರು. ಹೀರೋನ ಅಣ್ಣನ ಪಾತ್ರ ಅಥವಾ ಹೀರೋಯಿನ್‌ಳ ತಂದೆಯ ಪಾತ್ರ ಕೂಡ ಸ್ವತಃ ತಾವೇ ಮಾಡುವುದಾಗಿ ಅಂದುಕೊಂಡಿದ್ದರು. ಒಟ್ಟಿನಲ್ಲಿ ಇಡೀ ಫಿಲ್ಮ್ ಇಂಡಸ್ಟ್ರೀ ಮೇಲೆ ರೋಲರ್ ಆಡಿಸುವುದು ಅವರ ಉದ್ದೇಶವಾಗಿತ್ತು.

ಇಕ್ಬಾಲಭಾಯಿ ನಶೆ ಮಾಡುತ್ತಿರಲಿಲ್ಲ. ವಾರಕ್ಕೊಮ್ಮೆ ಮಾಂಸ ತಿನ್ನುತ್ತಿರಲಿಲ್ಲ. ಒಂದು ದಿನ ನನಗೊಂದು ರಸ್ತೆಯಲ್ಲಿ ಸಿಕ್ಕರು. ಕೈಯಲ್ಲಿ ಬಹು ಬೆಲೆಯುಳ್ಳ ಹೂಗಳ

ಗುಚ್ಛವಿತ್ತು. ಅವಸರವಸರವಾಗಿ ಹೊರಟಿದ್ದರು. ನನ್ನನ್ನು ನೋಡಿ ಹೇಳಿದರು. ''ಬಾ.....ಬಾ.....ನಾನೋರ್ವ ಮಿತ್ರನನ್ನು ನೋಡಲು ಆಸ್ಪತ್ರೆಗೆ ಹೊರಟಿದ್ದೇನೆ'' ಎಂದು. ನಾನೂ ಅವರ ಜೊತೆಯಾದೆ.

ಆಸ್ಪತ್ರೆಯಲ್ಲಿ ಒಂದು ಇಸ್ಲಾಮಿ ರಾಷ್ಟ್ರದ ರಾಜದೂತನ ಪತ್ನಿ ಜಡ್ಡಾಗಿ ಮಲಗಿದ್ದಳು. ಇಕ್ಬಾಲಭಾಯಿ ಆಕೆಯ ಕೋಣೆಯೊಳಗೆ ಹೋಗಿ ಪುಷ್ಪಗುಚ್ಛ ಮೇಜಿನ ಮೇಲಿರಿಸಿದ ಹಾಗೂ ತುಂಬ ಪ್ರೀತಿಯಿಂದ ರೋಗಿಯ ಆರೋಗ್ಯದ ಬಗ್ಗೆ ಕೇಳಲಾರಂಭಿಸಿದ. ಇಷ್ಟರಲ್ಲಿ ರಾಜದೂತರ ಮಗಳು ಒಳಗೆ ಬಂದಳು ಹಾಗೂ ಇಕ್ಬಾಲಭಾಯಿಯನ್ನು ಕಂಡು ಅಪಾರ ಉತ್ಸಾಹ ಹೊಂದಿದ್ದಳು. ನಾನು ಅತ್ಯಾಶ್ಚರ್ಯದಿಂದ ಇದನ್ನೆಲ್ಲ ನೋಡುತ್ತಲಿದ್ದೆ.

ಹೊರಗೆ ಬಂದು–''ಭಯೀ, ಇವರೆಲ್ಲ ನಮ್ಮ ಮಿತ್ರರು. ತುಂಬ ಒಳ್ಳೆಯ ಜನ....'' ಎಂದರು ಇಕ್ಬಾಲ ಭಾಯಿ.

''ಸಾಹಬಜಾದಿಯೊಂದಿಗೆ ನಿಮ್ಮ ಪರಿಚಯ ಹೇಗಾಯ್ತು ?''

''ಅದೊಂದು ಸುದೀರ್ಘ ಕಥೆ, ಮತ್ತೆ ಯಾವಾಗಾದರೂ ಹೇಳುತ್ತೇನೆ''.

ಆ ಹುಡುಗಿ ಅತ್ಯಂತ ತಲೆತಿರುಕಳಾಗಿದ್ದಳು. ಯುನಿವರ್ಸಿಟಿಯಲ್ಲಿ ಓದುತ್ತಿದ್ದಳು. ಮಿತಿಮೀರಿ 'ಎಂಟಿ ಇಂಡಿಯನ್' ಎಂದು ಪ್ರಸಿದ್ಧಳಾಗಿದ್ದಳು. ಆಗಲೂ ಕೂಡ ಆಕೆ ಆಸ್ಪತ್ರೆಯ ಕೋಣೆಯಲ್ಲಿ ಬೇಕಿಲ್ಲದ, ಅರ್ಥಹೀನ ರಾಜಕೀಯ ಚರ್ಚೆ ಆರಂಭಿಸಿದ್ದಳು.

''ಭಯೀ, ಹಿಂದೂಸ್ತಾನಕ್ಕೆ ಬಯ್ಯುವುದರಿಂದ ಆಕೆಯ ಮನಸ್ಸಿಗೆ ಸಮಾಧಾನ ವಾಗುತ್ತಿದ್ದರೆ, ಅದಕ್ಕೆ ನಾನೇನು ಮಾಡಲಿ ? ಇದರಲ್ಲಿ ನನ್ನ ತಪ್ಪೇನಿದೆ ? ಆಕೆಗೆ ಇದೇ ರೀತಿಯಲ್ಲಿ ಶಾಂತಿ ಸಿಗುತ್ತದೆ....'' ಎಂದು ಇಕ್ಬಾಲಭಾಯೀ ಮೆಟ್ಟಲು ಇಳಿಯುತ್ತಿರುವಾಗ ಹೇಳಿದರು.

ಅದಾದ ಕೆಲ ದಿನಗಳ ನಂತರ ಒಂದು ಸಾಯಂಕಾಲ ಇಕ್ಬಾಲಭಾಯಿ ಅಂಡರ್ ಗ್ರೌಂಡ್‌ನಲ್ಲಿ ಸಿಕ್ಕರು. ಜೊತೆಗೆ ಆ ಹುಡುಗಿ, ಆಕೆಯ ಕಜಿನ್. ಹುಡುಗಿ ನನಗೆ ಹೇಳಿದಳು–''ನಾವು ಒಂದು ಸಮಾರಂಭಕ್ಕೆ ಹೋಗುತ್ತಿದ್ದೇವೆ....ನೀವೂ ಬನ್ನಿ....''

''ನನಗೆ ಬರಲಾಗುವುದಿಲ್ಲ. ನಾನು ಥೇಟರ್‌ದ ಟಿಕೆಟ್ ಖರೀದಿಸಿದ್ದೇನೆ'' ಎಂದು ಹೇಳುತ್ತ ಕ್ಷಮೆ ಕೇಳಿದೆ.

ಇಕ್ಬಾಲಭಾಯೀ ತುಂಬ ದುಃಖದಿಂದ ನನ್ನೆಡೆ ನೋಡುತ್ತ ಕೇಳಿದ– ''ಮೊಹರಮ್‌ದ ಏಳನೆಯ ದಿನದಂದು ಥೇಟರಿಗೆ ಹೊಗುತ್ತಿರುವೆಯಾ ?''

ಈ ಮಾತು ಕೇಳಿ ನಾನು ತುಂಬ ನಾಚಿಕೆ ಪಟ್ಟೆ. ಮತ್ತೆ–''ನನಗೆ ನೆನಪಿರಲಿಲ್ಲ'' ಎಂದೆ.

''ತಾವು ಶಿಯಾನೋ ಅಥವಾ ಸುನ್ನಿಯೋ ?'' ಎಂದು ಇನ್ನೋರ್ವ ಹುಡುಗಿ ಪ್ರಶ್ನಿಸಿದಳು.

ಅದಕ್ಕೆ–''ನಾನು ಕಾದಯಾನೀ ಇದ್ದೇನೆ'' ಎಂದೆ.

''ಕಾದಯಾನೀ.....?'' ಎನ್ನುತ್ತ ಆಕೆ ಸುಮ್ಮನಾದಳು.

ಕೆಲ ಕ್ಷಣಗಳ ನಂತರ ರಾಯಭಾರಿಯ ಮಗಳು ತನ್ನ ವಿಚಾರ ಪ್ರಕಟಗೊಳಿಸಿದಳು–''ಇಕ್ಬಾಲ ಸಾಹೇಬ ಶ್ರೇಷ್ಠ ವ್ಯಕ್ತಿಯಾಗಿದ್ದಾರೆ. ಇಂದಿನ ಶಿಯಾಗಳಲ್ಲಿ ತಮ್ಮ ಧರ್ಮದ ಬಗ್ಗೆ ಇಷ್ಟೊಂದು ಕಾಳಜಿ, ಅಭಿಮಾನ ಎಲ್ಲಿದೆ...?'' ಇಷ್ಟರಲ್ಲಿ ಸ್ಟೇಶನ್ ಬಂತು. ಅವರು ಮೂವರೂ ಟ್ರೇನಿನಿಂದ ಇಳಿದರು.

ಮಾರನೆಯ ದಿನ ಇಕ್ಬಾಲ ಭಾಯಿಯ ಭೇಟಿ ಬಿ.ಬಿ.ಸಿ. ಯಲ್ಲಿ ಆದಾಗ ನಾನು ಕೇಳಿದೆ– ''ಇಕ್ಬಾಲಭಾಯಿ, ಈಗ ನೀವು ಈ ಫ್ರಾಡನ್ನೂ ಮಾಡಲಾರಂಭಿಸಿದಿರಾ ? ಈ ಹುಡುಗಿಯರ ಎದುರಿನಲ್ಲಿ ನಿಮ್ಮನ್ನು ನೀವು ಮುಸಲ್ಮಾನನೆಂದು ಘೋಷಿಸಿ ಕೊಂಡಿರೇನು ? ಕೇವಲ ಮುಸಲ್ಮಾನರಲ್ಲ, ಅದರಲ್ಲೂ ಶಿಯಾ ಎಂದು ?''

ಇಕ್ಬಾಲಭಾಯಿಯ ಉತ್ತರ ಹೀಗಿತ್ತು– ''ನೋಡು ಮುನ್ನಿ, ಈ ಜಗತ್ತಿನಲ್ಲಿ ವಿಪರೀತ ಭೇದ ಭಾವವಿದೆ. ಇದರಿಂದಾಗಿ ಒಬ್ಬರನ್ನೊಬ್ಬರು ಜೀವ ಸಹಿತ ಮುಗಿಸಲು ಸನ್ನದ್ಧರಾಗಿದ್ದಾರೆ. ಆ ಹುಡುಗಿ ಜೊತೆ ನನ್ನ ಭೇಟಿಯಾದಾಗ ಆಕೆ ನನ್ನ ಹೆಸರು ಕೇಳಿದಳು. ಇಕ್ಬಾಲ ಎಂದು ಹೇಳಿದೆ. ನನ್ನ ಈ ಹೆಸರಿನಿಂದಾಗಿ ಆಕೆ ನಾನು ಮುಸಲ್ಮಾನ ಎಂದು ತಿಳಿದಳು. ನನ್ನೆದುರಿಗೆ ಹಿಂದೂಗಳ ಹಾಗೂ ಹಿಂದೂಸ್ತಾನದ ಬಗ್ಗೆ ಸಿಕ್ಕಾಪಟ್ಟೆ ಅವಹೇಳನಕಾರಿ ಮಾತನಾಡಿದಳು. ಇಂತಿರಲು, ನಾನು ಒಂದು ವೇಳೆ ಹಿಂದೂ ಅಂತಾ ಹೇಳಿದ್ದರೆ ಅವಳು ನಾಚಿಕೆಯಿಂದ ತಲೆತಗ್ಗಿಸುತ್ತಿದ್ದಳು. ಅವಳ ಸ್ಥಿತಿ ಬಹು ಚಿಂತಾಜನಕವಾಗುತ್ತಿತ್ತು. ಅದೂ ಅಲ್ಲದೆ ಇದರಲ್ಲಿ ನನ್ನ ದೋಷವೇನಿದೆ ? ನನ್ನ ಮನೆತನದಲ್ಲಿ ನೂರಾರು ವರ್ಷಗಳಿಂದ ಫಾರಸೀ ಹೆಸರುಗಳನ್ನಿಡುತ್ತ ಬಂದಿದ್ದಾರೆ. ಇದರಿಂದ ಹಿಂದೂ ಧರ್ಮದ ಮೇಲೆ ಯಾವುದೇ ಕಲಂಕ ಮೂಡಿಲ್ಲ. ಒಂದು ವೇಳೆ ನಾನೀಗ ನನ್ನನ್ನು ನಾನು, ಮುಸಲ್ಮಾನನೆಂದು ಘೋಷಿಸಿಕೊಂಡರೆ, ಈ ಜಗತ್ತಿಗೆ ಯಾವ ಹಾನಿ ಆಗಲಿದೆ ? ಪ್ರಳಯ ಉಂಟಾಗುತ್ತದೆಯೇ ? ಇಲ್ಲವಲ್ಲ....ಈಗ ನೀನೇ ಹೇಳು....? ಅರೇ..... ವಾಹರೇ.....ಮುನ್ನಿ !......ಇಷ್ಟು ದೊಡ್ಡ ಪ್ಲೇಟೋ ಆಗಲು ಹೊರಟಿರುವೆ....ಆದರೆ ಈಗಲೂ ತಲೆಯಲ್ಲಿ ಅದೇ ಬೂಸಾ ತುಂಬಿದೆ.....''

ಒಂದು ಸಾಯಂಕಾಲ ನನ್ನ ಗೆಳತಿ ಜಾಹಿದಾಳಲ್ಲಿಗೆ ಹೋದೆ. ಆಕೆ ಅತ್ಯಂತ ತಲ್ಲೀನತೆಯಿಂದ ಪ್ಯಾಕಿಂಗ್ ನಡೆಸಿದ್ದಳು. ಆಕೆ ತನ್ನೆಲ್ಲ ಮನೆಯವರೊಂದಿಗೆ ಮಾರನೆಯ ದಿನ ಬೆಳಗ್ಗೇನೇ ರಜೆಯ ಮೇಲೆ ಕರಾಚಿಗೆ ಹೋಗಲಿದ್ದಳು. ಜಾಹಿದಾಳ ಮನೆಯಲ್ಲಿರುವಾಗಲೇ, ಆಸ್ಟ್ರೇಲಿಯನ್ ವಿದ್ಯಾರ್ಥಿಗಳ ಒಂದು ಉತ್ಸವದಲ್ಲಿ ಭಾಗವಹಿಸುವಂತೆ ಇಕ್ಬಾಲಭಾಯಿ ನನ್ನನ್ನು ಆಮಂತ್ರಿಸಿರುವುದು ನೆನಪಾಯಿತು– ''ಅವಶ್ಯ ಬರಬೇಕು....ಅವರು ತಮ್ಮನ್ನು ನಿರಾಸಕ್ತ, ಬಣ್ಣವಿಲ್ಲದ ಜನರೆಂದು ಬೇರೆಯವರು ತಿಳಿದಿದ್ದಾರೆಂದು ನೊಂದುಕೊಂಡಿದ್ದಾರೆ, ಪಾಪ. ಅವರ ಮನಸ್ಸಿಗೆ ನೋವಾಗದಂತೆ ನಾವು, ಉಳಿದವರು ನಡೆದುಕೊಳ್ಳಬೇಕಾದುದು ಅವಶ್ಯ'' ಎಂದಿದ್ದರು ಇಕ್ಬಾಲಭಾಯಿ.

ಕೆಲದಿನಗಳ ಹಿಂದೆ ಒಂದು ಹ್ಯಾಂಡ್‌ಬ್ಯಾಗ ಖರೀದಿಸಿ ಜಾಹಿದಾಳಲ್ಲಿ ಬಿಟ್ಟು ಹೋಗಿದ್ದೆ. ಈಗ ಹೊರಡುವಾಗ ಅದನ್ನು ಒಯ್ಯಬೇಕೆಂಬ ಯೋಚನೆ ಬಂತು. ಆ ಬ್ಯಾಗ್ ಜಾಹಿದಾಳ ಡ್ರೆಸಿಂಗ್ ಟೇಬಲ್ ಮೇಲೆಯೇ ಇತ್ತು. ಆಕೆ ಮತ್ತೊಂದು ಕೋಣೆಯಲ್ಲಿ ಸಾಮಾನು ಪ್ಯಾಕ್ ಮಾಡುತ್ತಿದ್ದಳು. ಹೊರಡುವಾಗ, ನಾನು ನನ್ನ ಬ್ಯಾಗ್ ಒಯ್ಯುತ್ತಿದ್ದೇನೆಂದು ಹೇಳಿದೆ– ''ಅಚ್ಛಾ'' ಎಂದಳಾಕೆ. ನಾನು ಅವರ ಮನೆಯಿಂದ ಹೊರಟು ಬಂದೆ.

ಆಸ್ಟ್ರೇಲಿಯನ್ ವಿದ್ಯಾರ್ಥಿಗಳ ಉತ್ಸವದಲ್ಲಿ ಇಕ್ಬಾಲಭಾಯಿ, ವೇದಿಕೆ ಮೇಲಿಂದ ಆಸ್ಟ್ರೇಲಿಯನ್ ಮತ್ತು ಹಿಂದೂಸ್ತಾನದ ಮೈತ್ರಿ ಸಂಬಂಧದ ಬಗ್ಗೆ ಜೋರದಾರ ಭಾಷಣ ನೀಡುತ್ತಲಿದ್ದರು.

ಬಹಳಷ್ಟು ಹುಡುಗರು–ಹುಡುಗಿಯರು ಕುಳಿತಿದ್ದ ಕೋಣೆಯಲ್ಲಿ ಹೋದೆ. ನಾಲ್ಕಾರು ವೇಟರ್ ಚಹಾ ಮಾಡಿ ಎಲ್ಲರಿಗೂ ಸರ್ವ್ ಮಾಡುತ್ತಿದ್ದರು. ನಾನು ನನ್ನ ಹೊಸ ಹ್ಯಾಂಡ್‌ಬ್ಯಾಗ್ ಅಲ್ಲಿಯೇ ಒಂದು ಕಿಟಕಿಯಲ್ಲಿರಿಸಿದೆ. ಚಹಾ ಕುಡಿದನಂತರ ಹಾಲ್‌ನಲ್ಲಿ ಬಂದೆ. ಹೋಗುವಾಗ ಹ್ಯಾಂಡ್‌ಬ್ಯಾಗಿನ ನೆನಪಾಯಿತು. ನಾನು ಒಳಗೆ ಹೋಗಿ ಅದನ್ನು ತೆಗೆದುಕೊಂಡು ಬಂದೆ ಹಾಗೂ ಇಕ್ಬಾಲಭಾಯಿಯ ಕೈಯಲ್ಲಿರಿಸಿದೆ. ಬಹುಶಃ ಅದರ ಕೊಂಡಿ ಬಿಚ್ಚಿ ಹೋಗಿರಬೇಕು. ಮೆಟ್ಟಿಲುಗಳಿಂದ ಇಳಿವಾಗ ಇಕ್ಬಾಲ ಭಾಯಿ ಅದರ ಕೊಂಡಿ ಹಾಕುತ್ತ ಹೇಳಿದ– ''ಇಷ್ಟೊಂದು ರಾಶಿ ರಾಶಿ ನೋಟು ?''

ನಾನು ಅತ್ತ ಲಕ್ಷ್ಯ ಕೊಟ್ಟಿರಲಿಲ್ಲ. ಹೀಗಾಗಿ ನಾನು ಇಕ್ಬಾಲಭಾಯಿಯ ಮಾತನ್ನು ಪೂರ್ಣವಾಗಿ ಕೇಳಿರಲಿಲ್ಲ. ಆ ಇ ಮಾತುಗಳಲ್ಲಿ ಮಗ್ನಳಾಗಿದ್ದೆ. ಸ್ಟೇಶನ್‌ನಲ್ಲಿ ಇಕ್ಬಾಲಭಾಯಿ ಬ್ಯಾಗನ್ನು ನನ್ನ ಕೈಗೆ ಕೊಟ್ಟರು. ಮನೆಗೆ ಹೋದಾಗ ನೋಡುತ್ತೇನೆ. ಜಾಹಿದಾಳ ಕಾರು ಹೊರಗೆ ನಿಂತಿದೆ. ಗಂಡ ಹೆಂಡತಿ ಗಾಬರಿಯಾಗಿ ಲ್ಯಾಂಡ್ ಲೇಡಿ ಮಿಸೆಸ್ ವಿಂಗ್ ಫೀಲ್ಡ್‌ಳೊಂದಿಗೆ ಏನೋ ಮಾತಾಡುತ್ತಿದ್ದಾರೆ. ಜಾಹಿದಾ ನನ್ನನ್ನು ಕಂಡ ಕೂಡಲೇ ನನ್ನಲ್ಲಿಗೆ ಏದುತ್ತ ಓಡಿ ಬಂದು– ''ಓ ! ಆ.....ಬ್ಯಾಗ್.... ಬ್ಯಾಗ್....''

''ಹಾಂ....ಹಾಂ ! ನನ್ನಲ್ಲಿಯೇ ಇದೆ....ಏಕೆ ?.....''

''ಓ ! ಗಾಡ್, ಇದರಲ್ಲಿ ನಾನು ಐದುನೂರು ಪೌಂಡ್ ನೋಟು ತುರುಕಿದ್ದೆ. ನೀನು ನಮ್ಮಲ್ಲಿಂದ ಹೋದ ಮೇಲೆ ನೆನಪಾಯಿತು. ನಿನ್ನ ಅದ್ಭುತ ಮರವೆಯ ನೆನಪಾಗಿ ತುಂಬ ಹೆದರಿಕೊಂಡಿದ್ದೆ. ನೀನು ಬರುವಾಗ ದಾರಿಯಲ್ಲಿ ಬ್ಯಾಗ್ ಮರೆತು ಬಂದರೆ.....ಎಂದು ಭಾವಿಸಿಯೇ ನನ್ನ ಜೀವ ಅರ್ಧವಾಗಿತ್ತು....ಯಾ ಅಲ್ಲಾಹ, ತೇರಾ ಶುಕ್ರ್.... ಯಾ ಅಲ್ಲಾಹ...... ತೇರಾ ಶುಕ್ರ್.... ಯಾ ಅಲ್ಲಾಹ..... !''

ಮಾರನೆಯ ದಿನ ಬಿ.ಬಿ.ಸಿ. ಯಲ್ಲಿ ನಿನ್ನೆ ನಡೆದ ಈ ಕಥೆಯನ್ನೆಲ್ಲ ವಿವರಿಸಿದೆ ; ಇಕ್ಬಾಲಭಾಯಿಗೆ. ಅವರು ಯಾವುದೇ ರೀತಿಯ ಅಚ್ಚರಿಗೊಳಗಾಗದೆ, ಶಾಂತವಾಗಿ ಹೇಳಿದರು–''ಬ್ಯಾಗಿನಲ್ಲಿ ಅವುಗಳನ್ನು ನಾನು ಮೊದಲೇ ನೋಡಿದ್ದೆ...''

''ನೀವು ನನಗೆ ಆ ಕೂಡಲೇ ಏಕೆ ಹೇಳಲಿಲ್ಲ ?''

"ನಾನು ಹೇಳಿದೆ....ಆದರೆ ನೀನು ಕೇಳಿಸಿಕೊಳ್ಳಲಿಲ್ಲವೆಂದು ಕಾಣುತ್ತದೆ...."

"ನನ್ನ ಹತ್ತಿರ ಇಷ್ಟೊಂದು ರೂಪಾಯಿಗಳು ಎಲ್ಲಿಂದ ಬಂದವು ಎಂಬುದರ ಬಗ್ಗೆಯೂ ನೀವು ಯೋಚಿಸಲಿಲ್ಲವೇ ? ಅದೂ ಹೀಗೆ ಅರ್ಧ ತೆರೆದ ಬ್ಯಾಗಿನಲ್ಲಿ ಅಷ್ಟೊಂದು ರೂಪಾಯಿ ತಗೊಂಡು ತಿರುಗುತ್ತಿದ್ದೇನೆ..."

"ನಾನು ಯೋಚಿಸಿದೆ..... ಎಲ್ಲಿಂದಾದರೂ ಬಂದಿರಬಹುದೆಂದು. ಕೇಳ ಬೇಕಾದ ಅವಶ್ಯಕತೆ ಏನಿತ್ತು.....?"

"ಎರಡು ತಾಸಿನವರೆಗೂ ಈ ಬ್ಯಾಗನ್ನು ಕಿಟಕಿಯಲ್ಲಿರಿಸಿದ್ದೆ. ಆಗ ಕಳವಾಗಿದ್ದರೆ, ನಾನು ಜಾಹಿದಾಳಿಗೆ ಏನೆಂದು ಮುಖ ತೋರಿಸಲು ಸಾಧ್ಯವಿತ್ತು. ಯಾ..... ಅಲ್ಲಾಹ..... ಯಾ ಅಲ್ಲಾಹ...."

"ಇಲ್ಲಿ ನೋಡು, ಮುನ್ನಿ..... ಆಗಬೇಕಾದುದನ್ನು ಯಾರಿಂದಲೂ ನಿಲ್ಲಿಸ ಲಾಗುವುದಿಲ್ಲ. ನಿನ್ನ ಗೆಳತಿಯ ನಸೀಬ ಚೆನ್ನಾಗಿಯೇ ಇತ್ತು. ಸುರಕ್ಷಿತವಾಗಿ ಆಕೆಯ ಹಣ ಆಕೆಗೆ ದೊರಕಲೇಬೇಕಾಗಿತ್ತು. ದೊರಕಿದೆ. ಈಗ ನೀನೇಕೆ ಅನಾವಶ್ಯಕ ಚಿಂತಿಸುತ್ತಿ ರುವೆ ? ಈಗ ಹೇಳು..... ಅಚ್ಛಮ್ಮನ ಬಗ್ಗೆ ಮಾತನಾಡಿದೆಯಾ ?"

ಅಚ್ಛಮ್ಮ ಕೊಸೊಕುಟ್ಟಿ ತೊಂದರೆಯಲ್ಲಿದ್ದ ಹುಡುಗಿ. ಬಹಳ ದಿನಗಳಿಂದ ನೌಕರಿಗಾಗಿ, ಒಂದು ಕಡಿಮೆ-ಬಾಡಿಗೆಯ ಕೋಣೆಗಾಗಿ ಒದ್ದಾಡುತ್ತಿದ್ದಳು. ಇತ್ತೀಚೆ ಗೇನೇ ಮಿಸೆಸ್ ವಿಂಗ್ ಫೀಲ್ಡಳ ಮನೆಯ ಸೆಲ್‌ನಲ್ಲಿ ಒಂದು ಕೋಣೆ ಖಾಲಿಯಾಗಿತ್ತು. ಅದರ ಬಾಡಿಗೆ ವಾರಕ್ಕೆ ಕೇವಲ ಎರಡೂವರೆ ಪೌಂಡ್ ಮಾತ್ರವಿತ್ತು. ಮಿಸೆಸ್ ವಿಂಗ್ ಫೀಲ್ಡ್ ಹಾದಿಹೋಕರಿಗೆ, ಅಂಥ-ಇಂಥವರಿಗೆ ಮನೆಯಲ್ಲಿರಲು ಅವಕಾಶ ನೀಡುವುದಿಲ್ಲವೆಂಬ ಕರಾರು ಹಾಕುತ್ತಿದ್ದಳು. ಕೇವಲ ಒಳ್ಳೆಯ ಮನೆತನದ, ಶ್ರೇಷ್ಠ ವರ್ಗದ ಜನರಿಗೆ ಮಾತ್ರ ತನ್ನ ಮನೆಯಲ್ಲಿ ಬಾಡಿಗೆ ಇರುವ ಗೌರವ ದಯ ಪಾಲಿಸುತ್ತಿದ್ದಳು.

ಆಕೆಯ ಸ್ವರ್ಗೀಯ ಪತಿ ಕೊಲೊನಿಯಲ್ ಸರ್ವಿಸದಲ್ಲಿದ್ದ ಮತ್ತು ಶ್ರೀಮತಿ ವಿಂಗ್‌ಫೀಲ್ಡ್ ಹಲವಾರು ವರ್ಷಗಳ ಕಾಲ ಕೊಲಂಬೊದಲ್ಲಿ ದೊಡ್ಡ ಮೇಮ್ ಸಾಹಬಳ ರೂಪದಲ್ಲಿ ಜೀವನ ಸಾಗಿಸಿದ್ದಳು. ಆಕೆಯ ಮಾವ 'ನಾಯಿಟ್' ಆಗಿದ್ದ.... ಆದಿ.... ಆದಿ..... ಗಂಡ ಸತ್ತುದರಿಂದ, ಇಂಗ್ಲೀಷ್ ಶಾಸನ ಪತನವಾದದ್ದರಿಂದ ಸ್ವದೇಶಕ್ಕೆ ಬಂದು ಆಕೆ 'ಲ್ಯಾಂಡ್ ಲೇಡಿ' ಆಗಬೇಕಾಯಿತು. ಹೆಚ್ಚಾಗಿ ಆಕೆ ಮೆಟ್ಟಲು ಹತ್ತುವಾಗ ಅಥವಾ ಇಳಿಯುವಾಗ ನನ್ನನ್ನು ತರುಬಿ ತನ್ನ ಕಳೆದ ಒಳ್ಳೆಯ ದಿನಗಳ ಕಥೆಯನ್ನು ಕೇಳಿಸತೊಡಗುತ್ತಾಳೆ.

ಒಂದು ದಿನ ಆಕೆ ರಹಸ್ಯಮಯ ಧ್ವನಿಯಲ್ಲಿ ಅತ್ಯಂತ ದುಃಖದಿಂದ ನನಗೆ ಹೇಳಿದ್ದಳು-- "ಒಂದು ಮಾತು ಕೇಳಿಲ್ಲಿ..... ನಿನಗೆ ಒಳ್ಳೊಳ್ಳೆಯ ಜಂಟಲ್‌ಮೆನ್ ಗೆಳೆಯರಿದ್ದಾರೆ. ಅವರಲ್ಲಿ ಯಾರೊಬ್ಬರೊಂದಿಗಾದರೂ ನನ್ನ ಮದುವೆ ಮಾಡಿಸಿ ಬಿಡು" ಎಂದು.

ರಾತ್ರಿ, ನಾನು ಸೆಲ್‌ದಲ್ಲಿ ಖಾಲಿಯಿರುವ ಕೋಣೆಯ ಬಗ್ಗೆ ಮಾತೆತ್ತಿದಾಗ ಆಕೆ ಅಚ್ಚಮ್ಮನ ಬಗ್ಗೆ ಯಾವುದೇ ವಿವರ ಕೇಳದೇ ಬಾಡಿಗೆ ಕೊಡಲು ಒಪ್ಪಿದಳು. ಹೀಗಾಗಿ ಅಚ್ಚಮ್ಮ ಕೊಸೊಕುಟ್ಟಿ ಎರಡು ಮೂರು ದಿನಗಳಲ್ಲಿಯೇ ಅಲ್ಲಿಗೆ ಸೆಲ್ಲಿಗೆ ಬಂದು ಇರ ತೊಡಗಿದಳು. ಬಹುಶಃ ಲ್ಯಾಂಡ್ ಲೇಡಿ ಅಂದು ಒಳ್ಳೆಯ ಮೂಡಲ್ಲಿರಬೇಕು.

ನನ್ನ ಫ್ಲ್ಯಾಟ್ ನಾಲ್ಕನೆಯ ಅಂತಸ್ತಿನಲ್ಲಿತ್ತು. ಎರಡನೆಯ ಅಂತಸ್ತಿನಲ್ಲಿ ಇನ್ನುಳಿದ ಜನರಲ್ಲದೆ ಓರ್ವ ಟೆಲಿವಿಜನ್ ಅಭಿನೇತ್ರಿ ಎಡ್ವಿನಾ ಕಾರ್ಲಾಯಿಲ್ ಇರುತ್ತಿದ್ದಳು. ಆಕೆಯ ಬಗ್ಗೆ ಮಿಸೆಸ್ ವಿಂಗ್‌ಫೀಲ್ಡ್ ನನಗೆ ಈ ಮೊದಲೇ ಹೇಳಿದ್ದಾಳೆ– ''ನಾನಂತೂ ಇವಳಿಗೆಂದೂ ನನ್ನಲ್ಲಿ ಸ್ಥಳ ನೀಡುತ್ತಿರಲಿಲ್ಲ; ಮೈ ಡಿಯರ್, ಆದರೆ ದೊಡ್ಡ ಮನೆತನ ದಿಂದ ಬಂದವಳೆಂದು ಕೊಟ್ಟೆ. ಆದರೆ ಏನು ಮಾಡುವುದು ಅವಳ ಜೀವನದ ಗಾಡಿ ಕೊಂಚ ಹಳಿ ತಪ್ಪಿದೆ.....''

ನನ್ನ ಆಕೆಯ ಪರಿಚಯವೆಂದರೆ ಪಾವುಟಿಗೆಗಳ ಮೇಲಿಂದ ಇಳಿಯುವಾಗ, ಹತ್ತುವಾಗ ಆಕೆಯ ಭೇಟಿಯಾಗುತ್ತದೆ. ಆಗ ಆಕೆ ಮುಗುಳ್ನಕ್ಕು 'ಹಲೊ' ಎನ್ನುತ್ತಾಳೆ, ಅಷ್ಟೆ. ಮಿಸೆಸ್ ವಿಂಗ್‌ಫೀಲ್ಡ್ ಅವಳ ವಿಚಾರವಾಗಿ ಇನ್ನೂ ಹೇಳಿದ್ದಳು. ಆಕೆ ಒಬ್ಬಳೇ ಇಡೀ ದಿನ ಕುಡಿಯುತ್ತ ಕುಳಿತಿರುತ್ತಾಳಂತೆ, ಆಕೆ ಗಂಡನನ್ನು ಅಪಾರವಾಗಿ ಪ್ರೀತಿಸುತ್ತಿದ್ದಳಂತೆ. ಆದರೆ ಅವನು ಈ ಬಡಪಾಯಿಗೆ ಸೋಡಚೀಟಿ ಕೊಟ್ಟನಂತೆ. ಆಗಿನಿಂದ ಅವಳ ಸ್ಥಿತಿ ಹೀಗಾಗಿದೆಯಂತೆ.....

ಒಂದು ರಾತ್ರಿ ಎರಡು ಗಂಟೆಯ ಹೊತ್ತಿಗೆ ಗದ್ದಲವಾಗಿ ನಾನು ಎಚ್ಚತ್ತೆ. ಅಷ್ಟರಲ್ಲಿಯೇ ಬಾಗಿಲ ಬಡಿಯಲಾಯಿತು. ನಾನು ಎದ್ದು ಹೋಗಿ ಬಾಗಿಲು ತೆರೆದೆ. ಎದುರಿಗೆ ಪೋಲಿಸ್ ನಿಂತಿದ್ದ. ಅವನ ಹಿಂದೆ ಮಿಸೆಸ್ ವಿಂಗ್ ಫೀಲ್ಡ್ ಗಾಬರಿಯಾಗಿ ನಿಂತು ಅಸಂಬದ್ಧ ಮಾತನಾಡುತ್ತ ಹೇಳಿದಳು.... ''ಅನಾಹುತ ಆಗಿ ಹೋಯಿತು..... ಎಡ್ವಿನಾ ನಿನ್ನ ಬಾತ್‌ರೂಮಿನ ಕಿಟಕಿಯಿಂದ ಹಾರಿ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ.... ಅನಾಹುತ ಆಗಿ ಹೋಯಿತು.....''

''ಆಂ..... ನನ್ನ ಬಾತ್‌ರೂಮಿನ ಕಿಟಕಿಯಿಂದ....?....''

''ಹಾಂ ; ಎಲ್ಲಕ್ಕಿಂತ ಎತ್ತರದಲ್ಲಿದ್ದ ಕಿಟಕಿ, ಪಾಪ ಎಡ್ವಿನಾ....''

ಪೋಲಿಸ್ ಬಾತ್‌ರೂಮಿಗೆ ಹೋದ. ಕಿಟಕಿಯ ಎರಡೂ ಷಟರ್ಸ್ ತೆರೆದಿದ್ದವು. ಕಿಟಕಿಯ ಕೆಳಗಿದ್ದ ಟಬ್‌ದಲ್ಲಿ ಎಡ್ವಿನಾಳ ಒಂದು ಸ್ಲಿಪರ್ ಬಿದ್ದಿತ್ತು. ಬಾತ್‌ರೂಮಿನ ಬಾಗಿಲು ಲೆಂಡಿಂಗ್ ಮೇಲೆ ತೆರೆಯುತ್ತಿತ್ತು. ಮಿಸ್ ಎಡ್ವಿನಾ ಕಾರ್ಲಾಯಿಲ್ ಯಾವುದೇ ತೊಂದರೆಯಿಲ್ಲದೆ ಅದರಲ್ಲಿ ಹೊಕ್ಕು ಕಿಟಕಿಯಿಂದ ಕೆಳಗೆ ಹಾರಿದ್ದಾಳೆ. ನನ್ನ ತಲೆಯಲ್ಲಿ ಬೆಳಗ್ಗೆ ಕೋಲಾಹಲವೆಬ್ಬಿಸುವ ಪತ್ರಿಕೆಗಳ ಸುದ್ದಿಯ ಬಗ್ಗೆ ಈಗಲೇ ಕೋಲಾಹಲ ನಡೆಯಿತು.... ಇನ್ನು ರಿಪೋರ್ಟರ್ ಬಂದು ನನ್ನ ಸಂದರ್ಶನ ಪಡೆಯುತ್ತಾನೆ. ಆ ಕಿಟಕಿ ಹಾಗೂ ಟಬ್ಬಿನ ಫೋಟೋ ತೆಗೆದುಕೊಳ್ಳಬಹುದು..... ದೇವರಿಗೇ ಗೊತ್ತು ಏನೇನು ನಡೆಯುತ್ತದೆಯೋ.... ಕೆಳಗಿನಿಂದ ಕೂಗಾಟ ಕೇಳಿಸಿತು– ''ಜೀವಂತ ಇದ್ದಾಳೆ.... ಬದುಕಿದ್ದಾಳೆ....''

ನಾನು ಬಗ್ಗಿ ಕೆಳಗೆ ನೋಡಿದೆ. ಎಡ್ವಿನಾಳನ್ನು ಎಂಬ್ಯುಲೆನ್ಸ್‌ದಲ್ಲಿ ಮಲಗಿಸ ಲಾಗಿತ್ತು.

''ಜೀವಂತ ಇದ್ದಾಳೆ ?'' ಮಿಸೆಸ್ ವಿಂಗ್‌ಫೀಲ್ಡ್ ಕೊಂಚ ದುಃಖದಿಂದ ಕೇಳಿದಳು ಹಾಗೂ ಪೋಲಿಸ್‌ನೊಂದಿಗೆ ಗಡಿಬಿಡಿಯಿಂದ ಕೆಳಗಿಳಿದು ಬಂದಳು.

ಬೆಳಗ್ಗೆ ಬಿ.ಬಿ.ಸಿ.ಯ ಕ್ಯಾಂಟೀನದಲ್ಲಿ ಈ ಘಟನೆಯನ್ನು ಅಲ್ಲಿದ್ದ ಹೆಂಗಸರಿಗೂ ಗಂಡಸರಿಗೂ ತಿಳಿಸಿದೆ. ಇಷ್ಟರಲ್ಲಿ ಇಕ್ಬಾಲಭಾಯಿ ಬಂದರು. ಎಲ್ಲ ವಿವರಣೆ ಕೇಳಿದ ನಂತರ– ''ಯಾವ ಆಸ್ಪತ್ರೆಯಲ್ಲಿದ್ದಾಳೆ ?'' ಎಂದರು. ನಾನು ಆಸ್ಪತ್ರೆಯ ಹೆಸರು ಹೇಳಿದೆ. ನಂತರ ಬೇರೆ ಮಾತು ಆರಂಭವಾದವು.

ಈ ಘಟನೆ ನಡೆದು ಕೆಲ ವಾರಗಳು ಮಾತ್ರ ಕಳೆದಿದ್ದವು. ಒಂದು ದಿನ ರಾತ್ರಿ ಹನ್ನೆರಡು ಹನ್ನೆರಡೂವರೆ ಗಂಟೆಯ ಹೊತ್ತಿನಲ್ಲಿ ಗದ್ದಲದಿಂದಾಗಿ ನನಗೆ ಎಚ್ಚರ ವಾಯಿತು. ಕಿಟಕಿಯಿಂದ ಬಾಗಿ ನೋಡಿದೆ. ಗ್ರೌಂಡ್‌ಫ್ಲೋರಿನ ಮೆಟ್ಟಲುಗಳ ಮೇಲೆ ಇಕ್ಬಾಲಭಾಯಿ ತೇಕುತ್ತ ನಿಂತಿದ್ದರು. ಮಿಸೆಸ್ ವಿಂಗ್‌ಫೀಲ್ಡ್ ಅವರನ್ನು ಬಹಳ ಕೆಟ್ಟ ರೀತಿಯಲ್ಲಿ ಬಯ್ಯುತ್ತಿದ್ದಳು. ನಾನು ಗಾಬರಿಯಿಂದ ಕೆಳಗಿಳಿದೆ. ಮಿಸೆಸ್ ವಿಂಗ್‌ಫೀಲ್ಡ್ ಕೆಲಮಟ್ಟಿಗೆ ಹಿಸ್ಟೀರಿಯಾ ರೋಗಿಯಂತೆ ಚೀರತೊಡಗಿದ್ದಳು.

''ಮಿಸೆಸ್ ವಿಂಗ್‌ಫೀಲ್ಡ್..... ಏನಾಗಿದೆ ?'' ಎಂದು ನಾನು ಅವಸರದಿಂದಲೇ ಕೇಳಿದೆ.

ಆಕೆ ಟೊಂಕದ ಮೇಲೆ ಕೈಯಿಟ್ಟುಕೊಂಡು ನನ್ನತ್ತ ಹೊರಳಿ– ''ನೀನೇ ಸ್ವತಃ ನಿರ್ಣಯ ಮಾಡು..... ಯಾರು ಗೂಂಡಾ ಇದ್ದಾರೋ ? ಅವರಿಗೆ ಗೂಂಡಾ ತಾನೇ ಅನ್ನೋದು ?'' ಎಂದಳು.

ಇಕ್ಬಾಲಭಾಯಿಗೆ ಆಕೆ ಗೂಂಡಾ ಎಂದಾಗ ನನ್ನ ಕಪಾಳಕ್ಕೆ ಯಾರೋ ಹೊಡೆದ ಅನುಭವವಾಯಿತು. ಇಕ್ಬಾಲಭಾಯಿ ತಲೆ ಕೆಳಗೆ ಹಾಕಿಕೊಂಡು ಸುಮ್ಮನೆ ನಿಂತಿದ್ದರು.

ಮಿಸೆಸ್ ವಿಂಗ್‌ಫೀಲ್ಡ್ ಗರ್ಜಿಸುತ್ತಲೇ ಇದ್ದಳು. ''ನಿನಗೆ ಚೆನ್ನಾಗಿ ಗೊತ್ತಿದೆ.... ನನ್ನಲ್ಲಿ ಜಂಟಲ್‌ಮೆನ್, ಹುಡುಗಿಯರ ಕೋಣೆಯಲ್ಲಿ ರಾತ್ರಿ ವಾಸಿಸುವ ಹಾಗಿಲ್ಲ.... ಇದು ನನ್ನ ಕಾನೂನು..... ಈಗಾಗಲೇ ನನ್ನಲ್ಲಿ ಒಂದು ಆತ್ಮಹತ್ಯೆಯ ಘಟನೆ ನಡೆದು ಹೋಗಿದೆ. ನನಗೆ ನನ್ನ ಮನೆಯ ಒಳ್ಳೆಯ ಹೆಸರಿನ ಬಗ್ಗೆ ಯೋಚಿಸಬೇಡವೆ ? ನಾನು ಕೇವಲ ಶ್ರೇಷ್ಠ ಮನೆತನದ....''

''ಮಿಸೆಸ್ ವಿಂಗ್‌ಫೀಲ್ಡ್ ಆದದ್ದಾದರೂ ಏನು ಹೇಳಿ. ನೀವು ಮಿಸ್ಟರ್ ಸಕ್ಸೇನಾ ಅವರಿಗೆ ಏನು ಅನ್ನುತ್ತಿರುವಿರಿ ?'' ಎಂದು ನಾನು ಬೆಂಕಿ ಕಾರುವ ಹಾಗೆಯೇ ಕೇಳಿದೆ.

''ರಾತ್ರಿಯ ಹನ್ನೆರಡೂವರೆ ಗಂಟೆಗೆ ಮಿಸ್ ಕೊಸೊಕುಟ್ಟಿಯ ಕೋಣೆಯಲ್ಲಿ ಏನು ಮಾಡುತ್ತಿದ್ದ ಎಂದು ಈತನನ್ನು ಕೇಳುತ್ತಿದ್ದೇನೆ.''

ಇಕ್ಬಾಲಭಾಯಿಯಂಥ ಸಭ್ಯ, ಸುಸಂಸ್ಕೃತ ವ್ಯಕ್ತಿಗೆ ನನ್ನೆದುರಿನಲ್ಲಿ ಇಂಥ ಹಲ್ಕಾ ಮಾತು ಕೇಳಬೇಕಾಗಿ ಬಂದಿತ್ತು. ಅವರ ಮುಖ ದುಃಖ ಮತ್ತು ಕ್ರೋಧದಿಂದ ಕೆಂಪಗಾಗಿತ್ತು. ಆದರೂ ಎಲ್ಲ ಸಹಿಸಿ ಶಾಂತರಾಗಿದ್ದರು.

ಮಿಸೆಸ್ ವಿಂಗ್‌ಫೀಲ್ಡ್ ಕ್ರೋಧದಿಂದ ತಾಳ್ಮೆಗೆಟ್ಟು ಕೆಲ ಕ್ಷಣಗಳವರೆಗೆ ಇದೇ ರೀತಿ ಚೀರುತ್ತಲಿದ್ದಳು. ಗ್ಯಾಲರಿಯ ಬಾಗಿಲು ತೆರೆದು ಬಂದಾದವು. ಮೇಲಿನ ಅಂತಸ್ತಿನಲ್ಲಿಯ ಜನ, ಕಿಟಕಿಗಳಿಂದ ಹಣಿಕಿಕ್ಕಿದರು. ಇಕ್ಬಾಲಭಾಯಿ ಸುಮ್ಮನೇ ನಿಂತಿದ್ದರು. ಆಕೆ ಒಮ್ಮೆಲೇ ಸುಮ್ಮನಾದಳು ಹಾಗೂ ತನ್ನ ಕೋಣೆಯಲ್ಲಿ ಹೋಗಿ ಜೋರಾಗಿ ಕದ ಹಾಕಿಕೊಂಡಳು.

ಕೆಳಗೆ ಸೆಲ್‌ನಲ್ಲಿರುವ ಕೋಣೆಯಲ್ಲಿದ್ದ ಅಚ್ಚಮ್ಮ ಕೊಸೊಕುಟ್ಟಿ ವಿಪರೀತ ಜ್ವರದಿಂದಾಗಿ ಮೂರ್ಛೆ ಹೋಗಿದ್ದಳು. ಇಕ್ಬಾಲಭಾಯಿ ರಾತ್ರಿಯ ಹನ್ನೊಂದು ಗಂಟೆಗೆ ಔಷಧ ತೆಗೆದುಕೊಂಡು ಆಕೆಯ ಹತ್ತಿರ ಬಂದಿದ್ದರು. ಆಕೆಯ ಜೊತೆಗೆ ಒಂದು ಗಂಟೆ ಕಾಲ ಕುಳಿತಿದ್ದು ಸಾಂತ್ವನ ನೀಡುತ್ತಿದ್ದರು. ಅದೇ ಕಾಲದಲ್ಲಿ ಮಿಸೆಸ್ ವಿಂಗ್‌ಫೀಲ್ಡ್ ಸ್ಟೇರ್ ಕೇಸ್ ಬಾಗಿಲದ ಹತ್ತಿರ ಹೋಗಿ ಕೂಗಿಕೊಳ್ಳತೊಡಗಿದಳು.

''ಅಚ್ಚಮ್ಮನಿಗೆ ಜ್ವರ ಬಂದಿರುವುದು ನನಗೆ ಗೊತ್ತೇ ಆಗಿಲ್ಲ.....ಅದೂ ಅಲ್ಲದೆ ನಾನು ಹತ್ತು ಗಂಟೆಯ ನಂತರ ಕೋಣೆಗೆ ಬಂದೆ'' ಎಂದು ಕೊಂಚ ನಾಚಿಕೆಯಿಂದಲೇ ಹೇಳಿದೆ.

''ನನಗೇ ಸ್ವತಃ ಗೊತ್ತಿರಲಿಲ್ಲ. ಹತ್ತು ಗಂಟೆ ಹೊತ್ತಿಗೆ ಆಕೆಯ ಫೋನ್ ಬಂತು. ತನಗೆ ಬಹಳ ಜ್ವರವಿದೆಯೆಂದು ಹೇಳಿದಳು'' ಎಂದು ಇಕ್ಬಾಲಭಾಯಿ ಹೇಳುತ್ತ ತಮ್ಮ ರೇನ್ ಕೋಟಿನ ಜೇಬಿನಲ್ಲಿ ಕೈ ಹಾಕಿ ಒಂದು ಕವರ್ ನನ್ನ ಕೈಗೆ ಕೊಟ್ಟರು. ಕೊಡುತ್ತ ಹೇಳಿದರು– ''ಆಕೆಗೆ ಹಣದ ಅವಶ್ಯಕತೆ ಇರಬಹುದು. ಬೆಳಗ್ಗೆ ಆಕೆಗೆ ಕೊಟ್ಟು ಬಿಡು'' ಎನ್ನುತ್ತ ಅವರು ತಲೆಕೆಳಗೆ ಮಾಡಿಕೊಂಡು ಮೆಟ್ಟಿಲು ಇಳಿದು ಗೇಟಿನಿಂದ ಹೊರಗೆ ಹೊರಟು ಹೋದರು. ನಾನು ಕವ್ಹರ್ ತೆರೆದು ನೋಡಿದೆ. ಅದರಲ್ಲಿ ಹತ್ತು ಪೌಂಡುಗಳ ನೋಟುಗಳಿದ್ದವು. ಈ ಹತ್ತು ಪೌಂಡುಗಳನ್ನು ಇಕ್ಬಾಲಭಾಯಿ ಏನೇನು ಕೆಲಸಮಾಡಿ ಸಂಪಾದಿಸಿದ್ದರೋ ಏನೋ. ನಾನು, ತಲೆಬಾಗಿಸಿ ಹಳೆಯದಾದ ರೇನ್ ಕೋಟ್ ಹೊದ್ದು ಬಡ ಬಡ ಆ ನಿರ್ಜನ ರಸ್ತೆಯಲ್ಲಿ ಅವರು ಹೋಗುತ್ತಿರುವುದನ್ನು ನೋಡುತ್ತಲಿದ್ದೆ.

ಮಾರನೆಯ ದಿನ ನಾನು ಕೆಲವಾರಗಳವರೆಗೆ ಬೇರೆ ಊರಿಗೆ ಹೋಗಲಿದ್ದೆ. ಮರಳಿ ಬಂದ ನಂತರ ನಾನು ಬೇರೆ ಸ್ಥಳದಲ್ಲಿ ಇರತೊಡಗಿದೆ. ಅಂದಿನ ಘಟನೆಯಿಂದ ಮಿಸೆಸ್ ವಿಂಗ್‌ಫೀಲ್ಡ್‌ಳ ಬಗ್ಗೆ ನನ್ನಲ್ಲಿ ಒಂದು ರೀತಿಯ ಹೆದರಿಕೆ ಹಾಗೂ ದ್ವೇಷ ಉಂಟಾಗಿತ್ತು. ಲ್ಯಾಂಡ್‌ಲೇಡೀಜ ಹೆಚ್ಚಾಗಿ ಸಂಭಾವಿತರಾಗಿರುತ್ತಾರೆ. ಆದರೆ ಮಿಸೆಸ್ ವಿಂಗ್‌ಫೀಲ್ಡ್ ಇಕ್ಬಾಲಭಾಯಿಯೊಂದಿಗೆ ನಡೆದುಕೊಂಡ ರೀತಿ, ಚೀರಿ ಚೀರಿ ಮಾತಾಡುತ್ತಿದ್ದ ಆ ದೃಶ್ಯದ ನೆನಪೇ ನನಗೆ ಅಪಾರ ಯಾತನಾಮಯವಾಗಿತ್ತು.

ಅಬ್ಬಮ್ಮ ಕೊಸೊಕುಟ್ಟಿ ಆರಾಮಾಗಿದ್ದಳು. ಆಕೆಗೆ ಎಲ್ಲಿಯೋ ಒಂದೆಡೆ ನೌಕರಿಯೂ ಸಿಕ್ಕಿತು. ಆದರೆ ಆಕೆ ತನಗಾಗಿ ಓಡಾಡಿದ, ಕಷ್ಟಪಟ್ಟ, ಅಪಮಾನ ಸಹಿಸಿದ– ತನ್ನ ಕೆಲಸ ಪೂರೈಸಿಕೊಂಡ ನಂತರ–ಇಕ್ಬಾಲಭಾಯಿಯಂಥ ಸಜ್ಜನನನ್ನು ಸಂಪೂರ್ಣ ಮರೆತು ಬಿಟ್ಟಿದ್ದಳು. ಆದರೂ ಇಕ್ಬಾಲಭಾಯಿ ತಮ್ಮ ಒಳ್ಳೆಯ ಗುಣಗಳಿಂದಾಗಿ ಎಲ್ಲ ರೀತಿಯ ಸಂಬಂಧವನ್ನೂ ನಿಭಾಯಿಸುತ್ತಿದ್ದರು.

ಒಂದು ದಿನ ಫೋನಿನ ಗಂಟೆ ಬಾರಿಸಿತು. ಅತ್ತ ಕಡೆಯಿಂದ ಓರ್ವ ಮಹಿಳೆ ಮಾತಾಡುತ್ತಿದ್ದಳು. ''ಹಲೋ, ಹಲೋ.... ನಾನು ಮಿಸೆಸ್ ಆಲೂವಿಯಾಹಾರೆ ಮಾತಾಡುತ್ತಿರುವೆ.....''

''ಮಿಸೆಸ್ ಆಲೂವಿಯಾಹಾರೆ.....?'' ನಾನು ಅಚ್ಚರಿಯಿಂದ ಕೇಳಿದೆ.

''ಹಾಂ; ..... ನೀನು ನನ್ನನ್ನು ಗುರುತಿಸುತ್ತಿಲ್ಲಾ..... ? ನಾನು ನಿನ್ನ ಹಳೆಯ ಲ್ಯಾಂಡ್‌ಲೇಡಿ, ಅಂದರೆ ಮಿಸೆಸ್ ವಿಂಗ್‌ಫೀಲ್ಡ್.... ನನ್ನ ಮದುವೆಯಾಗಿದೆ... ಇಂದು ಸಾಯಂಕಾಲ ಬಂದು ನನ್ನೊಂದಿಗೆ ಚಹಾ ತೆಗೆದುಕೋ.... ಹಾಂ.....''

ಸಂಜೆಗೆ ನಾನು ಹೋದಾಗ, ಮಿಸೆಸ್ ಆಲೂವಿಯಾಹಾರೆ ತನ್ನ ಡ್ರಾಯಿಂಗ್ ರೂಮಿನ ಬಾಗಿಲಲ್ಲಿ ನಿಂತು ನನ್ನನ್ನು ಬರಮಾಡಿಕೊಂಡಳು. ತುಂಬ ಪ್ರಸನ್ನಳಾಗಿದ್ದಳು. ಕೋಣೆಯಲ್ಲಿದ್ದ ಅಗ್ಗಿಷ್ಟಿಕೆಯ ಗೂಡಿನ ಮೇಲೆ ಒಂದು ಫೋಟೋ ಇರಿಸಲಾಗಿತ್ತು. ಅದರಲ್ಲಿ ಮಿಸೆಸ್ ಆಲೂವಿಯಾಹಾರೆ, ತನಗಿಂತ ಹತ್ತುವರ್ಷ ಚಿಕ್ಕವನಾದ ಓರ್ವ 'ಸಿಂಹಳೀ' ವ್ಯಕ್ತಿಯೊಂದಿಗೆ ಪುಷ್ಪ ಗುಚ್ಛ ಕೈಯಲ್ಲಿ ಹಿಡಿದು ನಿಂತು ಮುಗುಳ್ನಗುತ್ತಿದ್ದಳು. ಮದುಮಗನ ಜೊತೆಗೆ ಇಕ್ಬಾಲ ಬಖ್ತ ಸಕ್ಸೇನಾ ನಿಂತಿದ್ದಾರೆ. ಕೋಟಿನ ಕಾಲರದಲ್ಲಿ 'ಕಾರನೇಶನ್' ಸಿಂಗರಿಸಿಕೊಂಡು ಮುಗುಳ್ನಗುತ್ತಿದ್ದಾರೆ.

''ಮಿಸ್ಟರ್ ಸಕ್ಸೇನಾ ನನ್ನ ಗಂಡನ ಬೆಸ್ಟ್‌ಮೆನ್ ಇದ್ದರು'' ಎಂದು ಹೇಳಿದಳು, ಮಿಸೆಸ್ ಆಲೂವಿಯಾಹಾರೆ.

''ಇಕ್ಬಾಲಭಾಯಿ.....'' ಎನ್ನುತ್ತ ಮಾರನೆಯ ದಿನ ಅವರನ್ನು ವಿಚಾರಿಸಿದೆ.

''ದೇಖ ಮುನ್ನಿ......ನೋಡು ಮುನ್ನಿ...... ಅಂದು ಆಕೆ ಹದ್ದುಮೀರಿ ವರ್ತಿಸಿದ್ದನ್ನು ನೋಡಿದನಂತರ ಆಕೆ ಫ್ರೆಸ್ಟ್ರೇಶನ್ ಹಾಗೂ ಒಂಟಿತನದಿಂದ ಬಳಲು ತ್ತಿದ್ದಾಳೆಂದು ನನಗನ್ನಿಸಿತು. ಆಗಲೇ ಅಂದುಕೊಂಡೆ, ಆಕೆಗೆ ಸಹಾಯ ಮಾಡಲೇ ಬೇಕೆಂದು. ಆಕೆ ಕಪ್ಪು ಮನುಷ್ಯನನ್ನು ಕೂಡ ಮದುವೆ ಆಗಲು ಸಿದ್ಧಳೆಂದು ನೀನು ಹೇಳಿದ್ದೆ. ನಾನು ಕೊಲಂಬೋದ ಆ ಆಲೂವಿಯಾಹಾರೆಯನ್ನು ಬಲ್ಲವನಾಗಿದ್ದೆ. ಅವನು ಶ್ರೀಮಂತ ವಿಧವೆಯನ್ನು ಹುಡುಕುತ್ತಲಿದ್ದ. ತುಂಬ ಸಾತ್ವಿಕ ಹಾಗೂ ಬಡವ. ನಾನು ಮಿಸೆಸ್ ವಿಂಗಫೀಲ್ಡ್‌ಳ ಅಡ್ರೆಸ್ ಅವನಿಗೆ ನೀಡಿ ಹೇಳಿದೆ. ಸರಿ. ಇಬ್ಬರಿಗೂ ಒಳ್ಳೆಯದಾಯಿತು. ಎರಡೂ ಜೀವಗಳ ಜೀವನ ಸಂತೋಷದಾಯಕವಾಯಿತು. ಇನ್ನೇನು ಬೇಕು ? ಇದರಲ್ಲಿ ನನ್ನದೇನಾದರೂ ತಪ್ಪಿದೆಯೇ ?.....'' ಎಂದು ನನ್ನನ್ನು ಪ್ರಶ್ನಿಸಿದಾಗ ನಾನು ಇಕ್ಬಾಲಭಾಯಿಯ ಹೃದಯ ಶ್ರೀಮಂತಿಕೆಯ ಮುಂದೆ, ಮೂಕವಿಸ್ಮಿತಳಾದೆ.

ಇಕ್ಬಾಲಭಾಯಿ ಸಹಿತ ವಿದ್ಯಾರ್ಥಿಗಳ ಬಹುದೊಡ್ಡ ಸಮೂಹವೇ ವಾರ್ಷಿಕ ಯೂಥ್ ಫೆಸ್ಟಿವಲ್‌ದಲ್ಲಿ ಭಾಗವಹಿಸಲು ಪ್ರಾಗಕ್ಕೆ ಹೊರಟಿತ್ತು. ಈ ವರ್ಷ ಪಾಕಿಸ್ತಾನಿ ವಿದ್ಯಾರ್ಥಿಗಳಿಗೆ ಕಮ್ಯುನಿಸ್ಟ್ ದೇಶಕ್ಕೆ ಹೋಗಲು ಅನುಮತಿ ಸಿಕ್ಕಿರಲಿಲ್ಲ. ಇದರಿಂದಾಗಿ ಪಾಕಿಸ್ತಾನಿ ವಿದ್ಯಾರ್ಥಿಗಳಲ್ಲಿ ಕೆಲವರು ತುಂಬ ದುಃಖಿತರಾಗಿದ್ದರು. ಪ್ರತಿನಿಧಿ ಮಂಡಲ, ಪ್ರಾಗಕ್ಕೆ ಹೋಗುವ ಒಂದು ದಿನ ಮೊದಲು ನಡೆದ ಕಾರ್ಯಕ್ರಮದಲ್ಲಿ ಪೂರ್ವ ಪಾಕಿಸ್ತಾನದ ಓರ್ವ ವಿದ್ಯಾರ್ಥಿ–''ನಾವು ಈ ವರ್ಷ ಪ್ರಾಗಕ್ಕೆ ಹೋಗಲಾಗುವುದಿಲ್ಲ. ಅಲ್ಲಿ ಜಗತ್ತಿನ ಎಲ್ಲ ದೇಶಗಳ ಪ್ರಾತಿನಿಧ್ಯವಿರುತ್ತದೆ. ಕೇವಲ ಪಾಕಿಸ್ತಾನದ್ದು ಮಾತ್ರ ಇರುವುದಿಲ್ಲ'' ಎಂದು ತುಂಬ ದುಃಖದಿಂದ ಹೇಳಿದ. ಈ ಮಾತು ಮುಗಿಯುತ್ತಿರುವಂತೆಯೇ ಇಕ್ಬಾಲಭಾಯಿ ಆ ವಿದ್ಯಾರ್ಥಿಯ ಹತ್ತಿರ ಹೋಗಿ ಮೆಲ್ಲಗೆ ಹೇಳಿದರು– ''ನೂರ ಅಲ್ವರ ಖಾನಭಾಯಿ..... ಮನಸ್ಸು ಸಣ್ಣದು ಮಾಡಿಕೊಳ್ಳಬೇಡಿ. ಪಾಕಿಸ್ತಾನದ ಪರವಾಗಿ ನಾನು ಪ್ರಾತಿನಿಧ್ಯ ವಹಿಸುತ್ತೇನೆ....''

ಪ್ರಾಗದಲ್ಲಿ ಎಲ್ಲ ಕಡೆಯಿಂದ ಬಂದ ಯುವಕರು, ಒಂದು ಬಹುದೊಡ್ಡ ಕಾನ್ಸರ್ಟ್‌ದಲ್ಲಿ ತಮ್ಮ ತಮ್ಮ ದೇಶದ ಲೋಕಗೀತ ಹಾಡುತ್ತಿದ್ದರು. ಇಷ್ಟರಲ್ಲಿ ಸ್ಟೇಜ್ ಮೇಲೆ ಮೌನ ಆವರಿಸಿತು. ಓರ್ವ ಯುವತಿ ಅನೌನ್ಸ್ ಮಾಡಿದಳು– ''ಈಗ ನಮ್ಮ ಪ್ರಿಯ ದೇಶವಾದ ಪಾಕಿಸ್ತಾನದ ಪ್ರತಿನಿಧಿ ತಮ್ಮ ದೇಶದ ಕೂಲಿಕಾರರ ಗೀತ ಕೇಳಿಸಲಿದ್ದಾರೆ.''

ಪಾಕಿಸ್ತಾನದ ಹೆಸರು ಕೇಳಿದ ಶ್ರೋತೃಗಳು ಬಹಳ ಹೊತ್ತಿನವರಗೆ ಚಪ್ಪಾಳೆ ಬಾರಿಸುತ್ತಲಿದ್ದರು. ಖಡಕ್ ಇಸ್ತ್ರಿಯ ಬಿಳಿ ಪೈಜಾಮಾ, ಕರಿಯ ಬಣ್ಣದ ಶೇರವಾನಿ ಹಾಗೂ ಕಂದು ಬಣ್ಣದ ಟೊಪ್ಪಿಗೆ ಹಾಕಿಕೊಂಡು ತುಂಬ ಗಂಭೀರವಾಗಿ ಆತ್ಮವಿಶ್ವಾಸದೊಂದಿಗೆ ನಡೆಯುತ್ತ ಕಾಮ್ರೇಡ್ ಇಕ್ಬಾಲ ಬಖ್ತ ಮೈಕ್ರೋಫೋನ್‌ದ ಎದುರಿಗೆ ಬಂದು ಪಾಕಿಸ್ತಾನದಲ್ಲಿ ಸಾಮಾನ್ಯ ಜನತೆಯ ಹಾಗೂ ಪ್ರಗತಿಶೀಲ ಆಂದೋಲನದ ಅಸಫಲತೆಯ ಕಾರಣಗಳ ಬಗ್ಗೆ ಬೆಳಕು ಚೆಲ್ಲಿದರು.

''ಸಂಗಾತಿಗಳೇ, ನಾನೀಗ ತಮಗೆ ನನ್ನ ಪ್ರಿಯ ಮಾತೃಭೂಮಿಯ ಕೂಲಿಕಾರ ಜನಾಂಗದ ಬಹು ಲೋಕಪ್ರಿಯವಾದ ಹಾಡು ಹೇಳುತ್ತಿದ್ದೇನೆ'' ಎನ್ನುತ್ತ ಅತ್ಯಂತ ಗಂಭೀರವಾದ ಧ್ವನಿಯಲ್ಲಿ ಹಾಡಲಾರಂಭಿಸಿದ–

ಭಾರ ಎತ್ತಿಕೊ.... ಹಯ್ಯಾ..... ಹಯ್ಯಾ
ಭಾರ ಎತ್ತಿಕೊಂಡೆ.... ಹಯ್ಯಾ..... ಹಯ್ಯಾ
ಅರಮನೆಯಾಗುತ್ತದೆ.... ರಾಜಾಜಿಯದು
ಹೊಟ್ಟೆ ತುಂಬುತ್ತದೆ.... ಮಹಾರ ನಿನ್ನದು
ಮೇಲೆ ಎತ್ತಿಕೊ.... ಹಯ್ಯಾ.... ಹಯ್ಯಾ
ಭಾರ ಎತ್ತಿಕೊ.... ಹಯ್ಯಾ..... ಹಯ್ಯಾ

ಜನಸಮೂಹದ ಮೇಲೆ ಈ ಹಾಡಿನ ಪ್ರಭಾವ ತುಂಬ ಆಯಿತು. ಸ್ವಭಾವಕ್ಕೆ ತಕ್ಕ ಹಾಗೆ ಕೇಳುಗರೂ ಕೂಡ ಹಾಡಿನೊಂದಿಗೆ ತಮ್ಮ ಧ್ವನಿಯನ್ನೂ ಸೇರಿಸಲಾರಂಭಿಸಿದರು.

ಆದರೆ ಸೈಯದ್ ಮುತಲ್ಬಿ ಫರೀದಾಬಾದಿ ಅವರ ಈ ಪ್ರಸಿದ್ಧ ಗೀತದ ಮುಂದಿನ ಸಾಲುಗಳು ಇಕ್ಬಾಲಭಾಯಿ ಅವರಿಗೆ ಸಂಪೂರ್ಣ ನೆನಪು ಹಾರಿದ್ದವು. ಅವರಿಗೆ ನೆನಪಿದ್ದ ಸಾಲುಗಳು ಇವಷ್ಟೇ ಆದರೂ ತುಂಬ ಆತ್ಮವಿಶ್ವಾಸದಿಂದ ಹಾಡು ಮುಂದುವರಿಸಿ ದರು....

''ಬಟ್ಟಲು ಎತ್ತಿಕೊ, ಹೇಗೆ ಬಂಧು
ಹೀಗೆ ಬಂಧು, ಹಯ್ಯಾ..... ಹಯ್ಯಾ.....
ಚಮಚಾ ಎತ್ತಿಕೊ, ಚಮಚಾ ಎತ್ತಿಕೊಂಡೆ ಹಾ.... ಹಾ....
ಬಂಧು, ಹಯ್ಯಾ.... ಹಯ್ಯಾ....

ಸಾವಿರಾರು ಜನ ಒಮ್ಮೆಲೇ ದನಿಗೂಡಿಸಿದರು.....

ಚಮಚಾ ಎತ್ತಿಕೊ.... ಚಮಚಾ ಎತ್ತಿಕೊಂಡೆ
ಹಾ.... ಹಾ.... ಬಂಧು, ಹಯ್ಯಾ..... ಹಯ್ಯಾ....

ಈ ರೀತಿಯಾಗಿ ಇಕ್ಬಾಲಭಾಯಿಯ ಕಲ್ಪನೆಯಲ್ಲಿ ಮಿಡಿದ ಶಬ್ದಗಳೆಲ್ಲ ಹಯ್ಯಾ... ಹಯ್ಯಾದೊಂದಿಗೆ ಜೋಡಣೆಗೊಳ್ಳುತ್ತ ಹೋದವು. ಅದರೊಂದಿಗೇನೇ ಚಪ್ಪಾಳೆಯ ಮಹಾಪೂರ, ಆ ಮಹಾಪೂರದಲ್ಲಿ ಅವರ ಗೀತ ಸಾಫಲ್ಯದ ಶಿಖರ ತಲುಪಿತು.

ಜೆಕೊಸ್ಲೋವಾಕಿಯಾದಿಂದ ಮರಳಿದ ಕೆಲದಿನಗಳ ನಂತರ ಇಕ್ಬಾಲಭಾಯಿ ಹೇಳಿದರು– ''ನಾನು ಹಾವುಗಳ ವ್ಯಾಪಾರ ಆರಂಭಿಸಿದ್ದೇನೆ.''

''ಹಾವುಗಳ ವ್ಯಾಪಾರ ?'' ಎಂದೆ. ಆದರೆ ನನಗೆ ಎಳ್ಳಷ್ಟೂ ಅಚ್ಚರಿಯಾಗಲಿಲ್ಲ. ಏಕೆಂದರೆ ಇಕ್ಬಾಲಭಾಯಿ ಏನು ಬೇಕಾದರೂ ಮಾಡಬಲ್ಲವರಾಗಿದ್ದರು.

''ನೂರಾರು ಮಂಗಗಳೂ ಇವೆ.....'' ಎನ್ನುತ್ತ ಮಾತು ಮುಂದುವರಿಸಿ ಹೇಳಿದರು–''ನಿಜವಾಗಿ ಹೇಳಬೇಕೆಂದರೆ.... ಮಾತು ಹೀಗಿದೆಯಲ್ಲ ಮುನ್ನಿ, ನಮ್ಮ ಖಾಲಿದ ಸಾಹೇಬ ಇದ್ದಾರಲ್ಲ, ಅವರ ಮಾವ ಮಿಸ್ಟರ್ ಚಿರಾಗುದ್ದೀನ್, ಅಮೇರಿಕೆಯ ಪ್ರಾಣಿ ಸಂಗ್ರಹಾಲಯ ಹಾಗೂ ಪ್ರಯೋಗಶಾಲೆಗಳಿಗೆ ಹಾವು ಮತ್ತು ಮಂಗಗಳ ಪೂರೈಕೆ ಮಾಡುತ್ತಾರೆ. ಅವರು ತಮ್ಮ ಈ ಫರ್ಮದಲ್ಲಿ ನೌಕರಿ ನೀಡಿದ್ದಾರೆ. ಈಗ ಅವರ ಕೆಲಸ ನೋಡಿಕೊಳ್ಳಲು ಅಮೇರಿಕೆಗೆ ಹೊರಟಿದ್ದೇನೆ'' ಎಂದರು.

ಈ ರೀತಿಯಾಗಿ ಇಕ್ಬಾಲಭಾಯಿ ಹಾವುಗಳ ವ್ಯವಹಾರ ಮಾಡಲು ಅಮೇರಿಕಾಕ್ಕೆ ಹೊರಟು ಹೋದರು.

ಒಂದು ದಿನ ಪೋಸ್ಟ್ ಮೂಲಕ ನನಗೆ ಎಡ್ವೀನಾ ಕಾರಲಾಯಿಲ್‌ಳ ಸಂಕ್ಷಿಪ್ತ ಕಾಗದ ಒಂದು ಬಂದಿತು. ಅದು ಐರ್ಲೆಂಡ್‌ದಿಂದ ಬಂದಿತ್ತು. ಎಡ್ವೀನಾ ಕಾರಲಾಯಿಲ್ ಬರೆದಿದ್ದಳು.... ''ನನ್ನನ್ನು ಇಡೀ ಜಗತ್ತು ಕೈಬಿಟ್ಟಿದೆ. ನನ್ನ ಇರುವಿಕೆಯ ಬಗ್ಗೆಯೇ ನನಗೆ ಜಿಗುಪ್ಸೆ ಹುಟ್ಟಿತ್ತು. ನಾನು ಸಾವಿನ ಆಶ್ರಯ ಹುಡುಕಿದೆ. ಸಾಯುವುದರಲ್ಲಿಯೂ ನನಗೆ ನನ್ನ ಬದುಕಿನಂತೆಯೇ ಸಫಲತೆ ದೊರೆಯಲಿಲ್ಲ. ವರ್ಷಗಟ್ಟಲೇ ಪ್ಲಾಸ್ಟರ್ ಆಫ್ ಪೆರಿಸ್‌ದಲ್ಲಿ ಸಿಕ್ಕುಹಾಕಿಕೊಂಡಿದ್ದೆ. ಆಸ್ಪತ್ರೆಯಲ್ಲಿ ಕೊಳೆಯುತ್ತಿದ್ದೆ. ಆಗ ಮಿಸ್ಟರ್

ಸಕ್ಸೇನಾ ಪ್ರತಿ ವಾರ ಎಲ್ಲ ಋತುಮಾನಗಳಲ್ಲೂ ಎಂಥ ಸ್ಥಿತಿಯಲ್ಲೂ ಬಂದು ಗಂಟೆಗಟ್ಟಲೇ ನನ್ನ ಜೊತೆಗಿದ್ದು ''ಜೀವಂತವಿರಬೇಕಾದರೆ ಧೈರ್ಯ ಬಿಡಬಾರದು. ಇದು ತುಂಬ ಅವಶ್ಯ'' ಎಂದು ಹೇಳುತ್ತ, ನನ್ನಲ್ಲಿ ಜೀವಂತವಿರುವ ಆಶೆ ತುಂಬುತ್ತಿದ್ದರು. ಈಗ ಅವರು ಎಲ್ಲಿದ್ದಾರೆಂಬುದು ನನಗೆ ಗೊತ್ತಿಲ್ಲ. ಅವರಿಗೆ ನನ್ನ ಕೃತಜ್ಞತೆ, ವಂದನೆಗಳನ್ನು ಸಲ್ಲಿಸಲೆಂದೇ ಈ ಪತ್ರ ನಿಮಗೆ ಬರೆಯುತ್ತಿದ್ದೇನೆ.''

ಆದರೆ ಮಿಸ್ಟರ್ ಸಕ್ಸೇನಾ ಈಗ ಎಲ್ಲಿದ್ದಾರೆಂಬುದು ನನಗೂ ಗೊತ್ತಿರಲಿಲ್ಲ. ಅವರು ಅಮೇರಿಕಾ ತಲುಪಿದ ನಂತರ ಯಾರಿಗೂ ಒಂದು ಕಾರ್ಡ್ ಕೂಡ ಬರೆದಿರಲಿಲ್ಲ.

ನಾನು ನನ್ನ ದೇಶಕ್ಕೆ ಮರಳಿ ಬಂದೆ. ಇಕ್ಬಾಲ್‌ಭಾಯೀ ಈಗ ಯಾವ ಕೊಳ್ಳ ಕಣಿವೆ ಅಥವಾ ಅಂತಸ್ತಿನಲ್ಲಿದ್ದಾರೆಂಬುದು ಯಾರಿಗೂ ತಿಳಿದಿರಲಿಲ್ಲ. ಆದರೆ ನಾಲ್ಕು ವರ್ಷಗಳಾದವು. ನನ್ನ ಓರ್ವ, ಚಿಗದೊಡ್ಡಪ್ಪನ ಮಗಳು, ಶಿಕ್ಷಣ ಮುಗಿಸಿಕೊಂಡು ಸಾನ್‌ಫ್ರಾನ್ಸಿಸ್ಕೊದಿಂದ ಮರಳಿದ್ದಾಳೆ. ಆಕೆ ಹೇಳಿದಳು–

''ನಾನು ಇಕ್ಬಾಲಭಾಯಿಯನ್ನು ಕಣ್ಣಾರೆ ಕಂಡಿದ್ದೇನೆ.''

''ಎಲ್ಲಿ....?....''

''ಹಾಲಿವುಡ್‌ದಲ್ಲಿ... ಬೈವರ್ಲಿಹಿಲ್ಸ್‌ದಲ್ಲಿ....''

''ಬೈವರ್ಲಿಹಿಲ್ಸ್‌ದಲ್ಲಿ ಏನು ಮಾಡುತ್ತಾರೆ ?....

''ಅಲ್ಲಿಯೇ ಇದ್ದಾರೆ. ಬಹುದೊಡ್ಡ, ಭವ್ಯವಾದ ಸೌಧವಿದೆ. ಅದರಲ್ಲಿ ವಾಸವಾಗಿದ್ದಾರೆ. ಅಲ್ಲಿ ಎರಡು ಸ್ವೀಮಿಂಗ್‌ಪೂಲ್‌ಗಳಿವೆ. ಕೆಡಿಲೈಕ್ ಕಾರುಗಳ ಒಂದು ಫ್ಲೀಟ್ ಇದೆ. ಇನ್ನೂ ಏನೇನೋ.... ನನ್ನನ್ನು ಊಟಕ್ಕೂ ಕರೆದಿದ್ದರು.... ನಿಗ್ರೊ ಬಟ್ಲರ್ ಇದ್ದಾರೆ.... ಮತ್ತು ಮತ್ತು....''

ರಾವಿ ಮುಂದುವರಿದು ಇನ್ನೂ ಹೇಳಿದಳು– ''ಹಾವುಗಳ ವ್ಯವಹಾರಕ್ಕಾಗಿ ಅಮೇರಿಕಾ ತಲುಪಿದ ಮಾರನೆಯ ದಿನವೇ ಮಿಸ್ಟರ್ ಚಿರಾಗುದ್ದೀನ್ ಮತ್ತು ಮಿಸ್ಟರ್ ಇಕ್ಬಾಲ ಬಖ್ತ ಸಕ್ಸೇನಾರ ನಡುವೆ ಭಿನ್ನಾಭಿಪ್ರಾಯ ಉಂಟಾಯಿತು. ಇದರ ಪರಿಣಾಮವಾಗಿ ಮಿಸ್ಟರ್ ಸಕ್ಸೇನಾ ನೌಕರಿಗೆ ತ್ಯಾಗಪತ್ರ ನೀಡಬೇಕಾಯಿತು. ನಂತರ ಅವೆಷ್ಟೋ ಬಂಗಾರದಂಥ ಅವಕಾಶಗಳುಳ್ಳ ಆ ದೇಶದಲ್ಲಿ ಅವರು ವಿಭಿನ್ನ ಪ್ರಕಾರದ ನೌಕರಿ, ಕೂಲಿ ಕೆಲಸ ಮಾಡುತ್ತ ಕೆಲಿಫೋರ್ನಿಯಾ ತಲುಪಿದರು. ಅಲ್ಲಿ ಸಿಖ್ಖ ಮತ್ತು ಪಂಜಾಬಿ ಮುಸಲ್ಮಾನ ಜಮೀನ್ದಾರರುಗಳ ಹೊಲಗಳಲ್ಲಿ ಕೆಲಸಮಾಡುತ್ತಿದ್ದರು. ಅಲ್ಲಿಂದ ಹಾಲಿವುಡ್‌ಗೆ ಹೋದರು. ಪೂರ್ವದೇಶಗಳ ಕುರಿತು ತೆಗೆಯಲ್ಪಡುತ್ತಿದ್ದ ಚಿತ್ರಗಳಲ್ಲಿ ಚೀನದೇಶದ ರಿಕ್ಷಾವಾಲಾ, ಹಿಂದೂಸ್ತಾನದ ಫಕೀರ, ಕೂಲಿ ಮತ್ತು ಅರಬ್‌ದೇಶದ ಬದ್ದು—ಒಂದೊಂದು ಎರಡೆರಡು ಕ್ಷಣಗಳ ಈ ಪಾತ್ರಗಳನ್ನು ತುಂಬ ಕುಶಲತೆಯಿಂದ ಪ್ರಭಾವಪೂರ್ಣವಾಗಿ ನಿರ್ವಹಿಸಿದರು. ಒಂದು ರೆಸ್ಟೋರೆಂಟ್‌ದಲ್ಲಿ ವೇಟರ್ ಆದರು. ಓರ್ವ ಸುಪ್ರಸಿದ್ಧ ಪ್ರೊಡ್ಯುಸರ್‌ನ ಕರೋಡಪತಿ ವಿಧವೆ ಆ ಹೋಟಲಿನಲ್ಲಿ ಯಾವಾಗಾದರೊಮ್ಮೆ ಊಟ ಮಾಡಲು ಬರುತ್ತಿದ್ದಳು. ಆಕೆಗೆ ಮಕ್ಕಳಿರಲಿಲ್ಲ. ಸಾಕಷ್ಟು

ಮುಪ್ಪು ಆವರಿಸಿತ್ತು. ಕಣ್ಣು ಕೂಡ ಸರಿಯಾಗಿ ಕಾಣಿಸುತ್ತಿರಲಿಲ್ಲ. ಆಕೆ ಬೇವರ್ಲಿ ಹಿಲ್ಸ್‌ದಲ್ಲಿ ತನ್ನ ಭವ್ಯವಾದ ಸೌಧದಲ್ಲಿ ಅತ್ಯಂತ ಏಕಾಕಿಯಾಗಿ ಜೀವಿಸುತ್ತಿದ್ದಳು. ಹಾಲಿವುಡ್, ಸೌಂದರ್ಯ ಹಾಗೂ ಯೌವ್ವನವನ್ನು ಸದಾ ಪೂಜಿಸುತ್ತ ಬಂದ ನಗರ. ಎಪ್ಪತ್ತೈದು ವರ್ಷದ ಮುದುಕಿ ಹಾಗೂ ಸ್ವಲ್ಪಮಟ್ಟಿನ ಕುರಡಿಯೊಂದಿಗೆ ಎರಡು ಕ್ಷಣ ಮಾತನಾಡಲು ಅಲ್ಲಿ ಯಾರಲ್ಲಿ ಸಮಯವಿದೆ. ಆಕೆ ರೆಸ್ಟೋರೆಂಟ್‌ನಲ್ಲಿ ಬಂದು ಒಂದು ಮೂಲೆಯಲ್ಲಿರುವ ತನ್ನ ವಿಶಿಷ್ಟ ಮೇಜಿನ ಬಳಿ ಕುಳಿತರೆ ಇಕ್ಬಾಲಭಾಯಿ ಬಂದು, ತುಂಬ ಅನುಕಂಪದಿಂದ, ಪ್ರೀತಿಯಿಂದ ಆಕೆಯ ಆರೋಗ್ಯದ ಬಗ್ಗೆ ವಿಚಾರಿಸಿಕೊಳ್ಳುತ್ತಾರೆ. ಆಕೆ ಯಾರೆಂಬುದೂ ಕೂಡ ಇಕ್ಬಾಲ ಭಾಯಿಗೆ ಗೊತ್ತಿರಲಿಲ್ಲ. ಮುದುಕಿ ಅವರಿಂದ ತುಂಬ ಅನುಗ್ರಹಿತಳಾದಳು. ಆಕೆ ಇಕ್ಬಾಲ ಭಾಯಿಯನ್ನು ತನ್ನ ಬಂಗ್ಲೆಗೆ ಆಮಂತ್ರಿಸಿದಳು. ಆಗಿನಿಂದ ಇಕ್ಬಾಲಭಾಯಿ ಆಗಾಗ ಆಕೆಯ ಇಚ್ಛೆಯ ಮೆರೆಗೆ ಹೋಗಿ ಆಕೆಗಾಗಿ ಪತ್ರಿಕೆಗಳನ್ನು, ಮಾಸಿಕಗಳನ್ನು ಓದುತ್ತಿದ್ದರು. ಆ ಮುದುಕಿಯ ಕಂಪ್ಯಾನಿಯನ್ ಈ ಕೆಲಸಕ್ಕಾಗಿ ತುಂಬ ವೇತನ ಪಡೆಯುತ್ತಿದ್ದಳು. ಆದರೆ ಇಕ್ಬಾಲಭಾಯಿ ಕೇವಲ ಮಾನವೀಯ ದೃಷ್ಟಿಯಿಂದ ಆಕೆಯಲ್ಲಿಗೆ ಹೋಗಿ ಈ ಕಾರ್ಯ ಮಾಡುತ್ತಿದ್ದರು. ಕೊನೆಗೊಂದು ದಿನ ಆಕೆ ಇಕ್ಬಾಲ ಭಾಯಿಗೆ ತನ್ನಲ್ಲಿಯೇ ಇರಬೇಕೆಂದು ಆಗ್ರಹಿಸಿದಳು. ಹೀಗಾಗಿ ಈಗ ಇಕ್ಬಾಲಭಾಯಿ ಬೇವರ್ಲಿಹಿಲ್ಸ್‌ದಲ್ಲಿ, ಆ ಭವ್ಯವಾದ ಸೌಧದಲ್ಲಿ ವಾಸಿಸಿದ್ದಾರೆ. ಮುದುಕಿ ಬಹುಶಃ ಕಾನೂನಿನ ಪ್ರಕಾರ ಇಕ್ಬಾಲಭಾಯಿಯನ್ನು ತನ್ನ ಮಗನನ್ನಾಗಿ ಮಾಡಿಕೊಳ್ಳುವವಳಿದ್ದಾಳೆ.

''ಇಕ್ಬಾಲ ಬಖ್ತ ಸಕ್ಸೇನಾ ಅವರ ಈ ಸುದೀರ್ಘ ಕಥೆ'' ಕೇಳಿ ಯಾರೋ ಅಂದರು ''ಇದೊಂದು ಯಶಸ್ಸಿನ ಕ್ಲಾಸಿಕ್ ಗಾಥಾ ಆಗಿದೆ....''

ಆದರೆ ಆರು ತಿಂಗಳನಂತರ ಇನ್ನೋರ್ವ ಮಿತ್ರರು ಅಮೇರಿಕಾದಿಂದ ಮರಳಿ ಬಂದರು. ಅವರು ಇಕ್ಬಾಲಭಾಯಿಯನ್ನು ಅದೇ ರೆಸ್ಟೋರಾನ್‌ದಲ್ಲಿ ವೇಟರ್‌ನ ಯುನಿಫಾರ್ಮದಲ್ಲಿ ನೋಡಿದ್ದರಂತೆ. ಆಗ ಈ ವಿಷಯ ಗೊತ್ತಾಯಿತು. ಆ ಕರೋಡಪತಿ ಮುದುಕಿ ಸತ್ತು ಹೋದಳು. ಆಕೆ ತುಂಬ ಕೆಟ್ಟ ಹಾಗೂ ಕುಲಟೆಯಾಗಿದ್ದಳು. ತನ್ನೆಲ್ಲಾ ಸಂಪತ್ತನ್ನು ಪ್ಯಾರಿಸ್‌ದ ಓರ್ವ ತರಕಾರಿ ಮಾರುವವನ ಹೆಸರಿನಲ್ಲಿ ಮಾಡಿ ಹೋದಳಂತೆ. ಇಕ್ಬಾಲಭಾಯಿ ತನ್ನ ಮೊದಲಿನ ಕೆಲಸಕ್ಕೆ ಮರಳಿ ಸೇರಿಕೊಂಡರಂತೆ.

ನಾನು ಇಂದು ಅಪರಾಹ್ನ ಶಾರದಾ ಮೆಹತಾಳ ಮನೆಯ ಮುಂದಿನಿಂದ ಹೋಗುತ್ತಲಿದ್ದೆ. ಆಕೆ ನನ್ನನ್ನು ಕರೆದಳು. ಆಕೆ ಅದೇ ವೇಳೆಯಲ್ಲಿ ಕಾರಿನಲ್ಲಿ ಕೂಡತೊಡಗಿದ್ದಳು– ''ಎಲ್ಲಿಗೆ ಹೊರಟಿರುವೆ.....?'' ಎಂದಾಕೆ ಕೇಳಿದಳು. ನಾನು ಹೋಗುವ ಜಾಗಾದ ಬಗ್ಗೆ ಆಕಗೆ ಹೇಳಿದೆ. ಆಗ ಆಕೆ– ''ನಾನೂ ಅತ್ತ ಕಡೆಗೇನೇ ಹೋಗುತ್ತಿರುವೆ.... ಬಾ.... ದಾರಿಯಲ್ಲಿ ನಿನ್ನನ್ನು ಇಳಿಸಿ ಹೋಗುತ್ತೇನೆ..... ಸತ್ಸಂಗದ ಸಮಯ ಮೂರು ಗಂಟೆಗೇ ಇತ್ತು... ನನಗೆ ಕೊಂಚ ತಡವಾಯಿತು.... ಹೊರಡಲು...'' ಎಂದಳು.

ಶಾರದಾ ಮೆಹ್ತಾ, ಸೀದಾ ಸಾದಾ, ನಾರ್ಮಲ್, ಧಾರ್ಮಿಕ ಮನೋಭಾವದ ಗೃಹಿಣಿ. ಆಕೆಯ ಒಬ್ಬಳೇ ಮಗಳು ಪೋಲಿಯೋರೋಗಕ್ಕೆ ಯಾವಾಗ ತುತ್ತಾದಳೋ ಆಗಿನಿಂದ ಪೂಜಾಪಾಠ, ಮಂದಿರಗಳಿಗೆ ಹೋಗುವುದು, ಯಾತ್ರೆ ಕೈಕೊಳ್ಳುವುದು, ಸಾಧು ಸಂತರ ದರ್ಶನ ಮಾಡುವುದು, ಪೀರ–ಫಕೀರ, ದರಗಾ ದರ್ಶಿಸುವುದು ಹೆಚ್ಚಾಯಿತು. ಇಂಥದರಲ್ಲಿ ಶ್ರದ್ಧೆ, ಭರವಸೆ ವಿಶ್ವಾಸವಿಡುವುದರಿಂದಲೇ ತಮ್ಮ ಯೋಗಕ್ಷೇಮವಿದೆಂದು ತಿಳಿದು ಜೀವಿಸುವವರಲ್ಲಿ ಈಕೆಯೂ ಒಬ್ಬಾಕೆ.

ಒಂದು ಕಡೆ, ಓರ್ವ ಗುಜರಾತಿ ಸೇಠನ ಭವ್ಯ 'ವಿಲಾ'ದಲ್ಲಿ ಶಾರದಾಳ ಕಾರು ಒಳಗೆ ಹೋಯಿತು. ಸತ್ಸಂಗ ಸಮಾಪ್ತಗೊಂಡಿತ್ತು. ಅಲ್ಲಿಗೆ ಬಂದಿದ್ದ ಭಕ್ತರ ಕಾರುಗಳು ತಮ್ಮ ಮನೆ ಕಡೆ ಹೊರಟಿದ್ದವು. ಆಗ ನಾನು– ''ಅರೆ.... ನಿನ್ನ ಸತ್ಸಂಗ ಸಮಾಪ್ತಗೊಂಡಿತಲ್ಲ'' ಎಂದೆ.

''ಪರವಾಗಿಲ್ಲ, ನಾನು ಗುರುಗಳ ದರ್ಶನ, ಆಶೀರ್ವಾದವನ್ನಾದರೂ ಪಡೆಯು ತ್ತೇನೆ. ಅವರು ನಾಳೆ ಅಮರನಾಥಕ್ಕೆ ಹೊರಟಿದ್ದಾರೆ. ಕೇವಲ ಐದು ನಿಮಿಷ, ನೀನೂ ಬಾ ಅಲ್ಲ...'' ಎಂದಳು.

ಎದುರಿಗೇ ಇರುವ ಹಾಲ್‌ನಲ್ಲಿ, ಓರ್ವ ವಿದೇಶಿ ಮಹಿಳೆ, ಬಿಳಿಸೀರೆ ಉಟ್ಟು, ಹಣೆಯ ಮೇಲೆ ದೊಡ್ಡದಾದ ಗಂಧದ ತಿಲಕವಿಟ್ಟು ಪದ್ಮಾಸನದಲ್ಲಿ ಕುಳಿತು, ಕೆಲ ಮಹಿಳೆಯರಿಗೆ ಭಗವದ್ಗೀತೆಯ ಬಗ್ಗೆ ಪ್ರವಚನ ನೀಡುತ್ತಿದ್ದಳು. ಆಕೆಗೆ ನಲವತ್ತೈದು ವರ್ಷಗಳಾಗಿರಬೇಕು. ಆಕೆಯ ಮಾತುಕತೆಯಿಂದ ಆಕೆ ಅಮೇರಿಕನ್ ಇರಬೇಕೆಂದೆ ನ್ನಿಸುತ್ತಿತ್ತು....ಶಾರದಾ ಸಮೀಪ ಹೋಗಿ ಆಕೆಗೆ ನಮಸ್ಕರಿಸಿ, ನನಗೆ, ತನ್ನ ಹಿಂದೆ ಬರುವಂತೆ ಸನ್ನೆಮಾಡಿ, ಮುಂದೆ ಹೊರಟಳು. ನಾನು ಆಕೆಯ ಹಿಂದೆ ಹಿಂದೆ ಹೊರಟೆ. ಶಾರದಾ ಒಂದು ಕೋಣೆಯಲ್ಲಿ ಪ್ರವೇಶಿಸಿದಳು.

ಬಾಗಿಲದ ಹೊರಗೆ ಚಪ್ಪಲಿ ಬಿಟ್ಟು, ತಲೆಯ ಮೇಲೆ ಸೆರಗು ಹೊತ್ತುಕೊಂಡು ನಾನೂ ಆಕೆಯ ಹಿಂದೆಯೇ ಒಳಗೆ ಹೋದೆ. ಕೋಣೆಯಲ್ಲಿ ಅತ್ಯಂತ ಶುಭ್ರಬಟ್ಟೆ ಹಾಸಲಾಗಿತ್ತು. ಅದರ ಮೇಲೆ ಅಲ್ಲಲ್ಲಿ ಮಲ್ಲಿಗೆ, ಗುಲಾಬಿ ಹೂಗಳ ಪಕಳೆಗಳು ಹರಡಿದ್ದವು. ಶ್ರದ್ಧಾವಂತ ಭಕ್ತರು ಈಗ ತಾನೇ ಎದ್ದು ಅಲ್ಲಿಂದ ಹೋಗಿರಬೇಕು. ಒಂದೆಡೆ ಹಾರಮೋನಿಯಮ್, ತಾಳ, ತಾನಪುರಾ ಇರಿಸಲಾಗಿತ್ತು. ಕಿಟಕಿಗಳಲ್ಲಿ ತಾಜಾ ಹೂಗಳನ್ನು ಹೂದಾನಿಯಲ್ಲಿರಸಲಾಗಿತ್ತು, ಲೋಬಾನದ ಹೊಗೆ ಕೋಣೆಯ ತುಂಬ ಸುವಾಸನೆ ಬೀರುತ್ತಲಿತ್ತು. ಮಧ್ಯದಲ್ಲಿ ಶ್ರೀಗಂಧದ ಚೌಕಿಯ ಮೇಲೆ ಶುಭ್ರ ವಸನಧಾರಿ, ತಲೆಯ ನೀಳ ಕೂದಲುಗಳನ್ನು ಬೆನ್ನ ಮೇಲೆ ಬಿಟ್ಟು, ಪದ್ಮಾಸನದಲ್ಲಿ ಧ್ಯಾನಾಸಕ್ತನಾಗಿ ಕುಳಿತಿದ್ದಾನೆ. ಗೀತಾ ಪಾಠ ಈಗ ತಾನೇ ಮುಗಿಸಿರಬೇಕು ಎನ್ನಿಸುತ್ತದೆ. ಏಕೆಂದರೆ ಗ್ರಂಥ ಇನ್ನೂ ಚೌಕಿಯ ಮೇಲೆ ಪಕ್ಕದಲ್ಲಿಯೇ ಇತ್ತು. ಮೌನವಾಗಿಯೇ ಕಿಟಕಿಯ ಆಚೆ ಕಾಣುವ ಆಕಾಶದತ್ತ ಅವರ ದೃಷ್ಟಿಯಿತ್ತು. ಅವರನ್ನು ನಾನು ಗುರುತಿಸಿದೆ. ಅವರು ಬೇರೆ ಇನ್ನಾರೂ ಆಗಿರಲಿಲ್ಲ. ಅವರು ಇಕ್ಬಾಲ ಬಖ್ತ ಸಕ್ಸೇನಾ,

ನಮ್ಮ ಇಕ್ಬಾಲಭಾಯಿಯೇ ಆಗಿದ್ದರು. ಹೀಗೆ ಅವರನ್ನು ಕಂಡು ನನಗೆ ಎಳ್ಳಷ್ಟೂ ಆಶ್ಚರ್ಯವಾಗಲಿಲ್ಲ.

ಅವರು ನನ್ನನ್ನು ಬಹುಶಃ ಮತ್ತೊಂದು ಬಾರಿ ಗುರುತಿಸಲಿಲ್ಲ..... ಗುರುತು ಸಿಕ್ಕಿದ್ದರೂ ಪ್ರಕಟಿಸಲಿಲ್ಲ, ಕೆಲ ಕ್ಷಣ ನನ್ನನ್ನು ಒಂದೇ ಸಮನೆ ನೋಡುತ್ತಲಿದ್ದರು.... ಮತ್ತೆ ಅವರು ಮೊದಲಿನಂತೆ ತಮ್ಮ ದೃಷ್ಟಿಯನ್ನು ಶೂನ್ಯದಲ್ಲಿ ಕೇಂದ್ರೀಕರಿಸಿದರು.

ಶಾರದಾ ಬಾಗಿ, ಅಪಾರ ಶ್ರದ್ಧೆಯಿಂದ ಅವರ ಪಾದ ಸ್ಪರ್ಶಿಸಿದಳು. ಹಾಗೂ ಸಾವಧಾನದಿಂದ ಹಿಂದಕ್ಕೆ ಸರಿದಳು. ಆಕೆ ತನ್ನೊಂದಿಗೆ ಹೊರಬರುವಂತೆ ನನಗೆ ಕಣ್ಸನ್ನೆ ಮಾಡಿದಳು. ಏಕೆಂದರೆ ಆಕೆ ದರ್ಶನ ಪಡೆದಾಗಿತ್ತು. ಆದರೆ ನಾನು ಮೆಲ್ಲಗೆ ಗುರುಗಳಿದ್ದೆಡೆ ಹೋದೆ ಹಾಗೂ ಆಕೆಯಷ್ಟೇ ಶ್ರದ್ಧೆಯಿಂದ ಬಾಗಿ, ಗುರುಗಳ ಪಾದಸ್ಪರ್ಶ ಮಾಡಿದೆ. ಇದೆಲ್ಲ ಕಂಡು ಶಾರದಾಗೆ ಆಶ್ಚರ್ಯವಾಯಿತು.

ಬಾಲ್ಯದಲ್ಲಿ ಇಕ್ಬಾಲಭಾಯಿ, ನನ್ನ ಕಿವಿ ಹಿಂಡಿದ್ದರು. ಬಯ್ದು..... ಬಯ್ದು ತುಂಬ ಪರಿಶ್ರಮಪಟ್ಟು ನನಗೆ ಓದಲು ಬರೆಯಲು ಕಲಿಸಿದ್ದರು. ಗುರುವಿನ ಸ್ಥಾನ, ತಾಯಿ–ತಂದೆಗಳ ಸ್ಥಾನ ಒಂದೇ ಆಗಿರುತ್ತದೆ. ಅವರು ಜಗತ್ತಿಗೆ ಯಾವ ರೀತಿಯ ಗುರು ವಾಗಿದ್ದಾರೋ ಗೊತ್ತಿಲ್ಲ. ಆದರೆ ಅವರನ್ನು ಗುರುವೆಂದು ಭಾವಿಸುವ ಪೂಜಿಸುವ ಹಕ್ಕು ಮಾತ್ರ ಕೇವಲ ನನಗೊಬ್ಬಳಿಗೆ ಸಲ್ಲುತ್ತದೆ.

ಅವರು ಕೈಯೆತ್ತಿ ಮೌನವಾಗಿಯೇ ನನಗೆ ಆಶೀರ್ವಾದ ನೀಡಿದರು. ಹಾಗೂ ಮೊದಲಿನಂತೆಯೇ ಧ್ಯಾನಾಸಕ್ತರಾಗಿ ಶೂನ್ಯದ ವೀಕ್ಷಣೆಯಲ್ಲಿ ನಿರತರಾದರು. ನಾನು ಮೆಲ್ಲಗೆ ಬಾಗಿಲದತ್ತ ಹೊರಟು, ಚಪ್ಪಲಿ ಹಾಕಿಕೊಂಡು, ಶಾರದಾಳೊಂದಿಗೆ ಹೊರಗೆ ಬಂದೆ.

ಈಗ ಗಂಡಸರು ಹಾಗೂ ಮಹಿಳೆಯರು ಸಾಲುಗಟ್ಟಿ ಗುರೂಜಿಯ ದರ್ಶನಕ್ಕಾಗಿ ಒಳಗೆ ಹೋಗಲು ಸನ್ನದ್ಧರಾಗಿದ್ದರು.

ಹಾಲ್‌ನಿಂದ ಕೆಳಗಿಳಿದು ಬರುವಾಗ ನಾನು ಯೋಚಿಸಿದೆ–ನಾನು ಒಂದು ವೇಳೆ ಪ್ರಶ್ನಿಸಿದ್ದರೆ, ''ಇಕ್ಬಾಲ ಭಾಯಿ ; ಈ ಸಲ ನೀವು ಇಷ್ಟೊಂದು ದೀರ್ಘವಾದ ಫ್ರಾಡ್ ಏಕೆ ಮಾಡಿದಿರಿ ?'', ಆಗ ಅವರು ಉತ್ತರಿಸುತ್ತಿದ್ದರು–

''ನೋಡು ಮುನ್ನಿ..... ಜಗತ್ತು ಶಾಂತಿಯ ಹುಡುಕಾಟದಲಿ ಹುಚ್ಚಾಗುತ್ತಾ ಹೊರಟಿದೆ.... ಈಗ ನಾನು ಈ ವೇಷದಲ್ಲಿ ಕೆಲ ದುಃಖಿಜೀವಿಗಳಿಗೆ ಕೊಂಚ ಶಾಂತಿ, ಸಮಾಧಾನ ನೀಡಲು ಸಾಧ್ಯವಾಗುವುದಾದರೆ... ಇದರಲ್ಲಿ ನನ್ನ ತಪ್ಪೇನಿದೆ ?.... ಇದರಲ್ಲಿ ನಾನು ಕಳೆದುಕೊಳ್ಳುವುದೇನಿದೆ ?....''

ಅಷ್ಟೂ ಅಲ್ಲದೆ, ಯಾರಿಗೆ ಗೊತ್ತು, ಸ್ವತಃ ಇಕ್ಬಾಲಭಾಯೀ ಮುಕ್ತಿಯ ಆ ಹಂತವನ್ನೂ ತಲುಪಿರಲು ಸಾಧ್ಯವಿದೆ. ತಮ್ಮ ಮನಸ್ಸಿನ ರಹಸ್ಯವನ್ನು ಅವರು ಮಾತ್ರ ಬಲ್ಲರು....

# ಕಾರಮನ್

ರಾತ್ರಿಯ ಹನ್ನೊಂದು ಗಂಟೆಗೆ ಟ್ಯಾಕ್ಸಿಯೊಂದು ನಗರದ ಶಾಂತವಾದ ದಾರಿಯಲ್ಲಿ ಸಾಗುತ್ತ ಒಂದು ಹಳೆಯ ಮಾದರಿಯ ಗೇಟಿನ ಎದುರಿಗೆ ಬಂದು ನಿಂತಿತು. ಡ್ರೈವರ್ ಕಾರಿನ ಬಾಗಿಲು ತೆರೆದು, ನಾನು ಹೇಳಿದ ಸ್ಥಳ ಅದೇ ಎಂಬ ವಿಶ್ವಾಸದಿಂದ ನನ್ನ ಸೂಟ್‌ಕೇಸ್ ಹೊರತೆಗೆದು, ಫುಟ್‌ಪಾತ್ ಮೇಲೆ ಇರಿಸಿದ ಹಾಗೂ ಬಾಡಿಗೆಗಾಗಿ ಕೈ ಚಾಚಿದಾಗ ನನಗೆ ಕೊಂಚ ವಿಚಿತ್ರವೆನಿಸಿತು.

''ಇದೇ ಸ್ಥಳವೇನು ?'' ಎಂದು ನಾನು ಸಂಶಯದಿಂದ ಕೇಳಿದೆ.

''ಜೀ ಹಾಂ.....'' ಎಂದು ಆತ ಭರವಸೆಯಿಂದ ಉತ್ತರಿಸಿದ. ನಾನು ಕಾರಿನಿಂದ ಕೆಳಗಿಳಿದೆ. ಟ್ಯಾಕ್ಸಿ ಓಣಿಯ ಕತ್ತಲೆಯಲ್ಲಿ ಮಾಯವಾಯಿತು. ನಾನು ನಿರ್ಜನವಾದ ಫುಟ್‌ಪಾತ್ ಮೇಲೆ ನಿಂತವಳು ನಿಂತೇ ಇದ್ದೆ. ನಾನು ಆ ಹಳೆ ಗೇಟನ್ನು ತೆಗೆಯಲು ಪ್ರಯತ್ನಿಸಿದೆ. ಆದರೆ ಅದು ಒಳಗಿನಿಂದ ಬಂದ್ ಮಾಡಲಾಗಿತ್ತು. ದೊಡ್ಡ ಬಾಗಿಲಿನಲ್ಲಿ ಕಿಟಕಿಯಿತ್ತು. ಅದನ್ನು ಖಟ್... ಖಟ್.... ಎಂದು ಬಾರಿಸಿದೆ. ಕೆಲಹೊತ್ತಿನ ನಂತರ ಕಿಟಕಿ ತೆರೆಯಿತು. ನಾನು ಕಳ್ಳರ ಹಾಗೆ ಒಳಗೆ ಹಣಿಕಿಕ್ಕಿದೆ. ಒಳಗೆ ಅರ್ಧಮರ್ಧ ಕತ್ತಲೆ ಆವರಿಸಿದ ಅಂಗಳ ಕಾಣಿಸಿತು. ಅದರ ಒಂದು ಬದಿಯಲ್ಲಿ ಇಬ್ಬರು ಹುಡುಗಿಯರು ನೈಟ್ ಗೌನಿನಲ್ಲಿದ್ದು ಮೆಲ್ಲಗೆ ಮಾತನಾಡುತ್ತಿದ್ದರು. ಅಂಗಳದ ಕೊನೆಯಲ್ಲಿ ಒಂದು ಹಳೆಯ ಕಟ್ಟಡವಿತ್ತು. ನನಗೆ ಒಂದು ಕ್ಷಣ ಲಖನೌದ ಘಸಿಯಾರಿಮಂಡಿಯಲ್ಲಿದ್ದ ಸ್ಕೂಲ್ ಬಿಲ್ಡಿಂಗ್ ನೆನಪಾಯಿತು. ಅಲ್ಲಿಂದಲೇ ನಾನು ಬನಾರಸ್ ಯುನಿವರ್ಸಿಟಿಯ ಮ್ಯಾಟ್ರಿಕ್ ಪರೀಕ್ಷೆ ಪಾಸು ಮಾಡಿದ್ದೆ. ನಾನು ಹೊರಳಿ ಓಣಿಯತ್ತ ನೋಡಿದೆ. ಅಲ್ಲಿ ಸಂಪೂರ್ಣ ಮೌನ ಆವರಿಸಿತ್ತು. ಕಲ್ಪನೆ ಮಾಡಿ. ಆ ಸ್ಥಳ ಅಫೀಮು, ಗಾಂಜಾ, ಸ್ಮಗಲಿಂಗ್‌ದಲ್ಲಿ ತೊಡಗಿರುವ ಸ್ಮಗ್ಲರ್ಸ್ ಮತ್ತು ಗುಲಾಮರನ್ನು ಮಾರಾಟ ಮಾಡುವ ಒಂದು ಕೇಂದ್ರವಾಗಿದ್ದರೆ ? ನಾನೊಂದು ಅಪರಿಚಿತ ದೇಶದ, ಅಪರಿಚಿತ ಪಟ್ಟಣದಲ್ಲಿ ರಾತ್ರಿಯ ಹನ್ನೊಂದು ಗಂಟೆಯ ಹೊತ್ತಿನಲ್ಲಿ (ಘಸಿಯಾರಿ ಮಂಡಿಯಲ್ಲಿದ್ದ ಸ್ಕೂಲಿನ ಕಟ್ಟಡದ ಹಾಗಿರುವ) ಒಂದು ಹೆಸರಿಲ್ಲದ ಕಟ್ಟಡದ ಬಾಗಿಲು ತಟ್ಟುತ್ತಿದ್ದೇನೆ. ಓರ್ವಳು ಕಿಟಕಿಯ ಹತ್ತಿರ ಬಂದಳು, ''ಗುಡ್ ಇವನಿಂಗ್, ಇದು ವೈ.ಡಬ್ಲ್ಯು.ಸಿ.ಎ. ತಾನೇ ?'' ಎಂದು ನಾನು ವಿನಯದಿಂದ ಮುಗುಳ್ನಗೆ ಸೂಸುತ್ತ ಕೇಳಿದೆ. ಮತ್ತೆ ಹೇಳಿದೆ– ''ನಾನು ತಾರು ಕಳಿಸಿ ಕೊಟ್ಟಿದ್ದೆ. ನನಗಾಗಿ ಒಂದು ರೂಮ್ ರಿಸರ್ವ್ ಮಾಡಿ ಎಂದು''. ಆದರೆ ಇದೆಂಥ ಹೊಲಸು ವೈ.ಡಬ್ಲ್ಯು.ಸಿ.ಎ. ನಾನು ಮನಸ್ಸಿನಲ್ಲೆ ಅಂದುಕೊಂಡೆ.

''ನಮಗೆ ನಿಮ್ಮ ಯಾವ ತಾರೂ ಸಿಕ್ಕಿಲ್ಲ. ಆದರೆ ಇಲ್ಲಿಯ ಎಲ್ಲ ಕೋಣೆಗಳೂ ತುಂಬಿವೆ ಎಂದು ಹೇಳಲು ವಿಷಾದಿಸುತ್ತೇವೆ...''

ಈಗ ಇನ್ನೋರ್ವ ಹುಡುಗಿ ಮುಂದೆ ಬಂದಳು.

''ಇದು ವರ್ಕಿಂಗ್ ಗರ್ಲ್ಸ್ ಹಾಸ್ಟೆಲ್. ಇಲ್ಲಿ ಸಾಮಾನ್ಯವಾಗಿ ಪ್ರವಾಸಿಕರಿಗೆ ಇಳಿದುಕೊಳ್ಳಲು ಅವಕಾಶ ನೀಡಲಾಗುವುದಿಲ್ಲ'' ಎಂದು ಆಕೆ ಹೇಳಿದಳು.

ನಾನು ಒಂದು ಕ್ಷಣ ತುಂಬ ಹೆದರಿಕೊಂಡೆ... ಈಗ ಏನು ಮಾಡುವುದು ? ನಾನು ಈ ಹೊತ್ತಿನಲ್ಲಿ ಇನ್ನೆಲ್ಲಿಗೆ ಹೋಗಬೇಕು.

ಎರಡನೆಯ ಹುಡುಗಿ ನನ್ನ ಈ ಸ್ಥಿತಿ ಕಂಡು ಮುಗುಳ್ನಕ್ಕು ಹೇಳಿದಳು–

''ಹೆದರಬೇಕಿಲ್ಲ. ಒಳಗೆ ಬಾ. ಇಲ್ನೋಡು, ಈ ಕಡೆಯಿಂದ ಒಳಗೆ ಹಾರಿ ಬಾ.''

''ಆದರೆ ಕೋಣೆಯಾವುದೂ ಖಾಲಿಯಿಲ್ಲ ಎಂದಿರಿ. ನನಗೆ ಇರಲು ಸ್ಥಳವೆಲ್ಲಿ ?'' ಎಂದು ಹಿಂಜರಿಯುತ್ತ ಸಂಕೋಚದಿಂದ ಕೇಳಿದೆ.

''ಹಾಂ... ಹಾಂ.... ಪರವಾಯಿಲ್ಲ. ನಾವು ಸ್ಥಳ ಮಾಡಿಕೊಡುತ್ತೇವೆ. ಈಗ, ಈ ಸಮಯದಲ್ಲಿ, ಅರ್ಧರಾತ್ರಿಯ ಹೊತ್ತಿನಲ್ಲಿ ನೀನೆಲ್ಲಿಗೆ ಹೋಗಬಲ್ಲೆ.... ?'' ಎಂದಳು ; ಅದೇ ಹುಡುಗಿ. ನಾನಾಗ ಸೂಟ್‌ಕೇಸ್ ಎತ್ತಿಕೊಂಡು ಕಿಟಕಿಯಿಂದ ಒಳಗೆ ಹಾರಿದೆ. ಹುಡುಗಿ ಸೂಟ್‌ಕೇಸ್ ತೆಗೆದುಕೊಂಡಳು. ಕಟ್ಟಡದ ಕಡೆ ಹೋಗುತ್ತ ನಾನು–

''ಇದೊಂದು ರಾತ್ರಿ ಇಲ್ಲಿ ನನಗೆ ಇರಲು ಕೊಡಿ. ನಾನು ನಾಳೆ ಬೆಳಗ್ಗೆ ನನ್ನ ಗೆಳತಿಯರಿಗೆ ಫೋನ್ ಮಾಡುವೆ. ನನಗಿಲ್ಲಿ ಮೂರು ನಾಲ್ಕು ಜನರ ಪರಿಚಯವಿದೆ. ನನ್ನಿಂದ ನಿಮಗೆ ಎಳ್ಳಷ್ಟೂ ಕಷ್ಟವಾಗಲಾರದು'' ಎಂದು ಒಂದೇ ಉಸಿರಿನಲ್ಲಿ ಹೇಳಿದೆ.

''ಚಿಂತಿಸಬೇಡ....'' ಎಂದು ಹೇಳಿದಳು. ಮೊದಲ ಹುಡುಗಿ 'ಗುಡ್ ನೈಟ್' ಹೇಳಿ ಹೊರಟು ಹೋದಳು.

ನಾವು ಮೆಟ್ಟಿಲುಗಳನ್ನೇರಿ ಮೇಲಿನ ಪಡಸಾಲೆಗೆ ಬಂದೆವು. ಪಡಸಾಲೆಯ ಒಂದು ಮೂಲೆಯಲ್ಲಿ ಹಲಗೆ ಬಡಿದು ಮಾಡಿದ ಒಂದು ಕೋಣೆಯಿತ್ತು. ಹುಡುಗಿ ಕೆಂಪು ಹೂವಿದ್ದ ಕರ್ಟನ್ ತೆಗೆದು ಒಳಗೆ ಹೋದಳು. ನಾನು ಆಕೆಯ ಹಿಂದೆ ಹಿಂದೆ ಹೋದೆ. ''ನಾನಿಲ್ಲಿರುತ್ತೇನೆ. ನೀನೂ ಇಲ್ಲಿಯೇ ಮಲಗು'' ಎನ್ನುತ್ತ ಆಕೆ ನನ್ನ ಸೂಟ್‌ಕೇಸ್ ಒಂದು ಕುರ್ಚಿಯ ಮೇಲಿರಿಸಿದಳು. ಅಲ್ಮಾರಿಯಿಂದ ಒಗೆದ ಟಾವೆಲ್, ಹೊಸ ಸಾಬೂನು ತೆಗೆಯ ತೊಡಗಿದಳು. ಒಂದು ಮೂಲೆಯಲ್ಲಿ ಒಂದು ಪಲ್ಲಂಗವಿತ್ತು. ಸೊಳ್ಳೆ ಪರದೆ ಹಾಕಲಾಗಿತ್ತು. ಅದಕ್ಕೆ ತಾಗಿ ಡ್ರೆಸಿಂಗ್ ಟೇಬಲ್ ಇರಿಸಲಾಗಿತ್ತು; ಮತ್ತು ಪುಸ್ತಕಗಳ ಅಲ್ಮಾರಿಯಿತ್ತು, ಇಡೀ ಜಗತ್ತಿನಲ್ಲಿ ಹುಡುಗಿಯರ ಹಾಸ್ಟೆಲ್‌ನಲ್ಲಿ ಕೋಣೆಗಳಿರುವಂತೆ ಇಲ್ಲಿಯೂ. ಹುಡುಗಿ ಕೂಡಲೇ ಇನ್ನೊಂದು ಅಲ್ಮಾರಿಯಿಂದ ಚಾದರ ಹಾಗೂ ಕಂಬಳಿ ತೆಗೆದುಕೊಂಡು, ನೆಲದ ಮೇಲೆ ಹಾಸಿದ್ದ ಬಣ್ಣಗೆಟ್ಟ, ಕಾರ್ಪೆಟ್ ಮೇಲೆ ಹಾಸಿಗೆ ಹಾಸಿದಳು. ಪಲ್ಲಂಗದ ಮೇಲೆ ಹೊಸ ಬೆಡ್‌ಷೀಟ್ ಹಾಸಿ ಸೊಳ್ಳೆ ಪರದೆ ಬಿಟ್ಟು–

''ನಿನ್ನ ಹಾಸಿಗೆ ಸಿದ್ಧವಾಗಿದೆ'' ಎಂದಳು.

ನಾನು ತುಂಬ ಲಜ್ಜಿತಳಾಗಿ ಹೇಳಿದೆ– ''ನಾನು ನೆಲದ ಮೇಲೆ ಹಾಸಿರುವ ಹಾಸಿಗೆಯ ಮೇಲೆ ಮಲಗುತ್ತೇನೆ.''

''ಅದೆಂದಿಗೂ ಸಾಧ್ಯವಿಲ್ಲ. ಇಲ್ಲಿ ಸೊಳ್ಳೆ ತುಂಬ ಇವೆ. ನಿನ್ನ ಸ್ಥಿತಿ ಚೆನ್ನಾಗಿ ಉಳಿಯಲಿಕ್ಕಿಲ್ಲ. ನಮಗೆಲ್ಲ ರೂಢಿಯಾಗಿದೆ. ಬಟ್ಟೆ ಬದಲಿಸು, ಮಲಗು'' ಎಂದು ಹೇಳಿದ ಆಕೆ ನೆಲದ ಮೇಲೆ ಹಾಸಿದ ಹಾಸಿಗೆಯ ಮೇಲೆ ಹಾಯಾಗಿ ಕುಳಿತುಕೊಳ್ಳುತ್ತ ತನ್ನ ಬಗ್ಗೆ ಹೇಳತೊಡಗಿದಳು–

''ನನ್ನ ಹೆಸರು ಕಾರಮನ್. ನಾನೊಂದು ಆಫೀಸಿನಲ್ಲಿ ಕೆಲಸಕ್ಕಿದ್ದೇನೆ. ಸಾಯಂಕಾಲ ಯುನಿವರ್ಸಿಟಿಯಲ್ಲಿ ರೀಸರ್ಚ್ ಮಾಡುತ್ತಿದ್ದೇನೆ. ಕೆಮಿಸ್ಟ್ರಿ ನನ್ನ ವಿಷಯ. ನಾನು ವೈ.ಡಬ್ಲ್ಯು.ಸಿ.ಎ. ದ ಸೋಶಿಯಲ್ ಸೆಕ್ರೆಟರಿಯೂ ಆಗಿದ್ದೇನೆ. –ಈಗ ನೀನು, ನಿನ್ನ ಬಗ್ಗೆ ಹೇಳು.'' ನಾನು ನನ್ನ ಬಗ್ಗೆ ಹೇಳಿದೆ.

''ಈಗ ಮಲಗು.....'' ಎಂದಳು ನಾನು ತೂಕಡಿಸುತ್ತಿರುವುದನ್ನು ಕಂಡು. ಆಕೆ ಮಲಗುವ ಪೂರ್ವದಲ್ಲಿ ಬಾಗಿ ಕುಳಿತು ಪ್ರಾರ್ಥನೆ ಸಲ್ಲಿಸಿದಳು ಹಾಗೂ ಮಲಗಿದಳು. ಆಕೆಗೆ ಕೂಡಲೇ ನಿದ್ರೆ ಹತ್ತಿತು.

ಬೆಳಗ್ಗೆ ಇಡೀ ಕಟ್ಟಡವೇ ಎಚ್ಚರಗೊಂಡ ಹಾಗಿತ್ತು. ಹುಡುಗಿಯರು ತಲೆಗೆ ಟಾವೆಲ್ ಸುತ್ತಿಕೊಂಡು ಹೌಸ್‌ಕೋಟು ತೊಟ್ಟು ಬಾತ್‌ರೂಮಿನಿಂದ ಹೊರಬರುತ್ತಿದ್ದರು. ಹಾಲ್‌ನಿಂದ ಬಿಸಿಬಿಸಿ ಕಾಫಿಯ ಸುವಾಸನೆ ಬರುತ್ತಲಿತ್ತು. ಕೆಲ ಹುಡುಗಿಯರು ಅಂಗಳದಲ್ಲಿ ಶತಪಥ ಮಾಡುತ್ತ ಬ್ರಶ್ ಮಾಡುತ್ತಲಿದ್ದರು.

''ನಡಿ.... ನಿನಗೆ ಬಾತ್‌ರೂಮ ತೋರಿಸುತ್ತೇನೆ....'' ಎಂದು ಕಾರಮನ್ ನನಗೆ ಹೇಳುತ್ತ ನನ್ನನ್ನು ಹಾಲ್‌ನೊಳಗಿಂದ, ಒಂದು ಸಂದಿಯಲ್ಲಿ ಕರೆದುಕೊಂಡು ಹೋದಳು. ಅದರ ಮೂಲೆಯಲ್ಲಿ ಒಂದು ಅವಶೇಷದ ಹಾಗೆ ತೋರುವ ಕೋಣೆಯಿತ್ತು. ಅದರಲ್ಲಿ ಒಂದು ನಳವಿತ್ತು. ಗೋಡೆಗೆ ಬಟ್ಟೆ ಹಾಕಲು ಕೊಂಡಿಯಿತ್ತು. ನೆಲವೆಲ್ಲ ಹಾಳಾಗಿತ್ತು. ಗೋಡೆಗಳಲ್ಲಿ ಜಾಡು ಕಟ್ಟಿತ್ತು. ಕಿಟಕಿಯ ಆಚೆಯಿಂದ ಯಾವುದೇ ಹುಡುಗಿ ಹಾಡಿಕೊಳ್ಳುತ್ತಿದ್ದಳು. ಈ ಬಾತ್‌ರೂಮಿನಲ್ಲಿ ನಿಂತುಕೊಂಡ ನಾನು ಯೋಚಿಸಿದೆ– ಎಂಥ ವಿಚಿತ್ರವಿದು... ಬಹುಕಾಲದಿಂದ ಈ ಬಾತ್‌ರೂಮ್ ಈ ದೇಶದಲ್ಲಿ, ಈ ನಗರದಲ್ಲಿ, ಈ ಕಟ್ಟಡದಲ್ಲಿ ತನ್ನ ಸ್ಥಾನದಲ್ಲಿ ತಾನು ಸ್ಥಿರವಾಗಿದೆ.... ನನ್ನ ಅಸ್ತಿತ್ವದ ಬಗ್ಗೆ ಏನನ್ನೂ ಅರಿಯದಂತೆ.... ಆದರೆ ಇಂದು ನಾನು ಇದರಲ್ಲಿದ್ದೇನೆ.... ಎಂಥ ಹುಚ್ಚುಚ್ಚು ವಿಚಾರವಿದಾಗಿತ್ತು....

ನಾನು ಸ್ನಾನ ಮುಗಿಸಿ ಹೊರ ಬಂದಾಗ, ಮಂದ ಬೆಳಕಿದ್ದ ಹಾಲ್‌ನಲ್ಲಿ ಒಂದು ಸಣ್ಣ ಮೇಜಿನ ಮೇಲೆ, ನನಗಾಗಿ ಟಿಫಿನ್ ವ್ಯವಸ್ಥೆ ಮಾಡಲಾಗಿತ್ತು. ಬಹಳಷ್ಟು ಹುಡುಗಿಯರು ಕೂಡಿದ್ದರು. ಕಾರಮನ್ ಅವರೆಲ್ಲರಿಗೂ ನನ್ನ ಪರಿಚಯ ಮಾಡಿಸಿದಳು. ಬಹಳ ಜಲ್ದಿ ನಾವೆಲ್ಲ ಹಳೆಯ ಗೆಳತಿಯರಂತೆ ಬಹಳಷ್ಟು ನಕ್ಕೆವು.

''ನಾನೀಗ ಕೊಂಚ ನನ್ನ ಪರಿಚಿತರಿಗೆ ಫೋನ್ ಮಾಡಲೇ.... ?'' ಎಂದು ಚಹಾ ಮುಗಿಸುತ್ತ ಕೇಳಿದೆ.

ಕಾರಮನ್ ಚೇಷ್ಟೆಯಿಂದ ಮುಗುಳ್ನಗುತ್ತ—

''ಹಾಂ... ಹಾಂ... ಈಗ ನಿನ್ನ ದೊಡ್ಡ ದೊಡ್ಡ, ಪ್ರಸಿದ್ಧ ಗೆಳತಿಯರಿಗೆಲ್ಲ ಫೋನ್ ಮಾಡು, ಅವರಲ್ಲಿಗೇ ಹೊರಟು ಹೋಗು. ನಿನ್ನ ಬಗ್ಗ ಯಾರು ಕಾಳಜಿ ಮಾಡುತ್ತಾರೆ. ಅಲ್ಲವೇ ರೋಜಾ ?....''

''ನಾವು, ಅವರ ಕಾಳಜಿ ಮಾಡುತ್ತೇವೆಯೇ....?''

''ಎಳ್ಳಷ್ಟೂ ಇಲ್ಲ.... ಎಳ್ಳಷ್ಟೂ ಇಲ್ಲ...'' ಕೋರಸ್ ಆರಂಭವಾಯಿತು.

ಹುಡುಗಿಯರು ಟಿಫಿನ್ ಮುಗಿಸಿ ಎದ್ದರು.

''ನಾವೆಲ್ಲ ನಮ್ಮ ನಮ್ಮ ಕೆಲಸಕ್ಕೆ ಹೋಗುತ್ತಿದ್ದೇವೆ. ಸಂಜೆ ನಿನ್ನನ್ನು ಮತ್ತೆ ನೋಡುತ್ತೇವೆ'' ಎಂದಳು ಮೆಗ್ಡಲೀನಾ.

''ಸಂಜೆಗೆ.... ?'' ಅಲ್ಮೇಲಿಯಾ ಅಂದಳು– ''ಸಂಜೆಗೆ ಇವಳು ಯಾವುದಾದರೂ ಕಂಟ್ರಿ ಕ್ಲಬ್‌ದಲ್ಲಿ ಇರಬಹುದು....''

ಕಾರಮನ್ ಆಫೀಸಿಗೆ ಹೋದ ಮೇಲೆ ನಾನು ಹಾಲ್‌ನಲ್ಲಿ ಹೋಗಿ ಫೋನ್ ಮಾಡಲು ಆರಂಭಿಸಿದೆ. ಮಿಲ್ಟ್ರಿಯ ಮೆಡಿಕಲ್ ಚೀಫ್ ಮೇಜರ್ ಜನರಲ್ ಕೈಮಾಗಿಲ್ಲಾಸ್–ಯುದ್ಧ ಕಾಲದಲ್ಲಿ ನನ್ನ ಮಾಮನೊಂದಿಗಿದ್ದರು. ಮಿಸೆಸ್ ಅಂತೋನಿಯಾ ಕೊಸ್ಟಿಲೊ ಓರ್ವ ಕರೋಡಪತಿ ವ್ಯಾಪಾರಿಯ ಪತ್ನಿ ಹಾಗೂ ಇಲ್ಲಿಯ ಪ್ರಸಿದ್ಧ ಸಾಮಾಜಿಕ ಲೀಡರ್ ಆಗಿದ್ದಳು. ನಾನು ಆಕೆಯನ್ನು ಯಾವುದೋ ಅಂತಾರಾಷ್ಟ್ರೀಯ ಸರ್ವಧರ್ಮ ಸಮ್ಮೇಳನದಲ್ಲಿ ಕಂಡಿದ್ದೆ. ಅಲ್ಫಾನ್ಸೊ ವಿಲೇರಾ, ಈ ದೇಶದ ಪ್ರಸಿದ್ಧ ಕಾದಂಬರಿಕಾರ ಮತ್ತು ಜರ್ನಲಿಸ್ಟ್, ಒಮ್ಮೆ ಕರಾಚಿಗೆ ಬಂದಿದ್ದರು. 'ಹಲೋ.....ಹಲೋ....ಅರೆ.... ನೀನು ಯಾವಾಗ ಬಂದೆ..... ನಮಗೇಕೆ ತಿಳಿಸಲಿಲ್ಲ.... ಎಲ್ಲಿಳಿದುಕೊಂಡಿದ್ದೀಯಾ.....?..... ಅಲ್ಲಿ.... ? ಗುಡ್ ಗಾಡ್.... ಅದೇನು ವಾಸಿಸುವ ಸ್ಥಳವೇನು ?.... ನಾನು ನಿನ್ನನ್ನು ಕರೆತರಲು ಈಗಲೇ ಬರುತ್ತಿದ್ದೇನೆ...'' ಇವರೆಲ್ಲ ಸರತಿಯಂತೆ ಇವೇ ಮಾತುಗಳನ್ನು ನನಗೆ ಹೇಳಿದರು.... ಕೊನೆಯಲ್ಲಿ ನಾನು ಡೋನ್ ಗಾರ್ಸಿಯಾ ಡೇಲ್ ಪ್ರೊಡೊಸ್‌ಗೆ ಫೋನ್ ಮಾಡಿದೆ. ಪಶ್ಚಿಮ ಯುರೋಪದ ಒಂದು ದೇಶದಲ್ಲಿ ತನ್ನ ದೇಶದ ರಾಜದೂತನಾಗಿದ್ದ. ಅಲ್ಲಿಯೇ ಆತನ ಹಾಗೂ ಆತನ ಪತ್ನಿಯ ಪರಿಚಯವಾಯಿತು. ಪರಿಚಯ ಗಾಢ ಸ್ನೇಹದಲ್ಲಿ ಪರಿವರ್ತಿತವಾಯಿತು. ಆತನ ಸೆಕ್ರೆಟರಿ, ಅವರು ಈಗ ಬೆಟ್ಟದ ಮೇಲಿನ ಬಂಗ್ಲೆಯಲ್ಲಿದ್ದಾರೆಂದು ಹೇಳುತ್ತ ನನ್ನ ಫೋನ್ ಕಾಲನ್ನು ಬೆಟ್ಟದ ಮೇಲಿನ ಅವರ ಬಂಗ್ಲೆಯ ಫೋನ್‌ಗೆ ಕನೆಕ್ಷನ್ ಕೊಟ್ಟ.

ಕೆಲ ಹೊತ್ತಿನ ನಂತರ ಮಿಸೆಸ್ ಕೊಸ್ಟಿಲೊ ತನ್ನ ಮರ್ಸಿಡೀಜ್‌ದಲ್ಲಿ ನನ್ನನ್ನು ಕರೆದೊಯ್ಯಲು ಬಂದಳು. ಕಾರಮನ್‌ಳ ಕೋಣೆಯಲ್ಲಿ ಬಂದು ಆಕೆ ಸುತ್ತಲೂ ನೋಡಿದಳು ಹಾಗೂ ನನ್ನ ಸೂಟ್‌ಕೇಸ್ ತೆಗೆದುಕೊಂಡಳು.

ನನಗೇಕೋ ಆಘಾತವಾದಂತಾಯಿತು. ನಾನು ಇವರನ್ನೆಲ್ಲ ಬಿಟ್ಟು ಹೋಗಲಾರೆ... ನಾನು, ಕಾರಮನ್, ಅಲ್ಮೇಲಿಯಾ, ಬರನಾರ್ಡಾ, ರೋಜಾ ಮತ್ತು ಮೆಗ್ದಲೀನಾರೊಂದಿಗೇ ಇರಬಯಸುತ್ತೇನೆ...

''ಸಾಮಾನು ಈಗ ಇಲ್ಲಿಯೇ ಇರಲಿಬಿಡಿ. ಸಾಯಂಕಾಲ ನೋಡೋಣ ವಂತೆ....'' ನಾನು ಕೊಂಚ ತಡವರಿಸುತ್ತ ಹೇಳಿದೆ...

''ಆದರೆ ಈ ಕೆಟ್ಟ ಸ್ಥಳದಲ್ಲಿ ನಿನಗೆ ತುಂಬ ಕಷ್ಟವಾದೀತು'' ಆಕೆ ಬಹಳ ಸಲ ಈ ಮಾತನ್ನೇ ಹೇಳಿದಳು.

ನಾನು ರಾತ್ರಿ ಮರಳಿದಾಗ, ಕಾರಮನ್ ಮತ್ತು ಅಲ್ಮೇಲಿಯಾ ದೊಡ್ಡ ಬಾಗಿಲದ ಕಿಟಕಿಯಿಂದ ನಾನು ಬರುವುದನ್ನೇ ನೋಡುತ್ತಲಿದ್ದರು...... ''ಇಂದು ನಿನಗೆ ನಾವು ಬೇರೆ ಕೋಣೆಯ ವ್ಯವಸ್ಥೆ ಮಾಡಿದ್ದೇವೆ....'' ಸಮೀಪ ಬಂದ ಕೂಡಲೇ ಕಾರಮನ್ ಹೇಳಿದಳು. ಅವಳಿಗೆ ನೆಲದ ಮೇಲೆ ನನ್ನಿಂದಾಗಿ ಮಲಗುವುದು ತಪ್ಪಿತೆಂದು ನನಗೆ ಸಂತೋಷವಾಯಿತು.

ಹಾಲ್‌ದ ಇನ್ನೊಂದು ಕಡೆಯಲ್ಲಿದ್ದ ಒಂದು ಕೋಣೆಯಲ್ಲಿ ಎರಡು ಪಲ್ಲಂಗಗಳಿದ್ದವು. ಒಂದರ ಮೇಲೆ ನನಗಾಗಿ ಹಾಸಿಗೆ ಹಾಸಲಾಗಿತ್ತು. ಇನ್ನೊಂದರ ಮೇಲೆ ಮಿಸೆಸ್ ಸುರೇಲ್ ಕುಳಿತು ಸಿಗರೇಟ್ ಸೇದುತ್ತಿದ್ದಳು..... ಆಕೆ ಮೂವತ್ತೆಂಟು, ಮೂವತ್ತೊಂಬತ್ತು ವರ್ಷದವಳಿರಬೇಕು. ಆಕೆಯ ಕಣ್ಣುಗಳಲ್ಲಿ ವಿಚಿತ್ರವಾದ ಚಿಂತೆ ಆವರಿಸಿತ್ತು. ಪೋಲಿನೀಜಿಯನ್ ಜನಾಂಗದ ಯಾವುದೋ ಶಾಖೆಯೊಂದಿಗೆ ಆಕೆಯ ಸಂಬಂಧವಿರಬೇಕು. ಆಕೆಯ ಮುಖಚರ್ಯೆಯಿಂದ ಯಾವುದೂ ತಿಳಿಯುತ್ತಿರಲಿಲ್ಲ. ಪಲ್ಲಂಗದ ಮೇಲೆ ಒರಗಿಕೊಂಡು ಆಕೆ ಕೂಡಲೇ ತನ್ನ ಜೀವನದ ಕಥೆ ಹೇಳಲಾರಂಭಿಸಿದಳು.... ''ನಾನು ಗಾಮದಿಂದ ಬಂದಿರುವೆ.....''

''ಗಾಮ ಎಲ್ಲಿದೆ ?'' ಎಂದು ನಾನು ಕೇಳಿದೆ.

''ಶಾಂತಸಾಗರದಲ್ಲಿ ಅದೊಂದು ದ್ವೀಪ. ಅಲ್ಲಿ ಅಮೇರಿಕನ್ನರ ಶಾಸನವಿದೆ. ಅದು ತುಂಬ ಚಿಕ್ಕದಾದ ದ್ವೀಪವಾಗಿದೆ. ವರ್ಲ್ಡ್ ಮ್ಯಾಪಿನಲ್ಲಿ ಅದರ ಹೆಸರಿನ ಕೆಳಗೆ ಒಂದು ಸೊನ್ನೆ ಇರಿಸಲಾಗಿದೆ. ನಾನು ಅಮೇರಿಕನ್ ನಾಗರಿಕಳಾಗಿದ್ದೇನೆ...'' ಆಕೆ ಕೊಂಚ ಅಭಿಮಾನ ಹೆಚ್ಚಿಸಿ ಹೇಳಿದಳು.

''ಗಾಮ.....'' ನಾನು ಮನದಲ್ಲಿಯೇ ಉಚ್ಚರಿಸಿದೆ....ವಿಚಿತ್ರವಾಗಿದೆ. ಜಗತ್ತಿನಲ್ಲಿ ಅವೆಷ್ಟು ಸ್ಥಳಗಳಿವೆ. ಅವುಗಳಲ್ಲೆಲ್ಲ ನಮ್ಮ ಹಾಗೆಯೇ ಇರುವ ಜನ ವಾಸಿಸುತ್ತಾರೆ.

''ನನ್ನ ಮಗಳು ಓರ್ವ ವಾಯಲಿನ್ ವಾದಕನ ಜೊತೆ ಓಡಿ ಬಂದಿದ್ದಾಳೆ. ನಾನು ಅವಳನ್ನು ಕರೆದುಕೊಂಡು ಹೋಗಲು ಬಂದಿರುವೆ. ಆಕೆ ಕೇವಲ ಹದಿನೇಳು ವರ್ಷದವಳಿದ್ದಾಳೆ. ಆದರೆ ವಿಪರೀತ ಜಿದ್ದಿ ಇದ್ದಾಳೆ....ಈ ಇಂದಿನ ಹುಡುಗಿ

ಯರು....'' ಎಂದು ಹೇಳುತ್ತ ಆಕೆ ಎದ್ದು ಕುಳಿತು– ''ನನಗೆ ಕ್ಯಾನ್ಸರ್ ಆಗಿತ್ತು....'' ಎಂದಳು.

''ಓ !....'' ನನ್ನ ಬಾಯಿಂದ ಅಚ್ಚರಿಯ ಶಬ್ದ ಹೊರಟಿತು.....

''ನನಗೆ ಎದೆಯ ಕ್ಯಾನ್ಸರ್ ಆಗಿತ್ತು...ಮೂರು ವರ್ಷಗಳ ಮೊದಲು ನಾನು ಕೂಡ ಎಲ್ಲರಂತೆ ನಾರ್ಮಲ್ ಆಗಿದ್ದೆ....'' ಆಕೆಯ ಧ್ವನಿಯಲ್ಲಿ ಕರುಣೆ ತುಂಬಿತ್ತು.. ''ನೋಡು.....'' ಎನ್ನುತ್ತ ಆಕೆ ತನ್ನ ನೈಟ್ ಗೌನಿನ ಕಾಲರ್ ಎದುರಿನಿಂದ ಸರಿಸಿದಳು.... ನಾನು ಹೆದರಿ ಕಣ್ಣು ಮುಚ್ಚಿಕೊಂಡೆ.... ಓರ್ವ ಹೆಣ್ಣಿನಿಂದ ಅವಳ ದೇಹದ ಸೌಂದರ್ಯವನ್ನು ಶಾಶ್ವತವಾಗಿ ಕಸಿದುಕೊಂಡರೆ... ಎಂಥ ಭಯಾನಕ....

ಕೆಲಹೊತ್ತಿನ ನಂತರ ಮಿಸೆಸ್ ಸುರೇಲ ಸಿಗರೇಟ್ ಆರಿಸಿ ಮಲಗಿಕೊಂಡಳು. ಕಿಟಕಿಯ ಸಳಿಯೊಳಗಿಂದ ಚಂದಿರ ಒಳಗೆ ಹಣಿಕಿಕ್ಕುತ್ತಲಿದ್ದ. ಸಮೀಪದ ಕೋಣೆಯಿಂದ ಮೆದುವಾಗಿ ಕೇಳಿ ಬರುತ್ತಿದ್ದ ಮೊಗ್ದಲೀನಾಳ ಹಾಡು ಕೂಡ ನಿಂತು ಹೋಯಿತು. ಯಾಕೋ ಆಕಸ್ಮಿಕವಾಗಿ ನನಗೆ ಬಿಕ್ಕಿ ಬಿಕ್ಕಿ ಅಳಬೇಕೆನಿಸಿತು.

ಎರಡನೆಯ ವಾರ, ಫ್ಯಾಶನೇಬಲ್ ಪತ್ರಿಕೆಗಳ ಭಾಷೆಯಲ್ಲಿ ಹೇಳುವುದಾದರೆ, ಸಾಮಾಜಿಕ ಮತ್ತು ಸಾಂಸ್ಕೃತಿಕ ವ್ಯಸ್ತತೆಯ ಬಿರುಗಾಳಿಯಲ್ಲಿ, 'ಆರ್ಟ್ ಮತ್ತು ಕಲ್ಚರ್'ದ ಮಾತುಕತೆಯಲ್ಲಿ ಕಳೆಯಿತು. ಹಗಲು ಮಿಸೆಸ್ ಕೊಸ್ಟಿಲೊ ಮತ್ತು ಆಕೆಯ ಗೆಳತಿಯರ ಸುಂದರ ಮನೆಗಳಲ್ಲಿ ಮತ್ತು ಸಂಜೆ ನಗರದ ಮನೋರಂಜನೆಯ ಸ್ಥಾನಗಳಲ್ಲಿ ಕಳೆದು ಹೋಗುತ್ತದೆ.... ನಾನಾ ರೀತಿಯ ಜನ... ಇಂಟಲೆಕ್ಚುವಲ್... ಜರ್ನಲಿಸ್ಟ್... ಆ ಥರ... ರಾಜಕಾರಣಿಗಳು, ನೇತಾರರು, ಮಿಸೆಸ್ ಕೊಸ್ಟಿಲೊ ಅವರ ಮನೆಗೆ ಬರುತ್ತಾರೆ.... ಅವರೊಂದಿಗೆ ಚರ್ಚೆ–ಪರಿಚರ್ಚೆ ನಡೆಯುತ್ತದೆ... ನಾನು ಇಂಗ್ಲೀಷ್ ನಾಣ್ಣುಡಿಗಳ ಶಬ್ದಗಳಲ್ಲಿ ನನ್ನಲ್ಲಿ ನಾನೇ ತುಂಬ 'ಎಂಜಾಯ್' ಮಾಡುತ್ತಿರುತ್ತೇನೆ....ನಾನು ರಾತ್ರಿ ವೈ.ಡಬ್ಲ್ಯು. ಸಿ. ಎ. ಕ್ಕೆ ಮರಳುತ್ತೇನೆ. ಹಾಲ್‌ನಲ್ಲಿದ್ದ ದುಂಡು ಮೇಜಿನ ಸುತ್ತ ಕುಳಿತು ಐದೂ ಹುಡುಗಿಯರು ತುಂಬ ಆಸಕ್ತಿಯಿಂದ ಇಡೀ ದಿನದ ಎಲ್ಲ ಘಟನೆಗಳನ್ನು ನನ್ನಿಂದ ಕೇಳುತ್ತಾರೆ.... ''ಕಮಾಲ ಹೈ...'' ರೋಜಾ ಅಚ್ಚರಿಪಡುತ್ತ ಮತ್ತೆ ಹೇಳುತ್ತಾಳೆ– ''ನಾವು ಇದೇ ಊರಿನವರಾಗಿದ್ದೇವೆ....ಆದರೆ ಇಲ್ಲಿ ಇಷ್ಟೆಲ್ಲ 'ಅಲೀಫಲ್ಯಲಾ'' ರೋಮಾಂಚಕ ವಾತಾವರಣ ಇದೆಂಬುದು ಗೊತ್ತಿರಲಿಲ್ಲ....''

''ಈ ಅತ್ಯಂತ ಶ್ರೀಮಂತ ಜನರಿರುತ್ತಾರಲ್ಲ.... ಇವರು ಇಷ್ಟೊಂದು ರೂಪಾಯಿ ಏನು ಮಾಡುತ್ತಾರೆ.....?'' ಎಂದು ಅಲ್ಮೇಲಿಯಾ ಕೇಳುತ್ತಾಳೆ. ಅಲ್ಮೇಲಿಯಾ ಒಂದು ಸ್ಕೂಲಿನಲ್ಲಿ ಶಿಕ್ಷಕಿಯಾಗಿದ್ದಾಳೆ....ರೋಜಾ, ಒಂದು ಸರಕಾರಿ ಆಫೀಸಿನಲ್ಲಿ ಸ್ಟೆನೋಗ್ರಾಫರ್ ಆಗಿದ್ದಾಳೆ....ಮೊಗ್ದಲೀನಾ ಮತ್ತು ಬರ್ನಾಡೆಟ್ಟಾ, ಒಂದು ಮ್ಯೂಜಿಕ್ ಕಾಲೇಜಿನಲ್ಲಿ ಪಿಯಾನೋ ಮತ್ತು ವಾಯ್‌ಲೀನದ ಹೆಚ್ಚಿನ ಶಿಕ್ಷಣ ಪಡೆಯುತ್ತಿದ್ದಾರೆ. ಇವರೆಲ್ಲ ಮಧ್ಯಮ ವರ್ಗ, ನಿಮ್ನ ಮಧ್ಯಮ ವರ್ಗದ ಹುಡುಗಿಯರಾಗಿದ್ದರು.

ಆದಿತ್ಯವಾರದ ಬೆಳಗ್ಗೆ ಕಾರಮನ್ ಚರ್ಚ್‌ಗೆ ಹೋಗುವ ಸಿದ್ಧತೆಯಲ್ಲಿದ್ದಳು. ಏನೋ ತೆಗೆದುಕೊಳ್ಳಲು ನಾನು ಅಲ್ಮಾರಿಯ ಬಾಗಿಲು ತೆಗೆದೆ. ಅದರ ಧಡಕಿಗೆ

ಮೇಲಿನಿಂದ ಒಂದು ಉಣ್ಣೆಯ ಮೊಲದ ಗೊಂಬೆ ಕೆಳಗೆ ಬಿತ್ತು. ನಾನು ಅದನ್ನು ಎತ್ತಿ ಮೊದಲಿದ್ದಲ್ಲಿಯೇ ಇಡಲು ಜಿಗಿದೆ. ಅಲ್ಮಾರಿಯ ಮೇಲೆ ಬಹಳಷ್ಟು ಆಟಿಗೆ ಸಾಮಾನುಗಳು ಇದ್ದುದು ಕಂಡು ಬಂತು.

''ಇವು ನನ್ನ ಮಗುವಿನ ಆಟಿಗೆ ಸಾಮಾನುಗಳು''– ಕಾರಮನ್ ಡ್ರೆಸಿಂಗ್ ಟೇಬಲ್ ಮುಂದೆ ಕುಳಿತು, ಜಡೆ ಹಾಕಿಕೊಳ್ಳುತ್ತ ತುಂಬ ಸಮಾಧಾನದಿಂದ ಹೇಳಿದಳು.

''ನಿನ್ನ ಮಗುವಿನವು....?'' ಎನ್ನುತ್ತ ನಾನು ದಂಗುಬಡಿದೆ.... ತುಂಬ ದುಃಖ ದಿಂದ ಅವಳತ್ತ ನೋಡಿದ... ಕಾರಮನ್ ಮದುವೆಯಾಗದೆ ತಾಯಿಯಾಗಿದ್ದಳು....

ಕನ್ನಡಿಯಲ್ಲಿಯೇ ನನ್ನ ಮುಖದ ಭಾವವನ್ನು ಕಂಡುಕೊಂಡ ಆಕೆ ನನ್ನತ್ತ ಹೊರಳಿದಳು. ಆಕೆಯ ಮುಖ ಕೆಂಪಗಾಗಿತ್ತು... ''ನೀನು ತಪ್ಪು ತಿಳಿದಿರುವೆ....'' ಎನ್ನುತ್ತ ಆಕೆ ಖೊಕ್...ಖೊಕ್....ನಕ್ಕಳು.... ಆಕೆ ಅಲ್ಮಾರಿಯ ಕೆಳಗಿನ ಸೆಲ್ಫ್‌ದಿಂದ ಒಂದು ತಿಳಿ ನೀಲಿಬಣ್ಣದ ಹೂಳೆ ಹೊಳೆವ 'ಬೇಬಿ ಬುಕ್' ಹೊರತೆಗೆದಳು.... ''ನೋಡಿಲ್ಲಿ.. ಇದು ನನ್ನ ಮಗುವಿನ ಹುಟ್ಟು ಹಬ್ಬದ ಪುಸ್ತಕ.... ಅವನು ಒಂದು ವರ್ಷದವನಾದರೆ ಹೀಗೆ ಮಾಡುತ್ತಾನೆ.....ಎರಡು ವರ್ಷದವನಾದರೆ ಹೀಗೆ ಅನ್ನುತ್ತಾನೆ. ಇಲ್ಲಿ ಅವನ ಚಿತ್ರ ಅಂಟಿಸುವೆ....'' ಎನ್ನುತ್ತ ಆಕೆ ಚಕ್ಕಮುಕ್ಕಳಿ ಹಾಕಿಕೊಂಡು ಪಲ್ಲಂಗದ ಮೇಲೆ ಕುಳಿತಳು. ಅದೇ ಪುಸ್ತಕದಿಂದ ಸುಂದರ ಅಮೇರಿಕನ್ ಮಕ್ಕಳ ಬಣ್ಣದ ಚಿತ್ರಗಳನ್ನು ತೆಗೆದು ಹಾಸಿಗೆಯ ಮೇಲೆ ಹರಡಿದಳು.. ''ನೋಡು, ನನ್ನ ಮೂಗು ಎಷ್ಟು ಅಗಲವಿದೆ.... ಮತ್ತ ನಿಕ್‌ನ ಮೂಗಂತೂ ನನಗಿಂತ ಕೆಟ್ಟದ್ದಾಗಿದೆ.... ಹೀಗಿರುವಾಗ ನಮ್ಮಿಬ್ಬರ ಮಗುವಿನ ಮೂಗಿನ ಬಗ್ಗೆ ಯೋಚಿಸು.... ಆಗ ನನ್ನ ಸ್ಥಿತಿ ಏನಾದೀತು ? ನಾನು ನನ್ನ ಮಗುವಿನ ಜನನಕ್ಕಿಂತ ಕೆಲ ತಿಂಗಳ ಮೊದಲೇ ಈ ಚಿತ್ರಗಳನ್ನೆಲ್ಲ ನೋಡುತ್ತ ಇರುವೆ. ಅಂದರೆ, ಜನಿಸಲಿರುವ ನನ್ನ ಮಗುವಿನ ಮೂಗಿನ ಮೇಲೆ ಕೊಂಚ ಇವುಗಳ ಮೂಗಿನ ಪರಿಣಾಮವಾಗಬಹುದು....''

''ನೀನು ಹೇಳಿ–ಕೇಳಿ ಒಳ್ಳೆಯ ಹುಚ್ಚಿಯಾಗಿರುವೆ....'' ಎಂದ ನಾನು ಮತ್ತೆ ಕೇಳಿದೆ– ''ಮತ್ತೆ ಈ ನಿಕ್ ಮಹಾಶಯ ಯಾರು ?''

ಹೀಗೆ ಕೇಳಿದಾಕ್ಷಣ ಆಕೆಯ ಮುಖ ಬಿಳಿಚಿಕೊಂಡಿತು... ''ಈಗ, ಅವನ ವಿಷಯ ಕೇಳಬೇಡ.... ಅವನ ಹೆಸರೆತ್ತಿದರ ಸಾಕು.... ನನ್ನ ಹೃದಯ ಒಡೆದು ತುಂಡು ತುಂಡಾಗುತ್ತದೆ..... ಎನ್ನಿಸುತ್ತದೆ.....'' ಎಂದಳು.

ಆದರೆ ಕೆಲ ಹೊತ್ತಿನ ನಂತರ ನಿಕ್‌ನ ವಿಷಯ ಹೇಳುತ್ತಲೇ ಇದ್ದಳು... ''ನಾನು ಇಷ್ಟು ಕುರೂಪಿ.... ಆದರ ನಿಕ್ ಹೇಳುತ್ತಾನೆ..... ಕಾರಮನ್... ಕಾರಮನ್... ನನಗೆ ನಿನ್ನ ಹೃದಯ, ನಿನ್ನ ಚಿತ್ತ ನಿನ್ನ ಆತ್ಮದೊಂದಿಗೆ ಪ್ರೇಮವಿದೆ..... ನಿಕ್ ಬೇಕಾದಷ್ಟು ಜಗತ್ತು ನೋಡಿದ್ದಾನೆ. ಬೇಕಾದಷ್ಟು ಸುಂದರಿಯರ ಜೊತೆ ಅವನ ಸ್ನೇಹವಿದೆ. ಹಾಗಿದ್ದರೂ ಅವನಿಗೆ ನನ್ನ ಕುರೂಪದ ಬಗ್ಗೆ ಎಳ್ಳಷ್ಟೂ ಯೋಚನೆಯಿಲ್ಲ... ಅದರ ಪರಿವೆಯೇ ಇಲ್ಲ....''

ಚರ್ಚ್‌ದಿಂದ ಮರಳಿದ ಮೇಲೆ, ಸಾಗರದ ದಂಡೆಯ ಗುಂಟ ಇರುವ ರಸ್ತೆಯ ಮೇಲೆ ನಡೆಯುತ್ತಲಿರುವಂತೆ, ವೈ. ಡಬ್ಲ್ಯು. ಸಿ. ಎ. ದ ಹಾಲ್‌ನಲ್ಲಿ ಬಟ್ಟೆ ಇಸ್ತ್ರಿ ಮಾಡುತ್ತಲಿರುವಂತೆ ಕಾರಮನ್ ನನಗೆ ತನ್ನ ಮತ್ತು ನಿಕ್‌ನ ಕಥೆಯೆಲ್ಲ ಹೇಳಿದಳು. ನಿಕ್ ಡಾಕ್ಟರನಿದ್ದ ಮತ್ತು ಹಾರ್ಟ್ ಸರ್ಜರಿ ಬಗ್ಗೆ ಹೆಚ್ಚಿನ ತರಬೇತಿ ಪಡೆಯಲು ವಿದೇಶಕ್ಕೆ ಹೋಗಿದ್ದಾನೆ. ಅವನು ಇವಳನ್ನು ಅಪಾರವಾಗಿ ಪ್ರೀತಿಸುತ್ತಾನೆ.

ರಾತ್ರಿ ನಾನು ಮಿಸೆಸ್ ಸುರೇಲಳ ಕೋಣೆಯಿಂದ ಕಾರಮನ್‌ಳ ಕೋಣೆಗೆ ಮರಳಿ ಬಂದಿದ್ದೆ. ಏಕೆಂದರೆ, ಮಿಸೆಸ್ ಸುರೇಲ ತನ್ನ ಮಗಳನ್ನು ಹುಡುಕಿ ತರುವಲ್ಲಿ ಯಶಸ್ವಿಯಾಗಿದ್ದಳು. ಈಗ ಆಕೆಯ ಮಗಳು ಆಕೆಯೊಂದಿಗಿದ್ದಾಳೆ... ಮಲಗುವ ಮುನ್ನ ನಾನು ಸೊಳ್ಳೆ ಪರದೆ ಸರಿ ಮಾಡುತ್ತಲಿದ್ದೆ.... ಕಾರಮನ್ ಮತ್ತೆ ನೆಲದ ಮೇಲೆ ಹಾಸಿದ್ದ ಹಾಸಿಗೆಯ ಮೇಲೆ ಆಸನ ಹಾಕಿ ಕುಳಿತಿದ್ದಳು.

''ನಿಕ್....'' ಆಕೆ ಹೇಳತೊಡಗಿದಳು.....

''ಈಗ ಎಲ್ಲಿದ್ದಾನೆ ?....'' ಎಂದೆ.

''ಗೊತ್ತಿಲ್ಲ...''

''ನೀನು ಅವನಿಗೆ ಪತ್ರ ಬರೆಯುತ್ತಿಲ್ಲ ?...''

''ಇಲ್ಲ...''

''ಏಕೆ....?'' ನಾನು ಅಚ್ಚರಿಯಿಂದ ಪ್ರಶ್ನಿಸಿದೆ.

''ನೀನು ದೇವರ ಮೇಲೆ ವಿಶ್ವಾಸವಿಡುತ್ತೀಯಾ ?''

''ಇದಂತೂ ತುಂಬ ಜಟಿಲವಾದ ಸಮಸ್ಯೆ..... ಆದರೆ ನೀನು ಅವನಿಗೆ ಪತ್ರ ಏಕೆ ಬರೆಯುತ್ತಿಲ್ಲ. ಅದನ್ನು ಹೇಳು....?''

''ಮೊದಲು ನನ್ನ ಪ್ರಶ್ನೆಗೆ ಉತ್ತರ ಹೇಳು... ನೀನು ದೇವರ ಮೇಲೆ ವಿಶ್ವಾಸವಿಡುತ್ತೀಯಾ....?''

''ಹಾಂ !...'' ಎಂದೆ, ವಾಗ್ವಾದ ಸಂಕ್ಷಿಪ್ತಗೊಳಿಸಲು. ಆಗ ಆಕೆ ಕೇಳಿದಳು–

''ಹಾಗಾದರೆ, ನೀನು ದೇವರಿಗೆ ಪತ್ರ ಬರೆಯುತ್ತೀಯಾ ?....''

ಕಟ್ಟಡದ ದೀಪಗಳು ಆರಿದವು.... ರಾತ್ರಿಯ ಗಾಳಿಯಲ್ಲಿ ಅಂಗಳದಲ್ಲಿದ್ದ ಗಿಡಗಳು ಸರ್.....ಸರ್.... ಎಂದು ಸಪ್ಪಳ ಮಾಡುತ್ತಿದ್ದವು...... ಕೋಣೆಯ ಬಾಗಿಲಿಗೆ ಹಾಕಿದ್ದ ಕೆಂಪು ಹೂವಿನ ಕರ್ಟನ್, ಗಾಳಿಯಿಂದಾಗಿ ಫಡ್....ಫಡ್.... ಎಂದು ಹಾರಾಡುತ್ತಿತ್ತು, ನಾನು ಎದ್ದು ಅದನ್ನು ಒಂದೆಡೆ ಸರಿಸಿದೆ....

''ತುಂಬ ಚಂದವಾಗಿದೆ ಪರದೆ....'' ಎಂದೆ, ಪಲ್ಲಂಗದ ಕಡೆ ಮರಳುತ್ತ... ಕಾರಮನ್ ನೆಲದ ಮೇಲೆ ಮಲಗಿದವಳು ಮಗ್ಗುಲ ಹೊರಳಿಸಿ ನಿದ್ರೆ ಹೋಗಿದ್ದಳು. ನನ್ನ ಮಾತು ಕೇಳಿದ ಆಕೆ ಎದ್ದು ಕುಳಿತಳು..... ಮತ್ತೆ ಹೇಳತೊಡಗಿದಳು... ಮೆಲ್ಲಗೆ....

''ನಾನು ಮತ್ತು ನಿಕ್ ಒಂದೊಮ್ಮೆ ಗುಡ್ಡದ ಪ್ರದೇಶದಲ್ಲಿ ನೂರಾರು ಮೈಲುಗಳವರೆಗೆ ಡ್ರಾಯ್ವ ಹೋಗಿದ್ದೆವು. ಕೇಳುತ್ತಲಿದ್ದೆಯಾ ?....''

''ಹಾಂ...ಹಾಂ.....ಹೇಳು ಮುಂದೆ....'' ಎಂದೆ.

''ದಾರಿಯಲ್ಲಿ ನಿಕ್, ಡೋನ್‌ರೇಮೊನನ್ನು ಕಂಡು ಹೋಗೋಣ..... ಎಂದ. ಡೋನ್‌ರೇಮೊ ನಿಕ್‌ನ ತಂದೆಯ ಗೆಳೆಯ ಹಾಗೂ ಮಂತ್ರಿಯಾಗಿದ್ದ. ಆತ ಇತ್ತೀಚೆಗೆ ತನ್ನ ಜಿಲ್ಲೆಯಲ್ಲಿಯ ಗಿರಿಧಾಮದಲ್ಲಿ ಹೊಸದೊಂದು ಸೌಧ ಕಟ್ಟಿಸಿದ್ದ. ನಾವು ಆತನ ಸೌಧದ ಹತ್ತಿರ ತಲುಪಿದಾಗ, ಎದುರಿನಿಂದ ಬಿಳಿ ಫ್ರಾಕ್ ತೊಟ್ಟ ಬಹಳಷ್ಟು ಪುಟ್ಟ ಪುಟ್ಟ ಹುಡುಗಿಯರು, ಒಂದು ಸ್ಕೂಲಿನಿಂದ ಹೊರಟು ಬರುತ್ತಿರುವುದು ಕಾಣಿಸಿತು. ನನಗೆ ಆ ದೃಶ್ಯ ಈಗಲೂ ಒಂದು ಕನಸಿನಂತೆ ನೆನಪಿನಲ್ಲಿದೆ... ನಾವು ಒಳಗೆ ಹೋದೆವು. ಮಿಸೆಸ್ ರೇಮೊ ಅವರ ನಿರೀಕ್ಷೆಯಲ್ಲಿ ಅವರ ಭವ್ಯವಾದ ಡ್ರಾಯಿಂಗ್ ಹಾಲ್‌ದಲ್ಲಿ ಕುಳಿತೆವು. ಕ್ಯಾಬಿನೆಟ್ ಮಿನಿಸ್ಟರ್ ಮನೆಯಲ್ಲಿರಲಿಲ್ಲ. ಡ್ರಾಯಿಂಗ್ ಹಾಲ್ ಮತ್ತು ಸ್ಟಡಿ ರೂಮಿನ ನಡುವೆಯಿದ್ದ ಗೋಡೆಯಲ್ಲಿ ಒಂದು ಚೌಕೋಣದ ಗಾಜಿನ ಬಾಕ್ಸ್ ಇತ್ತು. ಅದರಲ್ಲಿ ಪ್ಲಾಸ್ಟಿಕ್‌ದ ದೊಡ್ಡ ಗೊಂಬೆಯಿತ್ತು. ಕೋಣೆಯ ಅಂದ ಚಂದದ ಮುಂದೆ ಅದು ತುಂಬ ಕಳಪೆಯಾಗಿತ್ತು. ನಾವಿಬ್ಬರೂ ಇದರ ಬಗ್ಗೆ ವಿಚಾರಿಸುತ್ತ ಸುಮ್ಮನೆ ನಕ್ಕೆವು. ಮಿಸೆಸ್ ರೇಮೊ ಬಂದರು. ಆಕೆ ನಮಗೆ ಕೋಲ್ಡ್ ಟೀ ನೀಡಿದಳು ಹಾಗೂ ಇಡೀ ಮನೆ ತೋರಿಸಿದಳು. ಅವರ ಬಚ್ಚಲ ಮನೆಗೆ ಕಪ್ಪು ಟಾಯಿಲ್ಸ್ ಹಾಕಿದ್ದರು. ಗೆಸ್ಟ್‌ರೂಮಿನಲ್ಲಿದ್ದ ದೀವಾನ್–ಬೆಡ್‌ಗೆ ಕೆಂಪು ಹೂವಿನ ಜಾಲರಿ ಬಟ್ಟೆಯ ಬೆಡ್‌ಷಿಟ್ ಹೊದಿಸಲಾಗಿತ್ತು. ಈ ಪಲ್ಲಂಗಗಳನ್ನು ನೋಡಿ ನಿಕ್ ಸುಮ್ಮಗೆ ನನಗೆ ಹೇಳಿದ್ದ– ''ಕೆಟ್ಟ ಟೇಸ್ಟಿನ ಚರಮ ಸೀಮೆ''. ನಾನು ನನ್ನ ಮನಸ್ಸಿನಲ್ಲಿಯೇ ಅಂದುಕೊಂಡಿದ್ದೆ– ''ಯಾವುದೂ ಕೆಟ್ಟ ಟೇಸ್ಟ್ ಇಲ್ಲ. ನಾನು ಇಂಥವೇ ಪಲ್ಲಂಗ ನನ್ನ ಮನೆಗಾಗಿ ಖರೀದಿಸುವೆ ಹಾಗೂ ಇಂಥವೇ ಬೆಡ್‌ಷಿಟ್ ಹೊದಿಸುವೆ....''. ಆಗಿನಿಂದ ನಾನು ಯಾವಾಗಲಾದರೂ ಮನೆಯ ಸಾಮಾನು ಇರಿಸಿರುವ ಅಂಗಡಿಗಳ ಮುಂದಿನಿಂದ ಹೋದರೆ ಇಂಥ ಬಟ್ಟೆ ಕಾಣಿಸಿದರೆ ಸಾಕು. ನನ್ನ ಕಾಲುಗಳು ಅಲ್ಲಿಯೇ ನಿಂತು ಬಿಡುತ್ತಿದ್ದವು. ನಾನು ಆಗಾಗ ನನ್ನ ಪಗಾರದಿಂದ ಹಣ ಉಳಿತಾಯ ಮಾಡಿ ಅದೇ ಬೆಲೆಯುಳ್ಳ ಕೆಂಪು ಹೂವ್ವಿನ ಬಟ್ಟೆಯ ಈ ಪರದೆ ಖರೀದಿಸಿದೆ....

ನಾನು ಒಂದು ವಿಶೇಷವಾದ ಚೀನಿ ರಸ್ಟೋರೆಂಟಿನ ಮುಂದಿನಿಂದ ಹೊರಟಾಗ.... ಗಾಜಿನ ಕಿಟಕಿಯ ಹತ್ತಿರ ಇರಿಸಿರುವ ಮೇಜಿನ ಮೇಲೆ, ಉರಿಯುತ್ತಿರುವ ಹಸಿರು ಲ್ಯಾಂಪ್ ಕಾಣಿಸುತ್ತದೆ. ಅಲ್ಲಿ ನಾನು ಒಂದು ಸಂಜೆ ನಿಕ್‌ನೊಂದಿಗೆ ಊಟ ಮಾಡಿದ್ದೆ....'' ಎಂದು ಒಂದೇ ಉಸಿರಿನಲ್ಲಿ ಹೇಳಿದಳು.

ನನಗೆ ನಿದ್ರೆ ಬರತೊಡಗಿತ್ತು.....ನನಗೆ ನಿಕ್‌ನ ಈ ನಾಮಸ್ಮರಣೆಯಿಂದ ಸಾಕಾಗಿ ಹೋಗಿತ್ತು.. ನಾನು ಸೊಳ್ಳೆ ಪರದೆ ಕೆಳಗೆ ಬಿಡುತ್ತ ಹೇಳಿದೆ– ''ಒಂದು ಮಾತು ಹೇಳು... ನೀನು ಇಷ್ಟೊಂದು ರೀತಿಯಲ್ಲಿ ನಿಕ್‌ನನ್ನು ಪ್ರೀತಿಸುತ್ತಿರುವಾಗ ನಿನ್ನ ಆ

ನಿಕ್‌ನೊಂದಿಗೆ ಮದುವೆ ಏಕೆ ಮಾಡಿಕೊಳ್ಳಲಿಲ್ಲ ? ಇಲ್ಲಿಯವರೆಗೂ ಹೀಗೇಕೆ ಜಪ ಮಾಡುತ್ತ ಕುಳಿತಿರುವೆ ?....''

''ನನಗೆ, ಹತ್ತು ವರ್ಷಗಳವರೆಗೆ, ಬಹುದೂರವಿರುವ ಒಂದು ದ್ವೀಪದಲ್ಲಿ ನಮ್ಮ ತಂದೆಯ ಜೊತೆಗಿರಬೇಕಾಗಿ ಬಂತು'' ಎಂದ ಆಕೆ ತುಂಬ ದುಃಖಿತ ದನಿಯಲ್ಲಿ ಮತ್ತೆ ಹೇಳಿದಳು– ''ನಾವು ಮೊದಲು ಈ ಪಟ್ಟಣದಲ್ಲಿಯೇ ಇರುತ್ತಿದ್ದೆವು. ಯುದ್ಧ ಕಾಲದಲ್ಲಿ ಇಲ್ಲಿ ಆದ ಬಂಬಾರಿಯಿಂದ ನಮ್ಮ ಮನೆ ಸುಟ್ಟು ಭಸ್ಮವಾಯಿತು... ಹಾಗೂ ನನ್ನ ತಾಯಿ ಮತ್ತು ಇಬ್ಬರು ಸೋದರರು ಸತ್ತು ಹೋದರು. ಕೇವಲ ನಾನು ಮತ್ತು ನನ್ನ ತಂದೆ ಜೀವಂತ ಉಳಿದೆವು. ತಂದೆ ಒಂದು ಸ್ಕೂಲಿನಲ್ಲಿ ಸೈನ್ಸ್ ಟೀಚರ್ ಇದ್ದರು. ಅವರಿಗೆ ಟಿ.ಬಿ. ಆಯಿತು. ನಾನು ಅವರನ್ನು ಸೆನಿಟೋರಿಯಮ್‌ದಲ್ಲಿ ಚಿಕಿತ್ಸೆಗಾಗಿ ಇರಿಸಿದೆ. ಅದು ಬಹು ದೂರದ ದ್ವೀಪದಲ್ಲಿತ್ತು. ಸೆನಿಟೋರಿಯಮ್‌ದ ಖರ್ಚು ತುಂಬ ಇತ್ತು. ನಾನು ಕಾಲೇಜ್ ಬಿಟ್ಟ ಕೂಡಲೇ ಅದೇ ಆರೋಗ್ಯಧಾಮದ ಆಫೀಸಿನಲ್ಲಿ ನೌಕರಿ ಮಾಡತೊಡಗಿದೆ. ಹತ್ತಿರದ ಶ್ರೀಮಂತ ಜಮೀನ್ದಾರರ ಮನೆಯಲ್ಲಿಯ ಮಕ್ಕಳಿಗೆ ಟ್ಯೂಷನ್ ಹೇಳತೊಡಗಿದೆ. ಆದರೆ ತಂದೆಯ ಚಿಕಿತ್ಸೆಯ ಖರ್ಚು ದಿನಗಳೆದಂತೆ ಹೆಚ್ಚಾಗುತ್ತಲೇ ಹೋಯಿತು. ಆಗ ನಾನು ನನ್ನೂರಿಗೆ ಹೋಗಿ ಅನಾನಸ್‌ದ ತೋಟವನ್ನು ಒತ್ತೆಯಿಟ್ಟು ಹಣ ತಂದೆ. ಆಗಲೂ ತಂದೆಯವರು ಗುಣಮುಖರಾಗಲಿಲ್ಲ. ನಾನು ಒಂದು ದ್ವೀಪದಿಂದ ಇನ್ನೊಂದು ದ್ವೀಪಕ್ಕೆ ದೋಣಿಯಲ್ಲಿ ಕುಳಿತು ಹೋಗುತ್ತೇನೆ. ಅಲ್ಲಿಯ ಜಮೀನ್ದಾರರ ಇಲಾಖೆಯಲ್ಲಿ ಹೋಗಿ ಅವರ ಮಂದ ಬುದ್ಧಿಯ ಮಕ್ಕಳಿಗೆ ಓದಿಸಿ ಓದಿಸಿ ದಣಿದು ಚೂರು ಚೂರಾಗುತ್ತಿದ್ದೆ... ಆದರೂ ತಂದೆಯವರು ಗುಣವಾಗಲಿಲ್ಲ. ನಿಕ್‌ನೊಂದಿಗೆ ನನ್ನ ಭೇಟಿ ಇಂದಿನಿಂದ ಹತ್ತು ವರ್ಷಗಳ ಪೂರ್ವದಲ್ಲಿ ಒಂದು ಫೀಸ್ಟಾ (Fiesta)ದಲ್ಲಿ ಆಗಿತ್ತು. ಈ ಮಧ್ಯದಲ್ಲಿ ನಾನು ರಾಜಧಾನಿಗೆ ಬಂದಾಗಲೆಲ್ಲ ಆತ ನನ್ನನ್ನು ಭೇಟಿಯಾಗುತ್ತಿದ್ದ. ಮೂರು ವರುಷದ ಹಿಂದೆಯೇ ಆತ ಮದುವೆಗೆ ಒತ್ತಾಯಿಸಿದ. ಆದರೆ ತಂದೆಯ ಸ್ಥಿತಿ ಆಗ ಚಿಂತಾಜನಕವಾಗಿತ್ತು. ಅಲ್ಲಿ ಅವರು ಮರಣ ಶಯ್ಯೆಯಲ್ಲಿರುವಾಗ, ಅವರನ್ನು ಬಿಟ್ಟು, ಇಲ್ಲಿಗೆ ಬರಲು ನನಗೆ ಸಾಧ್ಯವಿರಲಿಲ್ಲ. ಇದೇ ಸಮಯದಲ್ಲಿಯೇ ನಿಕ್‌ಗೆ ಹೊರಗೆ ಹೋಗಬೇಕಾಗಿ ಬಂತು. ತಂದೆ ಸತ್ತ ನಂತರ ಮತ್ತೆ ನಾನಿಲ್ಲಿಗೆ ಬಂದೆ. ಈಗ ನಾನಿಲ್ಲಿ ನೌಕರಿ ಮಾಡುತ್ತಿರುವೆ. ಮುಂದಿನ ವರ್ಷ ಯುನಿವರ್ಸಿಟಿಗೆ ನನ್ನ ಮಹಾಪ್ರಬಂಧ ಸಲ್ಲಿಸಲಿದ್ದೇನೆ. ತಂದೆಯವರ ತೋಟವನ್ನೂ ಒತ್ತೆಯಿಂದ ಬಿಡಿಸಿಕೊಳ್ಳಬೇಕೆಂದಿದ್ದೇನೆ. ನಿಕ್ ನನಗೆ ಆರ್ಥಿಕ ಸಹಾಯ ನೀಡಬಯಸಿದ್ದ. ಆದರೆ ನಾನು ಮದುವೆಗಿಂತ ಮೊದಲು ಅವನಿಂದ ಒಂದು ಪೈಸೆಯನ್ನೂ ಪಡೆಯಲಾರೆ. ಅವನ ಮನೆಯವರು ಕೆಟ್ಟ ಬುದ್ಧಿಯ, ಒರಟು ಜನರಿದ್ದಾರೆ. ಓರ್ವ ತರುಣಿಗೆ ಆಕೆಯ ಆತ್ಮಗೌರವ ಬಹು ದೊಡ್ಡದಾಗಿರುತ್ತದೆ. ಆತ್ಮಗೌರವ, ಆತ್ಮವಿಶ್ವಾಸ, ಒಂದು ವೇಳೆ ನನ್ನನ್ನು ಎಂದಾದರೂ ನಿಕ್ ಕೂಡ ಹೀನಾಯವಾಗಿ ಕಾಣುತ್ತಾನೆಂಬ ಭಾಸ ನನ್ನಲ್ಲಿ ಉಂಟಾದರೂ ಸಾಕು... ಅಥವಾ ನನಗೆ... ? ಮಲಗುವದಿಯೇನು... ? ಸರಿ, ಗುಡ್‌ನೈಟ್...''.

ಮಾರನೆಯ ದಿನ ಬೆಳಗ್ಗೆ, ಆಕೆ ಎಂದಿನಂತೆ ಎಲ್ಲರಿಗಿಂತ ಮೊದಲು ಡೈನಿಂಗ್ ಟೇಬಲ್ ಹತ್ತಿರ ಟಿಫಿನ್‌ನ ವ್ಯವಸ್ಥೆಗಾಗಿ ಸನ್ನದ್ಧಳಾಗಿದ್ದಳು. ಮಿಸೆಸ್ ಸುರೇಲ ಗಾಮಕ್ಕೆ ಮರಳುವ ಸಿದ್ಧತೆಯಲ್ಲಿದ್ದಳು. ತನಗೆ ಆಗಲಿರುವ ಅಳಿಯನೊಂದಿಗೆ ಒಡಂಬಡಿಕೆ ಮಾಡಿಕೊಂಡಿದ್ದಳು. ಅವನು ಬೆಳಿಗ್ಗೇನೇ ತನ್ನ ಭಾವಿ ಅತ್ತೆಯ ಹತ್ತಿರ ಬಂದಿದ್ದ. ಅವನು ಸಾದಾ–ಸೀದಾ, ಅನುಭವಿ ತರುಣನಾಗಿದ್ದ. ಹಾಲ್‌ನ ಒಂದು ಮೂಲೆಯಲ್ಲಿ ತೊಯ್ದ ಬೆಕ್ಕಿನ ಹಾಗೆ ಮುದ್ದೆಯಾಗಿ ಕುಳಿತಿದ್ದ. ಇಡೀ ವಾತಾವರಣದಲ್ಲಿ ಒಂದು ಅಪೂರ್ವವಾದ ಪ್ರಸನ್ನತೆ ಹರಡಿತ್ತು. ಹುಡುಗಿಯರು ಮಾತು ಮಾತಿಗೂ ನಗೆಯ ಬುಗ್ಗೆ ಚಿಮ್ಮುತ್ತಿದ್ದರು. ನಾನು ಕೂಡ ತುಂಬ ಸಂತೋಷದಲ್ಲಿದ್ದೆ. ನನಗೆ ನಾನು ಗಾಳಿಗಿಂತ ಹಗುರಾಗಿದ್ದೇನೆ ಎನ್ನಿಸುತ್ತಲಿತ್ತು. ಈ ರೀತಿಯ ಹಗುರಾಗುವುದು, ಸಂಪೂರ್ಣ ಶಾಂತಿ, ಪ್ರಸನ್ನತೆಯ ಅರಳುವಿಕೆಯ ಅನುಭವವಾಗುವುದು, ಜೀವನದಲ್ಲಿ ಬಹಳ ಕಡಿಮೆ. ಈ ಅನುಭವ ಕೂಡ ಕೇವಲ ಕೆಲವು ಕ್ಷಣಗಳಷ್ಟು ಮಾತ್ರ ಇರುತ್ತದೆ. ಆದರೆ ಈ ಕೆಲ ಕ್ಷಣಗಳು ಅತ್ಯಂತ ಬೆಲೆಯುಳ್ಳವುಗಳು, ಅಮೂಲ್ಯವಾದವುಗಳು, ಅಪರೂಪದವುಗಳು.

ಕಾರಮನ್, ಜಲ್ದಿ ಜಲ್ದಿ ಟಿಫಿನ್ ಮುಗಿಸಿ ಆಫೀಸಿಗೆ ಹೊರಟು ಹೋದಳು.

''ಇಂದು ಕೂಡ ನೀನು ನಿನ್ನ ಶ್ರೀಮಂತ ಮಿತ್ರರನ್ನು ಕಾಣಲು ಹೋಗುತ್ತಿಲ್ಲ ತಾನೇ ? ಒಂದು ವೇಳೆ ಹೋಗದಿದ್ದರೆ ನಾನು ನಿನ್ನನ್ನು ಜೀಪನಿ(Jeepaney)ಯಲ್ಲಿ ಕೂಡಿಸಿಕೊಂಡು ನಗರದ ಓಣಿ– ಸಂದಿಗೊಂದಿಗಳಲ್ಲೆಲ್ಲ ತಿರುಗಾಡಿಸುತ್ತಿದ್ದೆ.....'' ಎಂದು ಮೊಗ್ದಲೀನಾ ನನಗೆ ಹೇಳಿದಳು.

''ನಿನಗಾಗಿ ಒಂದು ಕೆಡಿಲೇಕ್ ಗಾಡಿ ಬಂದಿದೆ...'' ಎಂದು ರೋಜಾ ಒಳಗೆ ಬಂದು ಸೂಚನೆ ನೀಡಿದಳು.

''ಕೆಡಿಲೇಕ್....? ಉಫ್....'' ಕೋರಸ್ ನಡೆಯಿತು.

''ನಿನಗಾಗಿ ಇಂಥಂಥ ಭಾರಿ ಭಾರಿ ಕಾರು ಬರುತ್ತವಲ್ಲ...'' ಎಂದು ಬರ್ನಾಡಾ ಸಂತುಷ್ಟ ಮನಸ್ಸಿನಿಂದ ಹೇಳಿ, ಖುಷಿ ಹೆಚ್ಚಿಸಿದಳು. ನಾನು ಅವರಿಗೆಲ್ಲ 'ಖುದಾ ಹಾಫಿಜ' ಹೇಳಿದೆ ಹಾಗೂ ನನ್ನ ಪ್ರವಾಸಿ ಬ್ಯಾಗ್ ಹೆಗಲಿಗೆ ತೂಗು ಹಾಕಿಕೊಂಡು ಹೊರಗೆ ಬಂದೆ. ನಾನು ಮಾಜಿ ರಾಜದೂತ ಡೋನ್ ಗಾರ್ಸಿಯಾ ಡೇಲ ಪ್ರೆಡೋಸ್‌ರೊಂದಿಗೆ ಎರಡು ದಿನ ಇರಲು ಅವರ ಹಿಲ್ ಸ್ಟೇಶನ್‌ಗೆ ಹೊರಟಿದ್ದೆ. ಅವರ ಡ್ರೈವರ್ ಕಪ್ಪು ಕೆಡಿಲೇಕ್ ಕಾರಿನ ಬಾಗಿಲು ಅತ್ಯಂತ ಗಂಭೀರವಾಗಿ ಹಾಕಿದ ಹಾಗೂ ಕಾರು ಪಟ್ಟಣದಿಂದ ಹೊರ ಬಂದು, ಹಚ್ಚ ಹಸಿರ ಹೊದಿಕೆ ಹೊತ್ತು ನಿಂತ ಗುಡ್ಡಬೆಟ್ಟಗಳ ಕಡೆಗೆ ಸಾಗಿತು.

ಬೆಟ್ಟದ ಒಂದು ಶಿಖರದ ಮೇಲೆ ಗಾರ್ಸಿಯಾ ಅವರ 'ಹಿಸ್ಪಾನ್ಸಿ', ಭವ್ಯವಾದ ಬಂಗ್ಲೆ ಗಿಡಗಂಟಿಗಳ ಮಧ್ಯದಲ್ಲಿದ್ದರೂ ದೂರದಿಂದಲೇ ಕಾಣಿಸುತ್ತಿತ್ತು. ಕೊಳ್ಳಗಳಲ್ಲಿ ಮಂಜು ಸುಳಿದಾಡುತ್ತಲಿತ್ತು. ಬೆಳ್ಳಗಿನ, ಬೂದಿಬಣ್ಣದ, ಕೆಂಪು ಮತ್ತು ಹಳದಿ ಬಣ್ಣದ ಬೆಟ್ಟದಾವರೆ ಪುಷ್ಪಗಳು ಇಡೀ ಕೊಳದಲ್ಲಿ ಅರಳಿದ್ದವು. ಕಾರು ಗೇಟಿನೊಳಗಿಂದ ಬಂದು

ಪೋರ್ಚದಲ್ಲಿ ನಿಂತಿತು. ಕಬಾಯಲೀ ಜನಾಂಗದ ಹೆಣ್ಣಾಳುಗಳು ಹೊರಬಂದರು. ಬಟ್ಲರ ಕೆಳಗೆ ಬಂದು ಕಾರಿನ ಬಾಗಿಲು ತೆರೆದ. ಹಾಲ್‌ದ ಬಾಗಿಲಲ್ಲಿ ಡೋನ್ ಗಾರ್ಸಿಯಾ ಮತ್ತು ಅವರ ಪತ್ನಿ ಡೋನಾ ಮಾರಿಯಾ ನನ್ನ ಪ್ರತೀಕ್ಷೆಯಲ್ಲಿದ್ದರು. ಅವರ ಬಂಗ್ಲೆ ಬೆಳ್ಳಗಿನ ರತ್ನಗಂಬಳಿಗಳಿಂದ, ಬಂಗಾರವರ್ಣದ ಫರ್ನಿಚರ್ ಮತ್ತು ಅತ್ಯಮೂಲ್ಯ ವಸ್ತುಗಳಿಂದ ಸುಸಜ್ಜಿತವಾಗಿತ್ತು. ಅದರಲ್ಲಿಯ ಕೋಣೆಗಳು, ಲೈಫ್ ಮ್ಯಾಗಜೀನ್‌ದಲ್ಲಿ ಬರುವ ವರ್ಣರಂಜಿತ ಪುಟಗಳಲ್ಲಿ ಫರ್ನಿಚರ್ ಅಥವಾ ಇಂಟೀರಿಯರ್ ಡೆಕೋರೇಶನ್‌ದ ಬಗ್ಗೆ ಹೆಚ್ಚಾಗಿ ಪ್ರಕಟಿಸಲಾಗಿರುತ್ತವೆ.

ಕೆಲ ಹೊತ್ತಿನ ನಂತರ ನಾನು ಡೋನಾಮಾರಿಯಾಳೊಂದಿಗೆ ಮೇಲಿನ ಅಂತಸ್ತಿಗೆ ಹೋದೆ. ಅಲ್ಲಿಯ ಸುತ್ತಲ ಗಾಜುಗಳುಳ್ಳ ಹಾಲ್‌ನಲ್ಲಿಯ ಒಂದು ಮೂಲೆಯಲ್ಲಿ ಒಂದು ನಾಜೂಕಾದ ಬೆತ್ತದ ಬುಟ್ಟಿಯಲ್ಲಿ ಒಂದು ಆರು ತಿಂಗಳ, ಗುಲಾಬಿ ವರ್ಣದ ಮಗು ಆ.... ಉ.... ಆ.... ಉ..... ಗಾ.... ಗು.... ಎನ್ನುತ್ತಲಿತ್ತು. ಆ ಮಗು ಎಷ್ಟು ಸುಂದರ ವಾಗಿತ್ತೆಂದರೆ, ನಾನು ಡೋನಾ ಮಾರಿಯಾಳ ಮಾತು ಕೇಳುವುದನ್ನು ಬಿಟ್ಟು ಸೀದಾ ಆ ಮಗು ಇದ್ದ ಬುಟ್ಟಿಯ ಕಡೆಗೆ ಹೋದೆ. ಅತ್ಯಂತ ಚೆಲುವಾದ, ಆರೋಗ್ಯಪೂರ್ಣ, ತಾಜಾತನದಿಂದ ಹೊಳೆಯುತ್ತಿದ್ದ ಚಿಕ್ಕ ವಯಸ್ಸಿನ ಓರ್ವ ಅಮೇರಿಕನ್ ತರುಣಿ, ಹತ್ತಿರದ ಸೋಫಾದಿಂದ ಎದ್ದು ನನ್ನೆಡೆಗೆ ಬಂದಳು ಹಾಗೂ ಮುಗುಳ್ನಗುತ್ತ ಥ್ಯಾಂಕ್ಸ್ ಕೊಡಲು ಕೈಚಾಚಿದಳು.

''ಈಕೆ ನನ್ನ ಸೊಸೆ...'' ಎಂದು ಪರಿಚಯಿಸಿದಳು, ಡೋನಾ ಮಾರಿಯಾ. ನಾವು ಮೂವ್ವರೂ ಬುಟ್ಟಿಯ ಅತ್ತ ಇತ್ತ ನಿಂತು ಮಗುವಿನೊಂದಿಗೆ ಪ್ರೇಮ–ಗೀಮ ಮಾಡುವಲ್ಲಿ ಮಗ್ನರಾದೆವು.

ಮಧ್ಯಾಹ್ನ, ಲಂಚ್ ಸಮಯದಲ್ಲಿ ಅಮೇರಿಕನ್ ತರುಣಿಯ ಗಂಡನೂ ಬಂದ.

''ಈತ ನಮ್ಮ ಮಗ ಹೋಜೆ...'' ಡೋನ್ ಗಾರ್ಸಿಯಾ ಹೇಳಿದ.

ಹೋಜೆಗೆ ಮೂವತ್ತೈದು ವರ್ಷವಾಗಿರಬಹುದು. ಆತ ಸ್ಥಳೀಯ ಕಸೂತಿ ಹಾಕಿದ ತಿಳಿಬಣ್ಣದ ಅಂಗಿ ಮತ್ತು ಬಿಳಿ ಪ್ಯಾಂಟ್‌ನಲ್ಲಿ ತುಂಬ ಚೆನ್ನಾಗಿಯೇ ಕಾಣಿಸುತ್ತಿದ್ದ. ಅವನು ತನ್ನ ಎಳೆ ವಯಸ್ಸಿನ ಹೆಂಡತಿಯನ್ನು ತುಂಬ ಪ್ರೀತಿಸುತ್ತಿದ್ದ. ಹಾಗೂ ಮಗುವಿನ ಮೇಲೆ ಅಪಾರ ಪ್ರೀತಿ, ವಾತ್ಸಲ್ಯವಿತ್ತು. ಹೆಚ್ಚಾಗಿ ಅವನು ಮಗುವಿನ ಬಗ್ಗೆಯೇ ಮಾತ ನಾಡುತ್ತಿದ್ದ.....

ರಾತ್ರಿಯಲ್ಲಿ ನಾನು ಅತ್ಯಂತ ಸುಸಜ್ಜಿತ ಮತ್ತು ಭವ್ಯವಾದ ಮಲಗುವ ಕೋಣೆಯೊಳಗೆ ಹೋದೆ. ಅಲ್ಲಿರಿಸಿದ್ದ ಸಾಮಾನುಗಳಿಗೆ ಕೈ ತಾಗಿದರೆ ಸಾಕು, ಎಲ್ಲಿ ಹೊಲಸಾಗುವುವೋ ಎನ್ನುವ ಚಿಂತೆ ಕಾಡುತ್ತಿತ್ತು. ಆ ಸಮಯದಲ್ಲಿ ನನಗೆ ವೈ. ಡಬ್ಲ್ಯು. ಸಿ. ಎ.ದ ಆ ಕೋಣೆಗಳು ಆ ಸೊಳ್ಳೆ ಪರದೆ, ಮಿಸೆಸ್ ಸುರೇಲ ಮತ್ತು ಆ ಬಣ್ಣಗೆಟ್ಟ ಹಾಲ್, ಮೇಜು, ಕುರ್ಚಿಗಳು ಎಲ್ಲ ಎಲ್ಲ ಬಹಳ ನೆನಪಾದವು...

ಎರಡು ದಿನಗಳ ನಂತರ ಪ್ರಡೋಸ್ ಮನೆಯವರು, ನನ್ನೊಂದಿಗೇನೇ ರಾಜಧಾನಿಗೆ ಮರಳಿದರು. ತನ್ನ ತಾಯಿ ತಂದೆ ಅವರನ್ನು ತಮ್ಮ ಟೌನ್

ಹೌಸ್‌ದಲ್ಲಿಳಿಸಿದ ನಂತರ, ಹೋಜೆ ನನ್ನನ್ನು ನನ್ನ ನಿವಾಸ ಸ್ಥಾನಕ್ಕೆ ಕಳಿಸಲು ಕೆಡಿಲೇಕ್ ಮತ್ತೊಮ್ಮೆ ಸ್ಟಾರ್ಟ್ ಮಾಡಿದ. ಹೋಜೆ ಮತ್ತು ಅವನ ಪತ್ನಿ ಡೋರೋಥಿ ಕೇವಲ ಎರಡು ವಾರಗಳಾದವು ಅಮೇರಿಕೆಯಿಂದ ಇಲ್ಲಿಗೆ ಬಂದು. ಅವರ ಬಹಳಷ್ಟು ಸಾಮಾನುಗಳು ಇನ್ನೂ ಕಸ್ಟಮ್ ಹೌಸ್‌ದಲ್ಲಿಯೇ ಇದ್ದವು, ಅವುಗಳನ್ನು ತರಲು ಹೋಜೆ ಅಲ್ಲಿಗೆ ಹೋಗಬೇಕಾಗಿತ್ತು.

ರಾಜಧಾನಿಯ ಅತ್ಯಂತ ಪ್ರಸಿದ್ಧ ಹಾಗೂ ಶ್ರೇಷ್ಠ ದರ್ಜೆಯ ಹೋಟಲಿನ ಮುಂದೆ ಹೋಜೆ, ಕಾರು ನಿಲ್ಲಿಸಿದ.

''ಇಲ್ಲೇನು ಮಾಡುವುದಿದೆ ?'' ಎಂದು ನಾನು ಅವನನ್ನು ಕೇಳಿದೆ.

''ನೀವು ಇಲ್ಲಿಯೇ ಇಳಿದುಕೊಂಡಿರಬೇಕಲ್ಲ ?'' ಎಂದ.

''ಇಲ್ಲ ಡಿಯರ್ ಹೋಜೆ. ನಾನು ವೈ.ಡಬ್ಲ್ಯು. ಸಿ. ಎ. ದಲ್ಲಿ ಇಳಿದು ಕೊಂಡಿದ್ದೇನೆ.''

''ವೈ.ಡಬ್ಲ್ಯು.... ? ಗುಡ್‌ಗಾಡ್... ವಿಚಿತ್ರವಾಗಿದೆ... ಅಚ್ಛಾ... ಅಲ್ಲಿಗೇ ಹೋಗೋಣ... ಏನು ನಿಮಗೆ ಇಲ್ಲಿ ಸ್ಥಳ ಸಿಕ್ಕಲಿಲ್ಲವೇನು ? ನೀವು ಬಂದ ಕೂಡಲೇ ಡ್ಯಾಡಿಗೆ ಸೂಚನೆ ಕೊಡಬೇಕಾಗಿತ್ತು....'' ಎಂದ.

ಆಗ ನನಗೆ ವಿಚಾರ ಬಂತು, ನಾನು ಪ್ರತಿಯೊಂದು ವರ್ಗದ, ಪ್ರತಿಯೊಂದು ಶ್ರೇಣಿಯ ಜನರನ್ನು ನನ್ನ ಸ್ವಭಾವದ ಮೂಲಕ, ನನಗಿರುವ ಅವಕಾಶದ ಸೀಮೆಯವರೆಗೂ, ಮಾನಸಿಕವಾಗಿ ಹೊಂದಾಣಿಕೆ, ತಾಳ–ಮೇಳ ಮಾಡಿಕೊಳ್ಳುತ್ತ ಬಂದಿರುವೆ. ಆದರೆ ಹೋಜೆ ಮತ್ತು ಅವನ ತಾಯಿ–ತಂದೆಗಳ ಮನೆತನ, ಈ ದೇಶದ ಹತ್ತು ಜನ ಆಗರ್ಭ ಶ್ರೀಮಂತ ಮನೆತನಗಳಲ್ಲಿ ಒಂದಾಗಿದೆ. ಅದೂ ಅಲ್ಲದೆ ಇಲ್ಲಿಯ ಆಳುವ ವರ್ಗದ ಮಹತ್ವಪೂರ್ಣ ಸ್ತಂಭವಾಗಿದ್ದರು. ಅಂಥವರಿಗೆ, ವೈ.ಡಬ್ಲ್ಯು, ಸಿ. ಎ. ನನಗೇಕೆ ಇಷ್ಟೊಂದು ಪ್ರಿಯವಾಗಿದೆ ಮತ್ತು ನಾನು ಅಲ್ಲಿಯೇ ಇರಲು ಇಷ್ಟೊಂದು ಆಸಕ್ತಿ ಏಕೆ ಹೊಂದಿದ್ದೇನೆ ಎಂಬುದನ್ನು ತಿಳಿಸಿಕೊಡುವುದು ಅರ್ಥಹೀನವಾಗಿತ್ತು.

ಹೋಜೆ ಓಣಿಯ ಕೊನೆ ಮೂಲೆಯಲ್ಲಿ ಕಾರು ನಿಲ್ಲಿಸಿದ. 'ಜೀಪನಿ'ಗಳ ದೊಡ್ಡ ಸಾಲು ದಾರಿಯನ್ನು ಬಂದ್ ಮಾಡಿತ್ತು. ನಾನು ಅಲ್ಲಿಯೇ ಇಳಿದು ವೈ.ಡಬ್ಲ್ಯು. ಸಿ. ಎ. ಒಳಗೆ ಹೋದಾಗ ಎಲ್ಲರೂ ಮಲಗಿದ್ದರು. ನಾನು ಸಪ್ಪಳ ಮಾಡದೆ, ಕೋಣೆಯಲ್ಲಿ ಹೋಗಿ ಸೊಳ್ಳೆ ಪರದೆಯೊಳಗೆ ಹೊಕ್ಕೊಂಡೆ. ಕಾರಮನ್ ಎಂದಿನಂತೆ ನೆಲದ ಮೇಲೆ ಹಾಸಿಗೆ ಹಾಸಿಕೊಂಡು, ಶಾಂತವಾಗಿ ನಿದ್ರಿಸುತ್ತಿದ್ದಳು. ಆಕೆಯ ತಲೆದಿಂಬಿನ ಹತ್ತಿರ ಸೇಂಟ್ ಥಾಮಸ್‌ನ ಚಿತ್ರವಿತ್ತು. ಅದರ ಮೇಲೆ ಓಣಿಯ ಲೈಟಿನ ಮಂದ ಬೆಳಕಿನ ನೆಳಲು ಹೊಯ್ದಾಡುತ್ತಲಿತ್ತು.

ಬೆಳಗಿನ ನಾಲ್ಕು ಗಂಟೆಗೆ ಎದ್ದು ನಾನು, ಕಳ್ಳ ಹೆಜ್ಜೆಯಲ್ಲಿ ಅವಶೇಷದಂತಿರುವ ಬಚ್ಚಲ ಮನೆಗೆ ಹೋದೆ. ಮೆಲ್ಲಗೆ ನಳ ಚಾಲು ಮಾಡಿದೆ. ಆದರೆ ನೀರಿನ ರಭಸದಿಂದಾಗಿ ಸಪ್ಪಳವಾಯಿತು. ನಾನು ಗಾಬರಿಯಾದೆ. ಅದೇ ರೀತಿ ಮೆಲ್ಲಗೆ,

ಸಪ್ಪಳದಿಂದ ಕಾರಮನ್‌ಳ ನಿದ್ರೆ ಹಾಳಾಗಬಾರದೆಂಬ ಎಚ್ಚರವಹಿಸಿ, ಸದ್ದಾಗದಂತೆ ಕೋಣೆಗೆ ಬಂದು ನನ್ನ ಸಾಮಾನು ಕಟ್ಟಲಾರಂಭಿಸಿದೆ. ಅಷ್ಟರಲ್ಲಿ ನಾನು ಹೊರಳಿ ನೋಡಿದೆ, ಆಗಲೇ ಕಾರಮನ್ ಹಾಸಿಗೆಯಿಂದ ಮಾಯವಾಗಿದ್ದಾಳೆ. ಕೆಲ ಹೊತ್ತಿನ ನಂತರ ಆಕೆ ಬಂದು ಹೇಳಿದಳು–

''ಟಿಫಿನ್ ಸಿದ್ಧವಾಗಿದೆ....'' ಆಕೆ ಆಗಲೇ ಟ್ಯಾಕ್ಸಿಯವನಿಗೂ ಫೋನು ಮಾಡಿ ಬರಲು ಹೇಳಿದ್ದಳು.

''ನಿನ್ನ ಯಾತ್ರೆ ಹೇಗಿತ್ತು...?'' ಎಂದು ಆಕೆ ಚಹಾ ಹಾಕುತ್ತ ಕೇಳಿದಳು.

''ತುಂಬ ಚೆನ್ನಾಗಿತ್ತು.....''

''ಈ ನಿನ್ನ ಮಿತ್ರರು... ಯಾರಿವರು.... ನೀನು ಹೋಗಿದ್ದೆಯಲ್ಲ....? ನೀನು, ಅವರು ಯಾರೆಂಬುದನ್ನೇ ಹೇಳಲಿಲ್ಲವಲ್ಲ...''

ನಾನು ಹೇಳಲು ಆರಂಭಿಸುವವಳೇ ಇದ್ದೆ.... ಅಷ್ಟರಲ್ಲಿ ಒಂದು ವಿಚಾರ ಹೊಳೆಯಿತು. ನಾನು ಕೂಡಲೇ ಹಾಲ್‌ನಿಂದ ಕೋಣೆಯೊಳಗೆ ಹೋಗಿ ಸೂಟ್‌ಕೇಸ್ ತೆರೆದೆ. ಅದರಲ್ಲಿದ್ದ ಹೊಸದಾದ ಬನಾರಸ್‌ದ ಸೀರೆ ತೆಗೆದುಕೊಂಡೆ ಹಾಗೂ ಒಂದು ಹಾಳೆಯಲ್ಲಿ ಬರೆದೆ. ''ಮದುವೆಗಾಗಿ... ನನ್ನ ಮುಂಗಡ ಪ್ರೀತಿಯ ಕಾಣಿಕೆ.'' ಸೀರೆಯೊಳಗೆ, ಬರೆದ ಚೀಟಿಯಿರಿಸಿ ಕಾರಮನ್‌ಳ ತಲೆದಿಂಬಿನ ಕೆಳಗೆ ಸೀರೆ ಇರಿಸಿದೆ.

''ಟ್ಯಾಕ್ಸಿ ಬಂತು....'' ಕಾರಮನ್ ಹಾಲ್‌ನಿಂದ ಕೂಗಿ ಹೇಳಿದಳು.

ನಾವಿಬ್ಬರೂ ಸಾಮಾನು ತೆಗೆದುಕೊಂಡು ಹೊರಗೆ ಬಂದೆವು. ನಾನು ಟ್ಯಾಕ್ಸಿಯಲ್ಲಿ ಕುಳಿತುಕೊಂಡೆ. ಅಷ್ಟರಲ್ಲಿ ಕಾರಮನ್ ದೊಡ್ಡ ಬಾಗಿಲಿನ ಕಿಟಕಿಯಿಂದ ತಲೆ ಹೊರಗೆ ಹಾಕಿ ''ಅರೆ... ನೀನು ವಿಳಾಸವನ್ನೇ ಕೊಡಲಿಲ್ಲವಲ್ಲ....'' ಎಂದಳು.

ನಾನು ಆ ಕೂಡಲೇ ಒಂದು ಕಾಗದದಲ್ಲಿ ವಿಳಾಸ ಬರೆದು ಅವಳ ಕೈಯಲ್ಲಿರಿಸಿದೆ. ನನಗೂ ಕೂಡ ಒಂದು ಅತ್ಯಂತ ಮಹತ್ವದ ಮಾತು ನೆನಪಾಯಿತು– ''ಇದು ಅತಿಯಾಯಿತು, ಕಾರಮನ್, ನಿನ್ನ ವೈ. ಡಬ್ಲ್ಯು. ಸಿ. ಎ.ದವರು ನನಗೆ ನನ್ನ ಬಿಲ್ ಕೊಡಲೇ ಇಲ್ಲ...''

''ಹುಚ್ಚುಚ್ಚು ಮಾತಾಡಬೇಡ...''

''ಅರೆ....ಇದು ನಿನ್ನ ಸ್ವಂತ ಮನೆ ಅಲ್ಲವಲ್ಲ ಕಾರಮನ್.....''

''ನೀನು ನನ್ನ ಅತಿಥಿಯಾಗಿದ್ದೆ....''

''ಹುಚ್ಚುಚ್ಚು ಮಾತಾಡಬೇಡ....''

''ನೀನು ಹಾಗೆ ಮಾತನಾಡುವುದನ್ನು ಬಿಡು... ಈಗ ಓಡು. ಇಲ್ಲವಾದರೆ ವಿಮಾನ ಹೊರಟು ಹೋಗುತ್ತದೆ.....ಮತ್ತೆ ನೋಡು, ನಾನು ಮದುವೆಯ ಕಾರ್ಡ್ ಕಳಿಸಿದಾಗ ನೀನು ಬರಲೇಬೇಕು.... ನಾನು ಯಾವುದೇ ನೆಪ ಕೇಳಲು ಸಿದ್ಧಳಿಲ್ಲ. ಸ್ವಲ್ಪ ಯೋಚಿಸು..... ನಿಕ್, ನಿನ್ನ ಭೇಟಿಯಿಂದ ಎಷ್ಟೊಂದು ಸಂತೋಷಗೊಳ್ಳಬಹು ದೆಂಬುದನ್ನು...''

ಆದರೆ, ನಮ್ಮಿಬ್ಬರಿಗೂ ಗೊತ್ತಿತ್ತು; ಮತ್ತೊಮ್ಮೆ ನಾನು ಇಷ್ಟೊಂದು ದೂರ ಬರುವುದು ಎಷ್ಟು ಕಷ್ಟ– ಎಂಬುದು.

''ಖುದಾ ಹಾಫಿಜ್....ಕಾರಮನ್'' ಎಂದೆ ನಾನು. ಕಂಠ ಗದ್ಗದಿತವಾಗಿತ್ತು.

''ಖುದಾ ಹಾಫಿಜ್....'' ಎನ್ನುತ್ತ ಆಕೆ, ಕಿಟಕಿಯಿಂದಲೇ ಬಹಳ ಹೊತ್ತಿನವರೆಗೆ ಕೈ ಬೀಸುತ್ತಲಿದ್ದಳು. ಟ್ಯಾಕ್ಸಿ ಬೆಳಗಿನ.... ಚುಮು ಚುಮು ಬೆಳಗಿನ... ಮಂದ ಬೆಳಕಿನಲ್ಲಿ ಏರ್‌ಪೋರ್ಟ್‌ದತ್ತ ಸಾಗಿತು.

ವಿಮಾನ ಹೊರಡಲು ಸಿದ್ಧವಾಗಿತ್ತು. ಕಸ್ಟಮ್ ಕೌಂಟರ್‌ದಿಂದ ನಾನು ಮರಳಿದಾಗ ಹಿಂದಿನಿಂದ ಡೋನ್ ಗಾರ್ಸಿಯಾ ಅವರ ಧ್ವನಿ ಕೇಳಿ ಬಂತು– ''ನಿಕ್, ನಾನು ಸಿಗಾರ್ ಖರೀದಿ ಮಾಡಲೇ....''

''ಸರಿ....ಡ್ಯಾಡಿ'' ಇದು ಅವರ ಮಗ ಹೋಜೆಯ ಧ್ವನಿಯಾಗಿತ್ತು.

ನಾನು ಅಚ್ಚರಿಯಿಂದ ಹೊರಳಿ ನೋಡಿದೆ. ಹೋಜೆ ಮುಗುಳ್ನಗುತ್ತ ನನ್ನತ್ತ ಬಂದ, ''ನೋಡಿದಿರಾ, ನಾವು ಹೇಗೆ ಸರಿಯಾದ ಸಮಯಕ್ಕೆ ಬಂದೆವು....''

''ಹೋಜೆ....'' ಎಂದೆ. ನನ್ನ ಎದೆ ಜೋರಾಗಿ ಬಡಿದುಕೊಳ್ಳುತ್ತಿತ್ತು. ಅಂಥದರಲ್ಲಿಯೇ ಕೇಳಿದೆ ''ನಿನ್ನ ಇನ್ನೊಂದು ಹೆಸರೇನು ?''

''ನಿಕ್....ಡ್ಯಾಡಿ ತುಂಬ ಪ್ರೀತಿಯಲ್ಲಿದ್ದಾಗ ನನ್ನನ್ನು ನಿಕ್ ಎಂದು ಕರೆಯುತ್ತಾರೆ. ಹಾಗಿಲ್ಲದಿದ್ದರೆ, ನಾನು ಸಾಮಾನ್ಯವಾಗಿ ಹೋಜೆ ಎಂದೇ ಕರೆಯಲ್ಪಡುತ್ತೇನೆ, ಆದರೆ ನೀವು ಹೀಗೇಕೆ ಕೇಳಿದಿರಿ... ?....''

''ಏನೂ ಇಲ್ಲ..... ಸುಮ್ಮನೆ....'' ಎನ್ನುತ್ತ ನಾನು ಅವನೊಂದಿಗೆ ಲಾಂಜದತ್ತ ಸಾಗಿದೆ. ಹೀಗೆ ಹೋಗುತ್ತಿರುವಾಗಲೇ ಮೆಲ್ಲಗೆ ಕೇಳಿದೆ–

''ನೀನು ಅಮೇರಿಕಾಕ್ಕೆ ಏನು ಮಾಡಲು ಹೋಗಿದ್ದೆ ?''

''ಹಾರ್ಟ್ ಸರ್ಜರಿಯಲ್ಲಿ ಸ್ಪೆಷಲೈಜ್ ಮಾಡಲು. ನಿಮಗೆ ಇದನ್ನೆಲ್ಲ ಹೇಳಿದ್ದೆ ಈ ಮುಂಚೆ....''

''ನೀನು ಎಂದಾದರೂ ನೀನು..... ನೀನು...''

''ಏನು ?....ಏನು ?..... ಏನಾಯ್ತು.....? ಏನೆಂಬುದನ್ನಾದರೂ....?''

''ಏನೂ ? ಇಲ್ಲ.....'' ನನ್ನ ದನಿ ಕುಂತು ಹೋಯಿತು. ಲೌಡ್ ಸ್ಪೀಕರ್ ಒಂದೇ ಸಮನೆ ಕೂಗಿಕೊಳ್ಳುತ್ತಲಿತ್ತು– ''ಪ್ಯಾನ್ ಅಮೇರಿಕನ್ ಪ್ರವಾಸಿಕರು.... ಪ್ಯಾನ್ ಅಮೇರಿಕನ್ ಪ್ರವಾಸಿಕರು...''

''ಅರೆ.... ಹೊರಡುವ ವೇಳೆ ಇಷ್ಟು ಜಲ್ದಿ ಬಂದು ಬಿಟ್ಟಿತೇ.... ?'' ಎನ್ನುತ್ತ ನಿಕ್ ಅಚ್ಚರಿಯಿಂದ ವಾಚ್ ನೋಡಿಕೊಂಡ. ಡೋನ್ ಗಾರ್ಸಿಯಾ ಸಿಗಾರ ಖರೀದಿಸಿ ಕೊಂಡು ಸಂತೋಷದಿಂದ ಮುಗುಳ್ನಗುತ್ತ ನನ್ನತ್ತ ಬಂದರು. ನಾನು, ತಂದೆ–ಮಗ ಇಬ್ಬರಿಗೂ ನನ್ನ ಕೃತಜ್ಞತೆ ಹೇಳಿದೆ ಹಾಗೂ ಅವರಿಗೆ 'ಖುದಾ ಹಾಫಿಜ್' ಎನ್ನುತ್ತ ಓಡಿ

ಹೋಗಿ ಪ್ರವಾಸಿಕರ ಸಾಲಿನಲ್ಲಿ ಸೇರಿಕೊಂಡೆ. ವಿಮಾನದಲ್ಲಿ ಕುಳಿತು ಕಿಟಕಿಯಿಂದ ನೋಡಿದೆ. ಡೋನ ಗಾರ್ಸಿಯಾ ಮತ್ತು ನಿಕ್, ಕೆಳಗೆ ಕೀಲಿಂಗ್‌ದ ಮೇಲೆ ಬಾಗಿ ಕೈವಸ್ತ್ರ ಅಲ್ಲಾಡಿಸುತ್ತಿದ್ದರು. ವಿಮಾನ ನೆಲಬಿಟ್ಟು ಮೇಲೆ ಏಳಲು ಆರಂಭಿಸಿತು....

ಇಲ್ಲಿಂದ ಬಹಳ ದೂರ... ಭಯಾನಕ ಬಿರುಗಾಳಿಯಿಂದ ಸುತ್ತುವರಿದಿರುವ ಪೂರ್ವಸಾಗರದಲ್ಲಿ, ಹಚ್ಚ-ಹಸಿರುಗಳಿಂದ ಕಂಗೊಳಿಸುವ ದ್ವೀಪ ಸಮೂಹವಿದೆ... ಅದು ಫಿಲಿಪಾಯ್ನ- ಎಂದು ಕರೆಸಿಕೊಳ್ಳುತ್ತದೆ. ಅದರ ಅತ್ಯಂತ ಸುಂದರ, ಹೊಳೆ ಹೊಳೆವ ರಾಜಧಾನಿ ಮನೀಲಾದ ಬಣ್ಣಗೆಟ್ಟ ಒಂದು ಓಣಿಯಲ್ಲಿ ಪುರಾತನ ದೊಡ್ಡದಾದ ಮನೆಯಲ್ಲಿ, ಅಗಲ ಮೂಗಿನ ಮತ್ತು ದೇವದೂತರಂಥ ಭಾವುಕ, ಮುಗ್ಧ ಮನಸ್ಸಿನ, ಫಿಲಿಫೆನೋ ತರುಣಿ ಇರುತ್ತಾಳೆ... ತನ್ನ ಮಗುವಿಗಾಗಿ, ಈಗಿನಿಂದಲೇ ಆಟಿಗೆಗಳನ್ನು ಸಂಗ್ರಹಿಸುತ್ತಿದ್ದಾಳೆ..... ತನ್ನ ದೇವರ ಮರುಳುವಿಕೆಯ ಪ್ರತೀಕ್ಷೆ ಯಲ್ಲಿದ್ದಾಳೆ... ಅವನ ಬಗ್ಗೆ ಅವಳಲ್ಲಿ ಅಪಾರ ವಿಶ್ವಾಸ, ನಂಬಿಕೆಯಿದೆ.....

# ಫೋಟೋಗ್ರಾಫರ್

ವಸಂತ ಮಾಸದ ಹೂಗಳಿಂದ ಸುತ್ತುವರಿದಿರುವ ಗೆಸ್ಟ್‌ಹೌಸ್, ಹಚ್ಚಹಸಿರು ಹೊದ್ದ ದಿನ್ನೆಯ ಮೇಲೆ ತುಂಬ ಶೋಭಾಯಮಾನವಾಗಿ ದೂರದಿಂದಲೇ ಕಾಣುತ್ತಿದೆ. ದಿನ್ನೆಯ ಕೆಳಗಡೆ ಗುಡ್ಡದ ತೊರೆಯೊಂದು ಮನೋಹರವಾಗಿ ಹರಿಯುತ್ತಲಿದೆ. ಅಂಕುಡೊಂಕಾದ ರಸ್ತೆಯೊಂದು ತೊರೆಯ ಬದಿಯಿಂದಲೇ ಹಾದು ಗೆಸ್ಟ್‌ಹೌಸಿನ ಗೇಟಿನವರೆಗೂ ತಲುಪುತ್ತದೆ. ಗೇಟಿನ ಹತ್ತಿರ ವಾಲರಸ್‌ನ ಮೀಸೆ ಹಾಗೆ ಮೀಸೆಹೊತ್ತ ಓರ್ವ ಫೋಟೋಗ್ರಾಫರ್ ತನ್ನ ಸಾಮಾನುಗಳೊಂದಿಗೆ, ಒಂದು ಕಬ್ಬಿಣದ ಕುರ್ಚಿಯ ಮೇಲೆ ಸುಮ್ಮನೆ ಕುಳಿತಿರುತ್ತಾನೆ. ಪ್ರಸಿದ್ಧವಲ್ಲದ ಬೆಟ್ಟದ ಈ ಊರು ಟೂರಿಸ್ಟ್ ಕ್ಷೇತ್ರದಲ್ಲಿಲ್ಲ. ಹೀಗಾಗಿ ಬಹಳ ಕಡಿಮೆ ಪ್ರವಾಸಿಗರು ಇಲ್ಲಿಗೆ ಬರುತ್ತಾರೆ. ಹನಿಮೂನಿಗಾಗಿ ಬರುವ ನವದಂಪತಿಗಳು ಅಥವಾ ಪ್ರವಾಸಿಗರು ಗೆಸ್ಟ್‌ಹೌಸ್ ತಲುಪಿದಲ್ಲಿ ಫೋಟೋಗ್ರಾಫರ್ ತುಂಬ ಆಶ ಹಾಗೂ ಧೈರ್ಯದೊಂದಿಗೆ, ತಾಳ್ಮೆಯಿಂದ ತನ್ನ ಕ್ಯಾಮರಾ ತೆಗೆದುಕೊಂಡು ತೋಟದಲ್ಲಿ ಶತಪಥ ಆರಂಭಿಸುತ್ತಾನೆ. ತೋಟದ ಮಾಲಿಯೊಂದಿಗೆ ಒಂದು ಒಡಂಬಡಿಕೆ ಇದೆ. ಗೆಸ್ಟ್‌ಹೌಸ್‌ನಲ್ಲಿ ಉಳಿದಿರುವ ಯಾವುದೋ ತರುಣಿಗೆ, ಬೆಳಗು ಹರಿಯುತ್ತಿರುವಂತೆ, ಹೂಗುಚ್ಛ ಒಯ್ಯುತ್ತಿರುವ ಸಮಯದಲ್ಲಿ, ಮಾಲಿ, ಫೋಟೋಗ್ರಾಪರ್‌ನಿಗೆ ಸನ್ನೆ ಮಾಡುತ್ತಾನೆ. ಹನಿಮೂನ್ ಗಾಗಿ ಬಂದಿರುವ ಜೋಡಿ ಉಪಹಾರದ ನಂತರ ಕೆಳಗೆ ತೋಟದಲ್ಲಿ ಬರುತ್ತಿರುವಂತೆ ಮಾಲಿ ಮತ್ತು ಫೋಟೋಗ್ರಾಫರ್ ಇಬ್ಬರೂ ಅವರಿಗಾಗಿ ಕಾಯುತ್ತಾರೆ.

ಫೋಟೋಗ್ರಾಫರ್ ತುಂಬ ಸಮಯದಿಂದ ಇಲ್ಲಿಯೇ ನೆಲೆಸಿದ್ದಾನೆ. ಆದರೆ ಅವನೇಕೆ ಬೇರೆ ಕಡೆ ಹೋಗಿ ತನ್ನ ಸ್ಟುಡಿಯೋ ತೆರೆಯುವುದಿಲ್ಲವೋ ಏನೋ. ಆತ ಇದೇ ಭಾಗಕ್ಕೆ ಸೇರಿದವನಾಗಿದ್ದಾನೆ. ತನ್ನ ಈ ಸುಂದರ ಪರಿಸರ, ಸರೋವರ, ಬೆಟ್ಟಗುಡ್ಡ ಬಿಟ್ಟು ಆತ ಹೋಗುವುದಾದರೂ ಎಲ್ಲಿಗೆ ? ಈ ಗೇಟಿನ ಬಳಿಯ ಕಟ್ಟೆಯ ಮೇಲೆ ಕುಳಿತು ಆತ ಬದಲಾಗುತ್ತಿರುವ ಈ ಜಗತ್ತಿನ ಹಲವು ಬಣ್ಣಗಳನ್ನು ನೋಡಿದ್ದಾನೆ. ಬಹಳ ಮೊದಲು ಇಲ್ಲಿಗೆ 'ಸಾಹೇಬ' ಜನ ಮಾತ್ರ ಬರುತ್ತಿದ್ದರು. ಇಂಗ್ಲಂಡದ ಜನ ಇಲ್ಲಿ ಚಹಾ ತೋಟದ ಮಾಲಿಕರಾಗಿದ್ದರು, ಅವರು ಹಾಗೂ ಫೆಲ್ಟ್ ಹ್ಯಾಟ ತೊಟ್ಟ, ಕಾಲೋನಿಯಲ್ ಸರ್ವಿಸ್‌ನಲ್ಲಿರುವ ಆಫೀಸರ್ಸ್ ಬರುತ್ತಿದ್ದರು. ಅವರ ಜೊತೆಗೆ ಅವರ ಮೇಮಸಾಬ ಹಾಗೂ ಬಾಬಾಗಳು ಕೂಡ ಇರುತ್ತಿದ್ದರು. ಇಡೀ ರಾತ್ರಿಯೆಲ್ಲ ಈ ಜನ ಕುಡಿಯುತ್ತಲೇ ಇರುತ್ತಿದ್ದರು. ಗ್ರಾಮೋಫೋನ್ ರಿಕಾರ್ಡ್‌ಗಳು ಒಂದೇ ಸಮ ಚೀರುತ್ತಿದ್ದವು. ಗೆಸ್ಟ್‌ಹೌಸಿನ ಕೆಳಗಿನ ಡ್ರಾಯಿಂಗ್ ರೂಮಿನಲ್ಲಿ ಡಾನ್ಸ ನಡೆಯುತ್ತಿತ್ತು. ಎರಡನೆಯ ಮಹಾಯುದ್ಧದ ಕಾಲದಲ್ಲಿ ಇಲ್ಲಿಗೆ ಅಮೇರಿಕನ್ನರೂ ಬರಲಾರಂಭಿಸಿದ್ದರು. ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿತು. ಆಗಾಗ ಒಬ್ಬರು ಇಬ್ಬರು ಪ್ರವಾಸಿ

ಜನ ಬರಲು ಆರಂಭವಾಯಿತು. ಸರಕಾರಿ ಅಧಿಕಾರಿಗಳು, ನವದಂಪತಿಗಳು, ಮಸ್ಸೂರಿಯ ಚಿತ್ರಕಲಾವಿದರು ಏಕಾಂತ ಬಯಸಿ ಬರಹತ್ತಿದರು. ಇಂಥ ಜನ ಮಳೆಗಾಲದ ಸಾಯಂಕಾಲವನ್ನು ಮತ್ತು ಸರೋವರ, ನಿರ್ಝರಿಣಿಯ ಮೇಲೆ ಬಿದ್ದ ಕಾಮನ ಬಿಲ್ಲಿನ ಮನೋಹರ ದೃಶ್ಯವನ್ನು ನೋಡಲು ಬಯಸುತ್ತಾರೆ. ಈ ಜನ ಶಾಂತಿ ಮತ್ತು ಪ್ರೇಮದ ಅನ್ವೇಷಣೆಯಲ್ಲಿ ತೊಡಗಿದವರಾಗಿರುತ್ತಾರೆ. ಜೀವನದಲ್ಲಿ ಅಸ್ತಿತ್ವ ದಲ್ಲಿಲ್ಲದುದನ್ನು ಹುಡುಕುತ್ತಾರೆ. ಏಕೆಂದರೆ ಸಾವು ಎಲ್ಲಿಯೇ ಹೋಗಲಿ ಮೃತ್ಯು, ನಾಶ ನಮ್ಮೊಂದಿಗೆ ಸದಾಕಾಲ ಇದ್ದೇ ಇರುತ್ತವೆ. ಇವೆರೆಡೂ ಸದಾ ನಮ್ಮ ಸಹಯಾತ್ರಿ ಯಾಗಿವೆ.

ಗೆಸ್ಟ್‌ಹೌಸಿನಲ್ಲಿ ಪ್ರವಾಸಿಗಳ ಬರು–ಹೋಗುವುದು ನಡೆದೇ ಇದೆ. ಫೋಟೋ ಗ್ರಾಫರನ ಕ್ಯಾಮರಾದ ಕಣ್ಣು ಇದನ್ನೆಲ್ಲ ನೋಡುತ್ತಲಿದೆ. ಆದರೂ ಮೌನವಾಗಿದೆ.

ಒಂದು ದಿನ ಸಾಯಂಕಾಲ ಓರ್ವ ತರುಣ ಮತ್ತು ಓರ್ವ ತರುಣಿ ಗೆಸ್ಟ್‌ಹೌಸಿಗ ಬಂದರು. ಇವರು ಹನಿಮೂನ್‌ಗಾಗಿ ಬಂದವರೆಂದು ತೋರುತ್ತಿರಲಿಲ್ಲ. ಆದರೆ ತುಂಬ ಉಲ್ಲಾಸ, ಗಂಭೀರತೆಯಿಂದ ತಮ್ಮ ತಮ್ಮ ಸಾಮಾನು ಎತ್ತಿಕೊಂಡು ಮೇಲಕ್ಕೆ ಹೋದರು. ಮಹಡಿ ಖಾಲಿಯಿತ್ತು. ಸ್ಟೇರಕೇಸ ಹತ್ತಿರವೇ ಡೈನಿಂಗಹಾಲ್, ಅದರ ನಂತರ ಮೂರು ಬೆಡ್‌ರೂಮ್‌ಗಳಿದ್ದವು. ''ಈ ಕೋಣೆ ನಾನು ತೆಗೆದುಕೊಳ್ಳುತ್ತೇನೆ'' ಎಂದ ತರುಣ ಮೊದಲ ರೂಮಿನೊಳಕ್ಕೆ ಹೋದ, ಅದು ಸರೋವರದತ್ತ ತೆರೆದುಕೊಂಡಿತ್ತು. ಹುಡುಗಿ ತನ್ನ ಛತ್ರಿ ಮತ್ತು ಓವರಕೋಟ ಆ ಕೋಣೆಯ ಒಂದು ಪಲ್ಲಂಗದ ಮೇಲೆ ಒಗೆದಿದ್ದಳು.

''ಎತ್ತಿಕೊ ನಿನ್ನ ಸಾಮಾನುಗಳನ್ನು '' ಎಂದು ತರುಣ ಅವಳಿಗೆ ಹೇಳಿದ.

''ಅಚ್ಛಾ... ಆಗಲಿ...'' ಎನ್ನುತ್ತ ಹುಡುಗಿ ತನ್ನ ಎರಡೂ ಸಾಮಾನು ಎತ್ತಿಕೊಂಡು ಸಿಟಿಂಗ್‌ರೂಮಿನಿಂದ ಹಾದು ಎರಡನೆಯ ಕೋಣೆಗೆ ಹೊರಟು ಹೋದಳು. ಅದರ ಹಿಂಬದಿಯಲ್ಲಿ ಒಂದು ಓಣಿಯಿತ್ತು. ಕೋಣೆಯ ದೊಡ್ಡ ದೊಡ್ಡ ಕಿಟಕಿಗಳಿಂದ ಹಿಂದಿನ ಗೋಡೆ ಮೆತ್ತುತ್ತಿದ್ದ ಗೌಂಡಿಗಳು, ಕೂಲಿಗಳು ಕಾಣಿಸುತ್ತಿದ್ದರು.

ಓರ್ವ ಬೇರಾ ಹುಡುಗಿಯ ಸಾಮಾನು ತೆಗೆದುಕೊಂಡು ಒಳಗೆ ಬಂದ ಹಾಗೂ ಕಿಟಕಿಯ ಪರದೆಗಳನ್ನು ಸರಿಮಾಡಿ ಹೊರಟು ಹೋದ. ಹುಡುಗಿ ಪ್ರಯಾಣದ ಬಟ್ಟೆಯನ್ನು ಬದಲಿಸಿ ಸಿಟಿಂಗ್ ರೂಮಿನಲ್ಲಿ ಬಂದಳು. ಹುಡುಗ ಅಗ್ಗಿಷ್ಟಿಕೆಯ ಹತ್ತಿರ ಆರಾಮಕುರ್ಸಿಯ ಮೇಲೆ ಕುಳಿತು ಏನೋ ಬರೆಯುತ್ತಲಿದ್ದ. ಅವನು ಕಣ್ಣೆತ್ತಿ ಹುಡುಗಿಯನ್ನು ನೋಡಿದ. ಹೊರಗೆ ದೊಡ್ಡದಾದ ಸರೋವರದ ಮೇಲೆ ಒಮ್ಮೆಲೇ ಗಾಢವಾದ ಕತ್ತಲೆ ಆವರಿಸತೊಡಗಿತ್ತು. ಅವಳು ಅಲ್ಲಿ ಬಾಗಿಲದ ಹತ್ತಿರ ನಿಂತು ತೋಟದಲ್ಲಿ ಕವಿದಿದ್ದ ಮಂಜನ್ನು ನೋಡತೊಡಗಿದಳು. ಕೆಲ ಹೊತ್ತಿನ ನಂತರ ಅವಳೂ ಒಂದು ಕುರ್ಸಿಯ ಮೇಲೆ ಕುಳಿತಳು. ಅವರು ಏನೆಲ್ಲ ಮಾತಾಡುತ್ತಿದ್ದರೊ ಏನೋ. ಫೋಟೋಗ್ರಾಫರ್ ಈಗಲೂ ಕೆಳಗೆ ಗೇಟಿನ ಹತ್ತಿರ ಕುಳಿತಿದ್ದ, ಅವನ ಕ್ಯಾಮರಾಕ್ಕೆ ಕಣ್ಣು ಉಂಟು ಆದರೆ ಕ್ಯಾಮರಾ ಶ್ರವಣ ಶಕ್ತಿ ಹೊಂದಿಲ್ಲ.

ಕೆಲ ಹೊತ್ತಿನ ನಂತರ ಅವರಿಬ್ಬರೂ ಊಟ ಮಾಡುವ ಹಾಲ್‌ಗೆ ಹೋದರು. ಕಿಟಕಿಗೆ ಹೊಂದಿರುವ ಮೇಜನ್ನು ನೋಡಿ ಕುಳಿತುಕೊಂಡರು. ಸರೋವರದ ಆಚೆ ದಡದಲ್ಲಿರುವ ಊರುಗಳಲ್ಲಿಯ ಲೈಟುಗಳ ಬೆಳಕು, ಸರೋವರದ ತೆರೆಗಳೊಂದಿಗೆ ಆಟವಾಡುತ್ತಿತ್ತು.

ಅಷ್ಟೊತ್ತಿಗೆ ಓರ್ವ ಯುರೋಪಿಯನ್ ಪ್ರವಾಸಿ ಕೂಡ ಗೆಸ್ಟ್‌ಹೌಸ್‌ಗೆ ಬಂದಿದ್ದ. ಆತ ಡೈನಿಂಗ್‌ಹಾಲ್‌ದ ಇನ್ನೊಂದು ಮೂಲೆಯಲ್ಲಿ ಕುಳಿತು ಪತ್ರ ಬರೆಯುತ್ತಲಿದ್ದ. ಕೆಲ ಪಿಕ್ಚರ್ ಪೋಸ್ಟ್‌ಕಾರ್ಡ್‌ಗಳು ಅವನೆದುರಿಗಿದ್ದ ಮೇಜಿನ ಮೇಲಿದ್ದವು.

ಈ ಪ್ರವಾಸಿ ತನ್ನ ಮನೆಗೆ ಪತ್ರ ಬರೆಯುತ್ತಿದ್ದಾನೆ, ''ನಾನೀಗ ರಹಸ್ಯಮಯ ಪೂರ್ವದ ಒಂದು ರಹಸ್ಯಮಯ ಪ್ರವಾಸಿ ಮಂದಿರದಲ್ಲಿದ್ದೇನೆ. ಕೆಂಪು ಸೀರೆ ಉಟ್ಟುಕೊಂಡಿರುವ ಓರ್ವ ರಹಸ್ಯಮಯ ಹಿಂದೂಸ್ತಾನಿ ತರುಣಿ ನನ್ನೆದುರಿಗೆ ಕುಳಿತಿದ್ದಾಳೆ. ತುಂಬಾ ರೊಮ್ಯಾಂಟಿಕ್ ವಾತಾವರಣ ಇಲ್ಲಿದೆ....'' ತರುಣಿ ಸುಮ್ಮನೆ ಏನೋ ಅಂದಳು. ಅದಕ್ಕೆ ಅವಳ ಜೊತೆಗಾರ ನಕ್ಕ. ಊಟವಾದ ನಂತರ ಅವರಿಬ್ಬರೂ ಮತ್ತೆ ಸಿಟಿಂಗ್ ರೂಮಿಗೆ ಬಂದರು. ತರುಣ ಈಗ ಅವಳಿಗೆ ಏನನ್ನೋ ಓದಿ ಹೇಳುತ್ತಿದ್ದ. ರಾತ್ರಿ ಗಾಢವಾಗ ತೊಡಗಿತ್ತು. ಆ ಕೂಡಲೇ ತರುಣಿಗೆ ಸೀನು ಬರತೊಡಗಿದವು. ಅವಳು ಸೀನುತ್ತಲೇ ಹೇಳಿದಳು....''ಇನ್ನು ಮಲಗಬೇಕು.''

''ನೀನು ನೆಗಡಿಯ ಔಷಧ ಕುಡಿಯುವುದನ್ನು ಮರೆಯಬೇಡ'' ಎಂದು ತರುಣ ಕಳಕಳಿಯಿಂದ ಹೇಳಿದ.

''ಹಾ !...ಶುಭ ರಾತ್ರಿ....'' ಎನ್ನುತ್ತ ತರುಣಿ ತನ್ನ ಕೋಣೆಯೊಳಗೆ ಹೋದಳು. ಹಿಂದಿನ ಓಣಿಯ ತುಂಬ ಕತ್ತಲೆ ಆವರಿಸಿತ್ತು. ಕೋಣೆಯಲ್ಲಿ ಅಪಾರ ಶಾಂತಿ, ತಂಪು ಹಾಗೂ ಸುಖ ನೆಲೆಸಿತ್ತು. ಜೀವನ ಅಪಾರ ಶಾಂತಿಪೂರ್ಣ ಮತ್ತು ಸುಖಮಯ ವಾಗಿತ್ತು. ತರುಣಿ ಬಟ್ಟೆ ಬದಲಿಸಿ, ಡ್ರೆಸಿಂಗ್ ಟೇಬಲಿನ ಡ್ರಾ ತೆರೆದು ಔಷಧದ ಬಾಟಲಿ ತೆಗೆದುಕೊಳ್ಳುತ್ತಿರುವಂತೆ ಬಾಗಿಲ ಬಡಿದ ಸಪ್ಪಳವಾಯಿತು. ಆಕೆ ತನ್ನ ನೈಟಿ ತೊಟ್ಟುಕೊಂಡು ಬಾಗಿಲ ತೆರೆದಳು. ಎದುರಿಗೆ ತರುಣ ನಿಂತಿದ್ದ, ಕೊಂಚ ಹೆದರಿ ಕೊಂಡವನಂತೆ ಕಾಣುತ್ತಿದ್ದ. ''ನನಗೂ ವಿಪರೀತ ಕೆಮ್ಮು ಬರುತ್ತಲಿದೆ'' ಎಂದು ಹೇಳಿದ.

''ಅಚ್ಛಾ.... ಹೌದೇನು..!'' ಎನ್ನುತ್ತ ತರುಣಿ ಔಷಧದ ಬಾಟಲಿ ಮತ್ತು ಚಮಚ ಅವನಿಗೆ ಕೊಟ್ಟಳು. ಚಮಚ ಅದೇಕೋ ತರುಣನ ಕೈಯಿಂದ ಜಾರಿ ಕೆಳಗೆ ಬಿತ್ತು. ಅವನು ಬಾಗಿ ಚಮಚ ಎತ್ತಿಕೊಂಡು ತನ್ನ ಕೋಣೆಯತ್ತ ಹೊರಟು ಹೋದ. ತರುಣಿ ಲೈಟ್ ಆರಿಸಿ ಮಲಗಿದಳು.

ಬೆಳಗ್ಗೆ ಅವಳು ಉಪಹಾರಕ್ಕಾಗಿ ಡೈನಿಂಗ್ ಹಾಲ್‌ಗೆ ಹೋದಳು. ಸ್ಟೇರಕೇಸ್ ಹೊಂದಿರುವ ಹಾಲ್‌ನಲ್ಲಿ ಹೂಗಳು ಸುಗಂಧ ಬೀರುತ್ತಿದ್ದವು. ಹಿತ್ತಾಳೆಯ ದೊಡ್ಡ ದೊಡ್ಡ ಹೂ ಕುಂಡಗಳು ಲಕಲಕ ಹೊಳೆಯುತ್ತಿದ್ದವು. ಹೊಳೆಯುತ್ತಿದ್ದ ನೆಲದ ಮೇಲೆ ಸಾಲಾಗಿ ಅವುಗಳನ್ನಿರಿಸಲಾಗಿತ್ತು. ಅವುಗಳಲ್ಲಿ ಆಗ ತಾನೇ ಹರಿದು ತಂದ ತಾಜಾ

ಹೂಗಳು ಶೋಭಿಸುತ್ತಿದ್ದವು. ಹೊರಗೆ ಸೂರ್ಯ ಸರೋವರದ ತುಂಬ ಬೆಳಕನ್ನು ತುಂಬಿದ್ದ. ಹಳದಿ ಹಾಗೂ ಬಿಳಿಯ ಪಾತರಗಿತ್ತಿಗಳು ಹಸಿರು ಹುಲ್ಲಿನ ಮೇಲೆ ಅತ್ತಿತ್ತ ಚಕ್ಕಂದವಾಗಿ ಹಾರಾಡುತ್ತಿದ್ದವು. ಕೆಲ ಹೊತ್ತಿನ ನಂತರ ತರುಣ ಸ್ಟೇರಕೇಸಿನ ಮೇಲೆ ನಗುತ್ತ ಪ್ರತ್ಯಕ್ಷನಾದ. ಅವನ ಕೈಯಲ್ಲಿ ಗುಲಾಬಿ ಹೂಗಳ ಗುಚ್ಛವಿತ್ತು.

''ಮಾಲಿ ಕೆಳಗಿದ್ದಾನೆ. ನಿನಗಾಗಿ ಅವನು ಈ ಸುಂದರ ಪುಷ್ಪ ಗುಚ್ಛ ಕಳಿಸಿದ್ದಾನೆ'' ಎನ್ನುತ್ತ, ರೂಮಿನಲ್ಲಿ ಬಂದು ನಗು ನಗುತ್ತ, ಆ ಗುಚ್ಛವನ್ನು ಮೇಜಿನ ಮೇಲಿರಿಸಿದ.

ತರುಣೆ ಗುಚ್ಛದಿಂದ ಒಂದು ಗುಲಾಬಿ ತೆಗೆದು ತನ್ನ ಜಡೆಯಲ್ಲಿ ಶೃಂಗರಿಸಿಕೊಂಡಳು. ನಂತರ ಪೇಪರ ಓದುವುದರಲ್ಲಿ ಮಗ್ನಳಾದಳು.

''ಓರ್ವ ಫೋಟೋಗ್ರಾಫರ್ ಕೂಡ ಕೆಳಗೆ ಸುಳಿದಾಡುತ್ತಿದ್ದಾನೆ. ಅವನು ತುಂಬ ವಿನಯದಿಂದ ನಿನ್ನ ಬಗ್ಗೆ ನನ್ನಲ್ಲಿ ವಿಚಾರಿಸಿ ಕೇಳಿದ–''ಆಕೆ ಇಂಥ ಫಿಲ್ಮ್‌ಸ್ಟಾರ್ ತಾನೇ ?'' ಎಂದ. ತರುಣ ಕುರ್ಚಿಯ ಮೇಲೆ ಕುಳಿತು ಚಹಾ ಸಿದ್ದಗೊಳಿಸತೊಡಗಿದ.

ತರುಣೆ ಫಕ್ಕನೆ ನಕ್ಕಳು. ಆಕೆ ಹೆಸರಾಂತ ನರ್ತಕಿಯಾಗಿದ್ದಳು. ಆದರೆ ಆ ಸ್ಥಳದಲ್ಲಿ ಯಾರಿಗೂ ಆಕೆ ಯಾರೆಂಬುದು, ಆಕೆಯ ಹೆಸರು, ದೆಸೆ ಕೂಡ ಗೊತ್ತಿರಲಿಲ್ಲ. ತರುಣ ಆಕೆಗಿಂತ ಪ್ರಸಿದ್ದನಾದ ಸಂಗೀತ ಕಲಾವಿದನಾಗಿದ್ದ. ಆದರೆ ಇಲ್ಲಿ ಯಾರೂ ಅವನನ್ನು ಗುರುತಿಸುವವರು ಇರಲಿಲ್ಲ. ಅವರಿಬ್ಬರಿಗೂ ಈ ಅನಾಮಿಕ, ಅಪರಿಚಿತ, ಪ್ರಶಾಂತ ಸ್ಥಳ ತುಂಬಾ ಹಿಡಿಸಿತ್ತು.

ಡೈನಿಂಗ್‌ಹಾಲಿನ ಇನ್ನೊಂದು ಕೂನೆಯಲ್ಲಿ ಕುಳಿತು ಉಪಹಾರ ಮಾಡುತ್ತಿದ್ದ ಯುರೋಪಿಯನ್ ಯಾತ್ರಿ, ಕಣ್ಣೆತ್ತಿ ಅವರಿಬ್ಬರನ್ನೂ ನೋಡಿದ ಹಾಗೂ ಮುಗುಳ್ನಕ್ಕ. ಅವನು ಕೂಡ ಅವರ ಪ್ರಶಾಂತ ಸುಖಗಳಲ್ಲಿ ಭಾಗಿಯಾಗಿದ್ದ. ಉಪಹಾರದ ನಂತರ ಅವರಿಬ್ಬರೂ ಕೆಳಗೆ ಹೋದರು ಹಾಗೂ ತೋಟದ ಬೇಲಿಯ ಸಮೀಪವಿದ್ದ ಗುಲ್ ಮೋಹರ ಗಿಡದ ಕೆಳಗೆ ನಿಂತು, ಪ್ರಶಾಂತವಾಗಿದ್ದ ಸರೋವರವನ್ನು ನೋಡತೊಡಗಿದರು. ಫೋಟೋಗ್ರಾಫರ್ ಒಮ್ಮೆಲೇ ಅಲ್ಲಿಗೆ ನುಗ್ಗಿ ತನ್ನ ತಲೆಯ ಮೇಲಿನ ಟೊಪ್ಪಿಗೆ ತೆಗೆದು ಕೊಂಚ ಬಾಗಿ ಹೇಳಿದ–''ಫೋಟೋಗ್ರಾಫ್ ಲೇಡಿ?''

ತರುಣೆ ವಾಚ್ ನೋಡುತ್ತ ಹೇಳಿದಳು–''ನಮಗೀಗಲೇ ಹೊರಗ ಹೋಗ ಬೇಕಾಗಿದೆ. ಫೋಟೋಕ್ಕೆ ನಿಂತರೆ ಹೊತ್ತಾಗುತ್ತದ.''

''ಲೇಡಿ....'' ಎನ್ನುತ್ತ ಫೋಟೋಗ್ರಾಫರ್ ಒಂದು ಕಾಲು ಕಟ್ಟೆಯ ಮೇಲಿಡುತ್ತ ಒಂದು ಕೈ ಚಾಚಿ ಹೊರ ಜಗತ್ತಿನ ಕಡೆ ತೋರುತ್ತ ಮತ್ತ ಹೇಳಿದ– ''ಹೊರಗ ಜೀವನದ ರಣಭೂಮಿಯಲ್ಲಿ ಘನಘೋರ ಯುದ್ಧ ನಡೆದಿದ. ನನಗೆ ಗೊತ್ತು, ಈ ಘನ ಘೋರ ಪರಿಸ್ಥಿತಿಯಿಂದ ಹೊರ ಬಂದು, ನೀವಿಬ್ಬರು ಸಂತಸದ ಕೆಲ ಕ್ಷಣಗಳನ್ನು ಸೂರೆಗೊಳ್ಳ ಬೇಕೆಂಬ ಹವಣಿಕೆಯಲ್ಲಿದ್ದೀರಿ–ಎಂಬುದು. ನೋಡಿ, ಈ ಸರೋವರದ ಮೇಲಿರುವ ಕಾಮನಬಿಲ್ಲು ಕೆಲವೇ ಕ್ಷಣಗಳಲ್ಲಿ ಮಾಯವಾಗುತ್ತದ.... ನಾನು ನಿಮ್ಮ ಸಮಯ ಹೆಚ್ಚು ತೆಗೆದುಕೊಳ್ಳುವುದಿಲ್ಲ...ಇತ್ತ ಬನ್ನಿ...''

''ಈ ಫೋಟೋಗ್ರಾಫರ್ ತುಂಬ ವಾಚಾಳಿಯೆಂದು ತೋರುತ್ತದೆ...'' ಎಂದು ತರುಣಿ ತನ್ನ ಸಂಗಾತಿಗೆ ಹೇಳಿದಳು. ಮಾಲಿ, ತನ್ನ ಸರದಿಗಾಗಿ ಕಾಯುತ್ತ ನಿಂತಿದ್ದವನು ಬೇರೊಂದು ಗಿಡದ ಹಿಂದಿನಿಂದ ಒಮ್ಮೆಲೆ ನುಗ್ಗಿ ತರುಣಿಯ ಕೈಗೆ ಪುಷ್ಪಗುಚ್ಛ ನೀಡಿದ. ತರುಣಿ ಅಪಾರ ಹರ್ಷದಿಂದ ನಗೆ ಬುಗ್ಗೆ ಚಿಮ್ಮಿದಳು.

ಆಕೆ ಮತ್ತು ಆಕೆಯ ಸಂಗಾತಿ ಇಬ್ಬರೂ ಸುಂದರವಾದ ಪಾರ್ವತಿಯ ಮೂರ್ತಿಯ ಪಕ್ಕದಲ್ಲಿ ಹೋಗಿ ನಿಂತರು. ತರುಣಿಯ ಕಣ್ಣುಗಳಿಗೆ ಬಿಸಿಲು ಬಡಿಯುತ್ತಲಿತ್ತು. ಹೀಗಾಗಿ ಅವಳ ಮುಗುಳ್ನಗುತ್ತಿದ್ದ ಕಣ್ಣುಗಳು ಕೊಂಚ ಮುದುಡಿ ಕೊಂಡವು.

ಕ್ಲಿಕ್....ಕ್ಲಿಕ್....ಕ್ಲಿಕ್....ಫೋಟೋ ತೆಗೆಯಲಾಯಿತು.

''ಫೋಟೋಗಳು ತಮಗೆ ಸಾಯಂಕಾಲದ ಹೊತ್ತಿಗೆ ಸಿಗುತ್ತವೆ....ಥ್ಯಾಂಕ್ಯೂ ಲೇಡಿ....ಥ್ಯಾಂಕ್ಯೂ ಸರ್....'' ಎಂದ ಫೋಟೋಗ್ರಾಫರ್ ಕೊಂಚ ಬಾಗಿ. ತರುಣಿ ಮತ್ತು ಆಕೆಯ ಸಂಗಾತಿ ಕಾರಿನತ್ತ ಹೊರಟು ಹೋದರು.

ತಿರುಗಾಡಿ, ಅವರಿಬ್ಬರೂ ಸಾಯಂಕಾಲದ ಹೊತ್ತಿಗೆ ಮರಳಿದರು. ಸಂಧ್ಯಾ ಕಾಲದ, ದಾಳಿಂಬೆ ಬಣ್ಣದ ಬೆಳಕಿನಲ್ಲಿ ಬಹಳ ಹೊತ್ತು ಹೊರಗೆ ತೋಟದಲ್ಲಿಯ ಹಸಿರು ಹುಲ್ಲಿನ ಕುತನಿಯ ಮೇಲಿದ್ದ ಕುರ್ಚಿಯ ಮೇಲೆ ಕುಳಿತಿದ್ದರು. ಮಂಜು ಕವಿಯ ತೊಡಗಿದಂತೆ ಅವರು ಅಲ್ಲಿಂದೆದ್ದು ಕೆಳಗಿನ ಮಾಳಿಗೆಯಲ್ಲಿರುವ ವಿಶಾಲವಾದ, ಶಾಂತವಾದ ಡ್ರಾಯಿಂಗ್ ರೂಮಿನಲ್ಲಿ ಹೋದರು. ಅಲ್ಲಿ ಮಂದಮಂದವಾಗಿ ಲೈಟುಗಳು ಉರಿಯುತ್ತಿದ್ದವು. ಏನಲ್ಲ ಮಾತಾಡುತ್ತಿದ್ದರೋ ಅವರು, ಮಾತು ಮುಗಿಯುತ್ತಿರಲೇ ಇಲ್ಲ. ಊಟದ ಹೊತ್ತಿಗೆ ಅವರಿಬ್ಬರೂ ಮೇಲಕ್ಕೆ ಹೋದರು. ಚುಮು ಚುಮು ಬೆಳಿಗ್ಗೇನೇ ಅವರು ಮರಳಿ ಹೋಗಲಿದ್ದರು. ತಮ್ಮ ಮಾತುಗಳಲ್ಲಿ ಮಗ್ನರಾಗಿದ್ದ ಅವರಿಗೆ ಫೋಟೋಗ್ರಾಫರ್‌ನ ಬಗ್ಗೆ ಆಗಲಿ, ಅವನು ತೆಗೆದ ಫೋಟೋಗಳ ಬಗ್ಗೆಯಾಗಲಿ ಯಾವುದೂ ನೆನಪಿರಲಿಲ್ಲ.

ಬೆಳಗ್ಗೆ ತರುಣಿ ಇನ್ನೂ ತನ್ನ ಕೋಣೆಯಲ್ಲಿಯೇ ಇದ್ದಳು. ಆಗ ಬೇರಾ ಬಂದು ಒಂದು ಕವ್ಹರ್ ಕೊಟ್ಟು ''ಫೋಟೋಗ್ರಾಫರ್ ಸಾಬ ರಾತ್ರಿ ಇದನ್ನು ನಿಮಗೆ ತಲುಪಿಸಲು ಕೊಟ್ಟಿದ್ದರು'' ಎಂದು ಹೇಳಿದ.

''ಅಚ್ಛಾ...ಸರಿ...ಆ ಎದುರಿನ ಟೇಬಲ್ಲಿನ ಡ್ರಾದಲ್ಲಿರಿಸು...'' ಎಂದು ಆ ತರುಣಿ ನಿರ್ಲಕ್ಷ್ಯದಿಂದಲೇ ಹೇಳಿ ತಲೆ ಬಾಚಿಕೊಳ್ಳತೊಡಗಿದಳು.

ಉಪಹಾರದ ನಂತರ ಸಾಮಾನುಗಳನ್ನು ಕಟ್ಟುವುದರಲ್ಲಿ ಅವಳು ತೊಡಗಿದ್ದ ರಿಂದ, ಆ ಡ್ರಾ ತೆಗೆದು ನೋಡುವುದನ್ನು ಮರೆತೇ ಬಿಟ್ಟಿದ್ದಳು. ಹೋಗುವಾಗ ಖಾಲಿಯಾಗಿದ್ದ ಕೋಣೆಯನ್ನು ಒಮ್ಮೆ ಕಣ್ಣಾಡಿಸಿ ನೋಡಿದಳು, ಹಾಗೂ ಅಲ್ಲಿಂದ ಹೊರಟು ಗೆಸ್ಟ್ ಹೌಸಿನಿಂದ ಹೊರ ಬಂದು ಕಾರಿನಲ್ಲಿ ಕುಳಿತಳು. ಆಗಲೇ ಬಂದು ಕಾರಿನಲ್ಲಿ ಕುಳಿತಿದ್ದ ತರುಣ ಕಾರು ಸ್ಟಾರ್ಟ ಮಾಡಿದ ಹಾಗೂ ಗೇಟಿನಿಂದ

ಹೊರನಡೆದರು. ಫೋಟೋಗ್ರಾಫರ್ ಕಟ್ಟೆಯ ಮೇಲಿಂದ ಎದ್ದು ಟೊಪ್ಪಿಗೆ ತೆಗೆದ, ಪ್ರವಾಸಿಗರು ಕೈ ಅಲ್ಲಾಡಿಸುತ್ತ ಮುಗುಳ್ನಕ್ಕರು. ಕಾರು ಎತ್ತರದ ದಿನ್ನೆಯಿಂದ ಕೆಳಗಿಳಿಯತೊಡಗಿತು.

ಆ ವಾಲರಸ್‌ನಂಥ ಮೀಸೆಯುಳ್ಳ ಫೋಟೋಗ್ರಾಪರ್ ಈಗ ತುಂಬ ಮುದುಕನಾಗಿದ್ದ. ಮೊದಲಿನಂತೆಯೇ ಈಗಲೂ ಗೆಸ್ಟ್‌ಹೌಸಿನ ಗೇಟಿನ ಹತ್ತಿರ ಕಬ್ಬಿಣದ ಕುರ್ಸಿ ಹಾಕಿ ಕೊಂಡು ಕುಳಿತಿರುತ್ತಾನೆ ಹಾಗೂ ಪ್ರವಾಸಿಗರ ಫೋಟೋ ತೆಗೆಯುತ್ತಿರು ತ್ತಾನೆ. ಈಗ ಹೊಸ ಏರ್‌ಸರ್ವಿಸ್ ಆರಂಭವಾಗಿರುವುದರಿಂದ ಪ್ರವಾಸಿಗರು ಇಲ್ಲಿಗೆ ಹೆಚ್ಚಿನ ಸಂಖ್ಯೆಯಲ್ಲಿ ಬರತೊಡಗಿದ್ದಾರೆ.

ಈಗ ತಾನೇ ಏರಪೋರ್ಟದಿಂದ ಬಂದ ಟೂರಿಸ್ಟ್ ಕೋಚ್ ಗೇಟಿನ ಒಳಗೆ ಬಂದಿದೆ. ಅದರೊಳಗಿಂದ ಕೇವಲ ಓರ್ವ ಮಹಿಳೆ ಮಾತ್ರ ತನ್ನ ಅಟ್ಯೆಚಿಕೇಸ್ ತೆಗೆದುಕೊಂಡು ಹೊರಗೆ ಬಂದು ಕೂಡಲೇ ಅಚ್ಚರಿಯಿಂದ ಫೋಟೋಗ್ರಾಫರನನ್ನು ನೋಡಿದಳು. ಫೋಟೋಗ್ರಾಫರ ಕೋಚ್ ಬರುವುದನ್ನು ಕಂಡು ಮೊದಲೇ ಎದ್ದು ನಿಂತಿದ್ದ. ನವತಾರುಣ್ಯದಿಂದ ಸುಶೋಭಿಸುವ ಸುಂದರಿಯೋರ್ವಳ ಬದಲು ಓರ್ವ ಮಧ್ಯ ವಯಸ್ಸಿನ ಹಣ್ಣುಮಗಳನ್ನು ಕಂಡು ನಿರಾಶೆಯಿಂದ ಮತ್ತೆ ಮರಳಿ ಹೋಗಿ ತನ್ನ ಕುರ್ಸಿಯ ಮೇಲೆ ಕುಳಿತುಕೊಂಡ.

ಬಂದ ಮಹಿಳೆ ಗೆಸ್ಟ್‌ಹೌಸಿನ ಕಚೇರಿಯಲ್ಲಿದ್ದ ರಿಜಿಸ್ಟರದಲ್ಲಿ ತನ್ನ ಹೆಸರು ವಿಳಾಸ ಎಲ್ಲ ಬರೆದಳು ಹಾಗೂ ಮೇಲೆ ಹೋದಳು. ಗೆಸ್ಟ್‌ಹೌಸ್ ನಿರ್ಜನವಾಗಿತ್ತು. ಪ್ರವಾಸಿಗರ ಒಂದು ಟೋಳಿ ಈಗ ತಾನೇ ಇಲ್ಲಿಂದ ಮರಳಿತು. ಬೇರಾ ಕೋಣೆ ಗಳನ್ನೆಲ್ಲ ಸ್ವಚ್ಛಗೊಳಿಸಿ ಮತ್ತೆ ಬರುವ ಪ್ರವಾಸಿಗರಿಗಾಗಿ ಸಿದ್ಧಗೊಳಿಸಿದ್ದ. ಹಾಲ್‌ನಲ್ಲಿ ಸಾಲಾಗಿಟ್ಟಿದ್ದ ಹೊಳೆಯುವ ತಾಮ್ರದ ಹೂಕುಂಡಗಳು ತಾಜಾ ಹೂಗಳ ಪ್ರತೀಕ್ಷೆಯಲ್ಲಿದ್ದವು.

ಡ್ರಾಯಿಂಗ್ ಹಾಲ್‌ದಲ್ಲಿ ಕಿಟಕಿಯ ಸಮೀಪವಿದ್ದ ಟೇಬಲ್ಲಿನ ಮೇಲೆ ತೊಳೆದಿಟ್ಟಿದ್ದ ಫೋರ್ಕ್, ಚಾಕು, ಚೂರಿ ಲಕಲಕ ಹೊಳೆಯುತ್ತಿದ್ದವು. ಒಳಗೆ ಬಂದ ಮಹಿಳೆ ನಡುವಿನ ಬೆಡ್‌ರೂಮಿನಿಂದ ಹಾದು ಹಿಂದಿನ ಕೋಣೆಯೊಳಕ್ಕೆ ಹೋದಳು. ತನ್ನ ಸಾಮಾನು ಇರಿಸಿ ಹೊರಗೆ ಬಂದು ಸರೋವರದ ಚೆಲುವ ವೀಕ್ಷಿಸತೊಡಗಿದಳು. ಚಹಾ ಕುಡಿದ ನಂತರ ಆಕೆ ಸಿಟಿಂಗ್ ರೂಮಿನಲ್ಲಿ ಬಂದು ಕುಳಿತಳು. ಯಾರೊಬ್ಬರೂ ಇರಲಿಲ್ಲ ಅಲ್ಲಿ. ರಾತ್ರಿಯಾದಾಗ ಹೋಗಿ ತನ್ನ ಕೋಣೆಯಲ್ಲಿ ಮಲಗಿಕೊಂಡಳು.

ಹಿಂದಿನ ಓಣಿಯಿಂದ ಕೆಲ ಪ್ರತಿಬಿಂಬಗಳು ಕಾಣಿಸಿಕೊಂಡವು. ಆಕೆ ಎದ್ದು ಕಿಟಕಿಯ ಹತ್ತಿರ ಹೋಗಿ ನೋಡಿದಳು. ಅಲ್ಲಿ ಕೂಲಿಗಳು ದಿನವೆಲ್ಲ ದುಡಿದು ಗೋಡೆಗೆ ಆನಿಸಿಟ್ಟಿದ್ದ ನಿಚ್ಚಣಿಕೆಯನ್ನು ಅಲ್ಲಿಯೇ ಬಿಟ್ಟು ಹೋಗಿದ್ದರು. ಓಣಿ ಕೂಡ ನಿರ್ಜನವಾಗಿತ್ತು. ಆಕೆ ಮತ್ತೆ ಪಲ್ಲಂಗದ ಮೇಲೆ ಮಲಗಿದಳು. ಬಂದು ಮಲಗಿದ ಕೆಲ ಹೊತ್ತಿನ ನಂತರ ಯಾರೋ ಬಾಗಿಲು ಬಡಿದ ಸದ್ದಾಯಿತು. ಆಕೆ ಎದ್ದು ಬಾಗಿಲು

ತೆರೆದಳು. ಆದರೆ ಹೊರಗೆ ಯಾರೂ ಇರಲಿಲ್ಲ. ಸಿಟಿಂಗ್ ರೂಮಂತೂ ಹಾಳು ಹಾಳು ಹೊಡೆಯುತ್ತಿತ್ತು ಜನರಿಲ್ಲದೆ. ಆಕೆ ಮತ್ತೆ ಬಂದು ಮಲಗಿದಳು, ಕೋಣೆ ತುಂಬ ತಣ್ಣಗಿತ್ತು.

ಬೆಳಗ್ಗೆ ಎದ್ದು ಆಕೆ ತನ್ನ ಸಾಮಾನು ಕಟ್ಟುತ್ತಿರುವಾಗ ಡ್ರೆಸಿಂಗ್ ಟೇಬಲ್ಲಿನ ಡ್ರಾ ತೆರೆದಳು. ಅದರಲ್ಲಿ ಹಾಸಿದ್ದ ಹಳದಿ ಪೇಪರಿನ ಕೆಳಗೆ ಒಂದು ಕವ್ಹರಿನ ಚುಂಗು ಕಾಣಿಸಿಕೊಂಡಿತು. ಅದರ ಮೇಲೆ ಅವಳ ಹೆಸರಿತ್ತು. ಆ ಮಹಿಳೆ ಕೊಂಚ ಅಚ್ಚರಿಯಿಂದಲೇ ಕವ್ಹರ್ ಹೊರಗೆ ತೆಗೆದು ಕೊಂಡಳು.

ಒಂದು ಜೊಂಡಿಗ ಕವ್ಹರಿನ ಕೆಳಗಿಂದ ಹಾದು ಮಹಿಳೆಯ ಬೆರಳಿನ ಮೇಲೆ ಬಂತು. ಆಗ ಆಕೆ ಕೈ ಜಾಡಿಸಿದಳು. ಆಗ ಕವ್ಹರೊಳಗಿಂದ ಒಂದು ಫೋಟೋ ಕೆಳಗೆ ಬಿತ್ತು. ಅದರಲ್ಲಿ ಓರ್ವ–ಅತ್ಯಂತ ನವ ಯೌವ್ವನದಿಂದ ತುಂಬಿ ತುಳುಕುತ್ತಿದ್ದ ತರುಣಿ ಅಮರ ಸುಂದರಿ ಪಾರ್ವತಿಯ ಪ್ರತಿಮೆಯ ಹತ್ತಿರ ನಿಂತು ಮುಗುಳ್ನಗುತ್ತಿದ್ದಾಳೆ. ಫೋಟೋದ ಕಾಗದ ಹಳದಿ ವರ್ಣಕ್ಕೆ ಇಳಿದಿತ್ತು. ಮಹಿಳೆ ಮೌನವಾಗಿ ಕೆಲ ಕ್ಷಣಗಳವರೆಗೆ ಆ ಚಿತ್ರವನ್ನೇ ನೋಡುತ್ತಲಿದ್ದು, ನಂತರ ಅದನ್ನು ತನ್ನ ಬ್ಯಾಗಿನಲ್ಲಿರಿಸಿ ಕೊಂಡಳು.

ಬೇರಾ ಹೊರಗಿನಿಂದಲೇ ''ಏರಪೋರ್ಟಗೆ ಹೋಗುವ ಕೋಚ ಸಿದ್ಧವಾಗಿದೆ'' ಎಂದು ಕೂಗಿದ. ಮಹಿಳೆ ಕೆಳಗೆ ಬಂದಳು. ಫೋಟೋಗ್ರಾಫರ್ ಪ್ರವಾಸಿಗರಿಗಾಗಿ ತೋಟದಲ್ಲಿ ಅತ್ತಿತ್ತ ಹುಡುಕುತ್ತಿದ್ದ.

ಅವನ ಹತ್ತಿರ ಹೋಗಿ ಈ ಮಹಿಳೆ ನಿಸ್ಸಂಕೋಚವಾಗಿ–''ವಿಚಿತ್ರವಾಗಿದೆ, ಕಳೆದ ಹದಿನೈದು ವರ್ಷಗಳಲ್ಲಿ ಅದೆಷ್ಟೋ ಸಲ ಡ್ರೆಸಿಂಗ್ ಟೇಬಲ್ ಸ್ವಚ್ಛಗೊಳಿಸಿರ ಬಹುದು. ಆದರೂ ಈ ಫೋಟೋ ಪೇಪರಿನ ಬುಡದಲ್ಲಿ ಹೀಗೆಯೇ ಸುರಕ್ಷಿತವಾಗಿದೆ'' ಎಂದು ಹೇಳಿದಳು. ಮತ್ತೆ ಅವಳು ಬೇಸರದ ಧ್ವನಿಯಲ್ಲಿ–''ಇಲ್ಲಿಯ ವ್ಯವಸ್ಥೆ ಎಷ್ಟೊಂದು ಕೆಟ್ಟು ಹೋಗಿದೆ. ಕೋಣೆಯಲ್ಲಿ ಎಲ್ಲಿ ನೋಡಿದರೂ ಕಾಕ್ರೋಚ್... ಕಾಕ್ರೋಚ್...'' ಅಂದಳು.

ಫೋಟೋಗ್ರಾಫರ್ ಗಾಬರಿಯಿಂದ ಅವಳನ್ನು ದಿಟ್ಟಿಸಿ ನೋಡತೊಡಗಿದ ಹಾಗೂ ಗುರುತಿಸಲು ಪ್ರಯತ್ನಿಸಿದ. ಸುಕ್ಕುಗಟ್ಟಿದ ಮುಖ ನೋಡಿ ಬೇರೆಡೆ ಮುಖ ಹೊರಳಿಸಿದ. ಆಕೆ ಇನ್ನೂ ಏನೇನೋ ಮಾತಾಡುತ್ತಲೇ ಇದ್ದಳು...ಆಕೆಯ ಧ್ವನಿ ಕೂಡ ಬದಲಿಯಾಗಿತ್ತು, ಕಳಾಹೀನಮುಖದಲ್ಲಿ ಬೇಸರ ತುಂಬಿತ್ತು, ಒರಟುತನ ಮನೆಮಾಡಿತ್ತು ಮಾತುಗಳಲ್ಲಿ...ಯಾವುದೇ ಏರಿಳಿತವಿಲ್ಲದ ಧ್ವನಿಯಲ್ಲಿ ಅವಳು ಮಾತಾಡುತ್ತಲೇ ಇದ್ದಳು....

''ನಾನೀಗ ಸ್ಟೇಜಿನಿಂದ ನಿವೃತ್ತಿ ಹೊಂದಿದ್ದೇನೆ. ಈಗ ನನ್ನ ಫೋಟೋ ತೆಗೆಯುವವರು ಯಾರಿದ್ದಾರೆ...ನನ್ನ ಊರಿಗೆ ಮರಳಿ ಹೋಗುತ್ತಿರುವ ಈ ಕಾಲದಲ್ಲಿ, ರಾತ್ರಿ ಇಲ್ಲಿಳಿದು ಕೊಂಡಿದ್ದೆ... ಹೊಸ ಏರ್‌ಸರ್ವಿಸ್ ಆರಂಭವಾಗಿರುವುದರಿಂದ ಈ ಸ್ಥಳ ಮಧ್ಯದಲ್ಲಿ ಸಿಕ್ಕುತ್ತದೆ...''

''ಮತ್ತೆ...ಮತ್ತೆ...ನಿಮ್ಮ ಆ ಸಂಗಾತಿ ?'' ಫೋಟೋಗ್ರಾಫರ್ ಮೆಲ್ಲಗೆ ಕೇಳಿದ....

ಕೋಚಿನ ಹಾರ್ನ್ ಬಾರಿಸಲಾರಂಭಿಸಿತು....

''ನೀವೇ ಹೇಳಿದ್ದಿರಲ್ಲ... ಜೀವನದ ರಣಭೂಮಿಯಲ್ಲಿ ಘನ ಘೋರ ಯುದ್ಧ ಆರಂಭವಾಗಿದೆ.....ಇದೇ ಘನ ಘೋರದಲ್ಲಿ ಅವನು ಎಲ್ಲೋ ಕಳೆದು ಹೋದ....''

ಕೋಚ್ ಎರಡನೆಯ ಸಲ ಹಾರ್ನ್ ಬಾರಿಸಿತು.

''ಅವನು ಕಳೆದು ಹೋಗಿಯೂ ತುಂಬ ದಿನಗಳಾದವು... ಅಚ್ಛಾ...ಸರಿ... ಗುಡ್‌ಬಾಯ್...'' ಎನ್ನುತ್ತ ಮಹಿಳೆ ಮಾತು ಮುಗಿಸಿ, ಅವಸರವಸರವಾಗಿ ಹೆಜ್ಜೆ ಹಾಕುತ್ತ ಕೋಚದತ್ತ ನಡೆದಳು...

ವಾಲರಸ್‌ನ ಹಾಗಿರುವ ಮೀಸೆಯುಳ್ಳ ಫೋಟೋಗ್ರಾಫರ್, ಗೇಟಿನ ಸಮೀಪ ಹೋಗಿ, ತನ್ನ ಕಬ್ಬಿಣದ ಕುರ್ಚಿಯ ಮೇಲೆ ಆಸೀನನಾದ.

ಜೀವನ ಮನುಷ್ಯರನ್ನು ತಿಂದು ಹಾಕಿತು... ಕೇವಲ ಕಾಕ್ರೋಚ್ ಮಾತ್ರ ಉಳಿದುಕೊಂಡವು...

# ಮಿಂಚುಹುಳುಗಳ ಲೋಕ

ಆಲ್ಮೋರಾದ ಬ್ರೈಕೆಟ್‌ಹೌಸ್‌ದಲ್ಲಿಯ ಪೋರ್ಟಿಕೋದ ಮೇಲೆ ತುಂಬ ಹುಳಿಯಾಗಿರುವ ದ್ರಾಕ್ಷಿಯ ಬಳ್ಳಿ ಹಬ್ಬಿತ್ತು. ಅದರ ಪಕ್ಕದಲ್ಲಿ ದೊಡ್ಡ ಮರವೊಂದಿತ್ತು. ಲಾನ್‌ದ ಹಚ್ಚ ಹಸಿರು ಕೆಳಗಿನ ಮಾಲ್‌ರೋಡ್‌ವರೆಗೂ ಚಾಚಿತ್ತು. ಅದರ ಕೆಳಗೆ ಅಂಕುಡೊಂಕಾದ ದಾರಿಯ ಮೇಲೆ ಮೋಟಾರ ಮತ್ತು ಲಾರಿಗಳು ಆಟಿಕೆಗಳಂತೆ, ಹೊಟ್ಟೆ ಹೊಸೆಯುತ್ತ ಚಲಿಸುತ್ತಿರುವಂತೆ ತೋರುತ್ತಿದ್ದವು.

ನಾವು ಯಾವ ದಿನ ಬ್ರೈಕೆಟ್‌ಹೌಸ್ ತಲುಪಿದೆವೋ, ಆ ದಿನ ಕಾಲಿಗೆ ಪಟ್ಟಿ ಕಟ್ಟಿಕೊಂಡು ಅಚ್ಚು ಮಕ್ಕಳ ಕೋಣೆಯಲ್ಲಿ ಪಲ್ಲಂಗದ ಮೇಲೆ ಕುಳಿತಿದ್ದಳು. ಅವಳು ತುಂಬ ಗಂಭೀರವಾದ ರೀತಿಯಲ್ಲಿ ಹೇಳಿದಳು– ''ನಾವು ಬಹು ಎತ್ತರದ ಬೆಟ್ಟದ ಮೇಲಿಂದ ಬಿದ್ದಿದ್ದೆವು. ಬೀಳುತ್ತ ಬೀಳುತ್ತ ಒಂದು ಭಯಾನಕ ಬಂಡೆಯ ಮೇಲೆ ಹೋಗಿ ತಲುಪಿದೆವು.'' ಅಚ್ಚು ಹೇಳಿದ ಕಥೆಯಿಂದ ಅವಳು ನಂದಾದೇವಿಯ ಶಿಖರದಿಂದ ಬಿದ್ದಿರಬೇಕೆಂಬ ಸಂಶಯ ಉಂಟಾಗುವ ಹಾಗಿತ್ತು. ಅವಳು ಈಗ ಒಂದು ತಿಂಗಳಿಂದ ಪಲ್ಲಂಗದ ಮೇಲೆಯೇ ವಿಶ್ರಾಂತಿ ಪಡೆಯುತ್ತ, ಎಲ್ಲರ ಮೇಲೂ ತನ್ನ ಅಧಿಕಾರ ನಡೆಸುತ್ತಲಿದ್ದಳು.

ಈ ದುರ್ಘಟನೆಯಿಂದಾಗಿ ಅವಳು ಬಹಳ ಮಹತ್ವ ಪಡೆದಿದ್ದಳು. ತನ್ನ ಗುಂಗುರು ಕೂದಲುಗಳನ್ನು ಆಗಾಗ ಜಾಡಿಸಿಕೊಳ್ಳುತ್ತ ತುಂಬ ನಗುತ್ತಿದ್ದಳು.

ಚಿಕ್ಕಮ್ಮ ವಹೀದಾ ಕೆಲ ದಿನಗಳವರೆಗೆ ನಟವರದಲ್ಲಿರಲು ಹೋಗಿದ್ದಳು. ಹೀಗಾಗಿ ಬ್ರೈಕೆಟ್ ಹೌಸ್‌ದಲ್ಲಿ ಈಗ ಕೇವಲ ಹುಡುಗಿಯರದೇ ಕಾರಭಾರ. ಎಲ್ಲರಿಗಿಂತ ದೊಡ್ಡವಳಾದ ಅಜರಾ ಅಕ್ಕ ಮ್ಯಾಟ್ರಿಕ್ ಪರೀಕ್ಷೆಗಾಗಿ ತಯ್ಯಾರಿ ನಡೆಸಿದ್ದಳು. ಅಕ್ಕ ಹಮಿರ, ಅಕ್ಕ ಜಹರಾಗೆ ಓರ್ವ ಮಾಸ್ತರರು ಓದು ಹೇಳಲು ಬರುತ್ತಿದ್ದರು.

ಅಚ್ಛಿ ಸ್ಕೂಲಿಗೆ ಹೋಗುತ್ತಿದ್ದ, ಅಚ್ಚು ಮತ್ತು ಪಾರೆ ಮನೆಯಲ್ಲಿಯೇ ಮಾಸ್ತರರಿಂದ ಪಾಠ ಹೇಳಿಸಿಕೊಳ್ಳುತ್ತಿದ್ದರು. ನಮ್ಮ ದೊಡ್ಡಪ್ಪನ ಮಗ ಇಮ್ತಿಯಾಜ ಹೈದರ ಕಲಕತ್ತಾದಿಂದ ಬಂದಿದ್ದ. ತಂದೆಯವರ ಚಿಕ್ಕಪ್ಪನ ಮಗಳು, ನನ್ನ ಸೋದರ ಅತ್ತೆ ಮನೆಯನ್ನು ನೋಡಿಕೊಳ್ಳುತ್ತಿದ್ದಳು.

ಬ್ರೈಕೆಟ್‌ಹೌಸ್, ಕುಮಾವುದ ಓರ್ವ ಪ್ರಸಿದ್ಧ ಆಂಗ್ಲ ವ್ಯಕ್ತಿಯಿಂದ ಕಟ್ಟಲ್ಪಟ್ಟ ವಾಡೆಯಾಗಿತ್ತು. ಸಾಯಂಕಾಲ ಅಕ್ಕ ಅಜರಾ ಹೇಳಿದಳು– ''ಒಂದು ವೇಳೆ ನೀನು ಮಧ್ಯಾಹ್ನ ಅಚ್ಚು, ಪಾರೆಯೊಂದಿಗೆ ಕುಳಿತು ಓದು–ಬರಹ ಮಾಡಿದಲ್ಲಿ ದಿನಾಲೂ ರಾತ್ರಿ ಅಪ್ಸರೆ ಬಂದು ನಿನ್ನ ದಿಂಬಿನ ಕೆಳಗೆ ಚಾಕ್ಲೆಟ್ ಇರಿಸಿ ಹೋಗುತ್ತಾಳೆ. ಅಚ್ಚು, ಪಾರೆ ಒಳ್ಳೊಳ್ಳೆ ಕೆಲಸ ಮಾಡಿದಾಗಲೆಲ್ಲ ಅವರಿಗೆ ಅಪ್ಸರೆ ಬಹುಮಾನ ಕೊಡುತ್ತಾಳೆ.''

ಬೆಳಗ್ಗೆ ಎದ್ದು ನೋಡಿದಾಗ ನನ್ನ ತಲೆ ದಿಂಬಿನ ಕೆಳಗೆ ಚಾಕ್ಲೆಟ್ ಇತ್ತು. ಮಧ್ಯಾಹ್ನ ಪಾಠ ಮುಗಿಸಿ ಮಾಸ್ತರರು ಹೋದ ನಂತರ ಅವರ ಶಿಷ್ಯರು ಇಲಾಯತಿ ಹಣ್ಣಿನ ಗಿಡದ ಮೇಲೆ ಕುಳಿತು ಅಭ್ಯಾಸ ನಡೆಸುತ್ತಾರೆ. ಸಾಮಾನ್ಯವಾಗಿ ಮಧ್ಯಾಹ್ನ ಇಮ್ತಿಯಾಜ ಭಾಯಿ ಬೇರೆ ಕಡೆ ಹಾಲ್‌ನಲ್ಲಿ ಕುಳಿತು ಗ್ರಾಮಾಫೋನ್‌ನಲ್ಲಿ ತುಂಬ ಆಸಕ್ತಿಯಿಂದ ರೆಕಾರ್ಡ ಕೇಳುತ್ತಾನೆ.... ''ಬುಲ್ ಬುಲ್ ಈ ರೀತಿಯಾಗಿ ದೂರು ನೀಡಿತು, ಅಳುತ್ತಳುತ್ತ ಸಯ್ಯದನ ಬಿಕ್ಕಳಿಕೆ ನಿಂತು ಹೋದವು..''

ಅತಿಥಿಗಳು ಕೆಳಗೆ ಹೋದ ನಂತರ ಇಮ್ತಿಯಾಜ ಭಾಯಿ, ಅಚ್ಛೆ ಭಾಯಿ ಅತ್ತೆಯ ಮಗ ಬಹಾಉದ್ದೀನ ಕೂಡಿಕೊಂಡು ಒಂದು ಕೆಂಪು ಬೆಡ್‌ಷೀಟ್‌ನ್ನು ಬಿದಿರಿನ ತುದಿಗೆ ಕಟ್ಟಿ ಹೊರಗಿನ ಪಾವಟಿಗೆಗಳ ಮೇಲೆ ನಿಂತುಕೊಳ್ಳುತ್ತಾರೆ. ಅತಿಥಿಗಳ ಮೋಟರ ಅಥವಾ ಲಾರಿ ದೂರ ಕಣಿವೆಯ ದಾರಿಯಲ್ಲಿ ಹೋಗುತ್ತಿರುವುದು ಕಾಣುತ್ತಿರುವಂತೆ, ಕೆಂಪು ಬಟ್ಟೆಯ ಪತಾಕೆಯನ್ನು ಅಲುಗಾಡಿಸುತ್ತ, ವಿದಾಯ ಹೇಳುತ್ತಾರೆ.

ಒಂದು ದಿನ ಪಾರೆಮಿಯ್ಯಾ ಹುಲ್ಲಿನ ಹಾಸಿಗೆಯಲ್ಲಿ ಏನನ್ನೋ ಹುಡುಕುತ್ತಿದ್ದ. ಆಗ ನಾನು ಇಶ್ತಿಯಾಕನನ್ನು ಕೇಳಿದೆ– ''ಏನು ಹುಡುಕುತ್ತಿರುವೆ ?''

''ಅಪ್ಸರೆಯ ಕುಂಡಲ ಹುಡುಕುತ್ತಿದ್ದೇವೆ.''

''ಹಾಗೆಂದರೇನು ?''

''ರಾತ್ರಿ ಅಪ್ಸರೆ ಬಂದಾಗ ಅವಳ ಹೆಜ್ಜೆಗಳ ಗುರುತು ಇದ್ದಲ್ಲಿ ಮಂಜುಹನಿ ಬೀಳುವುದಿಲ್ಲ.''

''ನಿಮಗೆ ಹೇಗೆ ಗೊತ್ತು ?''

''ಅಕ್ಕ ಅಜರಾ ಹೇಳಿದ್ದಾಳೆ....''

ಇದೆಲ್ಲ ಕೇಳಿದ ನಾನು ಕೂಡ ಅಪ್ಸರೆಯ ಕುಂಡಲ ಹುಡುಕುವಲ್ಲಿ ಮಗ್ನಳಾದೆ.

ಫಹಮಿದಾಳ ತಂಗಿ ಜುಲೇಖಾ ಎಷ್ಟು ಸಣ್ಣವಳಿದ್ದಳೆಂದರೆ ಅವಳಿಗೆ ಕೇವಲ 'ಛೋಟಿ' ಎಂದೇ ಕರೆಯಲಾಗುತ್ತಿತ್ತು. ಇವರಿಬ್ಬರೂ ಸೋದರತ್ತೆಯ ಮಕ್ಕಳಾಗಿದ್ದರು. ಅಕ್ಕ ಹುಮ್ಮನ್ ಮತ್ತು ಅಣ್ಣ ಬಹಾಉದ್ದೀನ 'ಛೋಟಿ'ಯನ್ನು ಒಂದು ಬುಟ್ಟಿಯಲ್ಲಿ ಕೂಡಿಸಿ ಬುಟ್ಟಿ ಎಳೆದಾಡುತ್ತಲಿದ್ದರು. ಅಷ್ಟರಲ್ಲಿ ಬಹಾಉದ್ದೀನ ಎಲ್ಲೋ ಮಾಯವಾದ. ಮಧ್ಯಾಹ್ನ ಬಹಾಉದ್ದೀನಭಾಯಿ ತನ್ನ ಕೋಣೆಯ ಬಾಗಿಲನ್ನು ಒಳಗಿನಿಂದ ಹಾಕಿಕೊಂಡು ಏನನ್ನೋ ಶೋಧಿಸುವ ರೀತಿಯಲ್ಲಿ ಕಾಲ ಕಳೆದ. ಸಾಯಂಕಾಲ ಪೋರ್ಟಿಕೊದಲ್ಲಿ ದ್ರಾಕ್ಷಿ ಬಳ್ಳಿಯ ಕೆಳಗೆ ಕಾರ್ಡಬೋರ್ಡಿನ ಚಿಕ್ಕ ಗಾಡಿ ಕಾಣಿಸಿತು. ಬಹು ಸುಂದರವಾಗಿತ್ತು. ಸಿಂಡರೈಲಾಳ ಕೋಚಿನ ಹಾಗೆ ಇದಕ್ಕೂ ಸುಂದರ ಲತಾ ಬಳ್ಳಿಯ ಕುಸುರುಗೆಲಸಮಾಡಲಾಗಿತ್ತು. ಗಾಡಿಗೆ ಎರಡು ಕಪ್ಪೆಗಳನ್ನು ಹೂಡಲಾಗಿತ್ತು. ಅವೆರಡೂ ಗಾಡಿಯನ್ನು ಅತ್ತ ಇತ್ತ ಸಿಕ್ಕಾಪಟ್ಟೆ ಎಳೆದಾಡ ತೊಡಗಿದ್ದವು.

''ಜಲ್ದಿ ಒಳಗೆ ಬನ್ನಿರಿ'' ಎಂದು ಅಜರಾ ಕರೆದಳು.

''ಯಾಕೆ ? ಈ ಗಾಡಿ ಯಾರದು ?''

''ಅಪ್ಸರೆ ಬಂದಿದ್ದಳು..'' ಎಂದು ಹೇಳುತ್ತ ''ಯಾರಾದರೂ ಮನುಷ್ಯರು ನೋಡಿದರೆ, ಗಾಡಿಗೆ ಕಟ್ಟಿದ ಕೆಂಪು ಪಕ್ಷಿಗಳು ಕಪ್ಪೆಗಳಾಗಿ ಬಿಡುತ್ತವೆಂಬ ಕಾನೂನು ಇದೆ.''

''ಈಗಲೂ ಅವಳು ಗಾಡಿಯಲ್ಲಿ ಕುಳಿತಿದ್ದಾಳೆಯೇ ?'' ಎಂದು ನಾನು ವಿಚಾರಿಸಿದೆ.

''ಹಾಂ !, ಆದರೆ ಸಮೀಪ ಮಾತ್ರ ಹೋಗಬೇಡ'' ಎಂದು ಅಚ್ಛೆಭಾಯಿ ಉತ್ತರಿಸಿದ.

''ಅಪ್ಸರಾ....'' ಎಂದು ಪಾರೆಮಿಯ್ಯಾ ಮುಂದೆ ನುಗ್ಗಿ ಕೂಗಿದ.

''ಏನು ನಡೆಯುತ್ತಲಿದೆ....'' ಎಂದು ಒಳಗಿನಿಂದಲೇ ಕೂಗಿಕೊಂಡ.

''ಅಚ್ಛೂ ಅಕ್ಕ'' ನಾನು ಅವಳಿಗೆ ತುಂಬ ಗೌರವದಿಂದ ಅಚ್ಛೂ ಅಕ್ಕ ಎಂದೇ ಕರೆಯುತ್ತಿದ್ದೆ. ''ಅಪ್ಸರೆ ಪೋರ್ಟಿಕೋದಲ್ಲಿದ್ದಾಳೆ. ಅವಳ ಕೋಚಿನ ಕುದುರೆಗಳು ಕಪ್ಪೆಗಳಾಗಿವೆ.''

''ಎಲ್ಲಿ....?'' ಎನ್ನುತ್ತ ಅಚ್ಛೂ ಪಲ್ಲಂಗದಿಂದ ಇಳಿದು ಹೊರಗೆ ಬಂದಳು. ಫಹಮಿದಾ ತನ್ನ ಉದ್ದನೆಯ ಫ್ರಾಕ್ ತೊಟ್ಟು ಪುಟ್ಟಪುಟ್ಟ ಕಾಲಿಡುತ್ತ ಅವಳ ಹಿಂದೆ ಹಿಂದೆ ನಡೆದಳು. ನಾವು ಮೂವರೂ ಹೊರಗೆ ಹಣಿಕಿಕ್ಕಿದೆವು. ಗಾಡಿ ಮಾಯವಾಗಿತ್ತು, ಅಕ್ಕ, ಅಣ್ಣ ಯಾರೂ ಅಲ್ಲಿರಲಿಲ್ಲ.

''ಚುಪ್...'' ಅಚ್ಛೂ ಸಿಟ್ಟಿನಿಂದ ಹೇಳಿದಳು. ನಂತರ ಹೋಗಿ ತನ್ನ ಪಲ್ಲಂಗದ ಮೇಲೆ ಕುಳಿತಳು. ಎರಡು ದಿನಗಳ ನಂತರ ಅವಳಿಗೆ ಅಡ್ಡಾಡಲು ಪರವಾನಿಗೆ ಸಿಗುವುದರಲ್ಲಿತ್ತು.

''ಟಂಕರ, ಟೇಲರ, ಸೋಲ್ಜರ್, ಸೇಲರ....'' ಎನ್ನುತ್ತ ಅಚ್ಛೂ ಇಸ್ಪೇಟ್ ಎಲೆ ಹಂಚ ತೊಡಗುತ್ತಾಳೆ. ಪ್ರತಿಯೊಂದು ಎಲೆಯ ಮೇಲೆ ವಿಚಿತ್ರ ವಿಚಿತ್ರ ರೀತಿಯ ಚಿತ್ರ ಬಿಡಿಸಲಾಗಿತ್ತು, ಇವು ಬಹುಶಃ ''ಹ್ಯಾಪಿ ಫ್ಯಾಮಿಲಿ ಕಾರ್ಡ್'' ಎಂದು ಕರೆಯಿಸಿಕೊಳ್ಳುತ್ತವೆ.

ಮತ್ತೆ ಆಟವನ್ನು ಅರ್ಧಕ್ಕೆ ಬಿಟ್ಟು ಅಚ್ಛೂ ಒಮ್ಮೆಲೇ ''ಓಹೋ...'' ಎಂದು ಕೇಕೆ ಹಾಕುತ್ತ– ''ಅವ್ವಲ್‌ಭಲಾ...ಎಲ್ಲದರಲ್ಲಿ ಕುಂಬಳಕಾಯಿ ಗೋಲಭಲಾ...'' ಎಂದು ಕೂಗಲಾರಂಭಿಸುತ್ತಾಳೆ.

ಲೋಕದ ಪ್ರತಿಯೊಂದು ವಸ್ತು ತುಂಬ ಸುಂದರವಾಗಿದ್ದವು. ಮಾತಿನ ಪ್ರತಿಯೊಂದು ವಾಕ್ಯ ಸಾಮಾನ್ಯವಾಗಿ ಹೀಗೆ ಆರಂಭವಾಗುತ್ತಿತ್ತು ''ಓಫ್...ಏನೆಲ್ಲ ಮಜಾ.....ಬಂತು...''

''ಏನು ನಡೆದಿದೆ ?'' ಎಂದು ಯಾರೋ ದೊಡ್ಡವರು ಕೇಳುತ್ತಾರೆ.

''ಮಜಾ...''

ಮೋಡಗಳು ಕೋಣೆಗಳಲ್ಲಿ ತೂರಿ ಬಂದಾಗಲೂ ಮಜಾ ಅನ್ನಿಸುತ್ತದೆ. 'ತುಂಬಾ ಮಜಾ' ಎಂದು ಎಲ್ಲರೂ ಕೂಗುತ್ತಿದ್ದೆವು. ಅದರ ಮಹತ್ವ ಗೊತ್ತಾಗಲೆಂದು.

ಕೆಲವೊಮ್ಮೆ ರಾತ್ರಿ ಹಮ್ಮೀನ್ ಅಕ್ಕ ನನ್ನನ್ನು ಗ್ಯಾಲರಿಯ ಹತ್ತಿರವಿರುವ ಎತ್ತರದ ಟೇಬಲ್ಲಿನ ಮೇಲೆ ಕೂಡಿಸಿ, ತಾನೂ ಸ್ವತಃ ಮಿಂಚುಹುಳ ಹಿಡಿಯಲು ತೋಟದಲ್ಲಿ ಹೋಗುತ್ತಿದ್ದಳು. ಕೆಲ ಹೊತ್ತಿನ ನಂತರ ಕಿಲಕಿಲನೆ ನಗುತ್ತ ಮರಳುತ್ತಿದ್ದಳು. ಆಕೆ ಹಿಡಿದುಕೊಂಡು ಬಂದ ಮಿಂಚುಹುಳುಗಳು ಆಕೆಯ ಮೇಲುದದಲ್ಲಿ ಅತ್ತಿತ್ತ ಹಾರಾಡುವಾಗ ಬೆಳಕು ಹಾರಾಡಿದ ಹಾಗೆ ತೋರುತ್ತದೆ.

ಅದು ಮಿಂಚುಹುಳುಗಳ ಲೋಕ.

ಒಂದು ಸಾಯಂಕಾಲ ಮಾಸ್ತರರು ಗಟ್ಟಿಮಾಡಲು ಹೇಳಿದ ಪಾಠ ಗಟ್ಟಿ ಮಾಡಲಿಲ್ಲ. ಈ ಕಾರಣದಿಂದಾಗಿ ಅಪ್ಸರೆ ಮುನಿದುಕೊಂಡಿದ್ದಾಳೆಂದು ತಿಳಿಯಿತು. ಅಚ್ಛೂ, ಪಾರೆ ತಮ್ಮ ತಮ್ಮ ಪಾಠ ಗಟ್ಟಿಮಾಡಿದ ನಂತರ ನನ್ನನ್ನು ಸತಾಯಿಸಲೆಂದೇ, ನವಾಬರ ಹಾಗೆ ಕಣ್ಣು ಮುಚ್ಚಿ ತಮ್ಮ ಹಾಸಿಗೆಯ ಮೇಲೆ ಮಲಗಿ ಕಾಲು ಅಲ್ಲಾಡಿಸುತ್ತಿದ್ದರು.

ಒಮ್ಮೆಲೇ ಅಚ್ಛೂ ಮಗ್ಗಲು ಬದಲಿಸಿ ಒಂದು ಕಣ್ಣು ತೆರೆದು ಜೋರಾಗಿ ಹೇಳಿದಳು– ''ನಮಸ್ಕಾರಗಳು ಓ! ಅಪ್ಸರೆ.''

ಪಾರೆ, ಅವಳೆಂದತೆಯೇ– ''ನಮಸ್ಕಾರಗಳು ಓ ! ಅಪ್ಸರೆ....'' ಎಂದಳು.

ಅಚ್ಛೂ ಕೊಡವಿ ಎದ್ದು ಪಲ್ಲಂಗದ ಮೇಲೆ ಕುಳಿತು ತಲೆದಿಂಬು ಎತ್ತಿದಳು. ಅದರ ಬುಡದಲ್ಲಿ ಟಾಫಿಯ ಒಂದು ಡಬ್ಬಿಯೇ ಇತ್ತು.

ನಾನು ಕೂಡಲೇ ನನ್ನ ತಲೆದಿಂಬು ಎತ್ತಿನೋಡಿದೆ, ಅಲ್ಲಿ ಏನೂ ಇರಲಿಲ್ಲ. ನಾನು ತುಂಬ ದುಃಖಿತಳಾಗಿ ಅಳತೊಡಗಿದೆ. ಮತ್ತೆ ಕಣ್ಣೊರಿಸಿಕೊಂಡು ಅಚ್ಛೂಳನ್ನು ಕೇಳತೊಡಗಿದೆ.

''ಅಪ್ಸರೆ ಹೇಗಿದ್ದಳು...?''

''ತುಂಬ ಸುಂದರವಾಗಿದ್ದಳು.''

''ಏನು ತೊಟ್ಟಿದ್ದಳು ?''

''ಸೀರೆ....''

''ಸೀರೆ ಉಟ್ಟು ಹೇಗೆ ಹಾರುತ್ತಾಳೆ ?''

''ರೆಕ್ಕೆಗಳಿವೆಯಲ್ಲ....''

''ಟಾಫಿ ನನಗೂ ಕೊಡಲ್ಲ ಅಕ್ಕ...''

''ಅಕ್ಕ ಕೊಡಬೇಡ ಎಂದಿದ್ದಾಳೆ. ನೀನು ಮಗ್ಗಿ ಗಟ್ಟಿ ಮಾಡಲಿಲ್ಲವಲ್ಲ. ಪಾರೆಮಿಯ್ಯಾ ಇಡೀ ಕವಿತೆ 'ಷಿಕವಾ' ಕಂಠಪಾಠ ಮಾಡುತ್ತಿದ್ದಾನೆ.''

ಪಾರೆಮಿಯ್ಯಾ ಕೂಡಲೇ ತನ್ನ ಪಲ್ಲಂಗದ ಮೇಲೆ ಕುಳಿತು ಗರ್ಜಿಸಿದ–''ಓ ! ಯಾರವರು...ಆ ದೀಪ ಹಚ್ಚಿದವರು...''

ಬಾಗಿಲೊಳಗಿಂದ ಹಣಿಕಿಕ್ಕಿದ ಅತ್ತೆ– ''ಹುಶ್...ರಾತ್ರಿ ಬಹಳವಾಯ್ತು... ಮಲಗಿರಿನ್ನು....'' ಎಂದು ಜಬರಿಸಿದಳು.

ನಾವು ಮೂವರೂ ಮತ್ತೆ ನಮ್ಮ ನಮ್ಮ ಹೊದಿಕೆಯಲ್ಲಿ ಹೊಕ್ಕೊಂಡೆವು. ಅಗ್ಗಿಷ್ಟಿಕೆಯಿಂದ ಹೊರಡುತ್ತಿದ್ದ ಜ್ವಾಲೆಗಳಲ್ಲಿ ನಾನಾ ರೀತಿಯ ಚಿತ್ರಗಳು. ಕೆಲಕ್ಷಣಗಳ ನಂತರ ಅಚ್ಛೊ ಹೇಳಿದಳು– ''ನಾನು ಸೊಗಸಾದ ಮೊಲ ಮಾಡುತ್ತೇನೆ.'' ಎನ್ನುತ್ತ ಅವಳು ತನ್ನ ಬೆರಳುಗಳಿಂದ ಗೋಡೆಯ ಮೇಲೆ ಮೊಲ ಮಾಡಿದಳು.

''ಈಗ ಬಾತುಕೋಳಿ...ಈಗ ನಾಯಿ...'' ಎಂದು ಪಾರೆಮಿಯ್ಯಾ ಹೇಳಿದ. ನಾನು ಕೂಡ ಅವಸರವಸರದಿಂದ ಎದ್ದು ಕುಳಿತೆ ಹಾಗೂ ಆ ಮಹತ್ವದ ಕೆಲಸದಲ್ಲಿ ಮಗ್ನಳಾದೆ.

ಬೆಳಗ್ಗೆ ಪಾರೆಮಿಯ್ಯಾ ಸೂಚನೆ ನೀಡಿದ– ''ಇಂದು ಸಿನೆಮಾ ತೋರಿಸ ಲಾಗುವುದು.''

''ಅದು ಹೇಗಿರುತ್ತದೆ...?'' ಎಂದು ನಾನು ವಿಚಾರಿಸಿದೆ ಹಾಗೂ ''ನೀನು ನೋಡಿದ್ದಿಯಾ ಅಕ್ಕ ಅಚ್ಛೊ ?'' ಎಂದೆ.

''ಹಾಂ ! ಜನಾಬ....'' ಎನ್ನುತ್ತ ಜೋರು ಮಾಡಿದಳು.

ರಾತ್ರಿ ಊಟದ ಟೇಬಲ್ ಬಿಟ್ಟು ಪಾರೆಮಿಯ್ಯಾ ಒಮ್ಮೆಲೇ ಡ್ರಾಯಿಂಗ್ ರೂಮು ಕಡೆ ಓಡಿದ. ಅಲ್ಲಿ ಚಿಕ್ಕಪ್ಪನವರ ಗೆಳೆಯನೊಬ್ಬ ಪ್ರೊಜೆಕ್ಟರ್ ಸರಿಮಾಡುವಲ್ಲಿ ತಲ್ಲೀನನಾಗಿದ್ದ. ಪರದೆ ಬಿಟ್ಟು ಲೈಟುಗಳನ್ನೆಲ್ಲ ಆರಿಸಲಾಯಿತು. ಕೂಡಲೇ ಇಂಗ್ಲಿಷ್ ಚಿತ್ರದ ಗೊಂಬೆಗಳು ಗೋಡೆಯ ಮೇಲೆ ಕುಣಿಯತೊಡಗಿದವು. ಆಗ ಎಲ್ಲರೂ ಅತ್ತಿತ್ತ ಕುಣಿಯುತ್ತ ತಿರುಗಾಡ ತೊಡಗಿದರು. ಒಂದು ತೆರೆದ ಕಿಟಕಿಯಿಂದ ಚಂದಿರ ಹಣಿಕಿ ಹಾಕುತ್ತಿದ್ದ....ಹೊರಗೆ ಬೆಟ್ಟಗಳ ಮೇಲೆ ಗಂಭೀರ ಶಾಂತಿ ನೆಲೆಸಿತ್ತು.

ರಾತ್ರಿ, ಚಂದಿರ ತುಂಬ ದೊಡ್ಡದಾಗಿತ್ತಲ್ಲದೆ ತುಂಬ ಹಳದಿ, ತುಂಬ ಶೀತಲ. ರಾತ್ರಿ, ಹಿಮಾಲಯದ ಶಿಖರದ ಮೇಲೆ ಕುಳಿತು, ಮುಪ್ಪಾದ ಮುದುಕಿ ಜೋಗತಿಯಂತೆ ತೋರುತ್ತ ಹಿಮದ ತುಣುಕುಗಳಂತಿರುವ ನಕ್ಷತ್ರಗಳ ಮಾಲೆ ಜಪಿಸುತ್ತಿದ್ದಳು. ದೂರದಲ್ಲಿ ಅತ್ಯಂತ ಪ್ರಾಚೀನವಾದ, ಜೋಗೀಶ್ವರಿ ಮಂದಿರದಲ್ಲಿ ಮಂದವಾದ ಬೆಳಕು ಹರಡುತ್ತ ದೀಪಗಳು ಉರಿಯುತ್ತಿದ್ದವು.

ಇಲ್ಲಿಯ ಬೆಟ್ಟ ಗುಡ್ಡಗಳೆಲ್ಲ ಅಸಂಖ್ಯಾತ ಸಸ್ಯಗಳಿಂದ, ಗೆಡ್ಡೆ ಗೆಣಸುಗಳಿಂದ ಸುಹಾಸಿತಗೊಂಡಿವೆ. ಈ ಸುಂದರವಾದ, ಪ್ರಶಾಂತವಾದ, ಉಲ್ಲಾಸದಿಂದ ತುಂಬಿದ ಈ ಜಗತ್ತಿನಲ್ಲಿ ಕೇವಲ ಸುಂದರ ಸುಗಂಧಿತ ಹೂಗಳು, ತಾಜಾ ಫಲಪುಷ್ಪಗಳು, ಅಪ್ಸರೆ ಯರು, ಮನುಷ್ಯರ ಹಾಗೆ ಮಾತನಾಡುವ ಪಶು, ಪಕ್ಷಿಗಳದೇ ಸಾಮ್ರಾಜ್ಯ ಇಲ್ಲಿ.

ರಾತ್ರಿ ''ಚೋರ ಚೋರ'' ಆಟ ಆಡುತ್ತ ಅಚ್ಛೊ ಉದ್ದವಾದ ಹುಲ್ಲಿನ ಕಡ್ಡಿಯಿಂದ ಮಾಡಿದ ಕತ್ತಿಯೊಂದನ್ನು ನನಗೆ ಕೊಟ್ಟು, ಯಾವುದೋ ಕಿಟಕಿಯಲ್ಲಿ

ನಿಲ್ಲಿಸುತ್ತಾಳೆ. ಹೊರಗೆ ಕತ್ತಲಿನಲ್ಲಿ ಕಳ್ಳ ಕೆಂಪು ನಾಲಿಗೆ ಚಾಚಿ ನಿಂತಿದ್ದ. ಕೆಂಪು ದಳಗಳ ಹೂ ಕಳ್ಳನ ಉದ್ದನ್ನ ನಾಲಿಗೆಯಾಗಿರುತ್ತಿತ್ತು. ಮಕ್ಕಳದು ಅದ್ಭುತ ಕಲ್ಪನಾಲೋಕ, ಅದು ಅಪರೂಪದ್ದು, ಸುಂದರವಾದದ್ದು, ವಿಚಿತ್ರವಾದದ್ದು ಕೂಡ. ಆದರೆ ನಮಗೆ ಇದೆಲ್ಲ ಕಲ್ಪನೆ ಅಲ್ಲ, ವಸ್ತುಸ್ಥಿತಿಯಾಗಿತ್ತು.

ಒಂದು ದಿನ ನಗುಮುಖದ, ಸುಸಂಸ್ಕೃತ ಮನಸ್ಸಿನ ಚಿಕ್ಕಪ್ಪ ಕಚೇರಿಯಿಂದ ಬಂದು ತಾಯಿಗೆ ಹೇಳಿದ– ''ಷಾಹಜಾನ್‌ಪೂರದಿಂದ ಅಣ್ಣನವರು ಸಮಾಚಾರ ಕಳಿಸಿದ್ದಾರೆ. ಅವರಿಗೆ ಅಟಾವಾಕ್ಕೆ ವರ್ಗವಾಗಿದೆಯಂತೆ. ಇಂದೋ ನಾಳೆಯೋ ಅವರ ಪತ್ರವೂ ಬರಬಹುದು.''

ನಾವು ದೆಹರಾದೂನಕ್ಕೆ ಹೊರಟಾಗ ನಮ್ಮ ಲಾರಿ ಅಂಕು ಡೊಂಕಾದ ರಸ್ತೆಯಲ್ಲಿ ಇಳಿಯುತ್ತಲಿದ್ದಾಗ, ದೂರದಲ್ಲಿದ್ದ ಬೆಟ್ಟದ ಮೇಲೆ ಕೆಂಪು ಬೆಡ್‌ಷೀಟಿನ ಪತಾಕೆಯೊಂದು ಹಾರಾಡುತ್ತಲಿತ್ತು. ಹಾರಾಡುತ್ತಿದ್ದ ಆ ಪತಾಕೆ ಕೆಲಹೊತ್ತಿನ ನಂತರ ಒಂದು ಬಿಂದುವಿನಲ್ಲಿ ಪರಿವರ್ತನೆ ಹೊಂದಿ, ನಮ್ಮ ಕಣ್ಣಿನಿಂದ ಮರೆಯಾಯಿತು.

ಬ್ರೈಕಟ್ ಹೌಸ್‌ನಲ್ಲಿ ಈಗ ಉತ್ತರ ಪ್ರದೇಶದ ನ್ಯಾಶನಲ್ ಕೆಡೆಟ್ ಕೋರಿನ ಹೆಡ್‌ಕ್ವಾರ್ಟರಗಳಿವೆ. ಅದರ ಸುಂದರ ಪೋರ್ಟಿಕೋ ಹಾಳಾಗಿದೆ. ಮುಂದೆ ಸದಾ ಜೀಪ, ಗಾಡಿಗಳು ನಿಂತಿರುತ್ತವೆ. ಕಟ್ಟಡದ ಸೌಂದರ್ಯ ಏನೂ ಉಳಿದಿಲ್ಲ. ಅಲ್ಲಲ್ಲಿ ಬಿರುಕು ಬಿಟ್ಟಿದೆ. ಹಿಂದಿನ ಬೆಟ್ಟದ ಮೇಲೆ ಸೈನಿಕರು ಸ್ನಾನ ಮಾಡುವಲ್ಲಿ, ಬಟ್ಟೆ ತೊಳೆಯುವುದರಲ್ಲಿ ಮಗ್ನರಾಗಿರುತ್ತಾರೆ. ಆದರೆ ಈ ಬಣ್ಣ ಗೆಟ್ಟ ಹಾಳಾದ ಈ ಸೌಧದಲ್ಲಿಯೇ ಒಂದಾನೊಂದು ಕಾಲದಲ್ಲಿ ಮಿಂಚುಹುಳಗಳ ಬೆಳಕಿನಲ್ಲಿ ಈ ಸೌಧದಲ್ಲಿ ಅಪ್ಸರೆ ಬಂದು ಹೋಗುತ್ತಿದ್ದಳು. ಅವಳ ಗಾಡಿಗೆ ಕಪ್ಪೆಗಳನ್ನು ಹೂಡಲಾಗುತ್ತಿತ್ತು. ರಾತ್ರಿಯಲ್ಲಿ ಕಳ್ಳರು ನಾಲಿಗೆ ತೆರೆದು ಹೂಗಳ ಗಿಡದ ಹಾಗೆ ನಿಂತು ಕೊಳ್ಳುತ್ತಿದ್ದರು.

ಈ ಬಾಲ್ಯದ ಕಾಲ, ಮಿಂಚುಹುಳಗಳ ಬೆಳಕಿನಂತೆ ಟಿಮ್...ಟಿಮ್ ಎಂದು ಬೆಳಗಿ, ಆ ಬಾಲ್ಯಕಾಲ ಎಂದೂ ಇರಲಿಲ್ಲವೇನೋ ಎನ್ನುವ ಹಾಗೆ ಒಮ್ಮೆಲೇ ಮಾಯವಾಗಿ ಬಿಡುತ್ತದೆ....

ಆದರೆ ಆ ಮಕ್ಕಳು, ದ್ರಾಕ್ಷಿಯ ಬಳ್ಳಿಯಲ್ಲಿ ಅಡಗಿದ ಈ ಸೌಧದಲ್ಲಿ, ಬಹುಶಃ ಅದೇ ರೀತಿ ಇದ್ದು ಉಲ್ಲಾಸದಿಂದ ಈಗಲೂ ಕೇಕೆ ಹಾಕುತ್ತಿದ್ದಾರೇನೋ.....

ಏಕೆಂದರೆ ಕಾಲವೆಂಬುದು ಅತ್ಯಂತ ಶಕ್ತಿಶಾಲಿಯಾಗಿದೆ. ಅದರ ಮೇಲೆ ಸಮಯದ ಯಾವುದೇ ಪರಿಣಾಮ ಉಂಟಾಗುವುದಿಲ್ಲ.

# ಹಾಜಿ ಗುಲಬಾಬಾ ಬೇಕತಾಶಿಯ ಪ್ರವಚನ

ಇಡೀ ರಾತ್ರಿಯೆಲ್ಲ ನನ್ನ ಕಿಟಕಿಯ ಕೆಳಗಡೆ ಆಜರಬಾಯಿಜಾನಿ ತುರ್ಕಿಯಲ್ಲಿ ಕವ್ವಾಲಿ ನಡೆಯಿತು, ಬೆಳಗು ಹರಿವ ಮುನ್ನ ಧ್ವನಿ ಮಂದವಾಯಿತು ಮತ್ತು ಕೊಹೆಕಾಫದ ಬೆಟ್ಟದ ಮಂಜು ಮುಸುಕಿನಲ್ಲಿ ಕಳೆದು ಹೋಯಿತು.

ಸೂರ್ಯೋದಯವಾದ ಕೂಡಲೇ ನಾನು ಧರ್ಮಶಾಲೆಯೊಳಗಿಂದ ಹೊರ ಬಂದು ಆಕಾಶದಲ್ಲಿ ಯಾವುದೋ ಆಕೃತಿಯನ್ನು ಹುಡುಕಾಡುತ್ತಿದ್ದೆ. ಆದರೆ ಆಕೃತಿಯ ಬದಲಿಗೆ ಆಕಾಶದಲ್ಲಿ ಪಾರಿವಾಳವೊಂದು ನದಿ ತೀರದ ಕಡೆಯಿಂದ ಹಾರಿ ಬಂತು. ಅದರ ಚೊಂಚಿನಲ್ಲಿ ಒಂದು ಪತ್ರವಿತ್ತು. ಅದು ಅಂಗಳದಲ್ಲಿ ಬಂದು ದ್ರಾಕ್ಷಿಯ ಬಳ್ಳಿಯ ಕೆಳಗೆ ಒಂದು ಮೂಲೆಯಲ್ಲಿ ಸಣ್ಣ ಮೇಜಿನ ಮೇಲಿರಿಸಿದ ಮಣ್ಣಿನ ಪಾತ್ರೆಯ ಮೇಲೆ ಕೂತಿತು.

ಪಾರಿವಾಳ ಕಣ್ಣರಳಿಸಿ ಸುತ್ತಲೂ ಒಮ್ಮೆ ನೋಡಿತು. ಆಗ ಅದರ ದೃಷ್ಟಿ ನನ್ನ ಮೇಲೆ ಬಿದ್ದಿತು. ಅದು ಹಾರಿ ನನ್ನೆಡೆಗೆ ಬಂದು, ಚೊಂಚಿನಲ್ಲಿದ್ದ ಕವ್ವರನ್ನು ಕೆಳಗೆ ಹಾಕಿತು. ನದಿ ತೀರದಲ್ಲಿದ್ದ ಪರ್ವತದ ಕಡೆಗೆ ಪುರ್ ಎಂದು ಹಾರಿ ಹೋಯಿತು.

ಧರ್ಮಶಾಲೆಯ ಮಾಲಿಕ ಹಾಲಿಲ್ಲದ ಚಹಾ ಕಪ್ಪಿನಲ್ಲಿ ಹಾಕಿ ನನಗೆ ಕೊಡುತ್ತ ಹೇಳಿದ–

''ತಮಗೆ, ಬಹುಶಃ ಆ ಆಕೃತಿ ಫ್ಲೈಟ್ ಪೋಸ್ಟ್‌ಪೋನ್ ಮಾಡಿರುವುದಾಗಿ ಸುದ್ದಿ ಕಳಿಸಿರಬೇಕು.''

''ಇರಬಹುದು !'' ನಾನು ಉತ್ತರಿಸಿದೆ.

''ಆದರೆ, ಇದು ಯಾರೋ ತಮ್ಮ ಆಪ್ತಬಾಂಧವರನ್ನು ಕಳೆದುಕೊಂಡು ದುಃಖಿತ ರಾದವರ ಪೈಕಿ ಬರೆದ ಪತ್ರವಾಗಿರಬೇಕೆಂಬುದು ನನ್ನ ವಿಚಾರ. ಕೆಲದಿನಗಳಿಂದ ನನಗೆ ಈ ರೀತಿಯ ಸಂದೇಶ ಪೂರ್ವ ಮತ್ತು ಪಶ್ಚಿಮ ದೇಶಗಳ ಕಡೆಯಿಂದ ಸಾಮಾನ್ಯವಾಗಿ ಬರುತ್ತಲೇ ಇವೆ.''

''ಇದರಲ್ಲಿ ಆಶ್ಚರ್ಯವೇನೂ ಇಲ್ಲ, ಏಕೆಂದರೆ ಯುದ್ಧಗಳು ಎಲ್ಲೆಡೆ ನಡೆದೇ ಇವೆ'' ಎಂದೆ.

ಧರ್ಮಶಾಲೆಯ ಬೆಳ್ಳಿಗಡ್ಡದ ಮಾಲಿಕ, ನೋಡಲು ಟಾಲಸ್ಟಾಯ್‌ನ ಹಾಜೀ ಮುರಾದನ ಹಾಗೆ ಕಾಣುತ್ತಿದ್ದ. ಈತ ರಶಿಯಾದ ತೊಗಲಿನ ಪೆಟ್ಟಿಗೆಯಲ್ಲಿ ಶೃಂಗಾರಕ್ಕಾಗಿ ಒಂದು ನಕಲಿ ಪಿಸ್ತೂಲ ಇರಿಸುತ್ತಿದ್ದ. ಆರಾಮವಾಗಿ ಕುಳಿತು ಹುಕ್ಕಾ ಸೇದುತ್ತ ಕೇಳಿದ–

''ಮೇಡಂ, ಈ ಸಲದ ಯುದ್ಧ ಯಾವುದಾಗಿತ್ತು ?''

ಉತ್ತರಿಸದೆ ನಾನು ಕಪ್ಪನ್ನು ಟೀಪಾಯ್ ಮೇಲೆ ಇರಿಸಿದೆ ಹಾಗೂ ಪತ್ರ ಓದಿದೆ.

ಹುಡುಕುವ ಕೆಲಸ ಆರಂಭಿಸಲು ಸಮಯ ಬಂದಿದೆಯೆಂದು ನಾನು ನಿಶ್ಚಯಿಸಿದೆ. ಆರಂಭದ ಕಡೆಗೆ ಮರಳಿ ಹೋಗಬೇಕಾಗಿದೆ. ನಾನು ಪ್ರತಿದಿನ ಧರಿಸುವ ಮುಖವಾಡ ತೆಗೆದು ಹಾಜಿ ಮುರಾದನಿಗೆ ಗುಡ್‌ಬಾಯ್ ಹೇಳಿದೆ. ಮತ್ತು ಅರಾರತದತ್ತ ಹೊರಟೆ... ಎದುರಿಗೇ ಹೊಳೆ ಹೊಳೆಯುತ್ತಲಿತ್ತು ಸ್ಥಳ. ಆದರೆ ತುಂಬ ದೂರವಿತ್ತು.

ನಾನು ದಿನವಿಡೀ ನಡೆಯುತ್ತಲಿದ್ದೆ. ಬಹಳಷ್ಟು ಕಣಿವೆ, ಕೊಳ್ಳ ಬೆಟ್ಟ ದಾಟಿ ನಡೆದೆ. ಸರಿಯಾಗಿ ಸೂರ್ಯಾಸ್ತದ ಸಮಯಕ್ಕೆ ಸನೋಬರ ವೃಕ್ಷಗಳಿಂದ ಆಚ್ಛಾದಿತ ನೆರಳಲ್ಲಿ ಕೆಂಬಣ್ಣದಿಂದ ಆವೃತ ಸಲಿಲವೊಂದು ಕಾಣಿಸಿಕೊಂಡಿತು. ಅದರ ತೀರದಲ್ಲಿ ನೀಲಿಗಣ್ಣಿನ, ಕೆಂಪು ಗಡ್ಡದ ಓರ್ವ ಫಕೀರ ಸಮಾಧಿಸ್ಥ ಅವಸ್ಥೆಯಲ್ಲಿ ಕುಳಿತಿದ್ದ. ನಾನು ಅತ್ಯಂತ ದಿಟ್ಟಿಸಿ ನೋಡಿದೆ. ಆತ ಖ್ವಾಜಾ ಸಬ್ಜಪೋಶ ಅಲ್ಲ. ಆದರೆ ಆತ, ಈ ಭಾಗದ ರೀತಿ–ರಿವಾಜಿನಂತೆ ಪೋಷಾಕು ಧರಿಸಿದ್ದ. ಅವನ ಶ್ವೇತ ಉಣ್ಣೆಯ ಎತ್ತರದ ಅಫಗಾನಿ ಟೊಪ್ಪಿಗೆ ಮತ್ತು ಅವನು ತೊಟ್ಟುಕೊಂಡ ಗೆರಿಗೆರಿ ನಿಲುವಂಗಿಯಿಂದ ಅವನು ಹಳೆಯ ಕಾಲದ ಬೇಕತಾಶಿ ಫಕೀರ ಇರಬೇಕೆಂದೆನ್ನಿಸುತ್ತದೆ.

ಸೂರ್ಯ ಮತ್ತು ಹುಣ್ಣಿಮೆಯ ಚಂದ್ರ ಎರಡೂ ಆಕಾಶದಲ್ಲಿರುವುದನ್ನು ನಾನು ನೋಡಿದೆ. ಸನೋಬರ ವೃಕ್ಷಗಳ ಮೇಲೆ ರಾತ್ರಿಯ ಪಕ್ಷಿಗಳು ಹಾಡು ಹಾಡುತ್ತಲಿದ್ದವು. ಮತ್ತೆ ಸೂರ್ಯ ಮತ್ತು ಚಂದಿರ ಎರಡೂ ಸರೋವರದ ನೀರಿನಲ್ಲಿ ಬಿದ್ದವು. ಸರೋವರದ ಬಣ್ಣ ಕಪ್ಪಗಾಯಿತು.

ಆ ವೃದ್ಧ ಕಣ್ಣು ತೆರೆದು ನೋಡಿದ. ನೋಡಿ 'ಯಾಹೂ' ಎಂದು ಕೂಗಿದ. ಬೇಕತಾಶಿ ಫಕೀರರ ನಮಸ್ಕಾರ ಮಾಡುವ ಪದ್ಧತಿ ಅದೆಂದು ನನಗೆ ಗೊತ್ತಿತ್ತು.

ಒಮ್ಮೆಲೇ ಆ ಮುದುಕ ಮಾತಾಡತೊಡಗಿದ, ಯಾರೋ ಅದೃಶ್ಯ ಟೇಪ ರಿಕಾರ್ಡ ಹಚ್ಚಿದರೇನೋ ಎನ್ನುವ ಹಾಗೆ.

''ನಾನು ವಿಚಿತ್ರವಾದ ಪ್ರಕಾಶದಲ್ಲಿ ಸಂಚರಿಸುತ್ತಿದ್ದೇನೆ. ಅದು ಆ ಬೆಳಕು ಭೂಮಿಯದೂ ಅಲ್ಲ, ಆಕಾಶದ್ದೂ ಅಲ್ಲ, ಅದು ಈಶ್ವರೀಯ ಪ್ರಕಾಶ ಪುಂಜದ ಸಪ್ತ ಜ್ಯೋತಿಗಳಿಂದ ಕೂಡಿದ್ದಾಗಿದೆ. ಕೇಳು, ಜೀವಂತವಾಗಿರುವವರು ಈಗಿನಿಂದಲೇ ಸತ್ತು ಹೋಗಿದ್ದಾರೆ. ಸತ್ತವರು ಜೀವಂತವಾಗಿದ್ದಾರೆ. ತಲೆಬುರುಡೆಗಳು ಪ್ರಕಾಶಮಾನವಾದ ಗುಹೆಗಳಲ್ಲಿ ಹಾಡುತ್ತಲಿವೆ. ಇವುಗಳ ಧ್ವನಿ ಯಾವಾಗ ಸಮುದ್ರದ ಆರ್ಭಟ ವಾಗುತ್ತದೋ ಆಗ ನಾನು ನನ್ನ ಸ್ಥಾನದಲ್ಲಿ ನಿರೀಕ್ಷಣೆಯಲ್ಲಿರುತ್ತೇನೆ''.

''ನಾನು ದಿನಾ–ರಾತ್ರಿ ಭಗವಂತನ ಭಯವೆಂಬ ಬೀಸೋಕಲ್ಲು ಬೀಸುತ್ತಿರು ತ್ತೇನೆ, ಮತ್ತು ಮಾಲಿಕನ ಮರ್ಜಿಯ ಬೀಸೋಕಲ್ಲಿನಿಂದ ಕಾಳು ತೆಗೆಯುತ್ತೇನೆ. ಓ! ಮೇಡಂ, ನೀವೇನು ಬಯಸುತ್ತೀರಿ ?''

''ಮಹಾತ್ಮನೇ'' ಎನ್ನುತ್ತ ನಾನು ಬೇಡಿಕೊಂಡೆ ಆ ವೃದ್ಧನಲ್ಲಿ, ''ಓರ್ವ ಅಪರಿಚಿತ ಹೆಣ್ಣುಮಗಳು ನನ್ನನ್ನು ನಿಮ್ಮಲ್ಲಿಗೆ ಕಳಿಸಿದ್ದಾಳೆ. ಆಕೆ ಇಲ್ಲಿಂದ ಸಾವಿರಾರು ಮೈಲುಗಳ ದೂರದಲ್ಲಿ ಬಿರುಗಾಳಿಯಿಂದ ಕೂಡಿದ ನದಿ ತಟದಲ್ಲಿರುತ್ತಾಳೆ. ಆಕೆ ಬರೆದಿದ್ದಾಳೆ–

''ನದಿಗಳ ತೆರೆಗಳು ಮರಳಿ ಮರಳಿ ತಟಕ್ಕೆ ಮರಳುತ್ತವೆ. ಆದರೆ ಸಮಯ ಮರಳಿ ಬರುವುದಿಲ್ಲ. ಬಿರುಗಾಳಿ ಬೀಸಿತು. ಅಡವಿಯಲ್ಲಿಯ ಎತ್ತರದ ಗಿಡಗಳಲ್ಲಿದ್ದ ಎಲೆಗಳು ಕೆಂಪಾದವು. ಟೊಂಗೆಗಳು ಮುರಿದು ಬಿದ್ದವು ಹಾಗೂ ನೀರಿನಲ್ಲಿ ಬಾತುಕೋಳಿಗಳು ಚೀರಿದವು. ಬುದ್ಧಿ ಉಳಿದಿದೆ ಆದರೆ ಶರೀರ ಹಾಳಾಗಿದೆ.

ಎರಡು ವರ್ಷಗಳ ಹಿಂದೆ ನನ್ನ ಗಂಡ ಮಾಯವಾದ. ನಾನು ಹುಚ್ಚಿ, ಎಲ್ಲರನ್ನೂ ಕೇಳುತ್ತ ತಿರುಗುತ್ತೇನೆ. ಯಾರೊಬ್ಬರೂ ಏನನ್ನೂ ಹೇಳುತ್ತಿಲ್ಲ. ಮೇಡಂ, ನಿಮಗೆ ತುರ್ಕಸ್ಥಾನದ ನೆಲದಲ್ಲಿ ಈ ಎಲ್ಲ ರಹಸ್ಯ ಬಲ್ಲವನು ಯಾವನಾದರೂ ಸಿಗಬಹುದೋ ಏನೋ !...''

ಈ ಪತ್ರ ನಾನು ಓದಿ ಹೇಳುತ್ತಿರುವ ಸಮಯದಲ್ಲಿಯೇ ಆಕಾಶಮಲ್ಲಿಗೆ ಗಿಡದ ಹತ್ತಿರ ನಿಂತ ಆ ವಯೋವೃದ್ಧ ಕೈಕಟ್ಟಿಕೊಂಡು ತಲೆಬಾಗಿಸಿದ್ದ.

ಆ ಫಕೀರ ತನ್ನ ಕೈಗಳನ್ನು ಕಿಸೆಯಲ್ಲಿಂದ ಹೊರ ತೆಗೆದ ಹಾಗೂ ಕಣ್ಣೆತ್ತಿ ನೋಡಿದ ಮತ್ತು ಹೇಳಿದ–

''ಹಂಗ್ರಿ ದೇಶದಲ್ಲಿ ನನ್ನೋರ್ವ ಪ್ರಸಿದ್ಧ ಪೂರ್ವಜ ಹಾಜಿ ಗುಲಬಾಬಾ ಬೇಕತಾಶೀಯ ದರ್ಗಾ ಇದೆ. ಒಂದು ಕಾಲ ಇತ್ತು, ಬುಖಾರಾ, ಇಸ್ತಾಂಬೋಲ, ರೂಮಿನಿಯಾ ಮತ್ತು ಅಲ್ಬಾನಿಯಾಗಳಿಂದ ಯಾತ್ರಿಕರು ಆತನ ಗೋರಿಯ ದರ್ಶನಕ್ಕಾಗಿ ಬರಿಗಾಲಿನಿಂದ ಹಂಗರಿಗೆ ಹೋಗುತ್ತಿದ್ದರು. ಓ ! ಮೇಡಂ, ನಾನು ಅಲ್ಲಿಗೆ ಹೋದರೆ ಮರಳಿ ಬಂದ ಮೇಲೆ ನಿಮಗೆ ತಿಳಿಸುವೆ.''

ಫಕೀರ ಒಂದು ಸನೋಬರ ಗಿಡದ ನೆರಳಿನಲ್ಲಿ ನಿಂತು ಕಣ್ಣು ಮುಚ್ಚಿಕೊಂಡ, ಕೆಲಕ್ಷಣಗಳ ನಂತರ ಕಣ್ಣು ತೆರೆದು ಹೀಗೆ ಹೇಳತೊಡಗಿದ–

''ನಾನು ಡೈನ್ಯೂಬದ ದಂಡೆಯಲ್ಲಿರುವ ಆ ಭಗ್ನಾವಶೇಷ ದರಗಾದ ಮೇಲೆ ಭೂತ ಮತ್ತು ಭವಿಷ್ಯವನ್ನು ನೋಡಿದೆ. ಕೇಳು, ನನ್ನ ಮುತ್ತಜ್ಜ ಹಾಜೀ ಅದನಾನ ಆಫಂದಿ ಒಂದು ಕಾರವಾನ್‌ದ ಜೊತೆಗೆ ಖತಾ ದೇಶದತ್ತ ಹೊರಟಿದ್ದ, ಆಗ ಯಾರಕಂದದ ಹತ್ತಿರ ಅವರಿಗೆ ಬೇಕತಾಶ ಕುಲಿ ಅಂದರೆ ಭಗವದ್ಭಕ್ತರ ಪರಂಪರೆಯ ಓರ್ವ ಯುವ ಫಕೀರ ಸಿಕ್ಕ. ಅವನು ಹಾಜೀ ಅದನಾನನನ್ನು ಹೊರಳಿ ನೋಡಿ ಹೇಳಿದ–''ಮಾಲಿಕ್, ವಿಚಾರ ಮಾಡಿ ನೋಡಿ, ವಿಚಾರ ಮಾಡಿ ನೋಡಿ, ಸಾವಧಾನವಾಗಿರಿ.'' ಇದರ ನಂತರ ಅವನು ರಾಜಮಾರ್ಗದ ದಂಡೆಯ ಮೇಲಿದ್ದ ಒಂದು ಫಕೀರರ ವಾಸಸ್ಥಾನದ ಬಾಗಿಲಲ್ಲಿ ಮಾಯವಾದ. ಅದೇಕ್ಷಣ ಬೇರೆಡೆ ಹೊರಟುಹೋದ. ಸಮರಕಂದ ಮ್ಯುಜಿಯಂದಲ್ಲಿ ಒಳ ಹೊಕ್ಕ. ಈಗ ಅವನು ಸಮರಕಂದ, ಉಜಬೈಕ್ ಸಮಾಜವಾದಿ ಸೋವಿಯತ್ ಗಣರಾಜ್ಯದ ಸಂಗ್ರಹಾಲಯದ ಒಂದು ಮಿರರ್‌ಕೇಸ್‌ನಲ್ಲಿ ನಿಂತಿದ್ದಾನೆ. ಅವನ ಕಣ್ಣುಗಳು ಗಾಜಿನವಾಗಿವೆ. ಮೇಡಂ, ನನ್ನ ಸಂಗಡ, ಬನ್ನಿ.''

ವೃದ್ಧ ತನ್ನ ಲಾಠಿಯೊಂದಿಗೆ ಬಾಗಿ ಬಾಗಿ ನನ್ನ ನೆರಳಿನಂತೆ ನನ್ನ ಮುಂದೆ ಮುಂದೆ ನಡೆಯಲಾರಂಭಿಸಿದ.

ನಾವು ಡಾನ್ ನದಿಯ ತಟದಲ್ಲಿರುವ ಧರ್ಮಶಾಲೆ ತಲುಪಿದೆವು. ಇದು ಕಟ್ಟಿಗೆಯ ಬಂಗ್ಲೆಯಾಗಿತ್ತು. ಅದರ ಮಾಳಿಗೆ ಕೆಂಪು ಬಣ್ಣದ್ದಾಗಿತ್ತು. ಸುತ್ತಲೂ ಸೇಬು ಹಣ್ಣಿನ ಗಿಡಗಳಿದ್ದವು. ಆ ಫಕೀರ ನನ್ನನ್ನು ಪಾವಟಿಗೆಗಳ ಮೇಲೆಯೇ ಬಿಟ್ಟು, ಬಿರುಗಾಳಿ ಚಲಿಸಿದ ಹಾಗೆ ತಾನು ಒಳಗೆ ಹೊರಟು ಹೋದ. ಅವನು ಬಹಳ ಹೊತ್ತಿನವರೆಗೆ ಹೊರಗೆ ಬರದಿದ್ದಾಗ ನನಗೆ ತುಂಬ ಹೆದರಿಕೆಯಾಗತೊಡಗಿತು. ನಾನು ಕಳ್ಳಹೆಜ್ಜೆ ಯಿಂದ ಮುಂದೆ ಹೋಗಿ ಕಿಟಕಿಯ ಹತ್ತಿರ ನಿಂತು, ಒಳಗೆ ಹಣಿಕಿಕ್ಕಿದೆ.

ಒಳಗೊಂದು ಚೌಕಾಕಾರದ ಕೋಣೆಯಿದೆ. ಅದರ ನೆಲಗಟ್ಟು ಕೂಡ ಕಟ್ಟಿಗೆಯದೇ ಆಗಿದೆ. ಮಾಳಿಗೆ ತುಂಬ ಕೆಳಗಿದೆ ಹಾಗೂ ಅಲ್ಲಿಯ ಕಂಬಗಳು ಕಪ್ಪು ಬಣ್ಣದ್ದಾಗಿವೆ. ನೆಲದ ಮೇಲೆ ಅಜರಬಾಯಿಜಾನ್‌ದ ರತ್ನಗಂಬಳಿ ಹಾಸಲಾಗಿದೆ. ಅದರ ಮೇಲೆ ಒಂದೇ ಆಕಾರ ಮತ್ತು ರೂಪದ ಇಬ್ಬರು ಫಕೀರರು ಎದುರು–ಬದುರು ಮೌನವಾಗಿ ಕುಳಿತಿದ್ದಾರೆ. ಒಂದು ಮೂಲೆಯಲ್ಲಿ ಫ್ರೆಂಚ್ ಸ್ಟೋವ್ ಇರಿಸಿದ್ದಾರೆ. ಅದರ ಮೇಲೆ ಗುಲಾಬಿ ಹೂಗಳ ಚಿತ್ತಾರವಿದೆ. ಒಂದು ಕಂಬಕ್ಕೆ ತಂಬೂರಿ ಇಳಿ ಬಿದ್ದಿದೆ. ನೆಲದ ಮೇಲೆ ಒಂದು ಕೊಳಲಿದೆ. ಇದು ಮೌಲಾನಾ ಜಲಾಲುದ್ದೀನ ರೂಮಿಯ ಬಹು ಪ್ರಿಯವಾದ ಕೊಳಲಿನ ಪ್ರತಿನಿಧಿಯಾಗಿದೆ.

ಇಬ್ಬರೂ ಫಕೀರರು ಗಪ್–ಚುಪ್ ಕುಳಿತಿದ್ದಾರೆ. ಅವರಲ್ಲೊಬ್ಬ ಎದ್ದ. ದಕ್ಷಿಣದತ್ತ ನಡೆದ, ಅದು ಪ್ರಕಾಶಮಾನವಾದ ಮದೀನಾ ಇರುವ ದಿಕ್ಕೆಂಬುದು ನನಗೆ ಗೊತ್ತಿತ್ತು. ಫಕೀರ ತನ್ನ ಟೊಂಕಕ್ಕೆ ಕಟ್ಟುವ ಬಟ್ಟೆ ತೆಗೆದ, ಅದು ಅಜರಬಾಯ್ಜಾನ್‌ದ ಕುರಿಗಳ ಉಣ್ಣೆಯಿಂದ ಮಾಡಲ್ಪಟ್ಟಿತ್ತು. ಅದರಿಂದ ಒಂದು ಸಣ್ಣ ಕಲ್ಲು ಹೊರತೆಗೆದ. ಅಲ್ ಮುಸ್ತಫಾ ಹೆಚ್ಚಾಗಿ ಉಪವಾಸವೇ ಇರುತ್ತಿದ್ದರಿಂದ ತಮ್ಮ ಹೊಟ್ಟೆಗೆ ಕಲ್ಲುಕಟ್ಟಿ ಕೊಳ್ಳುತ್ತಿದ್ದರು. ಅದೇ ರೀತಿ ಬೇಕತಾಶೀ ಫಕೀರರು ಕೂಡ ಪೈಗಂಬರರ ಈ ಪರಂಪರೆಯನ್ನು ಅನುಸರಿಸುತ್ತಾ ಬಂದರು. ವೃದ್ಧ ಬೇಕತಾಶೀ ಸೂಫೀ ಪರಂಪರೆಯ ರೀತಿ ಆರಂಭಿಸಿದ. ಅವನು ಬಟ್ಟೆಗೆ ಗಂಟು ಹಾಕಿದ, ಮತ್ತೆ ಬಿಚ್ಚಿದ, ಮತ್ತೆ ಗಂಟು ಹಾಕಿದ ಮತ್ತೆ ಬಿಚ್ಚಿದ, ಹೀಗೆಯೇ ಅದೆಷ್ಟೋ ಸಲ ಮಾಡಿದ.

''ನಾನು ಕೆಟ್ಟದ್ದನ್ನು ಕಟ್ಟುತ್ತೇನೆ, ಒಳ್ಳೆಯದನ್ನು ಬಿಚ್ಚುತ್ತೇನೆ, ನಾನು ಅಜ್ಞಾನ ವನ್ನು ಕಟ್ಟುತ್ತೇನೆ ಮತ್ತು ಜ್ಞಾನವನ್ನು ಬಿಚ್ಚುತ್ತೇನೆ, ನಾನು ವಿನಮ್ರತೆ ಮತ್ತು ಅಸಮರ್ಥತೆಯ ನಗೆಯೊಂದಿಗೆ ಇಂದ್ರಿಯ ನಿಗ್ರಹದ ಹೊಲ ಹರಗುತ್ತೇನೆ. ನಾನು ಆತ್ಮಜ್ಞಾನದಲ್ಲಿ ವೃದ್ಧನಾಗುತ್ತೇನೆ ಮತ್ತು ಸಂತೋಷದ ಹಂಚಿನಲ್ಲಿ ನನ್ನ ರೊಟ್ಟಿ ಬೇಯಿಸಿಕೊಳ್ಳುತ್ತೇನೆ.''

ಆಗ ನಾನು ಕಿಟಕಿಯಿಂದ ಹಿಂದಕ್ಕೆ ಸರಿದೆ, ಆಕಾಶದತ್ತ ನೋಡಿದೆ. ಹಾಗೂ ಒಂದು ಬೇಕತಾಶೀಯ ಪ್ರಾರ್ಥನೆ ಮಾಡಿದೆ–''ಓ ! ಯಾರಿಗೆ ವಂಶಾವಳಿ ಎಂಬುದಿಲ್ಲವೋ, ಯಾವ ಬೇಕತಾಶ ಕಾಲದೊಂದಿಗೆ ಚಲಿಸುತ್ತಿರುತ್ತಾನೋ ಕತ್ತಲೆ

ರಾತ್ರಿಯಲ್ಲಿ ಕಪ್ಪು ಕಲ್ಲಿನ ಮೇಲೆ ಹರಿದಾಡುವ ಇರುವೆಯ ದನಿ ಯಾವಾತ ಕೇಳಿಕೊಳ್ಳುತ್ತಾನೋ'' ಎನ್ನುತ್ತ ನಾನೊಂದು ಚಾಲಾಕಿ ಮಾಡಿದೆ. ಇದರೊಂದಿಗೆ ನನ್ನ ಸಂದೇಶವನ್ನೂ ಅದರಲ್ಲಿ ಕೂಡಿಸಿದೆ. ''ಓ ! ಬೇಕತಾಶ ! ನೀನು ದುಃಖಿಗಳ ಆರ್ತತೆಯನ್ನೇ ಕೇಳುವುದಿಲ್ಲ.''

ಆದರೆ ನನ್ನೀ ಧ್ವನಿ ಫಕೀರರ ಕುರಾನ ಪಠಣದ ಸ್ವರಗಳಲ್ಲಿ ಮುಳುಗಿ ಹೋಯಿತು. ಈಗವರು ಕೂಗಿಕೊಳ್ಳುತ್ತಿದ್ದಾರೆ- ''ಓ ನದಿ, ಯಾವುದರ ಮೇಲೆ ಮೋಡ ಸದಾ ತನ್ನ ನೆರಳನ್ನು ಹೊಚ್ಚಿರುತ್ತದೆಯೋ ಅಲಮುಸ್ತಫಾ-ಜಗತ್ತಿನ ಮೇಲೆ ಕರುಣೆದೋರು, ಕರುಣೆ....ದಯೆ......ದಯೆ....... ದೋರು...ಕರೀಮ ಅಲ್ಲಾಹ... ಯಾಹೂ...'' ಎಂಬ ಫಕೀರರ ಜಯಘೋಷದಿಂದಾಗಿ ಕೋಣೆ ಪ್ರತಿಧ್ವನಿಸಿತು.

ಮರುಕ್ಷಣವೇ ಹಾಜೀಸಲೀಮ ಅಫಂದಿ ಎಂಬ ಫಕೀರ ಒಂದು ಸುರಾಯಿ ಮತ್ತು ಗಡಿಗೆಯೊಂದನ್ನು ಕೈಯಲ್ಲಿ ತಗೊಂಡು ಹೊರಗೆ ಬಂದ- ''ಮೇಡಂ, ಆ ದುರ್ದೈವಿ ಹೆಣ್ಣು ಮಗಳ ಬಗ್ಗೆ ನನಗೇನು ಮಾಡಲು ಸಾಧ್ಯವೋ ಅದನ್ನೆಲ್ಲ ಮಾಡುವೆ. ಆದರೆ ಸೂಫೀ ಪರಂಪರೆಯ ಪ್ರವರ್ತಕ ಅಲೀ ಮುರ್ತಜಾ ಷಾವಿಲಾಯತ್ ಹೇಳಿದಂತೆ- ''ಏನೆಲ್ಲ ಅವರ ಹಣೆಯಲ್ಲಿ ಬರೆಯಲಾಗಿದೆಯೋ ಅದು ಸದಾಕಾಲ ಇರುತ್ತದೆ.''

ಆಗ ನಾನು ಒಂದು ಅತ್ಯಂತ ಅಸಂಗತ ಮಾತನ್ನು ಹಾಜೀಸಲೀಮಗೆ ಹೇಳಿದೆ-''ನೋಡಿ, ನನ್ನ ತಾಯ್ನಾಡಿನಲ್ಲಿ, ಯಾವುದು ಇಲ್ಲಿಂದ ಸಾವಿರಾರು ಮೈಲು ದೂರವಿದೆಯೋ, ನಾವಿರುವ ಊರು, ಯಾವುದು ಈಗ ಅವಶೇಷವಾಗಿದೆಯೋ, ಅಲ್ಲಿ ಒಂದು ನೆಲ ಮಾಳಿಗೆ ಇದೆ. ಆ ನೆಲ ಮಾಳಿಗೆಯಲ್ಲಿ ಹಳೆಯ ಗ್ರಂಥಗಳ ರಾಶಿಯೇ ಇದೆ. ಇನ್ನೊಂದು ಹಳೆಯ ಫ್ರೆಂಚ್ ಸ್ಟೋವ ಇದೆ. ಅದರ ಮೇಲೆ ಗುಲಾಬಿ ಹೂಗಳ ಚಿತ್ತಾರವಿದೆ, ಇಂಟಲೆಕ್ಚ್ಯುವಲ್ ಇಲಿಗಳು ಈ ಪುಸ್ತಕಗಳನ್ನು ಕಡಿಯುವಲ್ಲಿ ಮಗ್ನ ವಾಗಿವೆ. ಇವುಗಳನ್ನು ಇಂಗ್ಲಂಡ್, ಫ್ರಾನ್ಸ್, ಇಜಿಪ್ತ ಮತ್ತು ಈರಾನ್ ದೇಶಗಳಲ್ಲಿ ಯಾವುದೋ ಕಾಲದಲ್ಲಿ ತುಂಬ ಆಸಕ್ತಿಯಿಂದ ಬರೆಯಲ್ಪಟ್ಟಿತ್ತು. ಹಾಗೂ ಮುದ್ರಿಸಲ್ಪಟ್ಟಿತ್ತು.

ಕುಸತುಂತುನಿಯಾ 1872, ಲಂಡನ್ ಈ. ಸಿ. ಫ್ಲೋರ 1884, ತೆಹರಾನ್ 1892, ಕೈರೋ 1902 ಮತ್ತು ಒಂದು ತುಂಬ ಆಧುನಿಕ ಎನ್ನುವ ಹಾಗಿರುವ ಪುಸ್ತಕವೂ ಅಲ್ಲಿದೆ. ಲಂಡನ್‌ದ ರಸೆಲ್ ವರ್ತುಲ, 1952, ಆ ಕಾಲದ ಒಂದು ಘಟನೆ.

ಮಂಜು ತುಂಬಿದ್ದ ಸಂಜೆಯ ಸಮಯದಲ್ಲಿ ಫಿರಂಗಿಗಳ ಈ ವಯೋವೃದ್ಧ ಸಂತನನ್ನು ಇವನ ಫೈಬರ ಆ್ಯಂಡ್ ಫೈಬರ ಕಚೇರಿಯಲ್ಲಿ ಭೇಟಿಯಾಗಿದ್ದೆ. ಆಗ ಆತ ನನ್ನೊಂದಿಗೆ ತುರ್ಕಿಗಳ ಫಕೀರರ ಬಗ್ಗೆ ಮಾತನಾಡಿದ್ದ. ಏಕೆಂದರೆ ಆತ ಸ್ವತಃ ಆ ಪಂಥದೊಂದಿಗೆ ಸಂಬಂಧ ಹೊಂದಿದ್ದ. ನನಗೆ ಕೌನಿಯಾದ ಈ ಮೃತ ಪರಂಪರೆಯ ಬಗ್ಗೆ ಕೊಂಚ ಹೇಳಿ. ಏಕೆಂದರೆ ಕೌನಿಯಾ ಕೂಡ ಈಗ ಕೇವಲ ಟೂರಿಸ್ಟ್ ಅಟ್ರೆಕ್ಷನ್ ಆಗಿದೆ''.

ಫಕೀರ ತಲೆ ಬಾಗಿಸಿದ ಹಾಗೂ ಅಳತೊಡಗಿದ, ಮತ್ತೆ ಕಣ್ಣೀರು ಒರಸಿಕೊಂಡು ಒಂದು ಅಸಂಗತ ಮಾತು ಹೇಳಿದ–

''ಮೇಡಂ, ಭಗವಂತನ ಇಚ್ಛೆಯಂತೆ ನನ್ನೊಂದಿಗೇ ಜನ್ಮ ತಳೆದಿರುವ, ಅವನು ನನ್ನೊಳಗೇ ಇದ್ದಾನೆ, ನಾನು ಸಾಯುವುದಕ್ಕೆ ನಲವತ್ತು ದಿನ ಮೊದಲು ಅವನು ಸತ್ತು ಹೋಗುತ್ತಾನೆ. ಈ ನಲವತ್ತು ದಿನಗಳಲ್ಲಿ ನಾನೇನು ಮಾಡಬಲ್ಲೆ? ಏಕೆಂದರೆ ಅವನು ನನಗೆ 'ಖಬರದಾರ' ಎಂದು ಹೇಳುತ್ತಲಿರುತ್ತಾನೆ.'' ಎನ್ನುತ್ತ ಇದ್ದಕ್ಕಿದ್ದಂತೆ ಹಾಜೀ ಸಲೀಮ ಮತ್ತೆ ಚೀರಿಕೊಂಡ–''ಈ ಸೃಷ್ಟಿಯ ಒಡೆಯ ಹಜರತ್ ಅಲೀ ಅಪ್ಪಣೆ ಕೊಡಿಸಿದ್ದಾನೆ. ಏನೆಲ್ಲ ಬರೆಯಲಾಗಿದೆಯೋ, ಅದು ಅಚಲವಾಗಿದೆ''.

''ಸಂತ'' ಎನ್ನುತ್ತ ನಾನು ಅರಿಕೆ ಮಾಡಿಕೊಂಡೆ–''ಮೇಲಿನವರ ಮಾತನ್ನು ನಾನರಿಯೆ. ಇಲ್ಲಿ ಏನೆಲ್ಲ ಬರೆಯಲಾಗುತ್ತದೆಯೋ, ಅದೆಲ್ಲ ಬಹಳ ಸಲ ತುಂಬ ಭಯಾನಕವಾಗಿ ಪರಿಣಮಿಸುತ್ತದೆ.''

ಸಂತ ''ಹೌದು'' ಎನ್ನುವಂತೆ ತಲೆ ಅಲ್ಲಾಡಿಸಿದ.

ಮತ್ತೆ ನಾನು ಹೇಳಿದೆ–''ಆ ಒಡೆಯ ಫರಮಾನ್‌ದ ಮೇಲೆ ಸಹಿಮಾಡಿದ ಕೂಡಲೇ ಆ ಅಕ್ಷರದ ಶಕ್ತಿಶಾಲಿ ದೈತ್ಯ ಹಾರಿ ಪೂರ್ವದ ಕಡೆ ಹೋದ, ಅಲ್ಲಿ ಅವನು ಸಂಪೂರ್ಣ ಸರ್ವನಾಶಮಾಡಿದ. ಬುದ್ಧಿ ಹಾಳಾಗಿ ಹೋಯಿತು, ಶರೀರವೆಲ್ಲ ತುಂಡು ತುಂಡಾಯಿತು. ಓ ! ಸಂತ ನಾನು ಆ ಅಪರಿಚಿತ ಹೆಣ್ಣುಮಗಳಿಗೆ ಏನೆಂದು ಉತ್ತರಿಸಲಿ?''

''ವಿಚಾರಿಸು....ಗಂಭೀರವಾಗಿ ಆಲೋಚಿಸು... ಸಾವಧಾನವಾಗಿರು...ಎಚ್ಚರದಿಂದಿರು...''

''ಆ ಅಪರಿಚಿತ ಹೆಣ್ಣು ಮಗಳು ತನ್ನ ಗಂಡನ ಹೆಸರು ಅಬುಲ್ ಮನ್ಸೂರ ಎಂದೂ ಹಾಗೂ ಅವನು ಚಿತ್ರಕಾರನಿದ್ದನೆಂದೂ ಬರೆದಿದ್ದಾಳೆ.''

''ಏನಂದೇ? ಅವನು ತನ್ನ ತಲೆ ಉಳಿಸಿಕೊಳ್ಳಲೋಸುಗ ಅಡವಿಯತ್ತ ಓಡಿ ಹೋಗಲಿಲ್ಲವೋ?'' ಎಂದು ವಿಚಾರಿಸಿದ ಸಂತ.

''ಇಲ್ಲ, ಹೋಗಲಿಲ್ಲ. ಆ ಅಪರಿಚಿತ ಹೆಣ್ಣು ಮಗಳು ಬರೆದಿದ್ದಾಳೆ–ಅವನು ಒಂದು ಕೆರೆಯ ದಂಡೆಯ ಮೇಲೆ ಕುಳಿತು ಅಡವಿ ಬಾತುಕೋಳಿಯ ಚಿತ್ರ ಬಿಡಿಸುತ್ತಲಿದ್ದನಂತೆ...''

''ತುಂಬ ಮೂರ್ಖನಿರಬೇಕು ಹಾಗಾದರೆ'' ಎಂದು ಸಂಕ್ಷಿಪ್ತವಾಗಿ ಹಾಜೀ ಸಲೀಮ ಹೇಳಿದ.

''ಸಾವಿರಾರು ಲಕ್ಷ–ಲಕ್ಷಜನ ಅಡವಿಯತ್ತ, ಗಡಿಯತ್ತ ಓಡಿ ಹೋದರು, ಅವರ ಕಾಲಲ್ಲಿಯ ನೆಲ ಕುಸಿದು ಹೋಗಿತ್ತು ಹಾಗೂ ತಲೆಯ ಮೇಲೆ ಖಡ್ಗದ ನೆರಳಿತ್ತು. ಯಾವ ಖಡ್ಗವೂ ಇರಲಿಲ್ಲ, ಹಜರತ್ ಅಲಿಯ ಖಡ್ಗದ ಹೊರತು'' ಎಂದು ಹಾಜೀ ಸಲೀಮ ನಡುವೆಯೇ ಹೇಳಿದ.

ನಾನು ಸುಮ್ಮಳಾದೆ.

''ಪ್ರಳಯ ಬಂದಾಗ ಅವನು, ಅವನೊಬ್ಬನೇ ಇದ್ದನೇನು?'' ಎಂದು ಹಾಜೀ ಸಲೀಮ ವಿಚಾರಿಸಿದ.

''ಇಲ್ಲ, ಆ ಕ್ರೂರ ನರಸಂಹಾರದ ಸಮಾರಂಭದಲ್ಲಿ ಅವನೂ ಇದ್ದ.''

''ಇದೆಲ್ಲಿಯ ಸುದ್ದಿ?''

''ಎಲ್ಲ ಕಡೆಯ. ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಬೇಕತಾಶನ ಮುಖ ಎಲ್ಲ ದಿಸೆಯಲ್ಲೂ ಹರಡಿದೆ.''

ನಾನು ಮಾತು ಮುಂದುವರಿಸಿದೆ–ಲಕ್ಷಗಟ್ಟಲೆ ಜನ ಗಡಿಗಳತ್ತ ಓಡಿದರು. ಅವರೆಲ್ಲ ಮೌನಿಗಳಾಗಿ ಪೂರ್ವದಿಂದ ಪಶ್ಚಿಮದತ್ತ ಬಂದರು. ಬಂದಂತೆ ತಲೆ ಬಾಗಿಗೊಂಡೇ ಮತ್ತೆ ಮರಳಿದರು. ನಾನಾಗ ಬಹಳಷ್ಟು ಯೋಚಿಸಿದೆ. ಇದೆಲ್ಲ ಏತಕ್ಕಾಗಿ ಹೀಗಾಯಿತು–ಎಂದು. ಆಗ ನನಗೆ ನೆನಪಾಯಿತು. ಹೀಗೆ ಬರೆಯಲಾಗಿದೆ, ತಮ್ಮ ಆತ್ಮದ ಹಜ್ ಯಾತ್ರೆ ಮಾಡಿದರೆ ಎಲ್ಲ ರಹಸ್ಯಗಳು ಬಯಲಾಗುತ್ತವೆ. ನಾನು ನನ್ನ ಆತ್ಮದ ಹಜ್ ಯಾತ್ರೆ ಮಾಡಿದೆ ಆದರೆ, ಯಾವುದರ ರಹಸ್ಯವೂ ಬಯಲಾಗಲಿಲ್ಲ.

''ತಾಯೇ, ಬಹುಶಃ ನಿಮ್ಮ ಆತ್ಮಕ್ಕೆ ನಾಸ್ತಿಕತೆಯ ಪ್ರಭಾವ ಹೆಚ್ಚಾಗಿರಬೇಕು'' ಎಂದು ಹಾಜೀ ಸಲೀಮ ಹೇಳಿದ. ಸುರಾಯಿಯಿಂದ ಸ್ವಲ್ಪ ನೀರನ್ನು ಒಂದು ಕುಡಿಕೆಗೆ ಹಾಕಿ ಬಂದು ಬೇಕತಾಶಿ ಪ್ರಾರ್ಥನೆಮಾಡಿದ–''ಅಲ್ಲಾನ ಹೊರತಾಗಿ ಪೂಜೆಗೆ ಅರ್ಹರಾದವರು ಬೇರೆ ಯಾರೂ ಇಲ್ಲ. ಮೊಹಮ್ಮದ ಅವನ ರಸೂಲ ಮತ್ತು ಅಲಿ ಅವನ ದೋಸ್ತ ಮತ್ತು ಇಮಾಮ ಮೆಹದೀ ಮತ್ತು ಮುಸಾಕಲೀ ಮುಲ್ಲಾಹ ಮತ್ತು ಈಸಾರೂಹಉಲ್ಲಾಹ–ತಾಯೇ ಈ ನೀರಿನಲ್ಲಿ ನೋಡಿ.''

''ಏನು ನಿಮಗೆ ಜಾಮೆ ಜಮ್‌ಶೇದ ಸಿಕ್ಕಿತೇನು?'' ಎಂದು ನಾನು ಕೊಂಚ ಗಾಬರಿಯಿಂದ ಕೇಳಿದೆ.

''ನೀರಲ್ಲಿ ನೋಡಿ......'' ಎಂದ. ನಾನು ನೋಡಿದೆ ಮತ್ತು ಹೇಳಿದೆ–

''ಮಹಾತ್ಮಾ, ಇದರಲ್ಲಿ ನನಗೆ ಕುದುರೆಗಾಡಿಯೊಂದು ಕಾಣಿಸುತ್ತಲಿದೆ. ಅಂದರೆ–ಸ್ಟೇಜಕೋಚ–ಅದು ಜಾಪಾನಿ ಸೇತುವೆ ಮೇಲಿಂದ ಸಾಗಿ ಬರುತ್ತಲಿದೆ.'' ಮತ್ತೆ ನಾನು ಒಮ್ಮೆಲೇ ರೇಡಿಯೋ ಅಥವಾ ಟೆಲಿವಿಜನ್‌ದ ಕಾಮಿಂಟೇಟರನ ಹಾಗೆ ಹುರುಪಿನಲ್ಲಿ ಹೇಳ ತೊಡಗಿದೆ–''ಈ ಗಾಡಿಯಲ್ಲಿ ಒಂದು ಕೈಗೊಂಬೆ ಮುಖವಾಡ ಹಾಕಿಕೊಂಡು ಕುಳಿತಿದೆ. ಮತ್ತು ಕೋಚವಾನನ ಮುಖ ಇಲ್ಲ...ಕೋಚವಾನನ ಮುಖ ಇಲ್ಲ...ದೊಡ್ಡದಾದ ನದಿಯಲ್ಲಿ ಒಂದು ಬೋಟ ಚಲಿಸುತ್ತಲಿದೆ...ದಡದಲ್ಲಿ ಚಿಕ್ಕದಾದ ಬೆಟ್ಟ....ಬಿದಿರ ಮೆಳೆ ಹಾಗೂ ಬೆತ್ತದ ಪೊದರುಗಳಿವೆ...ಬೆಟ್ಟದಡಿಯಲ್ಲಿ ಬಿದಿರ ಗುಡಿಸಲು....ಅದರ ಹುಸಿಯಲ್ಲಿ ಓರ್ವ ತೆಳ್ಳಗಿನ ವ್ಯಕ್ತಿ....ಆಡಿನ ದಾಡಿಯಂತಿರುವ ದಾಡಿ.... ಕುಳಿತು ಚಿತ್ರ ಬಿಡಿಸುತ್ತಿದ್ದಾನೆ...ಇದೆಲ್ಲ ಭೂತದ ಚೇಷ್ಟೆಯಿರಬೇಕೆನ್ನಿಸುತ್ತದೆ.....''

''ಭೂತವೂ ಇರಬಹುದು....ಇನ್ನೂ ದಿಟ್ಟಿಸಿ ನೋಡಿ....ನಾವು (ಬೋಟ) ಅಥವಾ ಗಾಡಿಗಳು...''

''ಮಹಾತ್ಮಾ....ಮಹಾತ್ಮಾ...ನಿಮ್ಮ ಬಟ್ಟಲದಲ್ಲಿಯ ನೀರು ಕೆಂಪ ಗಾದವು....''

''ಕರೀಮು ಅಲ್ಲಾಹ.....ಯಾಹೂ.....''ಎಂದು ಹಾಜೀ ಸಲೀಮ ಉಸಿರ್ಗರೆದು ಮೆಲ್ಲಗೆ ಹೇಳಿದ. ಮಣ್ಣಿನ ಗಡಿಗೆ ಎತ್ತಿಕೊಂಡು ತಲೆ ಬಾಗಿಸಿ ಪಾವಟಿಗೆ ಇಳಿಯಹತ್ತಿದ...ಸೇಬು ಗಿಡಗಳ ಗುಂಪಿನೊಳಗಿಂದ ಹಾದು ನದಿಯ ದಡ ತಲುಪಿದ...ಒಮ್ಮೆಲೇ ಉತ್ಸಾಹದಿಂದ, ಕುಶಲತೆಯಿಂದ ಆ ಗಡಿಗೆಯನ್ನು ದೂರ ನೀರಲ್ಲಿ ಒಗೆದ. ಕ್ರಿಕೆಟ್ ಆಟಗಾರ ಚೆಂಡು ಒಗೆದಂತೆ ಒಗೆದು ಬಿಟ್ಟ...ಮತ್ತೆ ಅವನು ಧರ್ಮಶಾಲೆಗೆ ಮರಳಿ ಬಂದ ಹಾಗೂ ಪಾವಟಿಗೆ ಮೇಲೆ ಕುಳಿತು ಹೇಳತೊಡಗಿದ–

''ನಾನು ಭಗವಂತನ ಭಯವೆಂಬ ಬೀಸುಕಲ್ಲು ಬೀಸುತ್ತೇನೆ...ಮತ್ತು ದ್ವೇಷ ಮತ್ತು ಕ್ರೌರ್ಯವನ್ನು ಕಟ್ಟುತ್ತೇನೆ...ಪ್ರೇಮ ಮತ್ತು ಅನುಕಂಪವನ್ನು ಬಿಚ್ಚುತ್ತೇನೆ...ಕ್ರೋಧ ಮತ್ತು ಕ್ರೂರತೆಯನ್ನು ಕಟ್ಟುತ್ತೇನೆ....ಐ....ಏನು ಈ ವ್ಯಕ್ತಿ ಅಬುಲ್ ಮನ್ಸೂರ ಓರ್ವ ಮನುಷ್ಯನಾಗಿದ್ದನೋ ಅಥವಾ ಒಂದು ಪ್ರತೀಕವಾಗಿದ್ದನೋ?''

''ಎರಡೂ.....''

ಆಗ ಹಾಜೀ ಸಲೀಮು ತಲೆ ಬಾಗಿಸಿ ಮತ್ತೆ ಅಳಲಾರಂಭಿಸಿದ...

''ಸಹನೆಯ ಹಂಚಿನ ಮೇಲೆ ನಿನ್ನ ರೊಟ್ಟಿ ನೀನು ಬೇಯಿಸಿಕೊಳ್ಳುತ್ತಿರು ಎಂದು ನಾನು ಈ ಹೆಣ್ಣುಮಗಳಿಗೆ ಬರೆದು ಬಿಡಲೇ?'' ಎಂದು ಕೇಳುತ್ತ ಮತ್ತೆ ಹೇಳಿದೆ–''ಈಗ ನಾನು ಶಾಹಜಾಹಾಬಾದಗೆ ಮರಳಿ ಹೋಗುತ್ತೇನೆ. ನೀವು ಕೂಡ ಇಸ್ತಂಬೋಲ್‌ಗೆ ಮರಳಿ ಹೋಗಿ, ಅಲ್ಲಿ ಮೊಹಲ್ಲಾ ಪೇರಾಯಾತೋಪ ಕಾಪಿಯಲ್ಲಿ ನಿಮ್ಮ ಧರ್ಮಶಾಲೆ ಸ್ಥಾಪಿಸಿ.''

''ನನಗೆ ಮರಳಿ ಹೋಗಲು ಈಗ ಯಾವ ಠಿಕಾನಾನು ಇಲ್ಲ. ಇಸ್ತಂಬೋಲ್‌ದ ಎರಡು ನೂರು ಐವತ್ತಾರು ಧರ್ಮಶಾಲೆಗಳಿಗೆ ಅರ್ಧ ಶತಮಾನವಾಗುತ್ತ ಬಂತು. ಓರ್ವ ಸಾಹೇಬ ಉಲ್ಜಮಾನ ಅಪ್ಪಣೆ ಮೇರೆಗೆ ಅವುಗಳನ್ನು ಮುಚ್ಚಲಾಯಿತು.. ಕೆಲವುಗಳ ಮಾಡಲ್‌ಗಳನ್ನು ಮ್ಯುಜಿಯಂನಲ್ಲಿ ಇರಿಸಿದ್ದಾರೆ...ಈ ಫಕೀರ ಹಕೀರ ಕೂಡ ಒಂದು ಗ್ಲಾಸ್ ಕೇಸ್‌ನಲ್ಲಿ ನಿಂತಿದ್ದಾನೆ..ಎಂದು ಹಾಜೀ ಸಲೀಮ ಕಣ್ಣೀರು ಸುರಿಸುತ್ತ ಹೇಳಿದ..ಕಣ್ಣೀರು ಸುರಿಸುತ್ತಲೇ ಇದ್ದ..ಆ ಕೂಡಲೇ ನಾನು ದಿಟ್ಟಿಸಿ ನೋಡಿದೆ. ಹಾಜೀ ಸಲೀಮನ ನೀಲಿ ಕಣ್ಣುಗಳು ಗಾಜಿನವಾಗಿದ್ದವು....''

''ಒಟ್ಟಿನಲ್ಲಿ ನೀವು ಎಲ್ಲಿಯಾದರೂ ಮರಳಿ ಹೋಗಿ...ಆ ಬೇಕತಾಶಿಗೆ ಹೇಳಿಬಿಡಿ...ಇಡೀ ಜಗತ್ತಿನಲ್ಲಿ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣದಲ್ಲಿ ಅವನ ಶಿಷ್ಯರ ಮೇಲೆ ತುಂಬ ಅನ್ಯಾಯ, ಅತ್ಯಾಚಾರ ಆಗಿದೆ. ಮತ್ತು ಆಗುತ್ತಲಿದೆ. ಅವರಿಗಾಗಿ ಪ್ರಾರ್ಥನೆ ಮಾಡುತ್ತಲಿರಿ'' ಎಂದೆ.

"ನಾವು ಬೇಕತಾಶಿ ಕೇವಲ ಪ್ರಾರ್ಥನೆ ಮಾತ್ರ ಮಾಡುವುದಿಲ್ಲ...ನೀನು ನಮಾಜ ಮಾಡುತ್ತಿಯಲ್ಲ..? ಸೀದಾ ಸಾದಾ ನಮಾಜ?...ನಾವು ನಮಾಜ ಮಾಡುವುದಕ್ಕೆ ಮನ್ಸೂರನ ಶಿಲುಬೆಗೆ ಏರುವುದೆಂದು ಹೇಳುತ್ತೇವೆ...ನಾನು ದಿನವೂ ಶಿಲುಬೆಗೇರುತ್ತೇನೆ. ಹಾಗೂ ಇಲ್ಲವಾಗುತ್ತೇನೆ. ಮತ್ತೆ ಜೀವಿತವಾಗುತ್ತೇನೆ..ನೀನು ಹೀಗೆ ಈ ರೀತಿ ಎಂದೂ ಮಾಡಲಾರಿ....ನಿನಗೇನೊಂದೂ ತಿಳಿಯುವುದಿಲ್ಲ...ನಾನು ದಿನವೂ ನನ್ನ ಇಚ್ಛೆಗಳನ್ನು ಕಟ್ಟುತ್ತೇನೆ...ಸಂತೋಷವನ್ನು ಬಿಚ್ಚುತ್ತೇನೆ...ದೇವನೊಬ್ಬನೇ ಶಾಶ್ವತ...ಶಿಷ್ಯಗೆ ತಾಳ್ಮೆ ಇಲ್ಲ..ಏಕೆಂದರೆ ಅವನ ಜೀವನ ಕೇವಲ ಕೆಲದಿನಗಳವರೆಗೆ...ಮತ್ತು ಸಮಯ ತೀವ್ರಗತಿಯಲ್ಲಿ ಚಲಿಸುತ್ತ ಹೋಗುತ್ತದೆ..."

ಆಗ ನಾನು ಕೊಂಚ ನಾಗರಿಕರ ಹಾಗೆ ಹೇಳಿದೆ–"ಮಹಾತ್ಮಾ ನಿಮಗೆ ಸ್ಪೇನಿನ ಹಾಜೀಯೂಸುಫ್ ಬೇಕತಾಶಿಯ ಹೆಸರು ನೆನಪಿದೆಯೇ? ಹದಿನೈದನೆಯ ಶತಮಾನ ದಲ್ಲಿ ಅವನು ಅಲಿಯಾಅಲರಹಮ್ರಾ ಅಂದಲಸದಲ್ಲಿ ವಾಸವಾಗಿದ್ದ...ಆಗ ಮುಸ ಲ್ಮಾನರ ಮೇಲೆ ಭೀಷಣ ವಿಪತ್ತು ಬಂತು..ಅವರ ತಾಳ್ಮೆ ಯಾವ ಕೆಲಸಕ್ಕೂ ಬರಲಿಲ್ಲ."

ಹಾಜೀ ಸಲೀಮ ನನ್ನ ಮಾತು ಕೇಳಲೇ ಇಲ್ಲವೆನ್ನುವ ರೀತಿಯಲ್ಲಿ ತನ್ನದೇ ಹೇಳುತ್ತಿದ್ದ–"ನಾನು ಅಲ್ಲಾನ ಜ್ಯೋತಿಯ ಬೆಳಕಿನಲ್ಲಿ ನಡೆಯುತ್ತಿದ್ದೇನೆ. ನಾನು ಅಲ್ಲಾನ ತೊಂಬತ್ತೊಂಬತ್ತು ನಾಮದ ಬೆಳಕಿನಲ್ಲಿ ಚಲಿಸುತ್ತಿದ್ದೇನೆ.. 'ಹೂ' ಅದು ಕೆಂಪು ವರ್ಣದ್ದಾಗಿದೆ. 'ಅಹದ್'...ಅದು ಹಸಿರು ವರ್ಣದ್ದಾಗಿದೆ..'ಅಜೀಜ' ಅದು ಕಪ್ಪು ವರ್ಣದ್ದಾಗಿದೆ...'ವದೂದ' ಅದು ವರ್ಣರಹಿತವಾಗಿದೆ...ಹಾಜೀ ಸಲೀಮ ಬೇಕತಾಶಿಯ ಸಂವಾದ ಮುಗಿಯಿತು..."

ಒಮ್ಮೆಲೇ ಅದೃಶ್ಯ ಟೇಪರಿಕಾರ್ಡರದಿಂದ ಚಿತ್ರ–ವಿಚಿತ್ರ ಧ್ವನಿಗಳು ಹೊರಡ ತೊಡಗಿದವು...ಯಾರೋ ಅದನ್ನು ತಿರುವಿ ಹಚ್ಚಿದ್ದಾರೇನೋ ಅನ್ನುವ ಹಾಗೆ... ಏಕೆಂದರೆ ಅಸ್ತಿತ್ವ ಅನೇಕ ಭಾಗಗಳಲ್ಲಿ ಹಂಚಿ ಹೋಗಿದೆ..

ಹಾಜೀ ಸಲೀಮ ಎದುರಿಗೆ ನೋಡುತ್ತಾನೆ..ತನ್ನ ವಸ್ತ್ರ ಅತ್ತಿತ್ತ ಸರಿಸಾಡುತ್ತಾನೆ.. ಧರ್ಮಶಾಲೆಯ ಒಳಗೆ ಹೋಗಿ ಮಾಯವಾದ..ಬಾಗಿಲು ಹೊರಗಿನಿಂದ ಹಾಕ ಲಾಗಿತ್ತು. ಅದಕ್ಕೆ ಜಂಗ ಹತ್ತಿದ ದೊಡ್ಡದಾದ ಬೀಗ ಜಡಿಯಲಾಗಿತ್ತು...

ನಾನು ದ್ರಾಕ್ಷಿ ಹಣ್ಣಿನ ಗಿಡಗಳಿಂದ ಆವೃತವಾದ ಕಿಟಕಿಯಿಂದ ಹಣಿಕಿಕ್ಕಿ ನೋಡಿದೆ. ಹಾಜೀ ಸಲೀಮ ಮತ್ತು ಅವನ ಜೊತೆಗಾರ ತಮ್ಮ ತಮ್ಮ ಕೈಗಳನ್ನು ಎದುರಿಗೆ ಕಟ್ಟಿಕೊಂಡು ಗಪ್–ಚುಪ್ ಎದುರು ಬದುರು ಕುಳಿತಿದ್ದಾರೆ. ನೋಡನೋಡುತ್ತಲೇ ಅವರಿಬ್ಬರೂ ಹಳೆಯ ಹಳದಿ ಕಾಗದದಲ್ಲಿ ಪರಿವರ್ತನೆ ಹೊಂದಿದ್ದರು. ಅರಾರಾತ ಪರ್ವತದ ಕಡೆಯಿಂದ ತಂಪಾದ ಗಾಳಿಯ ಒಂದು ಸೆಳಕು ಬೀಸಿತು...ಅದರಿಂದ ಕಿಟಕಿಯ ಮುರಿದು ಹೋಗಿದ್ದ ಪಟಕ ಫಟ್ ಎಂದು ಸಪ್ಪಳ ಮಾಡುತ್ತ ತೆರೆದುಕೊಂಡಿತು... ಆ ಇಬ್ಬರೂ ಫಕೀರರ ಕಾಗದದ ತುಂಡುಗಳು ಗಾಳಿಗೆ ಕೋಣೆಯ ತುಂಬ ಚಲ್ಲಾಪಿಲ್ಲಿಯಾದವು..ಹೊರಗೆ ಬಂದ ಕೆಲ ತುಂಡುಗಳು ಗಾಳಿಯಲ್ಲಿ ಚಕ್ರಾಕಾರವಾಗಿ ತಿರುಗುತ್ತ..ಕ್ಷುಲ್ಲಕ ಕಾಗದದ ಹಾಗೆ ಗಾಳಿಯಲ್ಲಿ ಹಾರಿ ಹೋದವು...

ತುಗಲಕಾಬಾದದ ಪವಿತ್ರ ಧರಿತ್ರಿಯ ಮೇಲೆ ಪಕ್ಷಿ ಇಳಿಯಿತು. ಮತ್ತು ತನ್ನ ರೆಕ್ಕೆ ಹರಡಿತು. ನಾನು ಕೆಳಗೆ ಬಂದು ಪಟ್ಟಣದತ್ತ ನಡೆದೆ. ದಾರಿಯಲ್ಲಿ ಯೋಚಿಸಿದ...ಇಲ್ಲಿ ಮತ್ತೆ ಶೋಧ ಆರಂಭಿಸುವ ಮುನ್ನ ನನ್ನ ಹಳೆಯ ಮಾಸ್ಕ್...ಮುಖವಾಡದ ರಿಪೇರಿ ಮಾಡಿಸಿಕೊಳ್ಳುವುದು ಅವಶ್ಯವಾಗಿತ್ತು. ಹಾಗೆ ನೋಡಿದರೆ ನಾನು ಹೆಚ್ಚು ಕಾಲದ ನಂತರ ಮರಳಿ ಇಲ್ಲಿಗೆ ಬಂದಿರಲಿಲ್ಲ. ಆದರೂ ಪಟ್ಟಣ ಬದಲಿಯಾಗಿತ್ತು. ಇಂದ್ರ ಪ್ರಸ್ಥದ ಒಂದು ಓಣಿಯಲ್ಲಿ ನಾನು ಓರ್ವ ರಥವಾಹಕನನ್ನು–"ಓ ! ರಥವಾಹಕ ಬಂಧು, ಜಂಬೂದ್ವೀಪದ ಹೊಚ್ಚ ಹೊಸದಾದ ಈಗಿನ ರಾಜಧಾನಿಯ ದಾರಿ ಯಾವುದು?" ಎಂದು ಕೇಳಿದ್ದಕ್ಕೆ ಅವನು "ಗೊತ್ತಿಲ್ಲ" ಎನ್ನುತ್ತ ಕುದುರೆಗಳಿಗೆ ಚಾಬುಕ ನಿಂದ ಹೊಡೆದ...ಕೂಡಲೇ ಅಲ್ಲಿಂದ ಹೊರಟು ಹೋದ...

ಆಗ ನಾನು ಇನ್ನಿಷ್ಟು ಮುಂದೆ ಹೋದೆ. ಅಲ್ಲಿ ಓರ್ವ ಕುದುರೆ ಸವಾರನನ್ನು ಕೇಳಿದೆ–"ಓ ಬಂಧು, ಕುದುರೆ ಸವಾರ, ಒಂದು ವೇಳೆ ನಾನು ತುಗಲಕಾಬಾದ ತಲುಪಿದ್ದಲ್ಲಿ, ನನ್ನ ಮಾಸ್ಕ ರಿಪೇರಿ ಮಾಡುವಂಥ ಒಂದು ಕಾರಖಾನೆ ತೋರಿಸು.."

ಅದಕ್ಕೆ ಕುದುರೆ ಸವಾರ ಹೇಳಿದ–"ನೋಡರಿ, ಎದುರಿಗೆ ಕುತಲುಕ್ ಸಿಗಾರ ಖಾನಮ್‌ಳ ಸಮಾಧಿಯಿದೆ. ಅಂದರೆ ಒಂದೊಮ್ಮೆ ಇತ್ತು. ಅದರ ಮೇಲೆ ಈಗ ಏರಕಂಡಿಷನ್ಡ್ ಕಟ್ಟಡ ಇದೆ. ಅದರೊಳಗೆ ಇರುವ ಪ್ರಾಚೀನ ಮಹಿಳೆ ರೈದರ್ ಹೈಗರ್ಡನ ಕಾದಂಬರಿಗಳಲ್ಲಿ 'ಷಿ' ಎಂಬ ಹೆಸರಿನಲ್ಲಿ ಎಕ್ಟಿಂಗ್ ಮಾಡುತ್ತಿದ್ದಳು..ಆಕೆ ಈಗ ಅಲ್ಲಿ ಬ್ಯೂಟಿಪಾರ್ಲರ್ ನಡೆಸುತ್ತಿದ್ದಾಳೆ..."

ನಾನು ಆ ಕಾರಖಾನೆ ತಲುಪಿದೆ. ಅದರ ಎದುರಿನಲ್ಲಿದ್ದ ಜನ ಜಾತ್ರೆ ನೋಡಿದರ ಅಲ್ಲಿ ಯಾರೋ ಸತ್ತಿರಬೇಕೆನ್ನಿಸುತ್ತಿತ್ತು. ನಾನು ಒಳಗೆ ಹಣಿಕಿಕ್ಕಿದೆ. ವಜ್ರ, ವೈಢೂರ್ಯ ಗಳಿಂದ ಹೊಳೆವ ಆಭರಣಗಳಿಂದ ಸುಶೋಭಿತರಾದ ಅಸಂಖ್ಯಾತ ಮಹಿಳೆಯರು ಸಾಲಾಗಿ ಭಯಾನಕ ಮಿಷನ್ನುಗಳ ಕೆಳಗೆ ತಲೆಕೊಟ್ಟು ಸುಮ್ಮನೆ ಕುಳಿತಿದ್ದರು. ಪಶ್ಚಿಮ ದೇಶದಲ್ಲಿ ಶವಸಂಸ್ಕಾರದ ವ್ಯವಸ್ಥೆ ಮಾಡುವವನ ಬಳಿ ಬಂದಂತೆ ಇನ್ನುಳಿದ ಮಹಿಳೆಯರು ಬರುತ್ತಲಿದ್ದರು.

ಆ ದೃಶ್ಯ ನೋಡಿ ಭಯಭೀತಳಾದ ನಾನು ಆ ಕೂಡಲೇ ಅಲ್ಲಿಂದ ಹೊರಗೆ ಬಂದರೆ ಶಾಹಜಹಾಬಾದದ ಒಂದು ಓಣಿಯಲ್ಲಿ ಓರ್ವ ಗಡ್ಡಧಾರಿ ಯುವಕ ನನ್ನ ದಾರಿಗೆ ಅಡ್ಡ ನಿಂತು ಕೇಳಿದ–"ಅತ್ಯಂತ ಭ್ರಮೆಗೊಂಡವಳಂತೆ ತೋರುವ ಭಾರತೀಯ ಮಹಿಳೆ, ಬೇರೆ ದೇಶದಿಂದ ಬಂದಿರುವ ನಾನೋರ್ವ ಪ್ರವಾಸಿ, ನನಗೆ ಹಸಿವಾಗಿದೆ. ನದಿಯ ಮೀನಿನ ಹಾಗೂ ಒಳ್ಳೆಯ ಅನ್ನದ ಊಟ ಸಿಗುವ ಸ್ಥಳದ ಪರಿಚಯ ನನಗ ನೀಡಬಲ್ಲೆಯಾ?"

ನಾನು ಅವನನ್ನು ಜಾಮಿಯಾ ಮಸೀದಿಯ ಹತ್ತಿರ ಒಂದು ಭಟಿಯಾರರ ಊಟದ ಮನೆಗೆ ಕರೆದೊಯ್ದೆ. ಅಲ್ಲಿ ನೋಡಿದರೆ ಊಟದ ಮನೆ ಸ್ಮಶಾನ ಮೌನ ತಾಳಿತ್ತು. ನಾನು ತುಂಬ ನಿರಾಶಳಾಗಿದುದನ್ನು ನೋಡಿದ ಆ ಪ್ರವಾಸಿ–"ನೋಡರಿ, ನಡೆಯಿರಿ ನವ ದಿಲ್ಲಿಗೆ ಹೋಗೋಣ."ಎಂದ.

ನವ ದಿಲ್ಲಿಯ ಒಂದು ರೆಸ್ಟೋರೆಂಟ್‌ದಲ್ಲಿ ಆ ಪ್ರವಾಸಿ ನೀರಗೋಳಿ ನೀರಿನಲ್ಲಿ ಪ್ರವೇಶಿಸಿದಂತೆ ಪ್ರವೇಶಿಸಿದ.

ಇವನು ಅನಾಮಿಕ ಆರ್ಟಿಸ್ಟ್ ಇರಬೇಕೆಂದು ನಾನು ಆ ಕೂಡಲೇ ಅಂದು ಕೊಂಡೆ. ಈ ಹೋಟೆಲಿನಲ್ಲಿ ಗಂಡು ಹೆಣ್ಣು ಒಂದೇ ತೆರನಾಗಿ ಕಾಣುತ್ತಿದ್ದರು. ಅಷ್ಟೇ ಅಲ್ಲ, ಹೆಣ್ಣು ಗಂಡಿನ ಹಾಗೆ ಗಂಡು ಹುಡುಗಿಯರ ಹಾಗೆ ಕಾಣುತ್ತಿದ್ದರು. ಇದು ಯುನಿಸೆಕ್ಸ್ (Unisex) ಎನ್ನಿಸಿಕೊಳ್ಳುತ್ತದೆ.

ಪರದೇಸಿ ಯುವಕ ಕಿಟಕಿಯ ಹತ್ತಿರವೇ ಕುಳಿತು ನದಿಯ ಮೀನು ತರಿಸಿದ ಹಾಗೂ ಹೇಳಿದ–''ಹಾಂ ಅವರು ನಮ್ಮ ಮಿತ್ರರು ಮತ್ತು ಜೊತೆಗಾರರು. ಆದರೂ ಅವರು ತಮ್ಮ ಬಿಲ್ಲನ್ನು ತಾವೇ ಕೊಡುತ್ತಾರೆ.''

ಆಗ ನಾನು ಅವನಿಗೆ ಹೇಳಿದೆ–''ಓ ! ಪರದೇಸಿ ಅತಿಥಿ ಬಂಧು, ನಾನು ಈ ನಿನ್ನ ಸ್ವಾಭಿಮಾನದ ರೀತಿಯನ್ನು ಗೌರವಿಸುತ್ತೇನೆ. ಆದರೆ ನೀನಿಲ್ಲಿ ಏನು ಮಾಡುತ್ತಿರುವೆ?''

ಆ ತರುಣ ಕಿಟಕಿಯಿಂದ ಹೊರಗೆ ನೋಡುತ್ತಲಿದ್ದ. ಅಲ್ಲಿರುವ ತುರ್ಕಿ ಬಾದಷಾಹರ ಭಗ್ನ ಸಮಾಧಿಗಳ ಅಕ್ಕಪಕ್ಕದಲ್ಲಿ ಬಡಬಗ್ಗರು ಗುಡಿಸಲ ಹಾಕಿಕೊಂಡು ಸಂಜೆಯ ಅಡುಗೆ ಮಾಡಿಕೊಳ್ಳುತ್ತಿದ್ದರು. ಏಕೆಂದರ ಎಲ್ಲವೂ ಜೆನ್ ತಾನೇ ಅದೂ ಅಲ್ಲದೆ ಬೇಕತಾಶದ ಮುಖ ಎಲ್ಲೆಡೆಯಿದೆ.

ಆಕಸ್ಮಾತ್ತಾಗಿ ಆ ಯುವಕ ಹಾಜೀ ಸಲೀಮ ಫಕೀರನ ಧ್ವನಿಯಲ್ಲಿ ಹೇಳ ತೊಡಗಿದ–''ಎಲ್ಲವೂ ಆಟದ ಬೊಂಬೆಗಳು. ದಾರದಿಂದ ಕಟ್ಟಿ ಸ್ಟೇಜ ಮೇಲೆ ಬಿಡಲಾಗುತ್ತದೆ. ಆಟವಾಡಿಸುವವ ಒಂದು ದಾರ ಮೇಲೆಳೆಯುತ್ತಾನೆ, ಇನ್ನೊಂದ ರಿಂದ ಬೊಂಬೆಯನ್ನು ಕೆಳಗೆ ಇಳಿಸುತ್ತಾನೆ.''

''ಇದೂ ಕೂಡ ಸತ್ಯವಾಗಿದೆ.''

ನಾನು ಕೂಡ ಹಾಜೀ ಸಲೀಮ ಫಕೀರನ ತರಹ ಉತ್ತರ ನೀಡಿದೆ. ಮತ್ತೆ ನಾನು ಮುತ್ಸದ್ದಿತನದಿಂದ ಪರ್ಸನಲ್ಲಿದ್ದ ಆ ಅಪರಿಚಿತ ಮಹಿಳೆಯ ಪತ್ರವನ್ನು ಹೊರತೆಗದು ಹೇಳಿದೆ–''ಓ ! ಬಂಧು ಪ್ರವಾಸಿ, ಜೀವಂತ ಹೆಣಗಳ ಮತ್ತು ಸತ್ತ ಜೀವಂತರ ಸ್ವಪ್ನ ಕಾಣುತ್ತಿರುವೆ. ಚಿತ್ರಗಳ ಚಿತ್ರಗಳು ಬಾಕಿಯಿವೆ, ಏಕಂದರ ನೀನು ಬಿರುಗಾಳಿ ತುಂಬಿದ ನದಿಗಳ ಕಡೆಯಿಂದ ಬಂದಿರುವೆ. ಬಹುಶಃ ನೀನು ಚಿತ್ರಕಾರ ಅಬುಲ್ ಮನ್ಸೂರನ ಹೆಸರನ್ನು ಕೇಳಿರಬೇಕು.''

ಪ್ರವಾಸಿ ಊಟ ಮಾಡುತ್ತಲಿದ್ದ. ಏಕೆಂದರೆ ಊಟ, ಜನನ ಹಾಗೂ ಮರಣದ, ಆದಿ, ಮತ್ತು ಅಂತ್ಯದ ನಡುವೆ ಎಲ್ಲದಕ್ಕಿಂತ ಹೆಚ್ಚು ಮತ್ತು ಶಾಶ್ವತವಾದ ವಾಸ್ತವಿಕತೆಯಾಗಿದೆ, ಹಾಂ ! ನಮಗೆ ಹೀಗೆಂದು ಹೇಳಲಾಗಿತ್ತು. ಹಸಿವೆಯನ್ನು ಕಟ್ಟು ಸಂತೋಷವನ್ನು ಬಿಚ್ಚು, ಏಕೆಂದರೆ ಕೆಲವು ಜನ ಕೆಲವರಿಗಿಂತ ಹೆಚ್ಚು ಉಣ್ಣಲು ಸಾಧ್ಯವಾಗಲಿ.

ನಾನು ಮತ್ತೆ ವಿಚಾರಿಸಿದ–

''ನೀನಿಲ್ಲಿಗೆ ಯಾವುದರ ಶೋಧಕ್ಕಾಗಿ ಬಂದಿರುವೆ?''

''ಏನು, ಶೋಧನೆ ಅವಶ್ಯವಾಗಿದೆಯೇನು?'' ಎನ್ನುತ್ತ ಅವನು ಮತ್ತೆ ಹೇಳಿದ–''ನಾನಿಲ್ಲಿ ನ್ಯಾಶನಲ್ ಸ್ಕೂಲ ಆಫ್ ಡ್ರಾಮಾದಲ್ಲಿ ನಿಮ್ಮ ಸರಕಾರದ ಸ್ಕಾಲರಶಿಪ್ ಪಡೆದು ಅಭಿನಯ ಕಲೆಯನ್ನು ಕಲಿಯಲು ಬಂದಿರುವೆ. ನೀವು ಈ ಕಲೆಯಲ್ಲಿ ಅತ್ಯಂತ ಪರಿಣಿತರಾಗಿದ್ದೀರಿ.''

''ಮುಖವಾಡ ಹಾಕಿಕೊಂಡು ತಾವು ಬೇರಯವರು ಎನ್ನುವ ಹಾಗೆ ತೋರಿಸಿ ಕೊಳ್ಳುವಂತಹ ಜನಾಂಗಕ್ಕೆ ಸೇರಿದವನೇನು ನೀನು? ನಿನ್ನ ತಾಯಿ ತಂದೆ ಕಲಾವಿದ ರೇನು ?''

''ನನ್ನ ತಂದೆ ಅಡವಿಯ ಬಾತುಕೋಳಿಗಳ ಚಿತ್ರ ತೆಗೆಯುತ್ತಲಿದ್ದ.''

''ಏನು, ಈಗಲೂ ಆತ ಜೀವಂತರಲ್ಲಿ ಪರಿಗಣಿಸಲ್ಪಡುತ್ತಾನೆಯೇ?'' ಎಂದು ನಾನು ತಾಳ್ಮೆಗೆಟ್ಟವಳಂತೆ ಪ್ರಶ್ನಿಸಿದೆ.

ಆಗ ತರುಣ ಸಿಟ್ಟಿನಿಂದ ಹೇಳಿದ–''ಬಹುಶಃ ನನ್ನ ತಾಯಿ ನಿಮಗೂ ಪತ್ರ ಬರೆದಿರಬೇಕು. ಆಕೆ ಅಪರಿಪರಿಗೆ ಎಂಥೆಂಥವರಿಗೂ ಪತ್ರ ಬರೆಬರೆದು ನನ್ನ ತಂದೆ ಯನ್ನು ಹುಡುಕುವಲ್ಲಿ ಮಗ್ನಳಾಗಿದ್ದಾಳೆ. ನನ್ನ ತಂದೆಯನ್ನು ಬೆಳಗಿನ ಐದು ಗಂಟೆಯ ಹೊತ್ತಿಗೆ ಸೂರ್ಯಮೂಡುವ ಮುನ್ನ ಮನೆಯಿಂದ ಹೊರಗೆ ಕರೆದು ಕೊಂಡು ಹೋಗಿ, ಮೇಲಿನ ಜಗತ್ತಿಗೆ ಕಳಿಸಿಕೊಡಲಾಗಿತ್ತೆಂಬುದನ್ನು ಆಕೆ ಒಪ್ಪಲು ಸಿದ್ಧಳಿಲ್ಲ.''

ಅನಂತರ ಅನಾಮಿಕ ತರುಣ ಊಟ ಮುಗಿಸಿದ. ಪ್ರಶಾಂತತೆಯಿಂದ ಶುಭವಿದಾಯ ಹೇಳಿದ ಹಾಗೂ ರೆಸ್ಟೋರೆಂಟದಿಂದ ಹೊರಟು ಹೋದ.

ನಾನು ಕಿಟಕಿಯೊಳಗಿಂದ ನೋಡಿದೆ. ನವದಿಲ್ಲಿಯ ರಸ್ತೆಗಳು ಮಳೆಯಿಂದ ತೋಯಿಸಿಕೊಳ್ಳುತ್ತಿದ್ದವು. ಅಷ್ಟರಲ್ಲಿ ದೂರದಿಂದ ಕುದುರೆಯ ಖುರಪುಟ ಸಪ್ಪಳ ಕೇಳಿ ಬಂತು. ಮತ್ತೊಂದು ಕುದುರೆ ಗಾಡಿ ಕುತಲುಕ್‌ನಿಗಾರ ಖಾನಂ ದ ಸಮಾಧಿಯ ಹಿಂದಿನಿಂದ ಹಾದು ಬರುತ್ತಿರುವುದು ಕಾಣಿಸಿತು ಮತ್ತು ನಿರ್ಜನ ಬೀದಿಯಲ್ಲಿ ಎದುರುಗಡೆಯಿಂದ ಹೊರಟು ಹೋಯಿತು.

ಆ ಸ್ಟೇಜ್‌ಕೋಚ್‌ದೊಳಗೆ ಒಂದು ಆಟದ ಗೊಂಬೆ ಮುಖವಾಡ ಹಾಕಿಕೊಂಡು ಕುಳಿತಿತ್ತು. ಶೋಗನ್ ಯುಗದ ಕಿಮೊನೋ ತೊಟ್ಟು, ಕೊಂಡಿದ್ದ ಕೋಚಮನ್ ಹೊರಳಿ ನನ್ನನ್ನು ನೋಡಿದ. ಅವನ ಮುಖವಿರಲಿಲ್ಲ ನಾನು ಕೂಡಲೇ ನನ್ನ ಮುಖವಾಡ ಮುಟ್ಟಿಕೊಂಡ ಆಗ ನನಗೆ ಒಂದು ಭಯಾನಕ ಸತ್ಯದ ಅರಿವಾಗತೊಡಗಿತು.

ನಾನು ಬೇರೆ ಇದ್ದೇನೆಂಬುದನ್ನು ಕೇವಲ ಜಾಹಿರು ಪಡಿಸುತ್ತಿಲ್ಲ. ನಿಜಕ್ಕೂ ನಾನು ಬೇರೆ ಯಾರೋ ಇದ್ದೇನೆ. ನಾನು ವಿಚಿತ್ರವಾದ ಒಂದು ರೂಪಕದಲ್ಲಿ ಒಳಗೊಂಡಿ ದ್ದೇನೆ. ಅದು ಏನೆಂಬುದು ಯಾರ ತಿಳಿವಳಿಕೆಗೂ ನಿಲುಕುವದಿಲ್ಲ.

ಪ್ರಿಯರೇ, ಇಂಟಿನಿಂದ ಆರುನೂರು ವರ್ಷಗಳ ಪೂರ್ವದಲ್ಲಿ ಹಾಜಿಗುಲ್ ಬಾಬಾ ಬೇಕತಾಶಿ ಅಲಿಯಾ ಅಲರ್ ಹಮತಾ ಈ ರಹಸ್ಯವನ್ನು ತನ್ನ ಶಿಷ್ಯರ ಮುಂದೆ ಇರಿಸಿದ್ದ. ನೀಲಿ ಡ್ಯೆನ್ಯೂಬದ ದಂಡಯ ಮೇಲೆ ಉಸ್ಮಾನಿ ರಾಜ್ಯ ಹಂಗೇರಿಯಲ್ಲಿ, ತನ್ನ ಧರ್ಮಶಾಲೆಯಲ್ಲಿ ಕುಳಿತು ಹಳೆಯ ಮತ್ತು ಹೊಸ ಕಥೆಗಳ ಮುಖಾಂತರ ಪ್ರವಚನ ಗೈಯುತ್ತಿದ್ದ.

''ಮತ್ತು ಈ ಸ್ಥಳದಲ್ಲಿ ನನ್ನ ರಾಗ ಮುಕ್ತಾಯವಾಯಿತು. ಓ ! ಜಗತ್ತಿನವರೇ, ಈಗ ಹೊರಟೆ...ಮತ್ತು ಮರಳಿ ಹೋಗಿ...'' ಮೌಲಾನಾ ಜಲಾಲ ಉದ್ದೀನ ರೂಮಿ ಹೇಳಿದ ಮತ್ತು ಕೈಯಲ್ಲಿದ್ದ ಕೊಳಲನ್ನು ಕೆಳಗಿರಿಸಿದ.

# ಮಂಜು ಮುಸುಕಿನ ಹಿಂದೆ

ಹೇಸರಗತ್ತೆ, ಕುದುರೆಗಳ ಮೇಲೆ, ರಿಕ್ಷಾಗಳಲ್ಲಿ ಹಾಗೂ ದಂಡಿಗೆಗಳಲ್ಲಿ ಕುಳಿತ ಇಂಗ್ಲೀಷ ಸಾಹೇಬರು, ಮೇಮಸಾಹೇಬರು, ಬಾಬಾಗಳು ಬಜಾರದ ಆ ಸೇತುವೆಯಿಂದ ಇಡೀ ದಿನ ಹೋಗಿಬರುತ್ತಾರೆ, ಸಾಯಂಕಾಲ ಹಿಂದೂಸ್ತಾನಿಗಳು ಸಾಗರೋಪಾದಿಯಲ್ಲಿ... ವೇಗ ವೇಗ ನಡೆಯುತ್ತ, ಸೇತುವೆ ಹತ್ತುತ್ತ, ಇಳಿಯುತ್ತ, ತೇಕುತ್ತ, ನಡುಗುತ್ತ ಚಲಿಸುವ ಮನುಷ್ಯರ ಮಹಾಪೂರ ಅಲ್ಲಿ ಗೋಚರಿಸುತ್ತದೆ. ಸಿನೆಮಾ ಥೇಟರುಗಳಲ್ಲಿ ಎಸ್ತರ್ ವಿಲಿಯಮ್ಸ್, ಜಾನ ಫೌಂಟೆನ್ಸ, ನೂರಜಹಾ, ಮತ್ತು ಕುರ್ಶಿದರ ಸಿನೆಮಾ ನಡೆಯುತ್ತಲಿವೆ. ರಿಂಗ್‌ದಲ್ಲಿ ಸ್ಕೇಟಿಂಗ್ ಮುಂದುವರೆದಿದೆ. ಸವಾಯೇ ಬಾಲ ರೂಮನಲ್ಲಿ ಎಂಗ್ಲೋ ಇಂಡಿಯನ್ ಕ್ರುಸರ ಮತ್ತು ಅವನ ಸಂಗಡಿಗರು–Enjoy yourself it's later than you think– ಗೀತ ಆರಂಭಿಸಲಿದ್ದಾರೆ. ಡ್ರಮ್ ಬಾರಿಸಲಾಗುವುದು. ಮಹಾರಾಜಾ ಮತ್ತು ಮಹಾರಾಣಿ ಮತ್ತು ನವಾಬ, ದೊಡ್ಡ ಸಾಹೇಬರು, ದೊಡ್ಡ ಮನೆತನದ ಮೇಮಸಾಹೇಬಗಳು ಡಾನ್ಸ್ ಮಾಡಲಿದ್ದಾರೆ.

ಆ ಸಮಯದಲ್ಲಿ ಇಡೀ ಮಸ್ಸೂರಿ ಮನೋರಂಜನೆ, ಹಾಡು, ಕುಣಿತ, ಕುಡಿತಗಳಲ್ಲಿ ತನ್ಮಯವಾಗಿರುತ್ತದೆ. ಓರ್ವ ಬಡಮನುಷ್ಯ ಬಜಾರದಲ್ಲಿರುವ ಈ ಸೇತುವೆಯ ಮೇಲೆ ಮೌನವಾಗಿ ಸುಮ್ಮನೆ ನಿಂತಿರುವುದು ಕಂಡು

ಕಬೀ ರಾ ಖಡಾ ಬಾಜಾರಮೇ
ಮಾಂಗೆ ಸಬ್‌ಕೀ ಖೈರ ।

ಅಲ್ಲಲ್ಲಿ ಹರಿದ ಖಾಕಿಕೋಟ, ಕಿವಿಮುಚ್ಚುವ ಟೊಪ್ಪಿಗೆ ಹಾಕಿಕೊಂಡಿರುವ ಈ ಮನುಷ್ಯ ನೋಡುವುದಕ್ಕೆ ಕೆಲಸವಿಲ್ಲದ ಭಂಗಿಯಂತೆ ತೋರುತ್ತಾನೆ. ಓರ್ವ ಇಂಗ್ಲಿಷ ಮಗುವನ್ನು ಬಗಲಲ್ಲೆತ್ತಿಕೊಂಡು ಬಜಾರದಲ್ಲಿ ಬರುತ್ತಾನೆ. ಹೊತ್ತು ಮುಳುಗುವ ವರೆಗೆ ಸುಮ್ಮನೆ ನಿಂತಿರುತ್ತಾನೆ ಅಥವಾ ಸೇತುವೆಯ ಕಟ್ಟೆಯ ಮೇಲೆ ಕುಳಿತುಕೊಳ್ಳುತ್ತಾನೆ.

ಈ ಉದಾತ್ತ ದೇವದೂತ, ಜಮಾದಾರ ಯಾವುದೋ 'ಸಾಹೇಬ'ನ ಮಗುವನ್ನು ಎತ್ತಿಕೊಂಡು ಆಡಿಸುತ್ತಿರುವಾಗ, ಈ ರೀತಿ ಹರಿದು ಹೋಗಿರುವ ಬಟ್ಟೆಯಲ್ಲಿ ಏಕೆ ? ಆಶ್ಚರ್ಯ...

ಅಷ್ಟೇ ಅಲ್ಲ ಈತ ಕೊಂಚ ವಿಕ್ಷಿಪ್ತ ವ್ಯಕ್ತಿಯಾಗಿಯೂ ತೋರುತ್ತಾನೆ. ಜಾರ ಸಾಮ್ರಾಜ್ಯವಿರುವ ರಶಿಯಾದಲ್ಲಿ ಈ ರೀತಿಯ ವ್ಯಕ್ತಿಗಳನ್ನು Holy Fool ಎಂದು ಕರೆಯುತ್ತಾರೆ. ನಮ್ಮಲ್ಲಿ ಬ್ರಹ್ಮಜ್ಞಾನಿಗಳೆಂದು. ಆದರೆ ಈತ, ಈ ಪಾಪದ ಮನುಷ್ಯ ನಿಜಕ್ಕೂ ಬ್ರಹ್ಮಜ್ಞಾನಿಯಾಗಿದ್ದಾನೋ ಅಥವಾ ಹುಟ್ಟಿನಿಂದಲೇ ಮೂರ್ಖನಾಗಿದ್ದಾನೋ...ಅಂತೂ ಹೆಚ್ಚಾಗಿ ಈತ ಅತ್ಯಂತ ಮೌನವಾಗಿರುತ್ತಾನೆ....

ಬಂಗಾರದ ಹಾಗಿರುವ ಗುಂಗುರು ಗೂದಲಿನ ಮಗು ಎಷ್ಟೊಂದು ಸುಂದರವಾಗಿದೆಯೆಂದರೆ ಸೇತುವೆ ಮೇಲಿಂದ ಹೋಗುವ ಬಹುತೇಕ ಜನ, ಆ ಮಗುವನ್ನು ತದೇಕಚಿತ್ತರಾಗಿ ನೋಡತೊಡಗುತ್ತಾರೆ. ಕೆಲ ಸಮಯ ದೊಡ್ಡ ದೊಡ್ಡ ಬಾಬು ಜನ''ಗುಡ್ ಇವ್ನಿನಿಂಗ್ ಮಿಸಿಬಾಬಾ'' ಎಂದು ಕೈ ಆಡಿಸುತ್ತ ಹೇಳುತ್ತಿದ್ದರು. ಮಸ್ಸೂರಿಗೆ ಪರ್‍ಯಟಕರಾಗಿ ಬಂದಿರುವ ಇಂಗ್ಲಿಷ ಜನ ಕೂಡ ಮಗುವನ್ನು ಮುಗುಳ್ನಗುತ್ತ ನೋಡುತ್ತಾರೆ. ಆದರೆ ಅಲ್ಲಿಯೇ ನೆಲೆಸಿರುವ ಇಂಗ್ಲೀಷ ಜನ ಮಾತ್ರ ಆ ಮಗುವನ್ನು ಉಪೇಕ್ಷಾ ದೃಷ್ಟಿಯಿಂದ ನೋಡುತ್ತ ಹತ್ತಿರದಿಂದಲೇ ಹಾದು ಹೋಗುತ್ತಾರೆ. ಒಂದೂವರೆ ವರ್ಷದ ಮಗು ಈ ಬ್ರಹ್ಮಜ್ಞಾನಿಯ ಬಗಲಲ್ಲಿ ಅಥವಾ ಭುಜದ ಮೇಲೆ ಕುಳಿತು ನಗುತ್ತ ಅಥವಾ ಅಳುತ್ತ ಅಥವಾ ಲಾಲಿಪಾಪ ತಿನ್ನುತ್ತಲಿರುತ್ತದೆ. ಬ್ರಹ್ಮ ಜ್ಞಾನಿ, ಎದುರಿಗಿರುವ ಹಿಮಾಲಯವನ್ನು ಒಂದೇ ಸವನೆ ನೋಡುತ್ತಿರುತ್ತಾನೆ. ಅತ್ತಲಿಂದ, ಅತ್ತ ''ಕಾಣಲಾರದ'' ''ಹೂಗಳ ಕೊಳ್ಳ''ಗಳಿವೆ.

ಕತ್ತಲಾಗುತ್ತಲೇ ಅವನು ಮಗುವನ್ನು ಹೆಗಲ ಮೇಲೆ ಕೂಡಿಸಿಕೊಂಡು, ತಲೆಬಾಗಿ ವಿನ್‌ಸೆಂಟ್ ಹಿಲ್‌ದತ್ತ ಹೊರಡುತ್ತಾನೆ. ಒಮ್ಮೆ ಅಕಸ್ಮಾತ್ತಾಗಿ ಲಖನೌದಿಂದ ಬಂದಿದ್ದ ಓರ್ವ ಹಾಡಿಕಾರ ಅಚ್ಚರಿಯಿಂದ ಕೇಳಿದ್ದ–

''ಈ ಮಗು ಯಾರದು?'' ಎಂದು. ಅದಕ್ಕವನು ಸಿಡಿಮಿಡಿಗೊಂಡು ಉತ್ತರಿಸಿದ–''ನನ್ನ ಸೊಸೆ ಇದ್ದಾಳೆ ಸಾಹೇಬರೇ''.

''ಏನ್ರಿಽಽ...ಹಿಂದುಸ್ತಾನದ ಎಂಗ್ಲೋ ಇಂಡಿಯನ್ ಜನಾಂಗದವರೇನು ಆಕಾಶದಿಂದ ಇಳಿದು ಬಂದಿದ್ದರೇನು? ಎಲ್ಲರು ಬಂದಂತೆ ಅವರೂ ಬಂದಿದ್ದಾರೆ...'' ಎಂದು ಇನ್ನೋರ್ವ ಹಾಡಿಹೋಕ ಅಟ್ಟಹಾಸದ ನಗು ನಗುತ್ತ ಹೇಳಿದ್ದ.

ಬಹುಶಃ ಆ ಅಟ್ಟಹಾಸದ ನಗೆ ಆ ಬ್ರಹ್ಮಜ್ಞಾನಿಯ ಕಿವಿಯಲ್ಲಿ ಗುಂಜಾರವ ಮಾಡುತ್ತಿರಬಹುದು ಆದರೆ ಆತ ಏನೊಂದೂ ಹೇಳುವುದಿಲ್ಲ, ತಲೆಬಾಗಿಸಿಕೊಂಡು ಹೆಗಲ ಮೇಲೆ ಹುಡುಗಿಯನ್ನು ಕೂಡಿಸಿಕೊಂಡು, ವಿನ್‌ಸೆಂಟ್ ಹಿಲ್‌ದ ಏರಿಯನ್ನು ಹತ್ತತೊಡುಗುತ್ತಾನೆ.

ವಿನ್‌ಸೆಂಟ್‌ಹಿಲ್‌ದ ಜನಕ್ಕೆ ಆ ಸುಂದರ, ಶ್ವೇತವರ್ಣದ ಮಗು ಕಟ್ಟೊ ಆಯಾಳದ್ದು ಎಂಬುದು ಗೊತ್ತಿದೆ. ಸೈನಿಕರ ಬ್ಯಾಂಡನಲ್ಲಿ ಡ್ರಮ್ ಬಾರಿಸುವ ಓರ್ವ ಇಂಗ್ಲೀಷ ವ್ಯಕ್ತಿ ಆ ಮಗುವಿನ ತಂದೆಯಾಗಿದ್ದ. ಮಗುವನ್ನು ರಿಚ್‌ಮಂಡ್ಸ್ ಗೆಸ್ಟ್ ಹೌಸ್‌ದ ಒಡತಿ ಇಂಗ್ಲಿಷ ಮಹಿಳೆ ಮಿಸ್ ಸಿಲಿಯಾ ರಿಚ್‌ಮಂಡ್ ಜೋಪಾನ ಮಾಡುತ್ತಿದ್ದಳು. ಕಟ್ಟೊ ಮಿಸ್ ಸಾಹೇಬಳ ಆಯಾ ಆಗಿದ್ದಳು. ಗೋರಖಪುರ ಜಿಲ್ಲೆಯಿಂದ ಬಂದಿರುವ ಓರ್ವ ಕಪ್ಪಗಿನ ಸುಂದರ ಹೆಣ್ಣು. ಆಕೆಯ ತಾಯಿ ತಂದೆಯರನ್ನು ಮಿಸ್ ಸಿಲಿಯಾಳ ಮಿಶ್‌ನರಿ ತಂದೆ ಕ್ರಿಸ್ತರನ್ನಾಗಿ ಮಾಡಿದ್ದ. ಆಕೆಯ ನಿಜವಾದ ಹೆಸರು ಮಾರ್ಥಾ. ಆದರೆ ಆಕೆ ಅಳಿಲಿನ ಹಾಗೆ ಚಾಕ ಚಕ್ಯತೆಯಿಂದ ಗುಡ್ಡ ಹತ್ತಿ ಇಳಿಯುತ್ತಿದ್ದುರಿಂದ ಆಕೆಗೆ 'ಕಟ್ಟೊ' ಎಂದು ಕರೆಯುತ್ತಿದ್ದರು. ಮಿಸ್ ರಿಚ್‌ಮಂಡ್ ಈ ಗೆಸ್ಟಹೌಸನ್ನು ತನ್ನ ಕಕ್ಕನಿಂದ ಉತ್ತರಾಧಿಕಾರಿಯಾಗಿ ಪಡೆದಿದ್ದಾಳೆ.

ಇಡೀ ರಿಚ್‌ಮೆಂಡ್ ಮನೆತನದವರನ್ನೆಲ್ಲ ಇಲ್ಲಿಯೇ ಮಸ್ಸೂರಿಯ ಇಂಗ್ಲೀಷರನ್ನು ಹೂಳುವ ಸ್ಮಶಾನದಲ್ಲಿಯೇ ಹೂಳಿದ್ದಾರೆ. ಮಿಸ್ ರಿಚ್‌ಮೆಂಡಳ ಜೀವನ ಈ ಗೆಸ್ಟಹೌಸ ನಡೆಸುತ್ತ ಕಳೆದು ಹೋಗಿದೆ. ಪರಿಸ್ಥಿತಿ ಅವಳನ್ನು ಸಿಟ್ಟಿನವಳನ್ನಾಗಿ ಮಾಡಿದೆ. ಸಣ್ಣ ಸಣ್ಣ ವಿಷಯಕ್ಕೂ ರೇಗುತ್ತಾಳೆ, ಕೂಗಾಡುತ್ತಾಳೆ. ಹೀಗಾಗಿ ಅವಳನ್ನು, ವಿನ್‌ಸೆಂಟ್‌ಹಿಲ್‌ನ ಆಳು-ಹೋಳುಗಳು, ಕೂಲಿಗಳು 'ಚೀರಾಡುವ ಮೇಮ್‌ಸಾಬ' ಎಂಬ ವಿಶೇಷಣದಿಂದ ನೆನಸುತ್ತಾರೆ. ರಿಚ್‌ಮೆಂಡ್ಸ ಎರಡನೆಯ ದರ್ಜೆಯ ''ಯುರೋಪಿಯನ್ಸ್ ಓನಲಿ'' ಗೆಸ್ಟ್‌ಹೌಸ ಆಗಿದೆ. ಇದರಲ್ಲಿ ಸಾಮಾನ್ಯ ಸ್ಥಿತಿಯ ಇಂಗ್ಲೀಷ ಬಡ ಮಿಶನರಿ ಅಥವಾ ಕೆಂಪುಬಣ್ಣದ ಯುರೋಪಿಯನ್ನರು ಇಳಿದು ಕೊಳ್ಳುತ್ತಾರೆ. ಮಿಸ್ ರಿಚ್‌ಮೆಂಡ್ ತನ್ನ ಹದ್ದಿನ ಕಣ್ಣಿನಿಂದ ನೋಡಿ ಯಾರಲ್ಲಿ ಎಷ್ಟು ವಿಲಾಯತಿ ರಕ್ತವಿದೆಂಬುದನ್ನು ಅಂದಾಜು ಮಾಡಿಕೊಳ್ಳುತ್ತಾಳೆ. ಸ್ವಲ್ಪ ಕಪ್ಪಗಿನ ಎಂಗ್ಲೋ ಇಂಡಿಯನ್ ಪ್ರವಾಸಿ ಬಂದರೆ ಸಾಕು ಆ ಕೂಡಲೇ ಕಟ್ಟೋ ಆಯಾಳಿಂದ ಅವರಿಗೆ ಸ್ಥಳವಿಲ್ಲವೆಂದು ಹೇಳಿ ಕಳಿಸುತ್ತಾಳೆ.

ಇದು ಎರಡನೆಯ ಮಹಾಯುದ್ಧದ ಕೊನೆಯ ದಿನಗಳ ಮಾತಾಗಿದೆ. ರಿಚ್‌ಮೆಂಡ್ ಗೆಸ್ಟ್‌ಹೌಸ್‌ದಲ್ಲಿ ಓರ್ವ ತರುಣ ಕೆಂಪು ಬಣ್ಣದ ಟಾಮಿ ಇಳಿದು ಕೊಂಡಿದ್ದ. ಅವನು ಅನಾರೋಗ್ಯದಿಂದ ಬಳಲಿದ್ದ. ಅವನು ಎರಡು ತಿಂಗಳ ರಜೆಯಲ್ಲಿ ವಿಶ್ರಾಂತಿಗಾಗಿ ಮಸ್ಸೂರಿಗೆ ಬಂದಿದ್ದ. (ಯುದ್ಧಕಾಲದಲ್ಲಿ ದೇಶಭಕ್ತಳಾದ ಮಿಸ್ ಸಿಲಿಯಾ ರಿಚ್‌ಮೆಂಡ್, ತನ್ನ 'ಅತಿಥಿ ಗೃಹ'ವನ್ನು ಇಂಗ್ಲೀಷ ಸೈನಿಕರಿಗಾಗಿ ಸರಕಾರಕ್ಕೆ ಕೊಡಮಾಡಿದ್ದಳು.) ಕೆಂಪಗಿನ ಟಾಮಿ ಕಾರ್ಪೊರಲ್ ಆರ್ಥರ್ ಬೋಲ್ಟನ ಯುದ್ಧಕ್ಕಿಂತ ಮೊದಲು ಲಂಡನದ ಒಂದು ಮಾಮೂಲಿ ರೆಸ್ಟೊರೆಂಟಿನ ಆರ್ಕೆಸ್ಟ್ರಾದಲ್ಲಿ ಡ್ರಮ್ ಬಾರಿಸುತ್ತಿದ್ದ. ಜಗತ್ತಿನ ಸುಪ್ರಸಿದ್ಧ ಡ್ರಮ್ ಬಾರಿಸುವ ಕಲಾವಿದರಲ್ಲಿ ತನ್ನ ಗಣನೆಯೂ ಆಗಬೇಕೆಂದು ಅವನೂ ಬಯಸುತ್ತಿದ್ದ. ಆದರೆ ಬಹಳಷ್ಟು ಕಲಾವಿದರಂತೆ ಅವನಿಗೂ ಅವಕಾಶದ ಅಭಾವ ಅವನನ್ನೂ ಅನಾಮಿಕ ಮತ್ತು ಬಡವನನ್ನಾಗಿ ಮಾಡಿತು.

ಯುದ್ಧ ಆರಂಭವಾದಾಗ ಅವನು ಸೈನ್ಯದಲ್ಲಿ ಸೇರಿ ಡ್ರಮರ್ ಆಗಿ ಇಂಡಿಯಾಕ್ಕೆ ಬಂದಿದ್ದ. ಇಂಡಿಯನ್ ಆರ್ಮಿಯ ಬೇರೆ ಇಂಗ್ಲೀಷ ಸೈನಿಕರಿಗೆ ಕಲಿಸಿದಂತೆ ಅವನಿಗೂ ರೋಮನ್ ಉರ್ದು ಕಲಿಸಲಾಗಿತ್ತು, ಅವನು ಹಿಂದುಸ್ತಾನಿ ಸಂಗೀತವನ್ನು ತುಂಬ ಆಸಕ್ತಿಯಿಂದ ಕೇಳುತ್ತಿದ್ದ. ಒಟ್ಟು ಸಾರಂಶವೇನೆಂದರೆ ಆರ್ಥರ್ ಬೋಲ್ಟನ್ ಸಾಮಾನ್ಯ ಇಂಗ್ಲೀಷ ಮನುಷ್ಯನಿಗಿಂತ ಭಿನ್ನವಾಗಿದ್ದ, ಒಂದು ಅಸಾಧಾರಣ ವ್ಯಕ್ತಿತ್ವವುಳ್ಳ ವ್ಯಕ್ತಿಯಾಗಿದ್ದ.

ಆದರೆ, ಅವನೋರ್ವ ಮಹತ್ವಪೂರ್ಣ ಸಾಹೇಬ ಬಹಾದ್ದೂರ ಆಗಿರಲಿಲ್ಲ; ಸ್ಟಾರ್ ಹೋಟಲ್‌ವಲ್ಲಿಳಿದುಕೊಳ್ಳಲು. ಅವನು ಕೇವಲ ಚುನ್ ಚುಸಿಯಾ ಮೇಮಳ ಅತಿಥಿಯಾಗಿದ್ದ. ಅವನು ದಿನವಿಡೀ ಗುಡ್ಡ-ಬೆಟ್ಟಗಳಲ್ಲಿ ಸಂಚರಿಸುತ್ತಾನೆ. ಅದು ಬೇಸರವಾದರೆ ಕಾವ್ಯ ರಚಿಸುತ್ತಾನೆ. ಕಟ್ಟೋ ಆಯಾಳ ಮಧುರ ಕಂಠದಿಂದ ಹಾಡು

ಕೇಳುತ್ತಾನೆ. ಹಾಗೂ ಆ ರಾಗಕ್ಕೆ ತಕ್ಕಂತೆ ತಾಳ ಹಾಕುತ್ತಲಿರುತ್ತಾನೆ.

ಆಗೊಮ್ಮೆ ಈಗೊಮ್ಮೆ ಕಟ್ಟೊ ಆಯಾ ತನ್ನ ಗರಿ ಗರಿ ಬಿಳಿಲಂಗ ಚಕ್ರಾಕಾರವಾಗಿ ತಿರುಗಿಸುತ್ತಾಳೆ, ಕೀಲಿ ಕೈ ಗುಚ್ಛವನ್ನು ಬಾರಿಸುತ್ತ–''ಮಿರ್ಜಾಪುರ ಮೆ ಔರನ್–ಔರನ್ ಕಾಶೀ ಹಮಾರೊ ಘಾಟ'' ಎಂದು ಏನೇನೋ ಹಾಡುತ್ತಾಳೆ. ಇದನ್ನು ಕೇಳುತ್ತ ಆರ್ಥರ್ ಮಕ್ಕಳ ಹಾಗೆ ಸಂತುಷ್ಟನಾಗಿ ಚಪ್ಪಾಳೆ ಬಾರಿಸುತ್ತಾನೆ, ಹಾಗೂ ಅವಳೊಂದಿಗೆ ಕುಣಿಯ ತೊಡಗುತ್ತಾನೆ. ಅವನಿಗೆ ಕಟ್ಟೊ ಆಯಾ ತುಂಬ ಹಿಡಿಸಿದ್ದಳು. ಅವಳ ಪುಟ್ಟ ಅಣ್ಣನೊಂದಿಗೂ ಅವನು ಹೊಂದಿಕೊಂಡಿದ್ದ. ಅವರಿಬ್ಬರೂ ಚುಮುಚುಮು ಬೆಳಗು ಹೊರಗೆ ಹೋಗುತ್ತಿದ್ದರು. ಬೆಟ್ಟ–ಕೊಳ್ಳಗಳಲ್ಲಿ ತಿರುಗಾಡುತ್ತಿದ್ದರು. ತುಂಬ ಎತ್ತರದ ಬೆಟ್ಟದ ಮೇಲೆ ತೇಲುತ್ತಿರುವ ಮಂಜು ಮುಸುಕನ್ನು ವೀಕ್ಷಿಸುತ್ತಿದ್ದರು. ಆ ಮುಸುಕು... ಮುಸುಕಿನ ಹಿಂದೆ ಏನಿದೆ ?

ಮೀರತ್ ದಂಡು ಪ್ರದೇಶಕ್ಕೆ ಮರಳಿ ಹೋಗುವ ಕಾಲದಲ್ಲಿ ಆರ್ಥರ್ ಬೋಲ್ಬನ್ ಹೇಳಿದ್ದ–''ನಾನು ಸತ್ಯ ಹೇಳುವ ಮನುಷ್ಯ. ಹೀಗಾಗಿ ಯಾವಾಗಲೂ ನಾನು ತೊಂದರೆಯಲ್ಲಿರುತ್ತೇನೆ. ಬಹುಶಃ ನಮ್ಮ ರೆಜೀಮೆಂಟ್ ಜರ್ಮನಿಗೆ ಹೋಗಬಹುದು. ಅಲ್ಲಿ ಘನ ಘೋರ ಯುದ್ಧ ನಡೆದಿದೆ. ಆದ್ದರಿಂದ ನಾನು ನಿಮಗೆ ಪತ್ರ ಬರೆಯದೆ ಇರಬಹುದು. ಒಂದೊಮ್ಮೆ ಬರೆದರೂ ಮತ್ತೆ ಮತ್ತೆ ಬರೆಯದೇ ಇರಬಹುದು. ಪತ್ರೋತ್ತರದ ವಿಷಯದಲ್ಲಿ ನಾನು ತುಂಬ ಆಲಸಿಯಾಗಿದ್ದೇನೆ. ಅದೂ ಅಲ್ಲದೆ ಪತ್ರದಲ್ಲಿ ಏನೆಲ್ಲ ಬರೆಯಲು ಸಾಧ್ಯ?'' ಎಂದು. ಆದರೆ ಮಿರತ್ ದಂಡು ಪ್ರದೇಶಕ್ಕೆ ಹೋದ ಮೇಲೆ ಅವನು ಮಿಸ್ ರಿಚ್‌ಮೆಂಡ್‌ಳಿಗೆ ಉಪಕಾರ ಸ್ಮರಣೆ ಗೈಯುತ್ತ ಪತ್ರ ಬರೆದಿದ್ದ. ಅದರಲ್ಲಿ ಕಟ್ಟೊ ಆಯಾ ಮತ್ತು ಅವಳಣ್ಣನಿಗೂ ನಮಸ್ಕಾರ ತಿಳಿಸಿದ್ದ. ಅದರೊಂದಿಗೆ ಕೆಲದಿನಗಳ ನಂತರ ತಾನು ಯುರೋಪದಲ್ಲಿ ನಡೆದಿರುವ ರಣಾರಂಗಕ್ಕೆ ಹೋಗುವುದಾಗಿಯೂ ಬರೆದಿದ್ದ.

ನೂರಕ್ಕೆ ನೂರು ಆರ್ಥರ್ ಬೋಲ್ಬನ್‌ನನ್ನೇ ಹೋಲುವ ಮಗುವಿಗೆ ಕಟ್ಟೊ ಜನ್ಮ ನೀಡಿದಾಗ, ಮಿಸ್ ರಿಚ್‌ಮೆಂಡ್ ಯಾವುದೇ ರೀತಿಯಿಂದ ಕೋಪಗೊಳ್ಳಲಿಲ್ಲ, ಆಕೆಯನ್ನು ವಿಚಾರಿಸಲಿಲ್ಲ ಕೂಡ. ಆಕೆಗೆ ಗೊತ್ತಿತ್ತು, ತನ್ನ ನಿಷ್ಠಾವಂತ ಆಯಾ ಚಲ್ಲಕ ದಿಮಿ ದಿಮಿ ಹೆಣ್ಣಾಗಿರಲಿಲ್ಲವೆಂಬುದು. ಹೀಗಾಗಿ ಆಕೆಯ ಬಗ್ಗೆ ಅನುಕಂಪ ಮೂಡಿತು ಅವಳಲ್ಲಿ. ಹೆಣ್ಣು ಮಗುವಿನ ಜನನದಿಂದಾಗಿ ಮಿಸ್ ರಿಚ್‌ಮೆಂಡ್, ತನ್ನ ನೀರಸ ಬದುಕಿನಲ್ಲಿ ಏನೋ ಹೊಸಚೈತನ್ಯ ಮೂಡಿದ ಅನುಭವ ಅನುಭವಿಸಿದಳು. ಈ ಗೆಸ್ಟ್ ಹೌಸ್‌ಗಾಗಿ ತನ್ನ ಜೀವನವೇಕೆ ಸವೆಸಬೇಕು, ಯಾರಿಗಾಗಿ ಹಣ ಗಳಿಸಬೇಕೆಂದು ಆಕೆ ಬಹಳ ಸಲ ಯೋಚಿಸುತ್ತಿದ್ದಳು. ಈ ಸುಂದರ ಮಗುವನ್ನು ದೇವರು ಅವಳಿಗಾಗಿಯೇ ಕಳಿಸಿದಂತಿತ್ತು.

ಮಿಸ್ ರಿಚ್‌ಮಂಡ್ ಕಾಲ್ಪನಿಕ ಕಥೆ ಕಟ್ಟುವಲ್ಲಿ ತುಂಬ ನಿಷ್ಣಾತಳಾಗಿದ್ದಳು. ಆಕೆ ಮಧ್ಯಮವರ್ಗದ ಇಂಗ್ಲೀಷ ಹೆಣ್ಣುಮಕ್ಕಳ ಹಾಗೆ ತುಂಬ ಪ್ರತಿಷ್ಠಾ ಪೂಜಕ ಳಾಗಿದ್ದಳು.

ಆಕೆ ಗೆಸ್ಟ್ ಹೌಸ್‌ನಲ್ಲಿ ಬರುವ ಅತಿಥಿಗಳಿಗೆ ಈ ಮಗುವಿನ ಬಗ್ಗೆ ಹೇಳಲು ಒಂದು ಕಥೆ ಹೆಣೆದಳು. ''ಅವಳಪ್ಪ ಕರ್ನಲ್ ಆರ್ಥರ್ ಬೋಲ್ಬನ್ ಬರ್ಲಿನ್ ಯುದ್ಧದಲ್ಲಿ ನಾಪತ್ತೆಯಾದ. ಪಾಪ ಆರ್ಥರ್.......'' ಎಂದು ನಿಟ್ಟುಸಿರು ಬಿಡುತ್ತ ಅತಿಥಿಗಳಿಗೆ ಬ್ರೇಕ್‌ಫಾಸ್ಟ್ ಮಾಡಿಸುತ್ತಿದ್ದಳು. ''ಆರ್ಥರ್ ಪಾಪ...ನನ್ನ ಚಿಗದೊಡ್ಡಪ್ಪನ ಮಗನಾಗಿದ್ದ....''ಇಂಡಿಯಾಕ್ಕೆ ಬರುವ ಮೊದಲು ಅವನು ಓರ್ವ ಐರಿಷ್ ಹುಡುಗಿ ಯೊಂದಿಗೆ ಮದುವೆಯಾಗಿದ್ದ. ಇಬ್ಬರೂ ಪೇಶಾವರ ದಂಡು ಪ್ರದೇಶದಲ್ಲಿದ್ದರು.

ಅತ್ತ ಆರ್ಥರ್ ಯುದ್ಧ ಭೂಮಿಗೆ ಹೋದ, ಇತ್ತ ಅವನ ಹೆಂಡತಿ ಬ್ರಿಜೆಟ್ ಮಗುವಿಗೆ ಜನ್ಮವಿತ್ತು, ಮಿಲ್ಟ್ರಿ ಆಸ್ಪತ್ರೆಯಲ್ಲಿ ಮರಣಹೊಂದಿದಳು. ಆರ್ಥರ್ ನಾನು ತನ್ನ ಹತ್ತಿರದ ಸಂಬಂಧಿಯೆಂದು ಅಲ್ಲಿ ನನ್ನ ವಿಳಾಸ ಕೊಟ್ಟಿದ್ದ. ರೆಡ್ ಕ್ರಾಸ್‌ದವರು ಮಗುವನ್ನು ತಂದು ನನಗೊಪ್ಪಿಸಿದರು...''

ಮಸ್ಸೂರಿಯ ಒಂದು ಇಂಗ್ಲೀಷ ಜನರ ಚರ್ಚದಲ್ಲಿ ಧಾರ್ಮಿಕ ಕ್ರಿಯೆ ನಡೆಸುವ ಕಾಲದಲ್ಲಿ ಮಿಸ್ ರಿಚ್‌ಮಂಡ್ ಮಗುವಿನ ಹೆಸರನ್ನು ರಜಿಸ್ಟರದಲ್ಲಿ ಬರೆಸುವಾಗ ಅವಳಪ್ಪನ ಹೆಸರನ್ನು ಕರ್ನಲ್ ಆರ್ಥರ್ ಬೋಲ್ಟನ್ ಎಂದೇ ಬರೆಸಿದ್ದಳು. ಹಾಗೆ ಮಾಡುವಾಗ ಆಕೆ ಎರಡೂ ಬೆರಳುಗಳಿಂದ ಕ್ರಾಸ್ ಮಾಡಿ ಮನದಲ್ಲಿಯೇ ಪ್ರಾರ್ಥಿಸಿದ್ದಳು–

"So help me God"

ಹಿಂದೂಸ್ತಾನ ಸ್ವಾತಂತ್ರ್ಯವಾಯಿತು. ಮಸ್ಸೂರಿಯಿಂದ ಇಂಗ್ಲೀಷ ಜನ ಹೊರಟು ಹೋದರು. ಈ ಇಳಿವಯಸ್ಸಿನಲ್ಲಿ ಇಂಗ್ಲಂಡಕ್ಕೆ ಹೋಗಿ ಅಲ್ಲಿ ಕಸ–ಮುಸುರೆ ಕೆಲಸ ಮಾಡಲು ಮಿಸ್ ರಿಚ್‌ಮೊಂಡ್ ಸಿದ್ಧಳಾಗಲಿಲ್ಲ. ತನ್ನ ಮನಸ್ಸಿನ ವಿರುದ್ಧವಾಗಿಯೇ ತನ್ನ ಗೆಸ್ಟ ಹೌಸಿನ ಮೇಲಿದ್ದ 'ಯುರೋಪಿಯನ್ಸ್ ಓನಲಿ' ಎಂಬ ಬೋರ್ಡನ್ನು ತೆಗೆದು ಹಾಕಿದಳು. ಈಗ ವ್ಯಾಪಾರ ಚೆನ್ನಾಗಿಯೇ ನಡೆಯತೊಡಗಿತು. ಏಕೆಂದರೆ ಸ್ವತಂತ್ರರಾದ ಹಿಂದೂಸ್ತಾನಿಗಳು 'ಇಂಗ್ಲೀಷ ಗೆಸ್ಟ್‌ಹೌಸ್'ನಲ್ಲಿ ಇಳಿದುಕೊಳ್ಳುವುದು ಒಂದು ಗೌರವವೆಂದು ಭಾವಿಸತೊಡಗಿದ್ದರು. ಇಲ್ಲಿ ಈ ಮೊದಲು ಸಾಮಾನ್ಯ ಇಂಗ್ಲೀಷ ಜನ ಉಳಿದು ಕೊಳ್ಳುತ್ತಿದ್ದರು. ಈಗ ದೊಡ್ಡ ದೊಡ್ಡ ಶ್ರೀಮಂತ ಪ್ರಮುಖ ಹಿಂದೂಸ್ತಾನಿಗಳು ಉಳಿದುಕೊಳ್ಳುತ್ತಿದ್ದರು.

ಕೆಥರಿನ್ ಬೋಲ್ಟನ್ ಉರ್ಫ ಕೆಟಿ ತನ್ನ ಚಂಚಲತೆಯಿಂದಾಗಿ 'ಸಣ್ಣ ಕಟ್ಟೊ' ಎನ್ನಿಸಿಕೊಳ್ಳತೊಡಗಿದ್ದಳು. ಕಾನ್ವೆಂಟ್ ಸ್ಕೂಲಿನಲ್ಲಿ ಓದುತ್ತಿದ್ದಳು. ಸ್ವಾತಂತ್ರ್ಯ ಬಂದ ನಂತರ ಕಾನ್ವೆಂಟ್‌ಗಳಲ್ಲೂ ಹಿಂದಿ, ಸಂಸ್ಕೃತಗಳನ್ನೂ ಕಲಿಸುವ ಏರ್ಪಾಟು ಮಾಡಲಾಗಿತ್ತು. ಈ ವಿಷಯಗಳ ಅಧ್ಯಾಪಕ ತುಂಬ ಉತ್ಸಾಹಿ ಸ್ಥಾನಿಕ ತರುಣನಾಗಿದ್ದ. ಕ್ಯಟಿ ಅವನಿಂದ ಹಿಂದಿ ಹೇಳಿಸಿಕೊಳ್ಳುತ್ತಿದ್ದಳು. ಸ್ವಾತಂತ್ರ್ಯ ಹಿಂದೂಸ್ತಾನದ ಸ್ವಾತಂತ್ರ್ಯ ಮಕ್ಕಳು ಕೂಡ ಅವಳ ಬಂಗಾರವರ್ಣದ ಚರ್ಮಕ್ಕೆ ಮೋಹಿತ ರಾಗಿದ್ದರಲ್ಲದೆ ಅವಳ ಪ್ರಭಾವಕ್ಕೆ ಒಳಗಾಗಿದ್ದರು.

ಮಸ್ಸೂರಿಯ ಆ ಇಂಗ್ಲೀಷ ಪಾದ್ರಿ ಸಾಹೇಬ, ಕೆಥರಿನ್‌ಳಿಗೆ ಧಾರ್ಮಿಕ ದೀಕ್ಷೆ ನೀಡಿದವನು ಆಸ್ಟ್ರೇಲಿಯಾಕ್ಕೆ ಹೋಗಿ ವಾಸವಾಗಿದ್ದ. ಆದರೆ ಮಿಸ್ ರಿಚ್‌ಮೆಂಡ್‌ಳೊಂದಿಗೆ ಪತ್ರವ್ಯವಹಾರ ಇರಿಸಿಕೊಂಡಿದ್ದ. ಕೈಟಿ ಹದಿನೈದು ವರ್ಷದವಳಾದಾಗ ಅವನು ಮಿಸ್ ರಿಚ್‌ಮೆಂಡ್‌ಳಿಗೆ ಪತ್ರ ಬರೆಯುತ್ತ–''ಕೆಥರಿನ್‌ಳ ಬಗ್ಗೆ ಚಿಂತಿತನಾಗಿರುವೆ. ಹಿಂದೂಸ್ತಾನದಲ್ಲಿ ಅವಳಿಗಾವ ಭವಿಷ್ಯವಿದೆ? ಅವಳು ಯಾವನಾದರೂ ಹಿಂದೂ ಮೂರ್ತಿಪೂಜಕನೊಂದಿಗೆ ಲಗ್ನವಾಗಬೇಕೆಂದು ಬಯಸುವಿಯಾ? ನೀನು ಅವಳನ್ನು ಇಲ್ಲಿಗೆ ಕರೆತರುವುದು ಒಳ್ಳೆಯದು....''

ಮಿಸ್ ರಿಚ್‌ಮೆಂಡ್, ಈ ವಿಷಯದಲ್ಲಿ ಯೋಚನೆಗೀಡಾದಳು. ಹಿಂದೂಸ್ತಾನದಲ್ಲಿ ಈ ಸುರಸುಂದರಿ ಎಂಗ್ಲೋಇಂಡಿಯನ್ ತರುಣಿಯ ಭವಿಷ್ಯವೆಲ್ಲಿ? ಟೆಲಿಫೋನ್ ಆಪರೇಟರ್, ಆಫೀಸ ಸೆಕ್ರೆಟರಿ...ಕಾಲಗರ್ಲ್...ಅಥವಾ ಕ್ಯಾಬರೆ ಡಾನ್ಸರ, ಈಗಾಗಲೇ ಕೈಟಿಯ ಸೌಂದರ್ಯದ ಚರ್ಚೆ ನಡೆಯ ತೊಡಗಿತ್ತು...ಒಮ್ಮೆ ಸ್ಕೂಲಿನ ಹಿಂದಿ ಟೀಚರ ಅವಳೊಂದಿಗೆ ಹುಚ್ಚುಚ್ಚಾರ ವರ್ತನೆಗೆ ಪ್ರಯತ್ನಿಸಿದ್ದ...ಆಗ ಅವಳನ್ನು ಪಾರು ಮಾಡಿದಾಗ ಜೋರಾಗಿ ಅವಳಿಗೆ ''ನಖರೆವಾಲಿ....ಮರುಳು ಮಾಡುವ ಹೆಣ್ಣೇ...'' ಮುಂತಾಗಿ ಕೂಗಿಕೊಂಡ....ಆಗ ಆಕೆ ಬೆಂಕಿ ಕಾರುತ್ತ ಮನೆಗೆ ಬಂದು ಮಿಸ್ ರಿಚ್‌ಮೆಂಡ್‌ಳಿಗೆ ನಡೆದುದನ್ನೆಲ್ಲ ಹೇಳಿದಳು.

ಆ ಚಳಿಯ ರಾತ್ರಿಯಲ್ಲಿ ಮಿಸ್ ರಿಚ್‌ಮೆಂಡ್ ಒಮ್ಮೆಲೇ ನಿರ್ಣಯ ಮಾಡಿದಳು. ಆ ದಿನ ಇಡೀ ರಾತ್ರಿ ಆಕೆ ಮಲಗಲೇ ಇಲ್ಲ. ಸಂಪೂರ್ಣ ಜಾಗರಣೆ ಮಾಡಿದಳು. ದೇಶ ಬಿಡುವುದು ಅಷ್ಟು ಸುಲಭವಾಗಿರಲಿಲ್ಲ. ಅದೂ ಅಲ್ಲದೆ ಆ ಅಪರಿಚಿತ ದೇಶದಲ್ಲಿ ಆಕೆಯ ಸ್ಥಿತಿಯೇನು? ಆದರೆ ಆಕೆಗೆ ಕೆಥರಿನ್‌ಳ ಭವಿಷ್ಯವೇ ಮುಖ್ಯವಾಗಿತ್ತು. ಬೆಳಗ್ಗೆ ಆಕೆ ಕಟ್ಟೊ ಮತ್ತು ಫಜಲ್ ಮಸೀಯಾ (ದೇವದೂತ) ನನ್ನು ಕರೆಯಿಸಿದಳು. ಅವರಿಬ್ಬರೂ ಬಂದು ಬಾಗಿಲಲ್ಲಿ ನಿಂತರು.

ಮಿಸ್ ರಿಚ್‌ಮೆಂಡ್ ಅಗ್ಗಿಷ್ಟಿಕೆಯ ಸಮೀಪವಿದ್ದ ಸೋಫಾದಲ್ಲಿ ಕುಳಿತು ಏನನ್ನೊ ಹೆಣೆಯುತ್ತಿದ್ದಳು.

ಕೈಟಿ ರೇಡಿಯೋ ಗ್ರಾಮದ ಹತ್ತಿರ ಕುಳಿತಿದ್ದಳು. ಮಿಸ್ ಸಿಲಿಯಾ ರಿಚ್‌ಮೆಂಡ್ ಗಂಭೀರವಾದ ದನಿಯಲ್ಲಿ ಹೇಳಿದಳು–''ಕಟ್ಟೊ, ನಾವು ಆಸ್ಟ್ರೇಲಿಯಾಕ್ಕೆ ಹೋಗುತ್ತಿದ್ದೇವೆ. ಕೈಟಿ ಕೂಡ ನಮ್ಮೊಂದಿಗೆ ಬರುತ್ತಾಳೆ. ನಮ್ಮ ಸಾಮಾನುಗಳ ಪ್ಯಾಕಿಂಗ್ ಮಾಡು.''

ಕಟ್ಟೊ ಮತ್ತು ಅವಳಣ್ಣ ಗಾಬರಿಯಾದರು. ಅವರಿಗೆ ಏನೂ ತಿಳಿಯದಂತಾಯಿತು. ಈ ಇಬ್ಬರೂ ಕೆಂಪು ಬಣ್ಣದ ಹೆಂಗಸರು ಅವರಿಗೆ ವಿಚಿತ್ರವಾಗಿ, ಹುಚ್ಚರಂತೆ ಕಂಡರು. ಅವರಿಬ್ಬರೂ ಬಿಕ್ಕಿ ಬಿಕ್ಕಿ ಅಳತೊಡಗಿದರು. ಕೆಲಕ್ಷಣಗಳ ನಂತರ ಕಟ್ಟೊ ಸಿಂಬಳ ಸುರಿಸುತ್ತ, ಕಣ್ಣೀರು ಒರೆಸಿಕೊಳ್ಳುತ್ತ, ಆದರೆ ಗಂಭೀರವಾಗಿ, ದೃಢವಾದ ದನಿಯಲ್ಲಿ ಉತ್ತರಿಸಿದಳು–''ಮೇಮ ಸಾಬ, ಕೈಟಿ ನನ್ನ ಮಗಳು, ಅವಳಿಗೆ ಜನ್ಮವಿತ್ತತಾಯಿ ನಾನು. ನಾವು ಅವಳನ್ನು ನಿಮ್ಮೊಂದಿಗೆ ಹೋಗಗೊಡುವುದಿಲ್ಲ. ನಮ್ಮ

ಅಣ್ಣಾ ಕೂಡ ಅವಳಿಂದಾಗಿ ಬದುಕುತ್ತಿದ್ದಾನೆ. ಮಲ ತಂದೆ ಅವಳ ಜೊತೆ ಹೇಗೆ ನಡೆದುಕೊಳ್ಳುತ್ತಾನೋ ಎಂಬ ಭಯದಿಂದ ನಾನು ಮದುವೆ ಮಾಡಿಕೊಳ್ಳಲಿಲ್ಲ.''

''ಬಾಯಿ ಮುಚ್ಚು....'' ಮುದುಕಿ ಚೀರಿಕೊಂಡಳು ಹಾಗೂ ಮತ್ತೆ ಹೇಳಿದಳು– ''ನೀವು ನಿಮ್ಮ ಸ್ಥಾನ ಮರೆಯುತ್ತಿದ್ದೀರಿ. ಕೈಟಿ ನಿನ್ನ ಮಗಳೆನ್ನುವುದಕ್ಕೆ ನಿನ್ನ ಹತ್ತಿರ ಯಾವ ಆಧಾರವಿದೆ? ಎಷ್ಟು ಧೈರ್ಯ ನಿನ್ನದು ಹೀಗೆಂದು ಹೇಳಲು !''

ಕಟ್ಟೊ ಗಪ್–ಚುಪ್ ಆಗಿ ಬಿಟ್ಟಳು. ಮಿಸ್ ರಿಚ್‌ಮೆಂಡ್‌ಳಿಂದ ಈ ಮಾತು ಬಂದೀತೆಂದು ಅವಳು ಕನಸು ಮನಸ್ಸಿನಲ್ಲಿಯೂ ಯೋಚಿಸಿರಲಿಲ್ಲ. ಇಂಥ ನಿಷ್ಠುರ, ಕಠಿಣ, ನಿಷ್ಕರುಣೆಯ ಮಾತುಗಳನ್ನು ಎಂದೂ ಹೇಳಿರಲಿಲ್ಲ. ಆಕೆ ಧೊಪ್ಪೆಂದು ನೆಲಕ್ಕೆ ಬಿದ್ದು ಒಂದೇ ಸವನೇ ಅಳತೊಡಗಿದಳು.

ಕೈಟಿ ಎದ್ದು ಬೇರೆ ಕೋಣೆಯೊಳಗೆ ಹೊರಟು ಹೋದಳು. ಆಕೆ ಆಸ್ಟ್ರೇಲಿಯಾಕ್ಕೆ ಹೋಗಲು ತುದಿಗಾಲ ಮೇಲೆ ನಿಂತಿದ್ದಳು. ಮುಂದಾಲೋಚನೆಯ ಹೆಂಗಸಾದ ಮಿಸ್ ರಿಚ್‌ಮೆಂಡ್ ಕೆಲದಿನಗಳ ಮೊದಲೇ ಅವಳಿಗೆ ಕರ್ನಲ್ ಬೋಲ್ಟನ್ ಓರ್ವ ಕಾಲ್ಪನಿಕ ವ್ಯಕ್ತಿ ಎಂದು ಹೇಳಿದ್ದಳು. ಕಾರ್ಪೊರಲ್ ಬೋಲ್ಟನ್ ನಿನ್ನ ತಂದೆ ಹಾಗೂ ಕಟ್ಟೊ ನಿನ್ನ ತಾಯಿ ಎಂಬುದನ್ನೂ ಆ ಹುಡುಗಿಗೆ ತಿಳಿಸಿದ್ದಳು. ಆದರೆ ಈ ರಹಸ್ಯವನ್ನು ರಹಸ್ಯವಾಗಿ ಉಳಿಸಿಕೊಳ್ಳುವುದರಲ್ಲಿಯೇ ನಿನ್ನ ಹಿತವಿದೆಂದೂ ಎಚ್ಚರಿಕೆ ನೀಡುತ್ತ ತಿಳಿಹೇಳಿದ್ದಳು. ಕೈಟಿ, ಜೀವನದ ವಾಸ್ತವಿಕ ಸತ್ಯ ಅರಿತಿದ್ದಳು. ಹೀಗಾಗಿ ಅವಳ ಉಪದೇಶದ ಮಾತುಗಳನ್ನು ಸೆರಗಿಗೆ ಗಂಟು ಹಾಕಿ ಕೊಂಡಿದ್ದಳು.

ಈಗ ಮಿಸ್ ರಿಚ್‌ಮೆಂಡ್ ಶಾಂತಳಾಗಿ ತಿಳಿಸಿ ಹೇಳತೊಡಗಿದಳು–''ಕಟ್ಟೊ, ನೀನು ಹುಚ್ಚಿ ಇದ್ದಿ. ಸ್ವಲ್ಪ ಯೋಚಿಸು...ಶಾಂತಳಾಗಿ ವಿಚಾರ ಮಾಡು....ನಾನು ಸತ್ತ ನಂತರ ಕೈಟಿಯ ಭವಿಷ್ಯವೇನು? ಮಸ್ಸೂರಿಯಲ್ಲಿಯ ಕೆಲ ಜನಕ್ಕೆ ಇವಳು ನಿನ್ನ ಮಗಳೆಂಬುದು ಗೊತ್ತಿದೆ. ಈ ರಹಸ್ಯ ಎಲ್ಲರಿಗೂ ತಿಳಿದರೆ? ಇಂಡಿಯಾದಲ್ಲಿ ಕಾಸ್ಟ್ ಸಿಸ್ಟಮ್ ತುಂಬಾ ಇದೆ. ಹೀಗಿರುವಾಗ ಇವಳೊಂದಿಗೆ ಮದುವೆ ಆಗುವವರು ಯಾರು? ಮತ್ತೆ ಎಂಗ್ಲೊ ಹುಡುಗಿಯರಿಗೆ ಇಲ್ಲಿ ಗೌರವವೆಲ್ಲಿದೆ? ಇವಳನ್ನು ಜನ ಸೂಳೆಯ ಹಾಗೆ ನೋಡುತ್ತಾರೆ. ಹೋಟಲಿನಲ್ಲಿ ಒಂದೊಂದೇ ಬಟ್ಟೆ ಬಿಚ್ಚುತ್ತ ನಾಚುವ ಹುಡುಗಿಯಾಗಬೇಕು ನಿನ್ನ ಮಗಳು ಎಂದು ಬಯಸುವೆಯಾ? ಅಥವಾ ಯಾವನೋ ಮುನ್ಸಿಪಾಲ್ಟಿಯ ನೌಕರನೊಂದಿಗೆ ಮದುವೆ ಮಾಡುವೆಯಾ?....ಯೋಚಿಸ ಬೇಕಾಗುತ್ತದೆ ಕಟ್ಟೊ...ಹೇಳು ಏನಂತೀ...?''

ಕಟ್ಟೊ ನಿರುತ್ತರಳಾದಳು....

ಮಿಸ್ ರಿಚ್‌ಮೆಂಡ್ ಗೆಸ್ಟ್‌ಹೌಸನ್ನು ಓರ್ವ ಸಿಂಧಿಗೆ ಮಾರಿದ್ದಳು. ಅವನು ಕೂಡಲೇ ಹಾಲ್‌ನಲ್ಲಿದ್ದ ಕ್ರೈಸ್ತ ಮತ್ತು ಮೇರಿಯ ಫೋಟೋ ತೆಗೆದು ಗುರುನಾನಕ, ಶಂಕರ ಪಾರ್ವತಿ ಫೋಟೋ ಹಾಕಿದ ಮತ್ತು ''ರಿಚ್‌ಮೆಂಡ್''ದ ಸ್ಥಾನದಲ್ಲಿ ಹೊರಗೆ ''ದಿ ನ್ಯೂ ಹಿಮಾಲಯ ವೆಜಿಟೇರಿಯನ್ ಹೋಟಲ್'' ಎಂದು ಬೋರ್ಡ ಹಾಕಿದ. ಆದರೆ ಹಳೆಯ ಸ್ಟಾಪ್, ಕಟ್ಟೊ ಆಯಾ ಸಮೇತ ಎಲ್ಲರನ್ನೂ ಇರಿಸಿಕೊಂಡ.

ಕಟ್ಟೊ ಮತ್ತು ಫಜಲ್ ಮಸೀಹ ಅಳುತ್ತ ಅಳುತ್ತ, ಮಿಸ್ ರಿಚ್‌ಮೆಂಡ್ ಮತ್ತು ಕೆಥರಿನ್‌ಳನ್ನು ಬೀಳ್ಕೊಡಲು ಡೆಹರಾಡೋನ್ ರೇಲ್ವೆಸ್ಟೇಷನ್‌ವರೆಗೆ ಹೋದರು. ಟ್ರೇನ್ ಹೊರಟು ಹೋಯಿತು. ಫಜಲ್ ಮಸೀಹ ಕಿವಿ ಟೊಪ್ಪಿಗೆ, ಡಗಲಾ–ಬಗಲಾ ಅಂಗಿ ಹಾಕಿಕೊಂಡು ನಿರ್ಜನವಾದ ಪ್ಲ್ಯಾಟಫಾರ್ಮದಲ್ಲಿ ನಿಂತು ತನ್ನ ರೂಢಿಯಂತೆ ಬಯಲನ್ನು ತದೇಕಚಿತ್ತದಿಂದ ನೋಡುತ್ತಲಿದ್ದ.

ಸಿಡ್ನಿ ವಿಮಾನ ನಿಲ್ದಾಣದಲ್ಲಿ ಇಳಿದು ಮಿಸ್ ರಿಚ್‌ಮೆಂಡ್ ಸುತ್ತಲೂ ಒಮ್ಮೆ ಕಣ್ಣಾಡಿಸಿದಳು ಹಾಗೂ ಮುಗುಳ್ನಕ್ಕಳು. ಅವಳು ಕೊನೆಗೊಮ್ಮೆ ಬಿಳಿಯರ ದೇಶ ದಲ್ಲಿದ್ದಳು...(ಅವಳು ಅಸಲಿ–ನಕಲಿ ಇಂಗ್ಲೀಷ ಹೆಣ್ಣಾಗಿದ್ದಳು...ಅವಳು ಹುಟ್ಟಿದ್ದು ಗೋರಖಪುರದಲ್ಲಿ..ಒಮ್ಮೆ ಮಾತ್ರ ಆಕೆ ಕೇವಲ ಕೆಲ ತಿಂಗಳವರೆಗೆ ಇಂಗ್ಲಂಡಿಗೆ ಹೋಗಿದ್ದಳು...) ಈಗ ಆಕೆ ಮತ್ತು ಕೈಟಿ, ಕೂಲಿ ಬಂದು ಸಾಮಾನು ತೆಗೆದು ಕೊಳ್ಳಬಹುದೆಂಬ ನಿರೀಕ್ಷೆಯಲ್ಲಿದ್ದರು...ಆದರೆ ಅವರನ್ನು ಯಾರೂ ಗಮನಿಸಲೇ ಇಲ್ಲ...ಅಲ್ಲಿ ಬೇರೆಯವರು ತಮ್ಮ ತಮ್ಮ ಸಾಮಾನು ತಾವೇ ಒಯ್ಯುವುದನ್ನು ನೋಡಿದ ಕೆಥರಿನ್ ಒಂದು ಟ್ರಾಲಿಯಲ್ಲಿ ಸಾಮಾನು ಇರಿಸಿದಳು. ಮಿಸ್ ರಿಚ್‌ಮೆಂಡ್ ಟ್ರಾಲಿ ದೂಡತೊಡಗಿದಳು. ಆಗ ಒಳಗೊಳಗೇ ಅವಳ ಮನಸ್ಸು ಮುದುಡಿಕೊಳ್ಳ ತೊಡಗಿ ಒಮ್ಮೆಲೇ ಧಸಕ್ಕೆಂದಿತು.

ರೆವರೆಂಡ ಸಿಗ್ಮೋರ ಹೊರಗೆ ಇವರಿಗಾಗಿ ಕಾಯುತ್ತ ಲಾಂಜ್‌ನಲ್ಲಿ ನಿಂತಿದ್ದ. ಇವರು ಬಂದ ಕೂಡಲೇ ತನ್ನ ಮನೆಗೆ ಕರೆದುಕೊಂಡು ಹೋದ. ಮಿಸ್ ರಿಚ್‌ಮೆಂಡ್‌ಳಿಗೆ ತನ್ನ ಚರ್ಚಿನ ಹತ್ತಿರವೇ ಇರುವ ಪೇಟೆಯಲ್ಲಿ ಒಂದು ಸಣ್ಣ ಅಂಗಡಿ ಹಾಗೂ ಒಂದು ಫ್ಲ್ಯಾಟ್ ಖರೀದಿಗೆ ಕೊಡಿಸಿದ. ಎರಡನೆಯ ವಾರದಿಂದಲೇ ಮಿಸ್ ರಿಚ್‌ಮೆಂಡ್ ಅಂಗಡಿಯಲ್ಲಿ ತಕ್ಕಡಿಯೊಂದಿಗೆ ಕೂಡತೊಡಗಿ ದಳು. ಅವಳೀಗ ಸಿಡ್ನಿಯ ವರ್ಕಿಂಗ್ ಕ್ಲಾಸ್‌ನಲ್ಲಿ ಸೇರ್ಪಡೆಯಾಗಿದ್ದಳು.

ಕೆಥರಿನ್‌ಳನ್ನು ಸ್ಕೂಲಿನಲ್ಲಿ ಸೇರಿಸಲಾಯಿತು. ಬಹಳ ತೀವ್ರ ಅವಳು ಬೆಳೆದು ನಿಂತಳು, ದಪ್ಪವಾದಳು. ಅದಕ್ಕಾಗಿ 'ಡೆಯೆಟ್' ಮಾಡತೊಡಗಿದಳು. ರಾತ್ರಿ ತುಂಬ ಹೊತ್ತಾಗಿ ಮನೆಗೆ ಬರತೊಡಗಿದಳು. ಪಾಶ್ಚಾತ್ಯ ಹಾಗೂ ಪೌರ್ವಾತ್ಯ ಸಂಸ್ಕೃತಿಯ ಜೀವನ ಮೌಲ್ಯಗಳ ಮಧ್ಯದಲ್ಲಿ ಬೆಳೆದ ಮಿಸ್‌ರಿಚಮಂಡ್ ಕೈಟಿಗೆ ಸಿಟ್ಟು ಮಾಡುತ್ತಿದ್ದಳು... ಹೊಡೆಯುತ್ತಿದ್ದಳು, ಅವಳ ಈ ವರ್ತನೆಗೆ. ಇಬ್ಬರಲ್ಲೂ ಜಗಳ, ಕಾದಾಟ ನಡೆಯುತ್ತಿತ್ತು...ಇಬ್ಬರ ಜೀವನವೂ ದುಃಖಮಯವಾಯಿತು...ಓರ್ವ ಅರವತ್ತೈದು ವರ್ಷದ, ತನ್ನ ಸ್ವಸ್ಥಾನ ಕಳೆದುಕೊಂಡ, ಅವಿವಾಹಿತ ಇಂಗ್ಲೀಷ ಮಹಿಳೆ ಒಂದೆಡೆ, ಇನ್ನೊಂದು ಕಡೆ ಹದಿಹರೆಯದ ಷೋಡಶ ಪ್ರಾಯದ, ಭಿನ್ನ ಭಿನ್ನ ಜನಾಂಗಕ್ಕೆ ಸಂಬಂಧಿಸಿದ, ಯಾವುದೇ ತನ್ನದಾದ ನೆಲೆಯಿಲ್ಲದ ಓರ್ವ ತರುಣಿ...ಅತ್ತೆ ಹಾಗೂ ಸೊಸೆಯೆಂಬ ಈ ವಿಚಿತ್ರ ಜೋಡಿಯ ಜೀವನ ನಿಜಕ್ಕೂ ಕರುಣಾಮಯವಾಗಿತ್ತು..

ಸಿಡ್ನಿಗೆ ನಿರ್ವಾಸಿಗಳಾಗಿ ಬಂದು ತಾನು ತುಂಬಾ ಒಂಟಿಯೆಂಬ ಭಾವನೆ ಹಾಗೂ

ಏಕಾಕಿಯೆಂಬ ಚಿಂತೆಯಿಂದ ಮಿಸ್ ರಿಚ್‌ಮೆಂಡಳು ಬಹಳ ತೀವ್ರ ಜರ್ಜರಿತ ಳಾದಳು...ಈ ನೋವನ್ನು ಸಹಿಸುವುದು ಆಕೆಗೆ ಅಸಾಧ್ಯವಾಗತೊಡಗಿತು. ಕೆಥರಿನ್ ಹದಿನೆಂಟನೇ ವಯಸ್ಸಿನವಳಾಗಿದ್ದಳು. ಆಗ ಮಿಸ್ ರಿಚ್‌ಮೆಂಡ್ ಇಹಲೋಕ ತೊರೆದಳು. ರೆವರಂಡ್ ಸಿಗ್ಮೋರ್ ಕೆಥರಿನ್‌ಳ ಗಾರ್ಡಿಯನ್ ಆಗಿದ್ದರು. ಅವಳನ್ನು ಅವರು ಸ್ಕೂಲಿನ ಬೋರ್ಡಿಂಗ್ ಹೌಸ್‌ನಲ್ಲಿ ಸೇರಿಸಿದರು. ಕೆಲ ತಿಂಗಳ ನಂತರ ಅವಳು ಅಲ್ಲಿಂದ ಓಡಿ ಹೋದಳು. ಅವಳು ತನ್ನ ತಾಯಿ, ಮಾವನಿಗೆ ಅಪ್ಪಿತಪ್ಪಿಯೂ ಪತ್ರ ಬರೆಯುತ್ತಿರಲಿಲ್ಲ. ಕೆಲ ಕಾಲದ ನಂತರ ಪಾದ್ರಿ ಸಿಗ್ಮೋರ್ ಕೂಡ ಕೈಸ್ತವಾಸಿ ಯಾದರು. ಅವಳ ಬಾಯ್ ಫ್ರೆಂಡ್ಸ್‌ಗಳಿಗೆ ಅವಳು ತುಂಬಾ ಶ್ರೀಮಂತಳೆಂಬುದು ಗೊತ್ತಿತ್ತು. ಆಕೆ ಕಾನೂನಿನ ದೃಷ್ಟಿಯಿಂದ ವಯಸ್ಕಳೆಂದು ಗೊತ್ತಾದ ಕೂಡಲೇ ಅವಳ ಹಣದಲ್ಲಿ ಚೈನಿ ಆರಂಭವಾಯಿತು. ಆಕೆ ಅತ್ಯಂತ ಸುಂದರಿಯಾಗಿದ್ದಳು. ಸಿನಿಮಾ ನಟಿಯಾಗಬೇಕೆಂಬ ಆಸೆಯಿತ್ತು ಆದರೆ ಆಸ್ಟ್ರೇಲಿಯಾದಲ್ಲಿ ವ್ಯವಸ್ಥಿತವಾದ ರಂಗ ಭೂಮಿಯಿರಲಿಲ್ಲ ಸಿನಿಮಾ ಇಂಡಸ್ಟ್ರಿಯಿರಲಿಲ್ಲ. ಓರ್ವ ಲಫಂಗ ಹಾಲಿವುಡ್ ಅಥವಾ ಲಂಡನ್ನಿನ ಷೋ ಬಿಜಿನೆಸ್‌ದಲ್ಲಿ ಹೋಗಬೇಕಾದರೆ ಮೊದಲ ಹೆಜ್ಜೆಯೆಂದರೆ ನೈಟ್ ಕ್ಲಬ್, ಎಂದು ಹೇಳಿದ. ಅವಳು ಇದಕ್ಕಾಗಿ ಕ್ಯಾಬರೆ ನೃತ್ಯ ಕಲಿತಳು. ಈ ಅವಧಿಯಲ್ಲಿ ಅವಳು ತನ್ನ ಅಂಗಡಿಯನ್ನೂ ಮಾರಾಟ ಮಾಡಿದಳು. ಹಾಗೂ ತನ್ನಲ್ಲಿದ್ದ ಹಣವನ್ನೆಲ್ಲ ನೀರಿನಂತೆ ಹರಿಸಿದಳು. ಹಣ ಅವಳ ಕೈಯಲ್ಲಿ ನಿಲ್ಲುತ್ತಿರಲಿಲ್ಲ.

ಇದೇರೀತಿ ಆವಾರಾ ಆಗಿ ಆಕೆ ಹಾಂಗ್‌ಕಾಂಗ್, ಸಿಂಗಾಪೂರ, ಕೌಲಾಲಾಂಪುರ ನೈಟ್ ಕ್ಲಬ್‌ಗಳಲ್ಲಿ ಡ್ಯಾನ್ಸ ಮಾಡತೊಡಗಿದಳು. ಕ್ಯಾಬರೆ ಡಾನ್ಸ್ ಮಾಡಿದಳು, ಕೆಲವೆಡೆ ನೈಟ್ ಕ್ಲಬ್‌ಗಳಲ್ಲಿ ಹೋಸ್ಟಸ್ ಆದಳು, ಆದರೆ ಇಲ್ಲಿ ಸಣ್ಣಕಣ್ಣಿನ ಎಂಗ್ಲೊ–ಚೈನೀಜ ಸೂಳೆಯರ ಕಾಂಪಿಟೇಶನ್ ತುಂಬಾ ಜೋರಾಗಿತ್ತು. ಅದೂ ಅಲ್ಲದೆ ಅವಳು ವ್ಯವಸಾಯಿ ಸೂಳೆಯಾಗಿರಲಿಲ್ಲ. ಏಕೆಂದರೆ ಆಕೆ ''ಕರ್ನಲ್ ಆರ್ಥರ್ ಬೋಲ್ಟನ್''ನ ಮಗಳಾಗಿದ್ದಳು. ಆ ಕಾಲ್ಪನಿಕ ಕರ್ನಲ್ ಅವಳಿಗೆ ಹೆಜ್ಜೆ ಹೆಜ್ಜೆಗೂ ಗೌರವದಿಂದ ವರ್ತಿಸುವಂತೆ ಮಾಡಿದ. ಆಗಾಗ ಆಕೆಯ ನಕಲಿ ಅತ್ತೆ ಸಿಲಿಯಾರ ರಿಚ್‌ಮಂಡಳ ನೆನಪು ಕಾಡುತ್ತಿತ್ತು. ಕೆಲವೊಮ್ಮೆ ತಾಯಿ, ಮಾವ ಅವಳ ಕಣ್ಮುಂದೆ ಬಂದು ನಿಂತಂತೆ ಆಗುತ್ತದೆ. ಆಗ ಅವಳು ಕಣ್ಣೀರು ಒರೆಸಿಕೊಳ್ಳುತ್ತ ಮತ್ತೊಂದು ಸಿಗರೇಟ ಹಚ್ಚಿಕೊಂಡು ತನ್ನ ಕ್ರಾಂತಿಕಾರಿ ಜೀವನದ ಬಗ್ಗೆ ಅಚ್ಚರಿಗೊಳ್ಳುತ್ತಾಳೆ.

ಸೌಥ ಏಶಿಯಾದ ನೈಟ್‌ಕ್ಲಬ್‌ಗಳಲ್ಲಿಯ ಅವಳ ಅನುಭವ ಅವಳಿಗೆ ತುಂಬಾ ಜ್ಞಾನ ನೀಡಿದ್ದವು ಹಾಗೂ ಉದಾಸೀನತೆಯನ್ನೂ ತಂದಿದ್ದವು. ಭ್ರಷ್ಟರಾಜಕಾರಣಿಗಳ ಮತ್ತು ಅವರ ವಿಲಾಸೀ ಮಕ್ಕಳು ಏರ್ಪಡಿಸಿದ ಸ್ಟೇಜ ಪಾರ್ಟಿಗಳಲ್ಲಿ ಅವಳು ನರ್ತಿಸಿದ್ದಳು. ಇದರಿಂದಾಗಿ ಅವಳು ನೈತಿಕತೆ, ರಾಜಕೀಯತೆಯ ವಿಷಯಗಳನ್ನೆಲ್ಲಾ ಚೆನ್ನಾಗಿ ಅರಿತು ಕೊಂಡಿದ್ದಳು. ಪ್ರತಿಯೊಂದು ದೇಶ ಮತ್ತು ಪ್ರತಿಯೊಂದು ಪಟ್ಟಣದ ಹೋಟಲುಗಳಲ್ಲಿಯ ಕೋಣೆಗಳಲ್ಲಿ ತಲೆದಿಂಬಿನ ಹತ್ತಿರ ಬೈಬಲ್ ಇರಿಸಲಾಗಿರುತ್ತಿತ್ತು. ಆ ಪವಿತ್ರ ಗ್ರಂಥದ ಪವಿತ್ರ ಪುಟಗಳ ಯಾವ ಲಾಭವೂ ಅವಳಿಗೆ ಆಗಲಿಲ್ಲ. ಚೀನಿ

ರೆಸ್ಟೋರೆಂಟಿನ ಹಿಂದಿನ ಕೋಣೆಗಳಲ್ಲಿ ಕುಳಿತು, ಮೇಣಬತ್ತಿಯ ಹೊಗೆಯಿಂದ ಸುತ್ತುವರಿದ, ಸಣ್ಣ ಸಣ್ಣ ಕಾಲುಗಳ ರಹಸ್ಯಮಯಿ ಚೀನಿ ಮುದುಕಿಯರು ಭವಿಷ್ಯ ಹೇಳುತ್ತಿದ್ದರು. ಆದರೆ ಇವಳ ಯಾವ ತೊಡಕನ್ನೂ ಅವರು ಬಿಡಿಸಲಿಲ್ಲ. ಸಮಸ್ಯೆಯ ಯಾವ ಗಂಟನ್ನೂ ಬಿಚ್ಚಲಿಲ್ಲ.

ಜಕಾರ್ತಾದ ಒಂದು ಚೀನಿ ರೆಸ್ಟೋರಾದಲ್ಲಿ ಅವಳಿಗೆ ಓರ್ವ ಉದಾರಿ ಹಾಗೂ ಮನಮೋಹಕ ಡಚ್‌ವ್ಯಕ್ತಿ ಸಿಕ್ಕ. ಅವನ ವಯಸ್ಸು ನಲವತ್ತರ ಆಚೆ–ಈಚೆ ಇರಬಹುದು. ವಿಗ್ ಹಾಕಿಕೊಳ್ಳುತ್ತಿದ್ದ. ಅವನು ಸೂಟಿನ ಮೇಲೆ ಒಂದು ಗೌನಿನ ಹಾಗೆ ತೊಟ್ಟುಕೊಂಡಿದ್ದ. ತಾನೊಬ್ಬ ಡಚ್ ಸೂಫೀ ಹಾಗೂ ಪ್ಯಾರಿಸ್‌ನ ಸೂಫೀ ಇನಾಯತ್‌ಖಾನರ ಶಿಷ್ಯಯೆಂದು ಹೇಳಿಕೊಳ್ಳುತ್ತಿದ್ದ.

''ನಾನು ಇಂಡೊನೇಜಿಯನ್ ಸೂಫಿಜಮ್‌ದ ರಹಸ್ಯ ಕಲಿಯಲು ಎಮ್‌ಸ್ಟರ್ಡಮ್‌ದಿಂದ ಇಲ್ಲಿಗೆ ಬಂದಿರುವೆ. Dutch sensitives ಎಂದು ಕರೆಯಿಸಿ ಕೊಳ್ಳುವವರಲ್ಲಿ ನಾನೂ ಒಬ್ಬ, ನಮ್ಮಂಥವರ ಆರನೆಯ ಜ್ಞಾನೇಂದ್ರಿಯ ತುಂಬ ಜಾಗೃತ ವಾಗಿರುತ್ತದೆ'' ಎಂದ.

ಏನನ್ನೋ ತಿನ್ನುತ್ತ ಒಮ್ಮೆಲೇ ಅವನು ಹೇಳಿದ್ದ–''ನಿನ್ನ ತಂದೆ ಜೀವಂತ ವಾಗಿದ್ದಾನೆ.''

ಅವಳು ಗಾಬರಿಗೊಂಡಳು.

''ಒಂದು ದಿನ ಅವನು ನಿನಗೆ ಅವಶ್ಯ ಸಿಕ್ಕೇ ಸಿಗುತ್ತಾನೆ. ಅವನು ಬಹು ದೊಡ್ಡ ವ್ಯಕ್ತಿಯಾಗಿದ್ದಾನೆ.''

''ನಿಜವಾಗಲೂ? ದೊಡ್ಡ ಮನುಷ್ಯ ಎಂದರೆ ಯಾವ ದೃಷ್ಟಿಯಿಂದ?''

''ಇದನ್ನು ನಾನು ಹೇಳಲಾರೆ...ಆದರೆ ಅವನು ತುಂಬಾ ದೊಡ್ಡ ವ್ಯಕ್ತಿ ಯಾಗಿದ್ದಾನೆ...''

ಇದರ ಅರ್ಥ...ಅವನು ನಿಜವಾಗಲೂ ಕರ್ನಲ್ ಇದ್ದ. ಈಗ ಬಹುಶಃ ಬ್ರಿಟಿಷ ಮಿಲ್ಟ್ರಿಯಲ್ಲಿ ಜನ್‌ರಲ್ ಆಗಿರಬಹುದು. ಹೀಗೆ ವಿಚಾರ ಮಾಡಿದ ಅವಳು ತುಂಬ ಸಂತುಷ್ಟಳಾದಳು. ಪ್ರಸನ್ನ ಚಿತ್ತಳಾದಳು. ಅವಳ ಅರ್ಧ ದುಃಖ ಮಾಯವಾಯಿತು. ಅವಳು ತನ್ನನ್ನು ತಾನು ಸುರಕ್ಷಿತಳೆಂದು ಭಾವಿಸಿದಳು.

ಆ ಡಚ್ ಸೂಫಿಯ ವಾಸ್ತವ್ಯ ಕೂಡ ಅವಳಿಗೆ ತುಂಬ ಹಿತ ನೀಡಿತು. ಇದೇ ಸೂಫಿಜಮ್ ಮತ್ತು E. S. P. ಸುರಕ್ಷತೆಯ ಭರವಸೆಯ ಚಕ್ರದಲ್ಲಿ ಸಿಲುಕಿದ ಅವಳು ಈ ರಹಸ್ಯಮಯೀ ವ್ಯಕ್ತಿಯೊಂದಿಗೆ ಜಕಾರ್ತಾದ ಒಂದು ಮಸೀದಿಗೆ ಹೋಗಿ ತಲುಪಿದಳು. ಕುರುಚಲ ಗಡ್ಡದ, ತೆಳ್ಳಗಿನ, ಸಣ್ಣ ಕಣ್ಣಿನ ಇಂಡೋನೇಶಿಯಾದ ಶೇಖ ಅವಳಿಗೆ ಪವಿತ್ರ ಕುರಾನಿನ ಕಲಮಾ ಓದಿಸಿದ. ಅವಳ ಹೆಸರನ್ನು ಬದಲಿಸಿ ಹಲೀಮಾ ಎಂದು ಪುನರ್ ನಾಮಕರಣ ಮಾಡಿದ. ಅವಳ ಮದುವೆ ಡಚ್‌ದ ಓರ್ವ ಮುಸಲ್ಮಾನ ಮುಹಮ್ಮದ ಮುಯೀನ ಕೋಟನೊಂದಿಗೆ ನಡೆಯಿತು. ಅವಳು ರಜಿಸ್ಟರದಲ್ಲಿ ತನ್ನ

ಹೆಸರನ್ನು ''ಕೆಥ್ರಿನ್ ಹಲೀಮಾವತಿ, ಕರ್ನಲ್ ಆರ್ಥರ್ ಬೋಲ್ಬಿನ್‌ನ ಮಗಳು'' ಎಂದು ಬರೆದುದನ್ನು ನೋಡಿ ಅಪಾರ ಆನಂದ ಪಟ್ಟಳು.

ಆ ಡಚ್‌ದ ನವ ಮುಸಲ್ಮಾನ್ ತುಂಬಾ ಧಾರ್ಮಿಕ ವ್ಯಕ್ತಿಯಾಗಿದ್ದ. ಅವನು ಹಲೀಮಾವತಿಗೆ ನಾಚು–ಗೀಚು ಎಲ್ಲ ಬಂದೆಂದು ಆಜ್ಞೆ ನೀಡಿದ. ಆದರೆ ಜಕಾರ್ತಾದ ಯಾವ ಹೋಟಲಿನಲ್ಲಿ ಆಕೆ ಕ್ಯಾಬರೆ ಡ್ಯಾನ್ಸ ಮಾಡುತಿದ್ದಳೋ ಆ ಹೋಟೆಲಿನವರು ಡ್ಯಾನ್ಸ ಮಾಡದಿದ್ದಲ್ಲಿ ಹೋಟಲ್ ಕೋಣೆಯ ಬಾಡಿಗೆ ಉಳಿದ ಎಲ್ಲ ಖರ್ಚಿನ ಹಣ ತೆತ್ತಬೇಕಾಗುತ್ತದೆಂದರು. ಏಕೆಂದರೆ ಮುಹಮ್ಮದ ಮುಯೀನ ಕೋಟನ ಮನಿಯಾರ್ಡರ್ ಎಮ್ಸ್ಟರ್ಡಮ್‌ದಿಂದ ಬರುವಲ್ಲಿ ವಿಳಂಬವಾಗಿತ್ತು. ಕೆಥರಿನ್ ಕೋಟ ಕೂಡಿಟ್ಟ ಹಣವನ್ನು ಮತ್ತೆ ಖರ್ಚುಮಾಡತೊಡಗಿದಳು.

ಜಕಾರ್ತಾದ ಆ ಹೋಟಲಿನಲ್ಲಿರತೊಡಗಿ ಹದಿನೈದು ದಿನಗಳಾಗಿದ್ದವು. ಬೆಳಗಿನ ಜಾವ ಅವಳು ಕಣ್ಣು ತೆರೆದಾಗ ಆ ಡಚ್ ಸೂಫೀ ಮಾಯವಾಗಿದ್ದ. ಕೆಥ್ರಿನ್‌ಳ ವಜ್ರಮುಂಗುರಗಳು, ಅಸಲಿ ಮುತ್ತುಗಳ ಸರಗಳು, ಹೇರ ಮುತ್ತಗಳು–ಸಿಲಿಯಾ ರಿಚ್‌ಮೆಂಡ್ ಅವಳಿಗಾಗಿ ಬಿಟ್ಟುಹೋಗಿದ್ದಳು– ಅವೆಲ್ಲ ಮಾಯವಾಗಿದ್ದವು, ಅವುಗಳೊಂದಿಗೆ ರೋಖಹಣ ಕೂಡ. ತಲೆಕಡೆ ಇದ್ದ ಮೇಜಿನ ಮೇಲೆ ದೊಡ್ಡದಾದ ಬೈಬಲ್ ಹೇಗಿತ್ತೋ ಹಾಗೆಯೇ ಇತ್ತು. ಅದರ ಮೇಲೆ ಪ್ಲಾಸ್ಟಿಕ್‌ದ ಒಂದು ಖಾಲಿ ಕಪ್ ಇತ್ತು. ಕಳೆದ ರಾತ್ರಿಯೇ ಆ ಸಾಹಿತ್ಯ ಪ್ರೇಮಿ ಡಚ್ ಆಧ್ಯಾತ್ಮವಾದಿ, ಮಾತು–ಮಾತುಗಳಲ್ಲಿ ಓರ್ವ ಅಮೇರಿಕಾದ ಕತೆಗಾರನ ಒಂದು ವಾಕ್ಯವನ್ನು ಮತ್ತೆ ಮತ್ತೆ ಹೇಳಿದ್ದ–''ನೀನು ಇಡೀ ಜಗತ್ತನ್ನು ಸುತ್ತಿದಾಗ ಕೊನೆಯಲ್ಲಿ ಗೊತ್ತಾಗುವುದಿಷ್ಟು– ಇಡೀ ಜಗತ್ತು Holiday Inns ಮತ್ತು ಪ್ಲಾಸ್ಟಿಕ್‌ದ ಕಪ್ಪುಗಳಿಂದ ತುಂಬಿದೆ. ಮನೆಗೆ ಮರಳುವುದು ಅವಶ್ಯಕವಾಗಿದೆ.''

ಹೀಗಾಗಿ ಕೆಥ್ರಿನ್ ಕೋಟ ಆಘಾತ ಸಹಿಸುತ್ತ, ಎಡರು ತೊಡರು ಅನುಭವಿಸುತ್ತ ಜಕಾರ್ತಾದಿಂದ ಹೊರಟು ಸಿಡ್ನಿಯಲ್ಲಿರುವ ತನ್ನ ಮನೆಗೆ ಬಂದಳು. ಆಕೆಯ ಯೌವ್ವನ ಇಳಿಮುಖವಾಗ ತೊಡಗಿತ್ತು. ಸೌಂದರ್ಯ ಹಾಳಾಗುವುದರಲ್ಲಿತ್ತು. ಇಲ್ಲಿ ಅವಳಿಗೆ ಈಗ ಬಸ್‌ಕಂಡಕ್ಟರ್ ನೌಕರಿ ಮಾತ್ರ ಸಿಕ್ಕಿತು.

ಜೀವನ ಒಂದು ಸಂಘರ್ಷ ಎಂದು ತಿಳಿದವರ ವಿಶೇಷತೆಯೆಂದರೆ ಅವರೆಂದೂ ಸೋಲನ್ನೊಪ್ಪಿಕೊಳ್ಳುವುದಿಲ್ಲ. ಅಂತೆಯೇ ಅವಳು ಬಸ್‌ನಲ್ಲಿ ಟಿಕೆಟ್ ಹರಿಯುತ್ತ ಹರಿಯುತ್ತ ಈಗಲೂ ಹಗಲುಕನಸು ಕಾಣುತ್ತಿದ್ದಳು–ಮುಂದಿನ ಸ್ಟಾಪ್‌ನಲ್ಲಿ ಬಹುಶಃ ಯಾವನಾದರೂ ಸ್ವಪ್ನಗಳ ದೊರೆ ಸಿಗಬಾರದೇಕೆ....ಏಕೆಂದರೆ ಯಾರಿಗೆ ಗೊತ್ತು ಈ ಮಂಜು ಮುಸುಕಿನ ಹಿಂದೆ ಏನಿದೆಯೋ ?...

ರಾಜಾ ಸರ್ ನರೇಂದ್ರನಾಥನ ಪೂರ್ವಜ ಓರ್ವ ದರಿದ್ರ ಕನ್ನೋಜ ಬ್ರಾಹ್ಮಣ ಜ್ಯೋತಿಷಿಯಾಗಿದ್ದ. ಅವನ ಯಾವುದೊ ಒಂದು ಭವಿಷ್ಯದಿಂದ ಸಂತುಷ್ಟನಾಗಿ ಚಕ್ರವರ್ತಿ ಜಹಾಂಗೀರ ನದಿ ತೀರದಲ್ಲಿಯ ಒಂದು ಜಾಗೀರ ಕೊಡಮಾಡಿದ್ದ. ಈಗಿರುವ ರಾಜಾಸಾಬ ಅತ್ಯಂತ ಧಾರ್ಮಿಕ ಹಾಗೂ ಸಾಧು–ಸಂತರ ಬಗ್ಗೆ ಶ್ರದ್ಧೆಯುಳ್ಳ

ವ್ಯಕ್ತಿಯಾಗಿದ್ದ. ಸಂಸ್ಥಾನಗಳು ಕೊನೆಗೊಂಡ ನಂತರ ಹೊಸದಿಲ್ಲಿಗೆ ಬಂದು ತನ್ನ ವೈಭವಪೂರ್ಣ ಅರಮನೆಯಲ್ಲಿ ವಾಸವಾಗಿದ್ದ. ಒಂದು ಬಹು ದೊಡ್ಡ ಉದ್ಯೋಗ ಆರಂಭಿಸಿದ್ದ. ಆ ಉದ್ಯೋಗಕ್ಕೆ ಸಂಬಂಧಿಸಿ ಅವನ ಹಿರಿಯ ಮಗ (ಅವನ ಮೊದಲ ಹೆಸರು ಯುವರಾಜ ಶೈಲೇಂದ್ರನಾಥ ಎಂದಿತ್ತು. ಈಗ ಕೇವಲ ಮಿಸ್ಟರ್ ಎಸ್. ಎನ್. ವಾಜಪೇಯಿ ಆಗಿತ್ತು.) ಜಾಪಾನ್, ಸಿಂಗಾಪೂರ, ಆಸ್ಟ್ರೇಲಿಯಾಗಳ ಪ್ರವಾಸಕ್ಕೆ ಹೊರಟಿದ್ದ. ಯುವರಾಜ ಕೊಂಚ ಮುಗ್ಧ ತರುಣನಾಗಿದ್ದ. ಮೊದಲ ಸಲ ಪರದೇಶಕ್ಕೆ ಹೋಗುವ ಅವಕಾಶ ಒದಗಿತ್ತು. ಹೀಗಾಗಿ ಆಸ್ಟ್ರೇಲಿಯಾದಲ್ಲಿ ಗಾಬರಿಗೆ ಒಳಗಾಗಿದ್ದ.

ಕ್ರಿಸ್‌ಮಸ್ ಇದ್ದುದರಿಂದ ಸಿಡ್ನಿಯಲ್ಲಿ ವಿಪರೀತ ಜನಸಂಚಾರ, ಗದ್ದಲ. ಒಂದು ದಿನ ಓಪೇರಾ ಹೌಸ್‌ದತ್ತ ಹೊರಟಾಗ ಅವನಿಗೆ ಒಮ್ಮೆಲೇ ಆಸ್ಟ್ರೇಲಿಯಾ-ಇಂಡಿಯಾದ ನಡುವೆ ಟೆಸ್ಟ್ ಮ್ಯಾಚಿದೆಂಬುದರ ನೆನಪಾಯಿತು. ಹಾದಿಯಲ್ಲಿ ಹೊರಟಿದ್ದ ಓರ್ವನಿಂದ ಕ್ರಿಕೆಟ್ ಸ್ಟೇಡಿಯಂದ ವಿಳಾಸ ತಿಳಿದು ಅತ್ತ ಹೋಗುತ್ತಿದ್ದ ಬಸ್‌ನಲ್ಲಿ ಹತ್ತಿದ. ಕಿಟಕಿಯ ಹತ್ತಿರ ಕುಳಿತ ಬಸ್‌ನಲ್ಲಿ ಒಬ್ಬರಿಗಿಂತ ಒಬ್ಬರು ಸುಂದರರು. ಲೆಬನಾನದ ಹುಡುಗಿಯರು, ದುಂಡು ಮುಖದ ಆಸ್ಟ್ರೇಲಿಯಾದ ಚೆಲುವೆಯರು. ಬಸ್‌ಕಂಡಕ್ಟರ್ ತನ್ನ ನಾಜೂಕಾದ ಕೆಂಪಗಿನ ಕೈ ಮುಂದೆ ಮಾಡಿದಳು. ಅವನು ತಲೆಯೆತ್ತಿ ನೋಡಿದರೆ ಅವನ ಕಣ್ಣು ಕುಕ್ಕಿದವು. ಏನೆಂಥ ಚೆಲುವು, ಹೊಳೆವ ಮುಖಾರವಿಂದ, ನಿಜಕ್ಕೂ ಹುಣ್ಣಿಮೆಯ ಚಂದಿರನ ಹಾಗಿದ್ದಳು. ಇಂಥ ಸೌಂದರ್ಯ ಎಲ್ಲಿಯಾದರೂ ಸಾಧ್ಯವೇ? ಎಂದು ಯೋಚನೆ ಗೀಡಾದಾಗ ಆ ಅಪ್ಸರೆ ಓರ್ವ ಹಿಂದೂಸ್ತಾನಿಯನ್ನು ಕಂಡು ಸ್ವದೇಶದವನೆಂಬ ಅಭಿಮಾನದಿಂದ ಮುಗುಳ್ನಕ್ಕಳು.

ರಾಜಕುಮಾರ ಕೇಳಿ ತಿಳಿದಿದ್ದ-ಕೆಂಪು ಹೆಣ್ಣು ನಕ್ಕರೆ ಸಾಕು ನೀನು ಸಿಕ್ಕಿ ಹಾಕಿಕೊಂಡೆ-ಎಂಬ ಮಾತನ್ನು. ಈಗ ಅವನು ಕೊಂಚ ಮೂರ್ಖತನದಿಂದ ಅವಳ ಕಣ್ಣೊಂದಿಗೆ ಕಣ್ಣು ಕೂಡಿಸಿದ. ಅವಳ ಪ್ರೇಮ ಪಾಶದಲ್ಲಿ ಸಿಲುಕಿಯೇ ಬಿಟ್ಟ.

ಮೊದಲ ಸಲ ಯುರೋಪಕ್ಕೆ ಹೋಗುವ ತರುಣರು, ಆರು ತಿಂಗಳೊಳಗಾಗಿ ಅಲ್ಲಿಯ ಹೆಣ್ಣಿನೊಂದಿಗೆ ಮದುವೆ ಮಾಡಿಕೊಳ್ಳದಿದ್ದರೆ ಅವರು ಪಾರಾದಂತೆ, ಇಲ್ಲದಿದ್ದರೆ ಇಲ್ಲ. ರಾಜಕುಮಾರ ಶೈಲೇಂದ್ರನಿಗಂತೂ ಆಸ್ಟ್ರೇಲಿಯಾಕ್ಕೆ ಬಂದು ಕೇವಲ ಹತ್ತು ದಿನಗಳಾಗಿದ್ದವು.

ಬಸ್ ಕಂಡಕ್ಟರ್ ಟಿಕೆಟ್ ಕೊಟ್ಟು ಅದೇ ರೀತಿ ಮುಗುಳ್ನಗೆ ಬೀರುತ್ತ ಮುಂದಕ್ಕೆ ಹೊರಟು ಹೋದಳು. ಮತ್ತೆ ಆಕೆ ಅವನತ್ತ ಹೊರಳಿ ನೋಡಲಿಲ್ಲ. ಆದರೆ ರಾಜಕುಮಾರ ನಿಶ್ಚಿತ ಮನೋಭಾವದ, ಸ್ಥಿರಚಿತ್ತದ ವ್ಯಕ್ತಿಯಾಗಿದ್ದ. ಮಾರನೆಯ ದಿನ ಮತ್ತೆ ಅದೇ ಹೊತ್ತಿಗೆ ಅದೇ ಬಸ್ ಹತ್ತಿದ. ನಾಲ್ಕು ದಿನಗಳು ಹೀಗೆಯೇ ಕಳೆದ ನಂತರ ಬಯಸಿದ ಫಲ ದೊರಕಿತು. ಪರಸ್ಪರ ಪರಿಚಯ-ಪ್ರಿನ್ಸ್ ಶೈಲೇಂದ್ರನಾಥ ಆಫ್ ಇಂಡಿಯಾ.

ಶಬ್ದ "ಪ್ರಿನ್ಸ್" ಭೂಮಿಯ ಮೇಲಿನ ಈ ಅಪ್ಸರೆಯನ್ನು ಮಂತ್ರ ಮುಗ್ಧಗೊಳಿಸಿ ಆಯಸ್ಕಾಂತದಂತೆ ಹಿಡಿದುಕೊಂಡಿತು. ಅವಳು ಬಾಲ್ಯದಲ್ಲಿ ಮಸ್ಸೂರಿಯಲ್ಲಿ ರಾಜ

ಕುಮಾರರನ್ನು, ನವಾಬರ ಮಕ್ಕಳನ್ನು ನೋಡಿದ್ದಳು. ಸಿಟ್ನಿಯ ಒಂದು ಬಸ್ಸಿನಲ್ಲಿ ಓರ್ವ ವ್ಯಕ್ತಿತನಗೆ ತಾನು ರಾಜಕುಮಾರನೆಂದು ಪರಿಚಯಿಸಿಕೊಂಡರೆ, ಈ ಅನುಭವಿ ಕ್ಯಾಬರೆ ಡಾನ್ಸರ ನಕಲಿ ರಾಜಕುಮಾರನಲ್ಲನೆಂದು ಗುರುತಿಸಿದಳು.

ಈ ಅಪ್ಸರೆ ಶೀಶೆಯಲ್ಲಿ ಇಳಿಯತೊಡಗಿದಳು. ಸಾಯಂಕಾಲ ಅಪಾಯಿಂಟ್ ಮೆಂಟ್, ರಾತ್ರಿಗೆ ಮೇಣಬತ್ತಿಯ ಮಂದ ಬೆಳಕಿನಲ್ಲಿ ಡಿನ್ನರ–ಡಾನ್ಸ್, ಹಗಲು ಸಮುದ್ರ ತಟದಲ್ಲಿ ಶತಪಥ, ಖರೀದಿ, ಉತ್ತಮಕುಲ, ಇಂಗ್ಲಂಡದ ತರುಣಿ, ಕರ್ನಲ್‌ನ ಮಗಳು, ಲಾರ್ಡನ ಮೊಮ್ಮಗಳು, ಹೀಗಿರುವಾಗ ಆತಂಕವೆಲ್ಲಿಯದು?

ನಮ್ಮ ರಾಜ ಮಹಾರಾಜರು, ನವಾಬರು ಓರ್ವ ಕಿರಿಯ ರಾಣಿ ಯುರೋಪಿಯನ್ ಆಗಿರಬೇಕೆಂಬ ಕಾಯ್ದೆಯನ್ನೇ ಮಾಡಿ ಕೊಂಡಿದ್ದರು. ಸಾಮಾನ್ಯವಾಗಿ ಅವರು ಲಂಡನ್‌ದ 'ಬಾರಮೆಡ್' ರೇ ಆಗಿರುತ್ತಿದ್ದರು. ಆದರೆ ಈಗ ಸ್ವತಂತ್ರ ಭಾರತದಲ್ಲಿ ಸಂಸ್ಥಾನಗಳು, ರಾಜ ಪರಂಪರೆಗಳು ಇಲ್ಲವಾಗಿದ್ದವು. ಅದೂ ಅಲ್ಲದೆ ಹಿಂದೂ ಜಾತಿಗಳಲ್ಲಿ ಏಕ ಪತ್ನಿ ಮಾತ್ರ ಇರಬೇಕೆಂಬ ಕಾನೂನು ಬೇರೆ.

ಇದೆಲ್ಲ ಇದ್ದರೂ ಸ್ವತಂತ್ರ ಹಿಂದೂಸ್ಥಾನದಲ್ಲಿ ಇಂಗ್ಲಂಡ ಅಥವಾ ಅಮೇರಿಕಾದ ಹೆಣ್ಣಿನೊಂದಿಗೆ ಮದುವೆ ಮಾಡಿಕೊಳ್ಳುವಲ್ಲಿರುವ Snob Value ಬಗ್ಗೆ ಶೈಲೇಂದ್ರ ನಾಥ ಬಲ್ಲವನಾಗಿದ್ದ. ಮೊದಲ ಯುವರಾಣಿ ಸ್ವತಃ ರಾಜಕುಮಾರಿಯಾಗಿದ್ದಳು. ಪಾಪ, ಮದುವೆಯಾದ ಎರಡೇ ವರ್ಷದಲ್ಲಿ ಅವಳು ಸ್ವರ್ಗಸ್ಥಳಾದಳು.

ಅವನು ಕೆಥರಿನ್‌ಳಲ್ಲಿ ಪ್ರಪೋಜ ಇರಿಸಿದ ಮಾರನೆಯ ದಿನವೇ, ಕೆಥರಿನ್ ಸ್ವತಃ ಸಿಟ್ನಿಯ ಒಂದು ಆಶ್ರಮದಲ್ಲಿದ್ದಳು. ಜಕಾರ್ತಾದ ಮಸೀದಿಯಲ್ಲಿ ಅವಳ ನಿಕಾಹ ಆಗಿತ್ತು, ಕುರಾನಷರೀಫದ ಕಲಾಮು ಓದಿಸಲಾಗಿತ್ತು. ಇಲ್ಲಿ ಪಂಡಿತ ವೈದಿಕ ಮಂತ್ರ ಪಠಿಸಿದ. ಅವಳಿಗೆ ಶೈಲಜಾದೇವಿಯೆಂದು ಹೊಸ ನಾಮಕರಣ ಮಾಡಿದ. ಬಂಗಾಲಿ ಪಂಡಿತ ಮುಗುಳ್ನಗುತ್ತ–

''ಅಖಂಡ ಸೌಭಾಗ್ಯವತೀಭವ....ಯುವರಾಣಿ ರಾಜ್ಯಲಕ್ಷ್ಮಿ ಶೈಲಜಾ ದೇವಿಯವರಿಗೆ ಶುಭವಾಗಲಿ....ಅಭಿನಂದನೆಗಳು.....'' ಎಂದ. ಅವಳ ಮುಂದ ಬುದ್ಧಿಯ ಹೊಸ ಪತಿ, ವಯಸ್ಸಿನಲ್ಲಿ ಅವಳಿಗಿಂತ ಸಾಕಷ್ಟು ಸಣ್ಣವನಿದ್ದ. ಸಿಹಿ ತಿನ್ನಿಸಿ ಇಬ್ಬರ ಕೈ ಕೈ ಹಿಡಿಸಿದ ಪಂಡಿತ. ರಜಿಸ್ಟರ್‌ದಲ್ಲಿ ಅವಳ ತಂದೆಯ ಹೆಸರನ್ನು ಹೀಗೆ ಬರೆಸಲಾಯಿತು–ಕರ್ನಲ್ ಆರ್ಥರ್ ಬೋಲ್ಬನ್ ಆಫ್ ಲಂಡನ್ ಆ್ಯಂಡ್ ಪೇಶಾವರ ಕಂಟೋನಮೆಂಟ್.....

ಕಾರ್ಪೊರಲ್ ಆರ್ಥರ್ ಬೋಲ್ಬನ್ ಮೀರತ್ ದಂಡು ಪ್ರದೇಶದಿಂದ ನೇರವಾಗಿ ಬರ್ಲಿನ್‌ಗೆ ಹೋಗಿದ್ದ. ಕೆಲದಿನಗಳ ನಂತರ ಯುದ್ಧ ಸಮಾಪ್ತಗೊಂಡಿತು. ಆಗ ಅವನು ತನ್ನ ಸೈನಿಕರ ಬ್ಯಾಂಡಿನೊಂದಿಗೆ ಇಂಗ್ಲಂಡಕ್ಕೆ ಹೋಗಿ ಅಲ್ಲಿ ಜಯದ ಗೀತ ಬಾರಿಸುತ್ತ ತಿರುಗಾಡಿದ. ಅವನನ್ನು ಮಿಲ್ಟ್ರಿ ನೌಕರಿಯಿಂದ ತೆಗೆಯಲಾಯಿತು.

ಆರ್ಥರ್ ಬೋಲ್ಬನ್‌ನ ತಂದೆ ಪಿಕೆಡಲಿ ಸರ್ಕಸ್‌ದಲ್ಲಿ ಬೂಟ ಪಾಲಿಶ್ ಮಾಡುತ್ತಿದ್ದ. ಅಲ್ಲಿ ಬಾಂಬ್ ಬಿದ್ದಾಗ ಅದರಲ್ಲಿ ಅವನು ಸತ್ತು ಹೋದ. ತಾಯಿಯೂ ಸತ್ತು ಹೋಗಿದ್ದಳು. ಆರ್ಥರ್‌ನಿಗೆ ಈಸ್ಟ್ ಎಂಡ್‌ದ ಒಂದು ಡಾನ್ಸ್ ಬ್ಯಾಂಡ್‌ನಲ್ಲಿ ಕೆಲಸ ಸಿಕ್ಕಿತು. ಮದುವೆ ಮಾಡಿಕೊಳ್ಳಲಿಲ್ಲ. ಈ ಜಂಜಾಟ ಯಾರಿಗೆ ಬೇಕು. ವರ್ಷಗಳು ಉರುಳುತ್ತ ಹೋದವು. ಲಕ್ವಾದಿಂದಾಗಿ ಒಂದು ಕೈ ನಿಷ್ಕ್ರಿಯೆಯಾಯಿತು. ಆಗ ಡ್ರಮ್ ಬಾರಿಸುವುದು ನಿಂತುಹೋಯಿತು. ಆಸ್ಪತ್ರೆಯಿಂದ ಹೊರಬಂದ ನಂತರ ಚೌಕೀದಾರನ ಕೆಲಸ ಮಾಡತೊಡಗಿದ.

ಇದೇ ರೀತಿ ಇರುತ್ತ ಮುದುಕನಾದ. ಈಗಲೂ ಕವಿತ ಬರೆಯುತ್ತಾನೆ. ಆದರ ಅವು ಎಲ್ಲಿಯೂ ಪ್ರಕಟವಾಗಿಲ್ಲ. ಕಡ್ಡಾಯವಾಗಿ ನಿತ್ಯ ಚರ್ಚಗೆ ಹೋಗುತ್ತಾನೆ. ಅವು ಗುರುದ್ವಾರ ಆಗದೇ ಉಳಿದಿವೆ. ಅವು ಕೂಡ ಭಗ್ನಾವಶೇಷವಾಗಿವೆ. ಉರ್ದು ಬಲ್ಲವನಾದ್ದರಿಂದ ಪಾಕಿಸ್ತಾನಿ, ಹಿಂದೂಸ್ತಾನಿ ಕೂಲಿಗಳೊಂದಿಗೆ ಅವನ ಸಂಪರ್ಕ ತುಂಬ ಚೆನ್ನಾಗಿತ್ತು. ಓರ್ವ ಸಿಖ್ ಚೌಕೀದಾರನೇ ಅವನಿಗೆ ಓರ್ವ ಪಂಜಾಬಿ ಶ್ರೇಷ್ಠ ವ್ಯಾಪಾರಿ ಮಿಸ್ಟರ್ ಖೋಸಲಾನ ಒಂದು ಅಂಗಡಿಯಲ್ಲಿ ಚಾಕರನನ್ನಾಗಿ ಸೇರಿಸಿದ್ದ. ಅತ್ಯಂತ ವೈಭವಪೂರ್ಣ 'ಷೋರೂಮ್' ನೈಟ್ಸ್ ಬ್ರಿಜ್‌ದಲ್ಲಿತ್ತು. ಅಲ್ಲಿಯ ಎಲ್ಲ ಜನ ಈ ವಿನಮ್ರ, ಶಾಂತ ಸ್ವಭಾವದ ಮುದುಕನಿಂದ ಸಂತುಷ್ಟರಾಗಿದ್ದರು.

ಆ ದಿನ ಬೆಳಗ್ಗ ಷೋರೂಮ್ ತಲುಪಿ ಅವನು ಹಾಲ್ ಸ್ವಿಚ್ಚ ಗೊಳಿಸಿದ. ಗ್ರಾಹಕರಿಗಾಗಿ ಮೇಜಿನ ಮೇಲೆ ಅಂದಿನ ಪತ್ರಿಕೆಗಳನ್ನು ಜೋಡಿಸಿಟ್ಟ. ಆಗ, ಮುಂಬೈಯಿಂದ ಪ್ರಕಟವಾಗುತ್ತಿದ್ದ ಒಂದು ಮಹಿಳಾ ಪತ್ರಿಕೆಯ ಮುಖ ಪುಟದ ಮೇಲೆ ಅವನ ದೃಷ್ಟಿ ಹರಿಯಿತು. ಮುಖ ಪುಟದ ಮೇಲಿದ್ದ ಹುಡುಗಿಯ ಮುಖ ಅವನನ್ನು ತುಂಬ ಆಕರ್ಷಿಸಿತು. ಆ ಪತ್ರಿಕೆಯ ಒಳಪುಟದಲ್ಲಿ ಇಂಟರೀಯರ ಡೆಕೋರೇಶನ್ ಬಗ್ಗೆ ಆ ಹುಡುಗಿಯ ಸಚಿತ್ರಲೇಖನ ಮುದ್ರಣ ಗೊಂಡಿತ್ತು.

ಆರ್ಥರ್ ಬೋಲ್ಬನ್ ಸೋಫಾದ ಮೇಲೆ ಕುಳಿತ, ಜೇಬಿನಿಂದ ಚಾಳೀಸ ತೆಗೆದು ಲೇಖನ ಓದತೊಡಗಿದ–''ಯುವರಾಣಿ ಶೈಲಜಾದೇವಿ ಓರ್ವ ಆಂಗ್ಲಸಂತಾನ ಹಾಗೂ ಇಂಗ್ಲಂಡದ ಶ್ರೀಮಂತ ವರ್ಗದೊಂದಿಗೆ ಅವಳ ಸಂಬಂಧವಿದೆ. ಅವಳ ತಂದೆ ಕರ್ನಲ್ ಆರ್ಥರ್ ಬೋಲ್ಬನ್ ಹಿಂದಿನ ಮಹಾಯುದ್ಧದಲ್ಲಿ ಎಲ್ಲೋ ಕಳೆದು ಹೋದ. ಅವಳ ಅಜ್ಜ ಓರ್ವ ಆಯರಿಶ್ ಲಾರ್ಡ ಇದ್ದ. ರಾಜಕುಮಾರಿ ಅವರ ಬಾಲ್ಯ ಕಾಲ ಮಸ್ಸೂರಿಯಲ್ಲಿ ಕಳೆಯಿತು. ಮತ್ತೆ ಆಕೆ ತನ್ನ ಅತ್ತೆ ಲೇಡಿ ರಿಚ್‌ಮೊಂಡ್‌ಳ ಬಳಿ ಆಸ್ಟ್ರೇಲಿಯಾಕ್ಕೆ ಹೊರಟು ಹೋದಳು. ಅಲ್ಲಿ ಆಕೆ ಬ್ಯಾಲೆ ನೃತ್ಯ, ಪಿಯಾನೋ ಹಾಗೂ ಇಂಟೀರಿಯರ್ ಡೆಕೋರೇಶನ್‌ದಲ್ಲಿ ಪ್ರಾವಿಣ್ಯತೆ ಪಡೆದಳು.''

ಮುದುಕ ಆರ್ಥರ್ ಕಣ್ಣು ಮುಚ್ಚಿಕೊಂಡ ಹಾಗೂ ಬಹಳ ಹೊತ್ತಿನವರೆಗೆ ಚಕಿತಗೊಂಡು ಮೌನಿಯಾಗಿ ಕುಳಿತ. ಕೆಲಸಮುಯದ ನಂತರ ಒಂದು ಮೂಲೆಯಲ್ಲಿ ಹೋಗಿ ಮೊಣಕಾಲೂರಿ ಬಾಗಿ ಪ್ರಾರ್ಥನೆಯಲ್ಲಿ ಮಗ್ನನಾದ.

ಕಟ್ಟೊ ಈಗಲೂ ಮಸ್ಸೂರಿಯಲ್ಲಿದ್ದಾಳೆಂಬುದರಲ್ಲಿ ಅದು ಹೇಗೋ ಅವನಿಗೆ ಭರವಸೆಯಿತ್ತು. ಅದೇ ಹಳೆಯ ವಿಳಾಸಕ್ಕೆ ಪತ್ರ ಬರೆದರೆ, ಉತ್ತರವೂ ಸಿಕ್ಕೀತೆಂದು ತಿಳಿದಿದ್ದ.

ಹೀಗೆಯೇ ಆಯಿತು. ಕಟ್ಟೋಳ ಪತ್ರ ಬಂದ ನಂತರ ಆರ್ಥರ್ ಅಂಗಡಿಯವನಿಂದ ಒಂದು ತಿಂಗಳ ರಜೆ ಪಡೆದ. ಅವನು ಇಂಡಿಯಾ ಹೌಸ್‌ಗೆ ಹೋಗಿ ವೀಸಾ ಪಡೆದ. ಜೀವನವಿಡೀ ದುಡಿದು ಬ್ಯಾಂಕಿನಲ್ಲಿರಿಸಿದ್ದ ಎಲ್ಲ ಹಣ ತೆಗೆದು ಕೊಂಡು ವಿಮಾನದ ಹೋಗಿ–ಬರುವ ಟಿಕೆಟ್ ಕೊಂಡ. ಉಳಿದ ಹಣದಲ್ಲಿ ಕಟ್ಟೊ ಹಾಗೂ ಕೆಥರಿನ್‌ಳಿಗೆ ಕಾಣಿಕೆ ಖರೀದಿಸಿದ. ಸಾಮಾನುಗಳ ಚೀಲ ಹಿಡಿದುಕೊಂಡು ನಡೆದೇ ನಡೆದ. ದಣಿವಾದಾಗ ಯಾರದಾದರೂ ಮನೆಯ ಕಟ್ಟೆಯ ಮೇಲೆ ಕುಳಿತು ದಣಿವಾರಿಸಿಕೊಳ್ಳುತ್ತ ಮುಂದೆ ಸಾಗಿದ. ಹೀಗೆ ಉಳಿಸಿದ ಹಣದಿಂದ ಅಳಿಯನಿಗಾಗಿ ಒಂದು ಉತ್ಕೃಷ್ಟವಾದ ಟೈ ಕೊಂಡುಕೊಂಡ.

ಸರಿಯಾಗಿ ಒಂದು ವಾರದನಂತರ ಅವನು ''ದಿ ನ್ಯೂ ಹಿಮಾಲಯ ವೆಜಿಟೇರಿಯನ್ ಹೋಟಲ್''ದ ಸರ್ವೆಂಟ್ಸ್ ಕ್ವಾರ್ಟರ್ಸ್ ಮುಂದೆ ನಿಂತಿದ್ದ.

ಕಟ್ಟೊ ಆಯಾ ಅವನಿಗೆ ಬುದ್ಧಿ ಹೇಳಿದಳು–''ಸಾಹೇಬ, ನಮ್ಮ ಹುಡುಗಿ ನಮಗೊಂದು ಲೆಟರ್ ಕೂಡ ಹಾಕಲಿಲ್ಲ. ಮದುವೆ ಮಾಡಿಕೊಂಡಳು. ಇದರ ಅರ್ಥವೇನು? ಇದರರ್ಥವೇನೆಂದರೆ ಅವಳು ನಮ್ಮನ್ನು ಕಂಡು ತನ್ನ ಜೀವನದಲ್ಲಿ ಯಾವುದೇ ರೀತಿಯ ಗಡಬಡ, ತೊಂದರೆ ಬೇಡವೆಂದು ಭಾವಿಸಿರುವುದು.''

ಆಕೆ ಸರ್ವೆಂಟ್ಸ ಕ್ವಾರ್ಟರ್ಸ್‌ದ ಎದುರಿಗೆ ಒಂದು ಬಂಡೆಯ ಮೇಲೆ ಕುಳಿತು ತನ್ನ ಕೂದಲುಗಳಲ್ಲಿ ಸಾಸಿವೆಯಣ್ಣೆ ಹಾಕಿಕೊಳ್ಳುತ್ತಿದ್ದಳು. ಆಕೆಯ ಅಣ್ಣ ಫಜಲ್ ಮಸೀಹ ಒಂದು ಪೈಪಿನ ಮೇಲೆ ಕುಳಿತು ಎಂದಿನಂತೆ ಮೌನವಾಗಿ ಹಿಮಾಲಯ ನೋಡುತ್ತ ಲಿದ್ದ. ಎದುರಿಗೆ ಕೊಳ್ಳಗಳು ಭಯಂಕರ ಮಂಜಿನಿಂದ ಮುಸುಕಿ ಹೋಗಿದ್ದವು. ಮುದುಕ ಆರ್ಥರ್ ತನ್ನ ಬಲಿಷ್ಠ ಕೈಗಳಿಂದ ಪೈಪ್ ಹಚ್ಚಿ ಸೇದತೊಡಗಿದ. ಸೇದುತ್ತ ಯೋಚಿಸತೊಡಗಿದ–ಈ ಅಜ್ಞಾನಿ, ದರಿದ್ರ ಮತ್ತು ದುಃಖತಪ್ತ ಹೆಣ್ಣು ಎಷ್ಟೊಂದು ಶಾಂತಳಿದ್ದಾಳಲ್ಲ ಎಂದು ಚಕಿತಗೊಂಡ.

''ಕಟ್ಟೊ, ನಿನಗೆ ಎಳ್ಳಷ್ಟೂ ಸಿಟ್ಟಿಲ್ಲೇನು ?'' ಎಂದು ಆಶ್ಚರ್ಯದಿಂದ ಅವಳನ್ನು ಕೇಳಿದ.

''ಸಿಟ್ಟು ಯಾವುದಕ್ಕಾಗಿ ಸಾಹೇಬ? ನನ್ನೊಂದಿಗೆ ಏನೆಲ್ಲ ನಡೆಯಿತೋ ಅದೆಲ್ಲ ತಾಯಿ ಶಟಗವ್ವ ಬರೆದದ್ದು. ನಾನು ಅದನ್ನು ಪೂರ್ಣಗೊಳಿಸಿದೆ. ಅಷ್ಟೆ...''

''ತಾಯಿ ಶಟಗವ್ವ? ಆಕೆ ಯಾವ ಲೇಡಿ?''

''ಮುಂಬೈಯಿಂದ ಓರ್ವ ಬೋಹರಿ ಬೇಗಮ್ ಇಲ್ಲಿಗೆ ಬಂದಿದ್ದಳು. ನನ್ನ ಜೀವನದ ಕಥೆ ಕೇಳಿ ಹೇಳಿದಳು–'ಕಟ್ಟೋಬಾಯಿ ಮಗು ಹುಟ್ಟಿ 6ನೇ ದಿನ ಶಟಗವ್ವ

ಅರ್ಧ ರಾತ್ರಿಯಲ್ಲಿ ಬಂದು ಮಗುವಿನ ಹಣೆಯಲ್ಲಿ ಅದರ ಹಣೆಬರಹ ಬರೆದು ಹೋಗುತ್ತಾಳೆ. ನಾವು ಅದಕ್ಕೆ ವಿಧಿಯ ಆಟವೆನ್ನುತ್ತೇವೆ. ಕರ್ಮದ ಲಕ್ಷಣ.''

ಆರ್ಥರ್ ಆಸಕ್ತಿಯಿಂದ ಕೇಳುತ್ತಿದ್ದ. ಹುಬ್ಬೇರಿಸಿ ತನ್ನ ಹಣೆಯ ಮೇಲೆ ಕೈಯಾಡಿಸಿದ, ನಗು ಬಂತು, ನಕ್ಕ, ಕಟ್ಟೊ ಮತ್ತೆ ಹೇಳಿದಳು–''ಇದೇ ಸರ್ವೆಂಟ್ಸ್ ಕ್ವಾರ್ಟರ್ಸ್‌ದ, ಎದುರಿಗಿರುವ ಆ ಮನೆಯಲ್ಲಿ ತಾಯಿ ಶೆಟಗವ್ವ ರಾತ್ರಿ ಬಂದು ನಮ್ಮ ಕೈಟಿಯ ಹಣೆಯಲ್ಲಿ ರಾಣಿಯಾಗುತ್ತಾಳೆಂದು ಬರೆದು ಹೋಗಿದ್ದಳು. ನಮ್ಮ ಮಾತು ಕೇಳಿರಿ ಸಾಹೇಬ, ಅವಳನ್ನು ಕಾಣಲು ಹೋಗಬೇಡಿರಿ.''

''ಯಾಕೆ?''

''ನಾವು, ನಿಮಗೆ ಹೋಗಬೇಡವೆಂದು ಹೇಳುತ್ತೇವೆ, ಅದಕ್ಕೆ''

''ನಹೀ...ನಹೀ...ಕಟ್ಟೊ....ಶೆಟಗವ್ವ ನಾನು, ನೀನು ಅವಳನ್ನು ನೋಡಲು ದಿಲ್ಲಿಗೆ ಹೋಗುತ್ತೇವೆಂಬುದನ್ನು ಬರೆದಿದ್ದಾಳೆ....ನೋಡಿಲ್ಲಿ...ಅವಳಿಗಾಗಿ ವಿಲಾಯತ್‌ದಿಂದ ಏನೆಲ್ಲ ಕಾಣಿಕೆ ತಂದಿದ್ದೇನೆ....''ಅಲ್ಲಿಯೇ ಸಮೀಪದಲ್ಲಿ ಬಂಡೆಯ ಮೇಲೆ ಕುಳಿತು ಆರ್ಥರ್ ತುಂಬ ಖುಷಿಯಿಂದ, ಆಸಕ್ತಿಯಿಂದ ಷಾಪಿಂಗ್ ಬ್ಯಾಗ್ ತೆರೆದ.

ಪ್ಯಾಲೇಸದ ಎದುರಿಗೆ ಚಿಕ್ಕದಾದ ಹಸಿರು ಹುಲ್ಲಿನ ಲಾನ್ ಇತ್ತು. ಬಾಗಿಲದ ಥೇಟ ಎದುರಿಗೆ ಕೊಂಚವೇ ದೂರದಲ್ಲಿ ಇಂಟೀರಿಯರ್ ಡೆಕೋರೇಶನ್ ಬಗ್ಗೆ ಪತ್ರಿಕೆಯಲ್ಲಿ ಬಂದ ಚಿತ್ರವಿತ್ತು. ಅಂದು ಆದಿತ್ಯವಾರ. ಗುಲಾಬಿ ಹೂವಿನಂಥ ಚಳಿಗಾಲದ ಆ ಸುಂದರ ಬೆಳಗು. ಲಾನ್‌ದ ಮೇಲೆ ರಾಜಾಸಾಹೇಬ, ಅವನ ನಡುವಿನ ಮಗ ಹಾಗೂ ಕೆಲ ಯುರೋಪಿಯನ್ ಗಂಡಸರು, ಹೆಂಗಸರು ಓರ್ವ ಸ್ವಾಮಿಜಿಯ ಪ್ರವಚನ ಕೇಳುವುದರಲ್ಲಿ ಮಗ್ನರಾಗಿದ್ದರು. ಇವನೊಬ್ಬ ಆಧುನಿಕ ಹೊಸ ಸ್ವಾಮಿಯಾಗಿದ್ದ, ಕೆಲದಿನಗಳ ಹಿಂದೆ ಮಾತ್ರ ಇಂಟರ್‌ನ್ಯಾಷನಲ್ ಗುರು ಸರ್ಕಲ್‌ದಲ್ಲಿ ಸೇರಿದ್ದ. ಈ ಕರೋಡಪತಿ ಫ್ರೆಂಚ್ ಮತ್ತು ಜರ್ಮನ್ ಶಿಷ್ಯರೊಂದಿಗೆ ಕೆಲದಿನಗಳ ಮೊದಲು ಫ್ರಾನ್ಸ್‌ದಿಂದ ಮರಳಿದ್ದ ಹಾಗೂ 'ಮೌರ್ಯ' ಪಂಚತಾರಾ ಹೋಟಲದಲ್ಲಿ ವಾಸವಾಗಿದ್ದ. ರಾಜಾಸಾಹೇಬರೊಂದಿಗೆ ಬ್ರೆಕ್‌ಫಾಸ್ಟ್ ಮುಗಿಸಿದ ನಂತರ ಈಗ ಸತ್ ಮತ್ತು ಆನಂದದ ಬಗ್ಗೆ ಭಾಷಣ ನೀಡುತ್ತಿದ್ದ. ಟ್ಯಾಕ್ಸಿ ಗೇಟಿನ ಹತ್ತಿರ ಬಂದು ನಿಂತಾಗ ಅದರೊಳಗಿಂದ ಮೂರು ಜನ ಇಳಿದರು. ಓರ್ವ ಅಸ್ತವ್ಯಸ್ತ ರೀತಿಯಲ್ಲಿದ್ದ ಇಂಗ್ಲೀಷ ಮುದುಕ, ಕೈಯಲ್ಲಿ ಬ್ಯಾಗ್, ಮಾಮೂಲಿ ಸೀರೆ ಉಟ್ಟುಕೊಂಡ ಓರ್ವ ಬಡವಿ, ದೇಸಿ ಹೆಂಗಸು ಮತ್ತು ಕಿವಿಟೊಪ್ಪಿಗೆ ಧರಿಸಿದ, ಕಪನಿ ರೀತಿಯ ದಗಲಾ–ಬಗಲಾ ನಿಲುವಂಗಿ, ಕುರುಚಲು ಗಡ್ಡದ ಓರ್ವ ಹುಚ್ಚನಂಥ ವ್ಯಕ್ತಿ. ಈ ಮನುಷ್ಯ ಗೇಟಿನ ಪಕ್ಕದಲ್ಲಿಯೇ ಉರುಳಿಕೊಂಡ. ತುಂಬ ದಣಿದ ಇಂಗ್ಲೀಷ ಪಾದ್ರಿ, ಹಿಂದೇಟು ಹಾಕುತ್ತಿದ್ದ ಹೆಂಗಸಿನ ಕೈ ಹಿಡಿದುಕೊಂಡು ಲಾನದತ್ತ ಬಂದ.

ರಾಜಾಸಾಹೇಬ ತಲೆಯೆತ್ತಿ ಸಿಟ್ಟಿನಿಂದ ತಮ್ಮತ್ತ ಬರುತ್ತಿರುವವರನ್ನು ನೋಡಿದ, ಗೂರ್ಖಾ ಕಾವಲುಗಾರರು ಈ ವಿಚಿತ್ರ ವ್ಯಕ್ತಿಗಳನ್ನು ಒಳಗೆ ಹೇಗೆ ಬಿಟ್ಟರೆಂದು ಆಶ್ಚರ್ಯ ಚಕಿತನಾದ.

ಬಹುಶಃ ಇವರು ಅಸಂಬದ್ಧ, ಜನ, ಯಾರಿಗೂ ತೊಂದರೆ ಕೊಡದ ಮಿಶನರಿಗಳಿರಬೇಕು. ಆದಿತ್ಯವಾರದ ದಿನ ಬೆಳಿಗ್ಗೇನೇ ಒಳ್ಳೆ ಜನರ ಮನೆಗೆ ಹೋಗಿ ಪ್ರಳಯ ಸಮೀಪಿಸುತ್ತಲಿದೆಂದು ಹೇಳಿ, ಅವರನ್ನು ಎಚ್ಚರಿಸುತ್ತಾರೆ. ಆದರೂ ಈ ಜನ ತುಂಬ ಬೋರ ಮಾಡುತ್ತಾರೆ.

ಕುರ್ಸಿಗಳ ಸಮೀಪ ಬಂದು ಇಂಗ್ಲಿಷ ಮುದುಕ ನಿಂತುಕೊಂಡ. ಅಲ್ಲಿದ್ದ ಸ್ವಾಮಿಜಿ ನೀರು ಕುಡಿಯಲು ಬೆಳ್ಳಿಯ ವಾಟೆ ಎತ್ತಿ ಕೊಂಡಾಗ ಇಂಗ್ಲಿಷ ಮುದುಕ ಹರ್ಷದಿಂದ ಹೇಳಿದ–''ಗುಡ್ ಮಾರ್ನಿಂಗ್ ಫ್ರೆಂಡ್ಸ್!....'' ಇಷ್ಟು ಹೇಳಿದ ಅವನು ಮತ್ತು ಅವನೊಂದಿಗೆ ಇದ್ದ ದೇಸಿ ಹೆಂಗಸು, ಕೆಲ ನಿಮಿಷಗಳವರೆಗೆ ಹಾಗೆಯೇ ನಿಂತು ಕೊಂಡಿದ್ದರು.

ಅಲ್ಲಿದ್ದವರೆಲ್ಲ ಸುಮ್ಮನಿದ್ದರು. ತನ್ನ ಭಾಷಣಕ್ಕೆ ಉಂಟಾದ ಅಡೆ–ತಡೆಗಾಗಿ ಸ್ವಾಮಿಜಿ ತುಂಬ ಚಡಪಡಿಸಿದ ಹಾಗೂ ಅಶಾಂತಿಯಿಂದ ಹೂ ಮೂಸುತ್ತ ಕುಳಿತ. ಮಹಾರಾಜಾ ಕಣ್ಸನ್ನೆ ಮಾಡಿದ ಕೂಡುವಂತೆ. ಅವರಿಬ್ಬರೂ ಕುಳಿತು ಕೊಂಡರು.

''ಮಹಾರಾಜ ಆರಂಭ ಮಾಡಿ'' ಎಂದು ರಾಜಾಸಾಹೇಬ ಸ್ವಾಮಿಜಿಗೆ ಕೈ ಜೋಡಿಸಿ ಪ್ರಾರ್ಥಿಸಿದ. ಮಹಾರಾಜನಿಗೆ ಸಾಧು–ಸಂತರಲ್ಲಿ ಅಪಾರ ಭಕ್ತಿಯಿತ್ತು.

ಸ್ವಾಮಿಜಿ ಸತ್ಯ ಮತ್ತು ಅಸತ್ಯದ ಬಗ್ಗೆ ಮತ್ತೆ ಹೇಳಲಾರಂಭಿಸಿದ. ಮುದುಕ ಆರ್ಥರ್ ತಲೆ ಮುಂದೆ ಮಾಡಿ ಬಹಳ ಶ್ರದ್ಧೆಯಿಂದ ಭಾಷಣ ಆಲಿಸತೊಡಗಿದ. ಸ್ವಾಮಿಜಿ ಕೆಲಕ್ಷಣಗಳ ನಂತರ ಭಾಷಣ ನಿಲ್ಲಿಸಿದರು. ಓರ್ವ ಫ್ರೆಂಚ್ ಶಿಷ್ಯಳು ಟೇಪರಿಕಾರ್ಡದ ಕ್ಯಾಸೆಟ್ ಬದಲಿಸಿದಳು.

ಆಗ ಇಂಗ್ಲಿಷ ಮುದುಕ ಸ್ವಾಮೀಜಿಯೊಂದಿಗೆ ಮಾತು ಆರಂಭಿಸಿದ–''ಮಿಸ್ಟರ್ ಗುರು, ಸತ್ಯ ಮತ್ತು ಅಸತ್ಯದ ಬಗ್ಗೆ ತಾವು ಹೇಳಿದ ಮಾತುಗಳು ನನ್ನ ಮೇಲೆ ತುಂಬ ಪ್ರಭಾವ ಬೀರಿವೆ. ನಾನು ಸ್ವತಃ ಒಂದು ಸತ್ಯದ ಮೇಲೆ ಬೆಳಕು ಚೆಲ್ಲಲು ಇಂಗ್ಲಂಡದಿಂದ ಇಲ್ಲಿಗೆ ಬಂದಿದ್ದೇನೆ. ಯುವರ ಹೈನೆಸ್, ನಾನು ತಮ್ಮ ಅತ್ಯಂತ ಪ್ರೀತಿಯ ಪುತ್ರ ವಧು ಕೆಥರಿನ್.....''ಎನ್ನುತ್ತ ಅವನು ತನ್ನ ಕಿಸೆಯಿಂದ ಮಹಿಳಾ ಪತ್ರಿಕೆಯ ಕಟಿಂಗ್ ತೆಗೆದು ಅದರಲ್ಲಿದ್ದ ಹೆಸರು ಓದತೊಡಗಿದ–''ಅಖಂಡ ಸೌಭಾಗ್ಯವತಿ ರಾಜ್ಯಲಕ್ಷ್ಮಿ ಶೈಲಜಾ ದೇವೀಜಿ ಅವರ ತಂದೆ ನಾನು.''

''ಓಹೋ !... ವಾಟ್ ಎ ಪ್ಲೆಜಂಟ್ ಸರ್ಪ್ರೈಜ್ ಕರ್ನಲ್....'' ಎನ್ನುತ್ತ ರಾಜಾ ಒಮ್ಮೆಲೇ ಮುಗುಳ್ನಗುತ್ತ ಆಶ್ಚರ್ಯದಿಂದ ಕೈ ಕುಲುಕಲು ಕೈ ಮುಂದೆ ಮಾಡುತ್ತ– ''ಕರ್ನಲ್ ಬೋಲ್ಟನ್, ನೀವು ಬರುವ ಸುದ್ದಿಯನ್ನು ಏಕೆ ನಮಗೆ ತಿಳಿಸಲಿಲ್ಲ? ಬಂದ ಕೊಡಲೇ ಹೀಗೆಂದು ಏಕೆ ಹೇಳಲಿಲ್ಲ?.....''

''ಯುವರ ಹೈನೆಸ್....'' ಎಂದ ಮುದುಕ ಆರ್ಥರ್, ಗಂಟಲು ಸರಿಪಡಿಸಿ ಕೊಳ್ಳುತ್ತ ಸುತ್ತಲೂ ನೋಡಿದ ಹಾಗೂ ದೇವದೂತರ ತೆರದಿ ಮುಗುಳ್ನಗುತ್ತ ಹೇಳಿದ–''ನನ್ನ ಮನೆತನದ ಏಳು ತಲೆಮಾರಿನ ಜನರಲ್ಲಿ ಯಾರೂ ಕರ್ನಲ್ ಆಗಿಲ್ಲ.

ನನ್ನ ತಂದೆ ಮಚಗಾರನಿದ್ದ. ತಾಯಿ ಅಡಿಗೆ ಮಾಡುತ್ತಿದ್ದಳು. ನಾನು ಆರ್ಮಿಯಲ್ಲಿ ಡ್ರಮ್‌ರ ಆಗಿ ಸೇರಿದ್ದೆ. ಈಗ ಕಾವಲುಗಾರನಾಗಿದ್ದೇನೆ.''

ಅಲ್ಲಿದ್ದವರು ಬರ್ಫ್‌ದ ಮೂರ್ತಿಗಳ ಹಾಗೆ ನಿರ್ಜೀವವಾಗಿದ್ದರು. ಆರ್ಥರ್ ನಾಲ್ಕೂ ಕಡೆ ನೋಡುತ್ತ ದುಃಖದಿಂದ ತಲೆ ಅಲ್ಲಾಡಿಸುತ್ತ ಮತ್ತೆ ಹೇಳಿದ–

''ನಾನು ಜೀವನದುದ್ದಕ್ಕೂ ಕೇವಲ ಸತ್ಯವನ್ನು ಮಾತ್ರ ಹೇಳುತ್ತ ಬಂದಿದ್ದೇನೆ. ಅದೇ ನನ್ನ ಪಾಲಿಗೆ ಒಂದು ಸಮಸ್ಯೆಯಾಗುತ್ತ ಬಂದಿದೆ. ಇಲ್ಲಿಗೆ ಬಂದಾಗ ಸ್ವಾಮಿಜಿ ಸತ್ಯದ ವೈಭವವನ್ನು ಕುರಿತು ಭಾಷಣ ನೀಡುತ್ತಿದ್ದುದನ್ನು ಕೇಳಿ ನನಗೆ ತುಂಬ ಆನಂದವಾಯಿತು. ನಾನು ನನ್ನ ಜೀವನದುದ್ದಕ್ಕೂ ಕೂಡಿಟ್ಟಿದ್ದ ಸಂಪತ್ತನ್ನು ಖರ್ಚು ಮಾಡಿ ಇಲ್ಲಿಗೆ ಬಂದು ತಲುಪಿದ್ದೇನೆ. ನನ್ನ ಮಗಳನ್ನು ಕಣ್ಣಾರೆ ನೋಡಲೆಂದು. ಬಡ ಮನುಷ್ಯನ ಹಾಗಿದ್ದರೂ ವರದಕ್ಷಿಣೆಯ ರೂಪದಲ್ಲಿ ಕೊಡಲು ಕೆಲ ವಸ್ತುಗಳನ್ನು ಅವಳಿಗಾಗಿ ತಂದಿದ್ದೇನೆ......'' ಎನ್ನುತ್ತ ಬಾಗಿ ಹುಲ್ಲು ಹಾಸಿಗೆಯ ಮೇಲಿರಿಸಿದ್ದ ಬ್ಯಾಗ ಎತ್ತಿ ಮತ್ತೆ ಕೆಳಗಿರಿಸಿದ. ಅಲ್ಲಿದ್ದವರು ಬರ್ಫ್‌ದ ಮೂರ್ತಿಗಳ ಹಾಗೆ ಈಗಲೂ ಕುಳಿತಿದ್ದರು.

ಆರ್ಥರ್ ಮತ್ತೆ ಮಾತು ಆರಂಭಿಸಿದ–''ಕೆಥರಿನ್, ತನ್ನ ತಾಯಿಯನ್ನು ಕಂಡು ಅವಶ್ಯ ಸಂತೋಷ ಪಡುತ್ತಾಳೆ. ಅವಳು ತನ್ನ ಹದಿನೈದನೆಯ ವಯಸ್ಸಿನಿಂದ ತನ್ನ ತಾಯಿಯಿಂದ ದೂರವಿದ್ದಾಳೆ.....''

ಆರ್ಥರ್, ಉಸಿರಾಡಿಸಲು ಕೊಂಚ ಹೊತ್ತು ಮಾತು ನಿಲ್ಲಿಸಿದ. ಕಟ್ಕೊ ಅಚ್ಚರಿಯಿಂದ ಅವನನ್ನೇ ದಿಟ್ಟಿಸುತ್ತಿದ್ದಳು. ಇಡೀ ವಾತಾವರಣ ಅಕಸ್ಮಾತ್ತಾಗಿ ಅಸಾಧಾರಣವಾಯಿತು. ಅವಾಸ್ತವದ ರೂಪ ತಾಳಿತು. ವಾಸ್ತವಿಕ ಬದುಕಿನಲ್ಲಿ ಇಂಥ ಘಟನೆಗಳು ಘಟಿಸುವುದಿಲ್ಲ. ಆರ್ಥರ್ ಮತ್ತೆ ಮಾತಿಗಾರಂಭಿಸಿದ–''ಈ ಮೂರ್ಖ ಹೆಂಗಸು ಇಲ್ಲಿಗೆ ಬರಲು ತುಂಬ ಹೆದರುತ್ತಿದ್ದಳು. ಆಗ ನಾನು ಹೇಳಿದೆ–ಮಾರ್ಥಾ, ಬೆಳಕಿಗೇಕೆ ಹೆದರುತ್ತಿಹೆ ? ಸತ್ಯದ ಬೆಳಕಿಗೆ ಹೆದರಬೇಡ. ಸತ್ಯ ನಮ್ಮ ಹಕ್ಕು, ಸತ್ಯ ದೇವರು, ನಾವೆಲ್ಲ ಆ ದೇವರ ಮಕ್ಕಳು. ನಮ್ಮ ಪ್ರೀತಿಯ ಮಗಳ ಭೇಟಿಗಾಗಿ ನೀನು ಆತುರಳಾಗಿಲ್ಲವೇ? ಹಾಗಿದ್ದರೆ ಬಾ, ನಾವು ದಿಲ್ಲಿಗೆ ಹೋಗೋಣ, ಹೋಗಿ ನಾವು ನಮ್ಮ ಮಗಳನ್ನು ಕಾಣೋಣ. ಯಾರಾದರೂ ತಾಯಿ–ತಂದೆಗಳು ಹಾಗೂ ಅವರ ಮಕ್ಕಳು ಪರಸ್ಪರರನ್ನು ನೋಡಲು ಹಿಂದೆ–ಮುಂದೆ ನೋಡುತ್ತಾರೆಯೇ? ಭಗವಂತನ ಕಾನೂನಿನ ವಿರುದ್ಧ ಯಾರಾದರೂ ಹೋಗಬಲ್ಲರೆ? ಇದು ಸೃಷ್ಟಿ ನಿಯಮ. ಹೆದರುವ ಅವಶ್ಯಕತೆಯಿಲ್ಲ. ಹೆದರುವಂಥದೇನೂ ಇಲ್ಲ. ಯುವರ ಹೈನೆಸ್....ತಮ್ಮ ಮೈಥಾ ಲಾಜಿಯಲ್ಲಿದೆಯಲ್ಲಾ....ಲಾರ್ಡ ಶಿವ ತನ್ನ ಮಾವನ ಮನೆಗೆ ಹೋದಾಗ ಅಹಂಕಾರಿ ಮಾವ ಅವನ ಅಪಮಾನಮಾಡಿದ್ದ...''ಎಂದ ಆರ್ಥರ್ ಕೊಂಚ ತಡೆದು.... ''ಕ್ಷಮಿಸಿ, ನಾನು ತಪ್ಪು ಉದಾಹರಣೆ ಕೊಟ್ಟೆ...ಹೇಳುವ ತಾತ್ಪರ್ಯ...''

ಈ ಮುದುಕ ನಿಜವಾಗಿಯೂ ಹುಚ್ಚನಿದ್ದ. ರಾಜಾ ಸಾಹೇಬ ಆಲೋಚನೆಗೀಡಾದ. ಕೆಂಗಣ್ಣಿನಿಂದ ಈ ವಿಚಿತ್ರ ಮುದುಕನನ್ನು ನೋಡುತ್ತಲಿದ್ದ. ಅವನ ಮುಖದ ಬಣ್ಣ ತುಂಬ ತೀವ್ರತೆಯಿಂದ ಬದಲಾಗುತ್ತಲಿತ್ತು. ಆದರೆ ಆರ್ಥರ್ ಬೋಲ್ಬನ್ ಅತ್ಯಂತ ಶಾಂತ ರೀತಿಯಲ್ಲಿ ತನ್ನ ಪರಿಚಯ ನೀಡತೊಡಗಿದ–''ಮತ್ತೆ ಯುವರ ಹೈನೆಸ್.... ಈಗ ತಾನೇ ನಾನು ಗೇಟಿನ ಹತ್ತಿರ ಬರುತ್ತಿರುವಂತೆ ಒಂದು ಕ್ಷಣಕ್ಕೆ, ನನಗೆ ಲಾರ್ಡ ಶಿವನ ಮಾವನ ತೆರದಿ ತಾವು ಕೂಡ ಅಹಂಕಾರಿಗಳಿರಬೇಕೆಂದು ಭಾವಿಸಿದ್ದೆ...ಆದರೆ ಅದೇ ಹೊತ್ತಿಗೆ ತಮ್ಮ ಮಾತುಗಳು ಕೇಳಿಬಂದವು. ಮಾತುಗಳಿಗೆ ಸಹಮತಿ ವ್ಯಕ್ತಗೊಳಿಸುತ್ತಿದ್ದೀರಿ.... ತಾವು ಮಿಸ್ಟರ್ ಗುರುಗಳು ಹೇಳಿದ ಮನುಷ್ಯ ಎಂಥ ಸ್ಥಿತಿಯಲ್ಲೂ ಸತ್ಯ ಹೇಳಬೇಕು, ಹಾಗೂ ಸತ್ಯವನ್ನು ಎದುರಿಸುವ ಶಕ್ತಿ ಹೊಂದಿರಬೇಕು. ಇದುವೇ ನಿಜವಾದ ಸಿದ್ಧಾಂತ ಹಾಗೂ ಜ್ಞಾನವಾಗಿದೆ......

''ರಾಜಾಸಾಹೇಬ, ನನಗೆ ಮೋಕ್ಷ ದಯಪಾಲಿಸುವ ಜಿಸೆಸ್ ಕ್ರೈಸ್ತ ಕೂಡ ಇದನ್ನೇ ಹೇಳಿ ಹೋಗಿದ್ದಾನೆ...ಆತನಂತೂ ಸತ್ಯ ಹೇಳುತ್ತ ಹೇಳುತ್ತ ಶಿಲುಬೆಯ ಮೇಲೇರಿದ... ಸುಪ್ರಸಿದ್ಧ ಘಟನೆಯೊಂದಿದೆ. ತಾವು ಕೂಡ ಕೇಳಿರಬೇಕು....''

ರಾಜಕುಮಾರ, ಮಹಾರಾಜ ತುಂಬ ರೇಗಿದ್ದಾರೆಂಬುದನ್ನು ತಿಳಿದುಕೊಂಡ. ಈ ಸಿಟ್ಟಿನಲ್ಲಿ ಅವರು ಏನನ್ನಾದರೂ ಮಾಡದಿರಲೆಂದು ಮಾತಿನ ಓಘ ಬದಲಿಸುತ್ತ–

''ತಾವು ಕಾಫಿ ಕುಡಿಯುತ್ತೀರಾ ಅಥವಾ ಚಹಾ....?'' ಎಂದು ಕೇಳಿದ.

ಆರ್ಥರ್ ಮುಗುಳ್ನಗುತ್ತ ಅವಳನ್ನು ನೋಡುತ್ತ–''ಮಾರ್ಥಾ ಕಾಫಿ?'' ಎಂದ.

ಸ್ವಾಮಿಜಿ ಹಚ್ಚ ಹಸಿರಿನ ಲಾನ್ ಮೇಲೆ ಶತಪಥ ಅಡ್ಡಾಡುತ್ತಿದ್ದರು. ರಾಜಕುಮಾರ ಕಾಫಿ ಮಾಡಿ ಕಟ್ಟೊ ಆಯಾಳಿಗೆ ಕೊಟ್ಟ. ಮುದುಕ ಬೇಡವೆಂಬಂತೆ ತಲೆ ಅಲ್ಲಾಡಿಸಿದ. ತುಂಬ ಉತ್ಸುಕನಾಗಿ ಉರ್ದುದಲ್ಲಿ ಮಾತಾಡತೊಡಗಿದ–''ತಾವು ಸ್ಪರ್ಶ–ಅಸ್ಪರ್ಶತೆಯ ಆಚರಣೆಯಿಂದ ದೂರವಿರುವುದನ್ನು ಕಂಡು ನನಗೆ ತುಂಬ ಸಂತೋಷವಾಗಿದೆ. ನಾವೆಲ್ಲ ಒಬ್ಬ ದೇವನ ಮಕ್ಕಳಾಗಿದ್ದೇವೆ. ನನ್ನ ತಂದೆಯ ಮಹಲಿ ನಲ್ಲಿ ಎಲ್ಲರಿಗೂ ಪ್ರವೇಶವಿದೆ, ಸ್ಥಾನವಿದೆ–ಎಂದು ಜೀಸಸ್ ಹೇಳಿದ್ದಾನೆ....ಯುವರ ಹೈನೆಸ್....ನಮ್ಮ ಮಗಳ ತಾಯಿಯೊಂದಿಗೆ ಲಗ್ನ ಕೂಡ ಆಗಿರಲಿಲ್ಲ...ಕೆಥರಿನ್‌ಳಿಗೆ ಮಾರ್ಥಾ ಜನ್ಮಕೊಟ್ಟಿದ್ದಾಳೆಂಬುದೂ ನಮಗೆ ಗೊತ್ತಿರಲಿಲ್ಲ. ಮೂವತ್ತೈದು ವರ್ಷಗಳ ನಂತರ ನಾವು ಮೆಗಜೀನ್‌ದಲ್ಲಿ ಅವಳ ಫೋಟೋ ನೋಡಿದೆ...ಇದೆಲ್ಲ ಭಗವಂತನ ಲೀಲೆ....ಪ್ರಕೃತಿಯ ಆಟ....ಮಾರ್ಥಾ ತುಂಬ ಧೈರ್ಯಶಾಲಿ ಹೆಂಗಸು...ಈವರೆಗೂ ಮುಸ್ಸೂರಿಯಲ್ಲಿ ಆಯಾ ಕೆಲಸ ಮಾಡುತ್ತಿದ್ದಾಳೆ... ತುಂಬ ಸಭ್ಯ ಹೆಂಗಸು... ನಿಜವಾದ ಕ್ರಿಶ್ಚಿಯನ್....ಅವಳ ತಾಯಿ–ತಂದೆ ಕೂಡ ನಿಜವಾದ ಕ್ರಿಶ್ಚಿಯನ್‌ರಾಗಿದ್ದರು.... ಅವರು ಕೂಡ ತುಂಬ ಬಡವರಾಗಿದ್ದರು...ಕಸಗೂಡಿಸುವ ಕೆಲಸದಲ್ಲಿದ್ದರು... ಪಾಯಖಾನೆ ಸ್ವಚ್ಛಮಾಡುತ್ತಿದ್ದರು...ಬಡವರು, ದರಿದ್ರರು, ದೀನರು ಮಾತ್ರ ಭಗವಂತನ ಸಾಮ್ರಾಜ್ಯದ ನಿಜವಾದ ವಾರಸುದಾರರು–ಎಂದು ಜೀಸಸ್ ಹೇಳುತ್ತಿದ್ದ. ತಮ್ಮ ಮಿಸ್ಟರ್ ಗಾಂಧಿ ಕೂಡ ಇವೇ ಮಾತುಗಳನ್ನು ಹೇಳುತ್ತಿದ್ದ. ದಿಲ್ಲಿಯಲ್ಲಿ ಭಂಗಿ

ಕಾಲೋನಿಯಲ್ಲಿ ವಾಸಿಸುತ್ತಿದ್ದ. ನಮ್ಮ ಕಟ್ಟೊ ಕೂಡ ಭಂಗಿಯಾಗಿದ್ದಾಳೆ. ಇವಳು ಕೂಡ ಭಗವಂತನ ಸಾಮ್ರಾಜ್ಯದಲ್ಲಿ ಅವಶ್ಯ ಸೇರುತ್ತಾಳೆ....''

ರಾಜಾಸಾಹೇಬ ಕಣ್ಣು ಪಿಳುಕಿಸದೆ ತದೇಕಚಿತ್ತನಾಗಿ ಆ ಮುದುಕನನ್ನು ನೋಡುತ್ತಲಿದ್ದ. ಅವನು ತನ್ನ ತಲೆಯನ್ನು ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಿದು ಕೊಂಡು ಜೋರಾಗಿ ಚೀರಿದ...ರಾಜಾಸಾಹೇಬ ತುಂಬ ಕೆಟ್ಟ ಸ್ವಭಾವದವನಾಗಿದ್ದ. ಆದರೆ ಅವನ ಇಡೀ ಜೀವಮಾನದಲ್ಲಿ ಅವನಿಗೆ ಯಾರೂ ಇಂಥ ಹೊಡೆತ ಕೊಟ್ಟಿರ ಲಿಲ್ಲ...ಅವನ ಈ ಭಯಂಕರ ಚೀರುವಿಕೆಯಿಂದ ಎಲ್ಲರೂ ಅವನತ್ತ ಬಂದರು.. ರಾಜಾಸಾಹೇಬ ಮೂರ್ಛೆಹೋಗಿದ್ದ..ಕಣ್ಮುಚ್ಚಿದ್ದ..... ಮುಖ ಬಾಗಿತ್ತು..ಅವನು ಮನೋರೋಗದಿಂದ ಮೊದಲೇ ಬಳಲುತ್ತಿದ್ದ....

ಕೆಥರಿನ್ ಒಳಗೆ ಬೆಡ್‌ರೂಮಿನಲ್ಲಿದ್ದಳು. ಕಿಟಕಿಯಿಂದ ಈ ಎಲ್ಲ ದೃಶ್ಯ ನೋಡುತ್ತಲಿದ್ದಳು. ಅವಳಿಗೆ ಅಲ್ಲಿಂದ ಇದೆಲ್ಲ ಸ್ಟೇಜಿನ ಒಂದು ಸೆಟ್ ತರಹ ತೋರುತ್ತಲಿತ್ತು. ಜೀವನ ನಂಬಲು ಅನರ್ಹವಾಗಿತ್ತು. ಬೆಳಗ್ಗೆ ಬ್ರೆಕ್‌ಫಾಸ್ಟ್‌ದ ಕಾಲಕ್ಕೆ ಅವಳ ಪರಿಚಯವನ್ನು ಸ್ವಾಮಿಜಿಗೆ ಮಾಡಿಕೊಡಲಾಯಿತು. ಆಗ ಅವರಿಬ್ಬರೂ ಪರಸ್ಪರರನ್ನು ಅರಿತು ಕೊಂಡಿದ್ದರು.

ಸ್ವಾಮಿಜಿ, ಅದೇ ಮಸ್ಸೂರಿನ ಹಿಂದೀ ಸಂಸ್ಕೃತ ಮಾಸ್ತರನಾಗಿದ್ದ... ಅವಳೊಂದಿಗೆ ಅವನು ಆಗ ಚಕ್ಕಂದವಾಡಬಯಸಿದ್ದ. ಈ ಕಾರಣದಿಂದಾಗಿಯೂ ಮಿಸ್ ರಿಚ್‌ಮೆಂಡ್ ಆಸ್ಟ್ರೇಲಿಯಾಕ್ಕೆ ಹೋಗಲು ಅಕಸ್ಮಾತ್ತಾಗಿ ನಿರ್ಧಾರ ಕೈಕೊಳ್ಳ ಬೇಕಾಯಿತು. ಆಸ್ಟ್ರೇಲಿಯಾಕ್ಕೆ ಹೋಗುವ ಸ್ವಲ್ಪ ಮುಂಚೆ ಈ ಮಹಾಶಯ, ಸ್ಕೂಲಿನ ರೂಪಾಯಿ ಕಳುವು ಮಾಡಿಕೊಂಡು, ಪರ್ವತಪ್ರದೇಶದ ಒಂದು ಹುಡುಗಿಯೊಂದಿಗೆ ದೇಶಾಂತರ ಹೋದನೆಂಬ ಸುದ್ದಿ ಹಬ್ಬಿತ್ತು. ಆಗಲೂ ಕೂಡ ಇವನು ತುಂಬ ಬುದ್ಧಿವಂತ ನಾಗಿದ್ದ, ಮಧುರವಾಗಿ ಮಾತಾಡುವವನಾಗಿದ್ದ, ವಿಪರೀತ ವಾಚಾಳಿ ಯಾಗಿದ್ದ.

ಬ್ರೆಕ್‌ಫಾಸ್ಟ್‌ದ ನಂತರ ಅವಕಾಶ ಸಿಕ್ಕ ಕೂಡಲೇ ಅವನು ತನ್ನ ಹಳೆಯ ವಿದ್ಯಾರ್ಥಿನಿಗೆ ಹೇಳಿದ–

''ನೋಡು ಸಣ್ಣ ಕಟ್ಟೊ, ನಾನು ಇಪ್ಪತ್ತು ವರ್ಷಗಳ ದೀರ್ಘಕಾಲದಲ್ಲಿ ಕಷ್ಟ ಪಟ್ಟು ಪಾಶ್ಚಿಮಾತ್ಯ ದೇಶಗಳಲ್ಲಿ ನನ್ನ ಕರೀಯರ್ ಮಾಡಿಕೊಂಡಿರುವೆ. ಅಲ್ಲಿ ಸ್ವಾಮಿಗಳ ಕಾಂಪಿಟೇಶನ್ ತುಂಬ ಕಷ್ಟದಾಯಕವಾಗಿದೆ...ಹೀಗಿದ್ದರೂ ಈಗ ಯುರೋಪ ಮತ್ತು ಅಮೇರಿಕಾಗಳಲ್ಲಿ ನನ್ನವೇ ಹದಿನೆಂಟು ಆಶ್ರಮಗಳಿವೆ...ಹಾಗೂ ಸಾವಿರಾರು ಸಂಖ್ಯೆಯಲ್ಲಿ ಶಿಷ್ಯರಿದ್ದಾರೆ...ನೀನು ನನ್ನ ರಹಸ್ಯ ಹೊರಗೆ ತರಬೇಡ... ನಾನು ಕೂಡ ನಿನ್ನ ಬಗ್ಗೆ ಈ ಅತ್ತೆ ಮನೆತನದವರಾದ, ದೈವೀ ಭಕ್ತಿ ಸೇವಾ ಭಾವನೆಯುಳ್ಳವರಾದ ರಾಜಪರಿವಾರಕ್ಕೆ ನೀನು ಮಸ್ಸೂರಿಯ ಕಟ್ಟೊ ಆಯಾಳ ಮಗಳೆಂದು ತಿಳಿಸುವುದಿಲ್ಲ...''ಅವನ ಈ ಮಾತು ಕೇಳಿದ ಕೆಥರಿನ್‌ಳ ಮುಖದ ಬಣ್ಣವೇ ಬದಲಾಯಿತು...ಆಗ ಆಕೆ ತನ್ನ ಕೋಣೆಗೆ ಬಂದು ಅಡಗಿಕೊಂಡಳು...

ಸ್ವಾಮೀಜಿ ಹೊರಗೆ ಹೋಗಿ ಹುಲ್ಲು ಹಾಸಿನ ಮೇಲೆ ಹಾಕಲಾಗಿದ್ದ ಆಸನದಲ್ಲಿ ಕುಳಿತು ಪ್ರವಚನ ಆರಂಭ ಮಾಡಿದ್ದ...ಆದರೆ ದೈವ ತನ್ನ ಕೊಳಲನ್ನು ಊದಿಯಾಗಿತ್ತು...ಒಂದು ಟ್ಯಾಕ್ಸಿ ಬಂದು ನಿಂತಿತು, ಅದರಿಂದ ತನ್ನ ತಾಯಿ ಇಳಿಯುತ್ತಿರುವುದನ್ನು ನೋಡಿದಳು...ಅವಳ ಅರೆ ಹುಚ್ಚ ಮಾವ ಹಾಗೂ ಓರ್ವ ಇಂಗ್ಲೀಷ ಮುದುಕ...ಎಲ್ಲರನ್ನೂ ನೋಡಿದಳು...ಅವರು ಬಂದು ಲಾನದ ಮೇಲೆ ಕುಳಿತರು... ಕೆಥರಿನ್ ತನ್ನ ಅಯೋಗ್ಯ ಆಶ್ಚರ್ಯಜನಕ ತಂದೆಯ ಸಂವಾದದ ಒಂದೊಂದು ಶಬ್ದವನ್ನೂ ಕೋಣೆಯಲ್ಲಿದ್ದೇ ಆಲಿಸಿದಳು....

ಮಿಸ್ ಸಿಲಿಯಾ ರಿಚ್‌ಮೊಂಡ್‌ಳಿಗೆ ಒಮ್ಮೆ ಗೆಸ್ಟ್ ಹೌಸ್‌ನಲ್ಲಿ ದೆಹಲಿಯ ಓರ್ವ ಬೇಗಂ ಸಾಹಬ ಗಡಿಗೆಯಲ್ಲಿ ಅಡಿಗೆ ಮಾಡುವುದನ್ನು ಹೇಳಿಕೊಟ್ಟಿದ್ದಳು...

ಜೀವನ ಕೂಡ ಒಂದು ಹುಚ್ಚು ಗಡಿಗೆಯಾಗಿದೆ...ಅದು ಫಳ್..ಫಳ ಕುದಿಯುತ್ತಲಿತ್ತು...ಈಗ ಅದರಲ್ಲಿ ಆಕಸ್ಮಿಕವಾಗಿ ಉಕ್ಕು ಬಂದಿತ್ತು...

ಭಯದಿಂದ ನಡುಗುತ್ತ ಅವಳು ಎದುರಿಗೆ ನೋಡಿದಳು. ಗೇಟಿನ ಹತ್ತಿರ ಅವಳ ಅರೆ ಹುಚ್ಚ ಮಾವ ಸ್ತಂಭದ ಹಾಗೆ ನಿಂತು, ಬಯಲನ್ನು ದಿಟ್ಟಿಸಿ ನೋಡುತ್ತಿದ್ದ... ಹುಲ್ಲಿನ ಮೇಲೆ ಕುಳಿತ ಅವಳ ಹುಚ್ಚ ತಂದೆ ಅವಳ ಜೀವನವನ್ನು ಹಾಳು ಮಾಡುವುದರಲ್ಲಿ ವ್ಯಸ್ತನಾಗಿದ್ದ. ಈ ಮನುಷ್ಯನನ್ನು ನೋಡಲು ಅವಳು ಅದೆಷ್ಟು ಕಾಲದಿಂದ ಆಶೆ ಹೊತ್ತಿದ್ದಳು. ಬಾಲ್ಯ ಕಾಲದಲ್ಲಿ ಅವಳ ತಾಯಿ ಹಾಗೂ ಆಂಟಿ ಸೀಲಿಯಾ ಈ ಮನುಷ್ಯನ ಸಾತ್ವಿಕತೆಯ ಬಗ್ಗೆ, ಮುಗ್ಧತೆಯ ಬಗ್ಗೆ ಎಷ್ಟೊಂದು ಕಥೆ ಕಟ್ಟಿ ಹೇಳಿದ್ದರು. ಆತ ಕೇವಲ ಎರಡೆ ಎರಡು ತಿಂಗಳು ಗೆಸ್ಟ್‌ಹೌಸ್‌ದಲ್ಲಿದ್ದುದು ಆದರೂ ಆತ ಎಲ್ಲರ ಮನ ಗೆದ್ದುಕೊಂಡು ಹೋಗಿದ್ದ. ಎಲ್ಲಿಯೋ ಅವನು ಜನಪ್ರಿಯನಾಗಿ, ಜೀವನದ ದಿಸೆಗಳು ಬದಲಿಯಾಗುತ್ತ ಮಾಯವಾಗಲೆಂದು ಬಹುಶಃ ಭಗವಂತ ಅವನಿಗೆ ಜನ್ಮ ನೀಡಿರಬೇಕು. ನಂಬಲು ಅಯೋಗ್ಯವಾದ, ಅಸಂಭವಗಳೆಲ್ಲ ಒಳಿತನ್ನು, ಸತ್ಯತೆಯನ್ನು ವಿನಾಶ ಮಾಡುವಂಥವು ಆಗಿರುತ್ತವೇನು ?

ಅವಳು ಕಣ್ಣರಳಿಸಿ ಎದುರಿಗೆ 'ಸ್ಟೇಜಿ'ನ ಪಾತ್ರಗಳನ್ನು ನೋಡಿದಳು, ಒಂದು ವೇಳೆ ಇಷ್ಟೊಂದು ಭಯಾನಕವಾಗಿರದಿದ್ದಲ್ಲಿ ಅದೊಂದು ಕಾಮಿಕ್ ಓಪೆರಾದ ಒಂದು ದೃಶ್ಯದಂತೆ ಗೋಚರಿಸುತ್ತಿತ್ತು. ಬ್ರಾಹ್ಮಣನಾದ ರಾಜಾಸಾಹೇಬನಿಗೆ, ಈ ರಹಸ್ಯ ಭೇದದ ನಂತರ ತನ್ನ ದೊಡ್ಡ ಸೊಸೆ ಯಾರೆಂಬುದು ಸ್ಪಷ್ಟವಾಯಿತು. ಆಕೆ ಓರ್ವ ಭಂಗಿಯ ಮಗಳೆಂಬುದು ನಿಶ್ಚಿತವಾದಾಗ ಆವನಿಗೆ ಬಹು ದೊಡ್ಡ ಆಘಾತವಾಯಿತು. ಆ ನಾಲ್ಕು ಜನ ಯುರೋಪಿಯನ್‌ರು ಮಹಾ ಮೋಸಗಾರ್ತಿ ಮಾಯೆಯಿಂದ ಪಾರಾಗಲು ಓರ್ವ ಮಹಾಮೋಸಗಾರ ಸ್ವಾಮಿಯ ಉಡಿಯಲ್ಲಿ ಬಿದ್ದಿದ್ದರು. ಆ ಬೋಗಸ್ ''ದೇವ ಮನುಷ್ಯ'' ಈಗ ರಾಜಾಸಾಹೇಬನನ್ನು ಎಚ್ಚರಿಸಲು ಮಂತ್ರ ಪಠಣ ನಡೆಸಿದ್ದ. ಆಕೆಯ ದೀನಳಾದ ತಾಯಿ ಇಡೀ ಜೀವನವನ್ನೆಲ್ಲ ಕಣ್ಣೀರಿನಲ್ಲಿ ಕಳೆದಿದ್ದವಳು ಈಗಲೂ ಅವಳ ಪಾಲಿಗೆ ಕಣ್ಣೀರಿನ ಹೊರತಾಗಿ ಬೇರೇನೂ ಇಲ್ಲವಾಗಿದೆ.

ಅವಳ ತಂದೆ ಬಡವ, ದರಿದ್ರ, ಅಂಗಹೀನ ಯಾವ ಯಾವುದೋ ರೀತಿಯಲ್ಲಿ ಕೂಡಿಟ್ಟ ಹಣ ಖರ್ಚುಮಾಡಿ ಸಪ್ತ ಸಮುದ್ರದಾಚೆಯಿಂದ ಅವಳ 'ವರದಕ್ಷಿಣೆ' ಸಹಿತ ಇಲ್ಲಿಗೆ ಬಂದಿದ್ದ, ಈಗ ಇಲ್ಲಿ ಹುಚ್ಚನ ಹಾಗೆ ಎಲ್ಲರ ಮುಖ ನೋಡುತ್ತ ಕುಳಿತಿದ್ದಾನೆ, ಮೂರ್ಖ ದೇವದೂತ ದಾರಿ ತಪ್ಪಿ, ತಪ್ಪು ಸ್ಥಾನಕ್ಕೆ ಬಂದವನಂತೆ. ಅದೇ ಹೊತ್ತಿಗೆ ಒಮ್ಮೆಲೇ ಕೆಥರಿನ್‌ಳ ಮನದಲ್ಲಿ ಕರುಣೆ, ಪ್ರೀತಿ ಹುಟ್ಟಿತು. ರಕ್ತದ ಒತ್ತಡ ಜಾಸ್ತಿಯಾಗಿ ಓಡಿ ಹೋಗಿ ತನ್ನ ಜರ್ಜರಿತನಾದ ತಂದೆ ಯನ್ನು, ಕಷ್ಟದಲ್ಲಿಯೇ ಬದುಕಿದ ತಾಯಿಯನ್ನು ಹಾಗೂ ಪ್ರೀತಿಯ ಮಾವನನ್ನು ಅಪ್ಪಿಕೊಳ್ಳಬೇಕೆನಿಸಿತು, ಅವಳಿಗೆ. ಈ ಅರಮನೆ, ಈ ಎರಿಸ್ಟೊಕ್ರೆಟಿಕ್ ಬ್ರಾಹ್ಮಣ ಮನೆತನ ಮತ್ತು ಆಗರ್ಭ ಶ್ರೀಮಂತ ಗಂಡ ಎಲ್ಲವನ್ನೂ ತ್ಯಜಿಸಿ, ಈ ಅತ್ಯಧಿಕ ಪ್ರಿಯರಾದ, ಮುಗ್ಧರಾದ ಹುಚ್ಚರಂತಿರುವ ಈ ಜನರೊಂದಿಗೆ ಹೋಗಿ ಬಿಡಲೇ 'ಏಕೆಂದರೆ ಇವರು ಎಲ್ಲಿರುತ್ತಾರೋ ಅದೇ ನನ್ನ ಮನೆಯಾಗುತ್ತದೆ. ಈ ಜಗತ್ತು Holiday Inns ಮತ್ತು ಪ್ಲಾಸ್ಟಿಕ್ ಪಾಕೆಟಗಳ ಹೊರತಾಗಿ ಕೆಂಪು ಮಾಳಿಗೆಯ ಮೂರು ಅಂತಸ್ತಿನ Heinz ಮಾದರಿಯ ಮನೆಗಳು, ಬೆಳ್ಳಿ ಲೋಟ ಗಳಿಂದ ತುಂಬಿವೆ. ಆದರೆ ಅವಳಿಗೆ ತನ್ನದೇ ಆದ ಮನೆ ಎಲ್ಲಿಯೂ ದೊರೆಯಲಿಲ್ಲ. ಏನು ಆಕೆ ನಿಜವಾಗಿಯೂ ಅಖಂಡ ಸೌಭಾಗ್ಯವತಿ ರಾಜಲಕ್ಷ್ಮಿ ಶೈಲಜಾದೇವಿಜಿ ಇದ್ದಾಳೆಯೇ? ಆಕೆ ತನ್ನ ಚರ್ಮದೊಳಗೆ ಕೇವಲ ಕೆಥರಿನ್ ಬೋಲ್ಬನ್ ಮಾತ್ರ ಇದ್ದಾಳೆ. ಕರ್ನಲ್ ಬೋಲ್ಬನ್ ಮತ್ತು ಕಾರ್ಪೊರಲ್ ಬೋಲ್ಬನ್ ಎಂಬ Conflict ಅವಳನ್ನು ಸದಾ ಮಾನಸಿಕ ಯಾತನೆಯಲ್ಲಿರಿಸಿತ್ತು. ಈಗ ಕೊನೆಗೆ ಅದೂ ಕೂಡ ಪರಿಹಾರವಾಗಿತ್ತು. ಅವಳು ಇನ್ನೇನು ಹೊರಗೆ ಹೋಗಿ ನಾಟಕೀಯ ರೀತಿಯಲ್ಲಿ ಘೋಷಿಸುತ್ತಾಳೆ–ಡ್ಯಾಡಿ....ಮಾಮಾ...ಇಲ್ನೋಡಿ ನಾನು ಬಂದಿದ್ದೇನೆ....ನಾನು ನಿಮ್ಮೊಂದಿಗೆ ಬರುತ್ತಿದ್ದೇನೆ...

ಅವಳು ಧೈರ್ಯತಂದುಕೊಂಡು ಬಾಗಿಲದತ್ತ ಬಂದಳು...ಬಾಗಿಲು ತೆರೆಯ ಬೇಕೆನ್ನುವಷ್ಟರಲ್ಲಿ ಅವಳ ದೃಷ್ಟಿ ತನ್ನ ಕೈಗಳಲ್ಲಿದ್ದ ವಜ್ರದ ಬಳೆಗಳ ಮೇಲೆ ಬಿತ್ತು ಹಾಗೂ ಹೊರಗಿದ್ದ, ತನಗಾಗಿಯೇ ಇದ್ದ ಮರ್ಸಿಡೀಜ ಕಾರು ಹೊಳೆಯಿತು....ಮತ್ತೆ ಹನ್ನೊಂದು ಗಂಟೆಗೆ ಅವಳಿಗೆ ಗೋಲ್ಫ ಕ್ಲಬ್ ತಲುಪಬೇಕಾದುದು ನೆನಪಾಯಿತು.... ಏನು ಇವೆಲ್ಲ ಕಣ್ಣರೆಪ್ಪೆ ಬಡಿಯುವುದರೊಳಗಾಗಿ ಮಾಯವೆಂದರೆ ?...

ಚಂದ್ರಕಾಂತ ಶಿಲೆಯ ಸ್ನಾನದ ಮನೆಯಿಂದ ಶಾವರದಿಂದ ನೀರು ಬೀಳುತ್ತಿರುವ ಸಪ್ಪಳ ಕೇಳಿ ಬಂತು....ಮತ್ತೊಂದು ಯೋಚನೆ ಅವಳನ್ನು ಕಾಡಿತು–ಈ ಭಯಾನಕ ರಹಸ್ಯ ಗೊತ್ತಾದ ಮೇಲೆ ಅವಳ ಪತಿ ಅವಳನ್ನು ಸ್ವತಃ ಹೊರಗೆ ಹಾಕಲಾರನೇ? ಅದಕ್ಕಿಂತ ಗೌರವದೊಂದಿಗೆ ಸ್ವತಃ ಆ ಜನರೊಂದಿಗೆ ಹೊರಟು ಹೋಗುವುದು ಒಳಿತು....ಅವಳಿಗೆ ಚಕ್ರ ಬರತೊಡಗಿತು....ಅವಳು ಮುಳುಗುತ್ತಿರುವ ಹಡಗದಲ್ಲಿದ್ದ ಅನುಭವ... ಅನುಭವಿಸುತ್ತಿದ್ದಳು.... ಅವಳು ಬಾಗಿಲ ಆಸರೆ ಪಡೆದಳು... ಉಳಿಯ ಬೇಕಾದರೆ ಎಲ್ಲ ರೀತಿಯ ಪ್ರಯತ್ನ ಅವಶ್ಯವಾಗಿದೆ....ಅಸ್ತಿತ್ವ.... ಹೋರಾಟದ

ಮೊದಲ ನಿಯಮವಾಗಿದೆ...ಅವಳ ಮಂದ ಬುದ್ಧಿಯ ಗಂಡ ಡ್ರೆಸಿಂಗ್ ಗೌನ ಹಾಕಿಕೊಂಡು ಸ್ನಾನದ ಮನೆಯಿಂದ ಹೊರಗೆ ಬರುತ್ತ–''ಹೊರಗೆ ಅದೇನು ಗದ್ದಲ ನಡೆದಿತ್ತು ?'' ಎಂದು ಕಿಟಕಿಯತ್ತ ಹೋಗುತ್ತ ಕೇಳಿದ. ಕೆಥರಿನ್ ನಿಟ್ಟುಸಿರು ಬಿಡುತ್ತ ಸ್ಪಷ್ಟವಾದ, ಗಂಭೀರವಾದ ದನಿಯಲ್ಲಿ ಹೇಳಿದಳು– ''ಡಾರ್ಲಿಂಗ್.... ಪತ್ರಿಕೆಯಲ್ಲಿ ಪ್ರಕಟವಾದ ಲೇಖನ, ಫೋಟೋದಿಂದಾಗಿ ತುಂಬಾ ತೊಂದರೆಯಾಯಿತು... ಯಾರೋ ಬದ್ಮಾಷ ಜನರ ಟೋಲಿ ಯೊಂದು ಬಂದಿದೆ, ನಮ್ಮನ್ನು ಬ್ಲ್ಯಾಕ್ ಮೇಲ್ ಮಾಡಲು....ತಮ್ಮನ್ನು ನನ್ನ ತಾಯಿ– ತಂದೆಯೆಂದು ಹೇಳುತ್ತಿದ್ದಾರೆ...ನಿಮ್ಮ ತಂದೆ ಚುನಾವಣೆಯಲ್ಲಿ ನಿಲ್ಲಲಿದ್ದಾರೆ...ನನಗೆ ಇದೆಲ್ಲ ನಮ್ಮ ವಿರೋಧಿಗಳ ತಂತ್ರವೆಂದು ತೋರುತ್ತದೆ...ನಿಮ್ಮ ತಂದೆಯ ಬ್ರಾಹ್ಮಣರ ಮತಗಳನ್ನು ಒಡೆಯಲು ಎದುರಾಳಿಗಳು ಓರ್ವ ಹರಿಜನ ಹೆಂಗಸನ್ನು ಪುಸಲಾಯಿಸಿ, ಆಕೆಗೆ ಏನೇನೋ ಕಲಿಸಿ, ಓರ್ವ ಇಂಗ್ಲಿಷ ಮುದುಕನೊಂದಿಗೆ ಇಲ್ಲಿಗ ಕಳಿಸಿದ್ದಾರೆ...ಆಕೆ ನನ್ನ ತಾಯಿ ಎಂದು ಹೇಳುತ್ತಿದ್ದಾಳೆ...ಈ ಮುದುಕ ಸಿ. ಐ. ಎ. ಎಜೆಂಟ್ ಇದ್ದರೂ ಇರಬಹುದು...ಕೂಡಲೇ ಪೋಲಿಸರಿಗೆ ಫೋನಮಾಡಿ....ಈ ಕೂಡಲೇ.....''

ರಾಜಕುಮಾರ ಶೈಲೇಂದ್ರ ಮೂರ್ಖನಾಗಿದ್ದ...ಆದರೆ ಆಕೆ ತಿಳಿದಷ್ಟೇನಲ್ಲ... ಅವನು ಕಣ್ಣೆತ್ತಿ ತನ್ನ ಅಪ್ಸರೆಯಂಥ ಮುಖದ ಯುವರಾಣಿಯನ್ನು ಕೊಂಚ ಸಂಶಯದ ದೃಷ್ಟಿಯಿಂದ ನೋಡಿದ. ಕೆಥರಿನ್‌ಳ ಮುಖ ಕಪ್ಪಿಟ್ಟಿತು. ಅವಳು ಹೆದರಿಕೆಯಿಂದ ನಡುಗುತ್ತಿದ್ದಳು...ರಾಜಕುಮಾರ ಶೈಲೇಂದ್ರ ಅವಳನ್ನು ಅತ್ತ ಸರಿಸಿ ಬಾಗಿಲ ತೆರೆದು ನೇರವಾಗಿ ಮಹಾರಾಜ ತಂದೆಯತ್ತ ಹೊರಟ. ಮಹಾರಾಜ ಮೂರ್ಛೆಯಿಂದ ಎಚ್ಚರಗೊಂಡಿದ್ದ. ಕೆಥರಿನ್ ಬಾಣದಂತೆ ಓಡಿ, ಸ್ನಾನ ಗೃಹ ಹೊಕ್ಕು ಒಳಗಿನಿಂದ ಬಾಗಿಲ ಚಿಲಕ ಹಾಕಿಕೊಂಡಳು.

ಎದುರಿಗೆ ಗೇಟಿನ ಹತ್ತಿರ ಅವಳ ಅರೆಹುಚ್ಚ ಮಾವ ಕೈಯೆತ್ತಿ ನಿಂತಿದ್ದ ಹಾಗೂ ಎಲ್ಲರ ಕ್ಷೇಮಕ್ಕಾಗಿ ಪ್ರಾರ್ಥಿಸುತ್ತಿದ್ದ–

ಕಬೀರಾ ಖಡಾ ಬಾಜಾರ ಮೇ

ಮಾಂಗೆ ಸಬ್ ಕೀ ಖೈರ

# ವಂಶ ಪರಂಪರೆ

ಸಾಕಷ್ಟು ಉದ್ದ, ಅಗಲವಿದ್ದ ಬಚ್ಚಲು ಮನೆಯಲ್ಲಿ ಹಗಲು ಕೂಡ ಕತ್ತಲೆ ತುಂಬಿರುತ್ತಿತ್ತು. ಹಿತ್ತಾಳಿಯ ಭಾಂಡೆಗಳು, ಗಡಿಗೆಗಳು, ಚೌಕಿ, ಬಣ್ಣ ಬಣ್ಣದ ಸೋಪಬಾಕ್ಸ್, ಲೋಟಾಗಳು, ಮಗ್‌ಗಳು, ಗೂಟದ ಮೇಲೆ ಹೊಲಸು ಬಟ್ಟೆಗಳು ಮತ್ತು ಏನೇನೋ....

ಒಟ್ಟಿನಲ್ಲಿ ಈ ಬಚ್ಚಲು ಮನೆ ಮೊವ್ವಾಲಿ ಬಾಬಾ ಚಾಲೀಸ ಚೋರರ ಗುಹೆಯಾಗಿತ್ತು...ಆದರೆ ಇದೇ ಬಚ್ಚಲು ಮನೆ, ಛಮ್ಮಿ ಬೇಗಂಳಿಗೆ ದುಃಖಿ ಜೀವನದಲ್ಲಿ ಸಮಯ ಅಸಮಯದಲ್ಲಿ ಅಲ್ಲಿ ಆಶ್ರಯ ಪಡೆಯುವ ಅವಕಾಶ ನೀಡುತ್ತಿತ್ತು. ಅದರ ಹಸಿರು ಗ್ಲಾಸು ಹಾಕಿರುವ ಸದಾ ಮುಚ್ಚಿರುವ ಕಿಟಕಿ ''ಚಂಬೇಲಿವಾಲಾ ಮಕಾನ''ದ ದಿಕ್ಕಿಗಿತ್ತು. ಅದರ ಒಂದು ಗ್ಲಾಸಿನ ಬಣ್ಣವನ್ನು ಉಗುರಿನಿಂದ ಕೆದರಿ, ಛಮ್ಮಿಬೇಗಂಳು ಹೊರಗೆ ಹಣಿಕಿಕ್ಕುವ ವ್ಯವಸ್ಥೆ ಮಾಡಿಕೊಂಡಿದ್ದಳು. ಛಮ್ಮಿಬೇಗಂಳ ಪ್ರೀತಿಯ ಅಬನ್ ಅಮ್ ಅಜ್ಜುಭಾಯಿ ಆ ಮನೆಯಲ್ಲಿರುತ್ತಿದ್ದ. ಆಕೆ ಈ ಗ್ಲಾಸಿನಿಂದ ಎದುರಿನ ಮನೆಯನ್ನು ಶಾಹಜಾನ ಜೇಲಿನಿಂದ ತಾಜಮಹಲನ್ನು ನೋಡುತ್ತಿದ್ದ ಹಾಗೆ ನೋಡುತ್ತಿದ್ದಳು.

ಮಧ್ಯಮವರ್ಗದ ಈ ಜಮೀನ್ದಾರ ಮನೆತನದ ಎರಡು ಭಾಗಗಳಿದ್ದವು. ಹೊರಗಿನದು ಗಂಡಸರಿಗಾಗಿ, ಅದರ ಒಳ ಅಂಗಳದಲ್ಲಿ ಚಮೇಲಿಯ ದೊಡ್ಡ ದೊಡ್ಡ ಮರಗಳಿದ್ದವು. ಆದ್ದರಿಂದ ಇದು ''ಚಂಬೇಲಿವಾಲಾ ಮಕಾನ'' ಎಂದು ಕರೆಯಿಸಿಕೊಳ್ಳುತ್ತಿತ್ತು. ಹೆಂಗಸರ ನಿವಾಸಕ್ಕಾಗಿದ್ದ ಭಾಗದಲ್ಲಿ ದೊಡ್ಡ ಹುಣಿಸೆ ಮರವಿತ್ತು. ಈ ಕಾರಣದಿಂದ ಇದಕ್ಕೆ ಇಡೀ ಓಣಿಯಲ್ಲಿ ''ಇಮಲಿವಾಲಾ ಮಕಾನ'' ಎಂಬ ಹೆಸರಾಗಿತ್ತು. ಎರಡೂ ಭಾಗದ ನಡುವಿನ ಗೋಡೆಯಲ್ಲಿ ಬರು ಹೋಗಲು ಒಂದು ಬಾಗಿಲಿತ್ತು.

ಛಮ್ಮಿಬೇಗಂಳ ತಂದೆ ಮತ್ತು ಅಜ್ಜುಭಾಯಿಯ ತಂದೆ ಕೂಡಿರುತ್ತಿದ್ದರು. ಛಮ್ಮಿಬೇಗಂ ಹುಟ್ಟಿದ ಕೂಡಲೇ ಅಜ್ಜುಭಾಯಿಯ ಜೊತೆ ನಿಶ್ಚಯ ಕಾರಣವಾಗಿತ್ತು. ಒಂಬತ್ತು– ಹತ್ತು ವರ್ಷದ ವಯಸ್ಸಿನಲ್ಲಿಯೇ ಭಾವೀಪತಿಯೊಂದಿಗೆ 'ಪರದೆ' ಆಚರಿಸಲಾಗುತ್ತಿತ್ತು. ಅಜ್ಜುಭಾಯಿ ತುಂಬ ಚೆಲುವನಾಗಿದ್ದ. ಅತ್ಯಂತ ಪ್ರೀತಿಯ ಒಬ್ಬನೇ ಮಗ, ಇಬ್ಬರು ಸೋದರರ ವಂಶಕ್ಕೆ ಒಂದೇ ಕುಡಿ. ಹೀಗಾಗಿ ಅವನು ಸಾಕಷ್ಟು ಹಾಳಾದ. ಪಟಾ ಹಾರಿಸುವುದು, ಪಾರಿವಾಳ ಹಾರಿಸುವುದು, ಈ ಆಟ, ಆ ಆಟ, ಜಿದ್ದು ಕಟ್ಟೋದು. ಆದರೆ ಅವನ ದೊಡ್ಡಪ್ಪ ಹಾಗೂ ದೊಡ್ಡವ್ವನಿಗೆ ಮದುವೆಯ ನಂತರ ಸುಧಾರಿಸುತ್ತಾನೆಂಬ ಆಶೆ. ಛಮಿಬೇಗಂಳಂತೂ ತಿಳಿವಳಿಕೆ ಬಂದಾಗಿನಿಂದ ಅವನನ್ನು ತನ್ನ ಪಾಲಿನ ದೇವರೆಂದು ಭಾವಿಸತೊಡಗಿದ್ದಳು.

ತಾಯಿ ತಂದೆಗೆ ಅವಳು ಕೂಡ ಒಬ್ಬಳೇ ಮಗಳಾಗಿದ್ದಳು. ಆಕೆಯ ಚಂಚಲತೆ, ನಖರಾ, ಅಹಂಕಾರಗಳೇನೂ ಕಡಿಮೆಯಿರಲಿಲ್ಲ. ಹಟವಾರಿ, ಸಿಟ್ಟಿನ ಛಮ್ಮಿಬೇಗಂ

ಷೋಡಶವರ್ಷದವಳಾದಾಗ ಮದುವೆಯ ದಿನ ನಿಶ್ಚಯಿಸಲಾಯಿತು. ಎರಡೂ ಕಡೆಯಿಂದ ಭರ್ಜರಿ ತಯ್ಯಾರಿ ನಡೆಯಲಾರಂಭಿಸಿತು. ಆದರೆ ಅಕಸ್ಮಾತ್ ಸಾವು ಆ ಸುಖ, ಸಮೃದ್ಧಿ, ಸಂತೋಷ ತುಂಬಿದ್ದ ಮನೆತನದಲ್ಲಿ ದುಃಖದ ಮಹಾಪೂರವನ್ನೇ ತಂದು ಬಿಟ್ಟಿತು. ಆ ವರ್ಷ ಶಾಹಜಾಪೂರದಲ್ಲಿ ಬಂದ ಕಾಲರಾ ಬೇನೆಯಿಂದಾಗಿ ಹದಿನೈದು ದಿನಗಳೊಳಗಾಗಿ ಛಮ್ಮಿಬೇಗಂಳ ತಾಯಿ, ತಂದೆ ಇಬ್ಬರೂ ಮರಣ ಹೊಂದಿದರು. ಛಮ್ಮಿಬೇಗಂಳ ಮೇಲೆ ಪ್ರಳಯವೇ ಬಂದ ಹಾಗಿತ್ತು. ಆದರೆ ದೊಡ್ಡಪ್ಪ ದೊಡ್ಡವ್ವರ ಆಶ್ರಯ ಆಕೆಗಿತ್ತು, ಎಲ್ಲಕ್ಕಿಂತ ಹೆಚ್ಚಿನದೆಂದರೆ ಅಜ್ಜುಭಾಯಿ ಯೊಂದಿಗೆ ಮದುವೆಯಾಗುವುದಿತ್ತು. ಛಮ್ಮಿಬೇಗಂ, ತಾಯಿ ತಂದೆಯ ಶೋಕಾಚರಣೆ ಮಾಡಿ ಮುಗಿಸಿದ ನಂತರ ಮತ್ತೆ ಆಕೆ ವರ್ತಮಾನದ ಸುಖದ ಕನಸನ್ನು ಕಾಣುವಲ್ಲಿ ಮಗ್ನಳಾದಳು.

ಮದುವೆಯನ್ನು ಕೆಲದಿನಗಳ ಮಟ್ಟಿಗೆ ಮುಂದಕ್ಕೆ ಹಾಕಲಾಯಿತು. ಆದರೆ ಮದುವೆಯ ಮುಂದಿನ ದಿನ ನಿಶ್ಚಯಿಸುವ ಮುನ್ನವೇ ದೊಡ್ಡಪ್ಪ ಕುಂತಲ್ಲಿಯೇ ಹೃದಯಾಘಾತದಿಂದ ಸತ್ತು ಹೋದ. ದೊಡ್ಡಪ್ಪ ಸತ್ತ ಕೂಡಲೇ, ಅಜ್ಜುಭಾಯಿ ಕೆಲ ಕೇಸುಗಳ ಕೆಲಸಕ್ಕಾಗಿ ಲಖನೌಕ್ಕೆ ಹೋಗಬೇಕೆಂದು ಹೇಳಿ ಹೊರಟು ಹೋದ. ಈಗ ''ಇಮಲಿವಾಲಾ ಮಕಾನ''ದಲ್ಲಿ ಇದ್ದ ದೊಡ್ಡವ್ವ ಹುಚ್ಚಿಯ ಹಾಗಾಗ ತೊಡಗಿದ್ದಳು... ಛಮ್ಮಿಬೇಗಂ ಏಕಾಕಿ...ಗಂಡಸರೇ ಇಲ್ಲದ ಹಾಗಾಯ್ತು ಎರಡೂ ಮನೆಗಳಲ್ಲಿ.... ಬಂಗ್ಲೆಯ ಹೊರಗೆ ಹಳೆಯ ನೌಕರ ಧಮ್ಮು ಬಡಿಗೆ ಹಿಡಿದು ಕುಳಿತು ಕೊಂಡ...

ಒಳಗೆ ಸಲಾಮತ್ ಬುವಾ ಮತ್ತು ಆಕೆಯ ಮಕ್ಕಳು ಅಳುತ್ತ–ಕರೆಯುತ್ತ ಅಡಿಗೆ ಮಾಡುವುದರಲ್ಲಿ ಮಗ್ನರಾಗಿರುತ್ತಾರೆ. ಮನೆಯ ರಕ್ಷಣೆಗಾಗಿ ದೊಡ್ಡವ್ವ, ಓರ್ವ ಸಂಬಂಧಿ ಮುದುಕ ಮಲ್ಲನ್‌ಖಾನನನ್ನು ಬರೇಲಿಯಿಂದ ಕರೆಯಿಸಿಕೊಂಡಳು. ಅವನು ''ಚಂಬೇಲಿವಾಲಾ ಮಕಾನ''ದ ಪಡಸಾಲೆಯಲ್ಲಿ ಒಂದು ಕಾಟಿನ ಮೇಲೆ ಮಲಗಿ ಕೊಂಡಿರುತ್ತಿದ್ದ.

ಅಜ್ಜುಭಾಯಿ ಲಖನೌಕ್ಕೆ ಹೋದವನು ಅಲ್ಲಿಯವನೇ ಆಗಿ ಬಿಟ್ಟ. ಪ್ರತಿ ತಿಂಗಳೂ ತಾಯಿಗೆ, ಕೇಸಿನ ಮುದ್ದತ್ತು ಮುಂದಕ್ಕೆ ಹೋಗಿವೆ, ತಿಂಗಳು ಎರಡು ತಿಂಗಳಲ್ಲಿ ಬರುವೆ ಎಂದು ಬರೆಯುತ್ತಿದ್ದ. ಆರು ತಿಂಗಳ ನಂತರ ಮರಳಿ ಅವನು ಮನೆಗೆ ಬಂದಾಗ ದೊಡ್ಡವ್ವ ಮದುವೆಯ ವಿಷಯ ಎತ್ತಿದಳು. ಆಗ ಅವನು, ಜಮೀನಿಗೆ ಸಂಬಂಧಪಟ್ಟ ನ್ಯಾಯಗಳು ಮುಗಿಯುವವರೆಗೂ ಮದುವೆಗಿದುವೆ ಯಾವುದೂ ಬೇಡ–ಎಂದು ಸ್ಪಷ್ಟವಾಗಿ ಹೇಳಿದ.

ಅಂದಿನಿಂದ ಛಮ್ಮಿಬೇಗಂ, ಆ ಕತ್ತಲೆಯ ಬಚ್ಚಲು ಮನೆಯ ಮೂಲೆಯಲ್ಲಿ ಬಿದ್ದಿರುವ ಹೊಲಸು ಬಟ್ಟೆಗಳ ರಾಶಿಯ ಮೇಲೆ ಕುಳಿತು, ಯಾರಿಗೂ ಕೇಳಿಸದಂತೆ ಕಣ್ಣೀರು ಸುರಿಸಲು ಆರಂಭಿಸಿದಳು.

ಈಗ ಛಮ್ಮಿಬೇಗಂ ಹತ್ತೊಂಬತ್ತು ವರ್ಷದವಳಾಗಿದ್ದಾಳ. ಅಜ್ಜುಭಾಯಿ ಲಖನೌದಲ್ಲಿಯೇ ಇರುವುದೆಂದು ನಿರ್ಣಯಿಸಿದಂತೆ ಕಾಣುತ್ತದೆ. ಅವನು ಅಲ್ಲಿ ತುಂಬ

ವಿಲಾಸದಲ್ಲಿ ತೊಡಗಿದ್ದಾನೆಂದು ಜನ ಬಂದು ಹೇಳಿದ್ದರು. ಛಮ್ಮಿಬೇಗಂ ಏನೆಂಥ ನಸೀಬ ಪಡೆದು ಬಂದಿದ್ದಳೇನೊ...ಒಂದು ದಿನ ಇದ್ದಕ್ಕಿದ್ದಂತೆ ದೊಡ್ಡವ್ವನೂ ಹೃದಯಾಘಾತದಿಂದ ಇಹಲೋಕ ತ್ಯಜಿಸಿದಳು.

ಈಗ ಛಮ್ಮಿಬೇಗಂ ಸಂಪೂರ್ಣ ಏಕಾಕಿ, ಭಯಗ್ರಸ್ತೆ. ಅಂಗಳದಲ್ಲಿ ಗೂಗೆ ಒದರತೊಡಗಿದವು. ರಕ್ಷಣೆಯ ದೃಷ್ಟಿಯಿಂದ ಮಲ್ಲನ್‌ಮಿಯ್ಯಾ ''ಚಂಬೇಲಿವಾಲಾ ಮಕಾನ''ದಿಂದ ''ಇಮ್ಲಿವಾಲಾ ಮಕಾನ''ದಲ್ಲಿ ಬಂದು ಇರತೊಡಗಿದ. ಇಲ್ಲಿ ಪಡಸಾಲೆಯಲ್ಲಿ ಮಲಗಿಕೊಂಡು ಕೆಮ್ಮುತ್ತಲಿರುತ್ತಾನೆ. ಆ ಬಂಗ್ಲೆಯ ಪಡಸಾಲೆಯಲ್ಲಿ ಥಮ್ಮುಖಾನ ಕೆಮ್ಮುತ್ತಲಿರುತ್ತಾನೆ.

ಅಜ್ಜುಭಾಯಿ ತಾಯಿ ತೀರಿಕೊಂಡಾಗ ಬಂದಿದ್ದ. ಎಲ್ಲ ಧಾರ್ಮಿಕ ಕ್ರಿಯಾಕರ್ಮ ಮುಗಿಸಿ ಹೊರಟು ಹೋದ. ಓ ! ದೇವರೇ, ಅವನು ಛಮ್ಮಿಬೇಗಂಳನ್ನು ತುಂಬಿದ ಹೊಳೆಯ ಮಧ್ಯದಲ್ಲಿಯೇ ಬಿಟ್ಟುಹೋದ. ಆಕೆ ಇದನ್ನೆಲ್ಲ ಯೋಚಿಸತೊಡಗಿದಾಗ ಆಕೆಯ ಹೃದಯ ತಲ್ಲಣಿಸಿ ಹೋಗುತ್ತದೆ. ಪ್ರತಿ ತಿಂಗಳೂ ಲಖನೌದಿಂದ ಆಕೆಯ ಖರ್ಚಿಗಾಗಿ ಎರಡು ನೂರು ರೂಪಾಯಿ ಕಳಿಸುತ್ತಿರುತ್ತಾನೆ. ಯಾವಾಗದರೊಮ್ಮೆ ಕ್ಷೇಮ ಸಮಾಚಾರ ಕೇಳುತ್ತ ಮಲ್ಲನ್ ಖಾನನಿಗೆ ಪತ್ರ ಬರಯುತ್ತಾನೆ.

ಮಲ್ಲನ್ ಖಾನನ ಹಂಡತಿ ಮತ್ತು ಮಗಳು ಬರೇಲಿಯಿಂದ ಬಂದಿದ್ದರು. ಆದರೆ ಛಮ್ಮಿಬೇಗಂಳ ಸಿಟ್ಟು, ಸೆಡವಿನಿಂದಾಗಿ ಅವರಲ್ಲಿ ಒಂದು ದಿನವೂ ಹೊಂದಾಣಿಕೆಯಾಗಲಿಲ್ಲ. ಇಡೀ ದಿನ ಸಂಬಂಧಿಗಳೊಂದಿಗೆ ಜಗಳ, ಇಲ್ಲವೇ ತನ್ನನ್ನು ತಾನು ಶಪಿಸಿಕೊಳ್ಳುತ್ತಲಿರುವುದು, ನಂತರ ಮತ್ತೆ ಬಚ್ಚಲು ಮನೆಯಲ್ಲಿ ಕುಳಿತು ಅಳುವುದು ಆಕೆಯ ದಿನಚರ್ಯೆಯಾಗಿತ್ತು. ಕಿಟಕಿಯ ಗಾಜಿನೊಳಗಿಂದ ''ಚಂಬೇಲಿವಾಲಾ ಮಕಾನ''ನ್ನು ಒಂದೇ ಸವನೇ ನೋಡುತ್ತಿರುತ್ತಾಳೆ.

ಈ ಜೀವನವೂ ಎಂಥ ಜೀವನ...ಎಂದು ಹಲವು ಸಲ ಯೋಚಿಸುತ್ತ, ಗರ ಬಡಿದವರಂತೆ ಕೂಡುತ್ತಾಳೆ...ಈಗೀಗ ಎಲ್ಲ ಇತ್ತು...ಈಗೀಗ ಏನೂ ಇಲ್ಲ...ನಿನ್ನೆ ಮೊನ್ನಿನ ಘಟನೆಯಂತೆ ಅನ್ನಿಸುತ್ತದೆ...ಈ ಮನೆಯಲ್ಲಿ ಏನೆಲ್ಲ ವೈಭವ, ಸಂಭ್ರಮ, ಸುಖವಿತ್ತು !...ಹಾಲ್‌ನಲ್ಲಿ ಆರಾಮ ಕುರ್ಚಿಗಳು ಯಾರೂ ಇಲ್ಲದೆ ಬಿಕೋ ಎನ್ನುತ್ತಲಿವೆ...ನಡುಮನೆಯಲ್ಲಿ ರತ್ನಗಂಬಳಿ ಹಾಸಿವೆ....ತಂದೆ, ದೊಡ್ಡಪ್ಪರ ಗೆಳೆಯರೆಲ್ಲ ಸೇರಿದ್ದಾರೆ...ಕವಿಗೋಷ್ಠಿ ನಡೆದಿದೆ...ಖವ್ವಾಲಿ ಹಾಡುತ್ತಿದ್ದಾರೆ... ಅಜ್ಜುಭಾಯಿಯ ಗೆಳೆಯ ಅಹಬಾಬ ಬಂದರ ಅಂಗಳದ ಕಡೆ ತೆರೆದಿರುವ ಕಿಟಕಿಯ ಹತ್ತಿರ ಬಂದು, ಒಂದು ವಿಶೇಷ ರೀತಿಯಲ್ಲಿ, ಮಧುರ ದನಿಯಲ್ಲಿ ಮೆಲ್ಲಗೆ ಹೇಳುತ್ತಾನೆ– ''ಓ ! ಛಮ್ಮು, ಕೊಂಚ ಚಹಾನಾದರೂ ಕಳಿಸಲ್ಲ.''

ಸಂತೋಷದಿಂದ ತುಂಬಿ ತುಳುಕುತ್ತಿದ್ದ ಆ ಮನೆಗೆ ಯಾರ ಕಣ್ಣು ತಾಕಿತೂ....?

ಅವಳ ಈ ದೀರ್ಘ ದುಃಖ ಮತ್ತು ನಿರಾಶೆಯಲ್ಲೂ ಏನೋ ಒಂದು ಆಸೆಯ ದೀಪ ಉರಿಯುತ್ತಿತ್ತು...ಎಂದಾದರೂ ಒಂದು ದಿನ ಅಜ್ಜುಭಾಯಿ ಮರಳಿ ಬಂದೇ

ಬರುತ್ತಾನೆಂದು...ನಂಬಿದ್ದಳು ಛಮ್ಮುಬೇಗಂ....'ಚಂಬೇಲಿವಾಲಾ ಮಕಾನ'ದಲ್ಲಿ ಮತ್ತೆ ಆಶೆ ಚಿಗುರಿ ಸಂತೋಷ ಮೂಡಬಹುದೆಂದು ಆಕೆ ವಿಶ್ವಾಸ ತಾಳಿದ್ದಳು...

ಪ್ರತಿ ಶುಕ್ರವಾರ ಆಕೆ ಗಂಡಸರಿರುವ ಮನೆಗೆ ಹೋಗುತ್ತಾಳೆ. ಧಮ್ಮುಖಾನ ಮತ್ತು ಸಲಾಮತ್ ಬುವಾಳ ಮಕ್ಕಳಿಂದ ತೋಟ ಪಟ್ಟಿ, ಮನೆ, ಸ್ವಚ್ಛಮಾಡಿಸುತ್ತಾಳೆ. ಪಡಸಾಲೆಯಲ್ಲಿಯ ಜಾಡಬುಳ ತೆಗೆಯಿಸುತ್ತಾಳೆ. ಒಳಗಿನ ಕೋಣೆಗಳನ್ನೆಲ್ಲ ಸ್ವಚ್ಛ ಗೊಳಿಸಿ ವ್ಯವಸ್ಥಿತ ರೀತಿಯಲ್ಲಿ ಇರಿಸುತ್ತಾಳೆ...ಬಾಗಿಲುಗಳ ಗ್ಲಾಸಿನೊಳಗಿಂದ ಇಣಿಕಿ, ಆಕೆ ಮೊಡ್ಡಪ್ಪ, ಅಪ್ಪ ಹಾಗೂ ಅಜ್ಜೂನ ಕೋಣೆಗಳಲ್ಲಿ ದೃಷ್ಟಿ ಹಾಯಿಸುತ್ತಾಳೆ....ತಲೆ ಅಲ್ಲಾಡಿಸುತ್ತ...ನಿಟ್ಟುಸಿರು ಬಿಡುತ್ತ....ಮರಳಿ ಬರುತ್ತಾಳೆ...

ಛಮ್ಮಿಬೇಗಂ ಈಗ ಮೂವತ್ತು ವರ್ಷದವಳಾದಳು....ಕೂದಲುಗಳು ಸಮಯ ಕ್ಕಿಂತ ಮೊದಲೇ ಬೆಳ್ಳಗಾದವು...ಈಗ ಈಕೆ ಚಂಬೇಲಿ ಮನೆಯ ಸ್ವಚ್ಛತೆ, ವ್ಯವಸ್ಥೆಗಳ ಬಗ್ಗೆ ಆಸ್ಥೆವಹಿಸುವುದನ್ನೂ ಬಿಟ್ಟು ಬಿಟ್ಟಳು...ಜಗತ್ತಿನ ಮೋಹದಿಂದ ಮನಸ್ಸು ವಿಮುಖವಾಗತೊಡಗಿತು....ಆದರೆ ಸಿಟ್ಟು ಸಡವು ಮಾತ್ರ ಹಾಗೇ ಇದ್ದವು. ಅಷ್ಟೇ ಅಲ್ಲ ವಯಸ್ಸಿನಿಂದಾಗಿ ಇನ್ನೂ ಹೆಚ್ಚಾಗತೊಡಗಿದವು.

ಈ ಸಿಟ್ಟು ಸೆಡವಿಗೆ ಕಾರಣಗಳೇನೂ ಕಡಿಮೆಯಿರಲಿಲ್ಲ. ಹಿಂದಿನವರು ಸಾವಿರಾರು ವರ್ಷವಿರಲಿಕ್ಕಿಲ್ಲ. ನೂರಾರು ವರ್ಷವಾದರೂ ಬಾಳಿರಬೇಕು....ಪರಾಣ ವಂಶದ ಸ್ವಾಭಿಮಾನ, ಸಿಟ್ಟು ಸ್ವಾಭಾವಿಕವಾಗಿತ್ತು...ಆ ವಂಶ, ಆ ಮನೆತನದ ಬಗ್ಗೆ ಎಂದೂ ಕಳಂಕ ಬಂದಿಲ್ಲ....ಈ ಕಾರಣದಿಂದಾಗಿ ಆಕೆ ಮನೆಯಲ್ಲಿಯೇ ಬಂದಿಯ ಹಾಗೇ ಇದ್ದಳು...ಓಣಿಯ ಹೆಣ್ಣು ಮಕ್ಕಳೊಂದಿಗೂ ಕೂಡುವುದು, ಮಾತಾಡುವುದು ಎಲ್ಲ ಕಡಿಮೆ ಮಾಡಿದಳು...ವಿಧವೆಯರ ಹಾಗೆ ಬಿಳಿ ಸೀರೆ ಉಡತೊಡಗಿದಳು... ಆಕೆಯ ಹೆಚ್ಚಿನ ಸಮಯ ನಮಾಜದಲ್ಲಿ ಕಳೆಯುತ್ತದೆ...ಹೆಚ್ಚಾಗಿ ಮಧ್ಯಾಹ್ನದ ಸಮಯದಲ್ಲಿ ಸಲಾಮತ್ ಬುವಾ, ಅಂಗಳದ ಕಿಟಕಿಯಲ್ಲಿ ಕುಳಿತು ಜರ್ದಾ ಮೆಲ್ಲುತ್ತ ಹೆದರಿಕೆ ಬರುವ ದನಿಯಲ್ಲಿ ತನ್ನಲ್ಲಿ ತಾನೇ ಚೀರಿಕೊಳ್ಳುತ್ತಾಳೆ...

''ಅನುಯಾಯಿಗಳ ಬಗ್ಗೆ ನಗೆ ಬರುತ್ತಲಿದೆ...ನಾನು ಯಾರನ್ನೂ ನಿರ್ಮಿಸು ತ್ತೇನೆ...ಅದನ್ನು ಯಾರೋ ಬಂದು ಹಾಳು ಮಾಡಲು ಯತ್ನಿಸುತ್ತಾರೆ...ನಾನು ಯಾರನ್ನೋ ಹಾಳು ಮಾಡುತ್ತಿರುತ್ತೇನೆ...ಅವನು ತನ್ನನ್ನು ತಾನು ನಿರ್ಮಾಣ ಗೊಳಿಸುವಲ್ಲಿ ಯತ್ನನಾಗಿರುತ್ತಾನೆ....ಎರಡು ಸಲ...'' ಹೀಗೆಯೇ ಅಸಂಬದ್ಧ ಮಾತು ಗಳನ್ನು ತನ್ನಲ್ಲಿ ತಾನೇ ಮಾತಾಡಿಕೊಳ್ಳುತ್ತಿರುತ್ತಾಳೆ. ಆಗ ಛಮ್ಮಿ–''ಓ ! ಸಲಾಮತ್ ಬುವಾ ಹುಚ್ಚುಚ್ಚು ಮಾತಾಡಬೇಡ...'' ಎಂದರೂ ಕೂಡ ಸಲಾಮತ್ ಬುವಾ ಹಾಯಾಗಿ ಅದೇ ರೀತಿ ಬಡಬಡಿಸುತ್ತಿರುತ್ತಾಳೆ....

ಆ ದಿನ ಗುರುವಾರವಾಗಿತ್ತು...ಬಚ್ಚಲು ಮನೆಯಲ್ಲಿ ಛಮ್ಮಿ ಬೇಗಮ್ ಸ್ನಾನ ಮಾಡುತ್ತಿದ್ದಳು....ಚಳಿಗಾಲವಾಗಿತ್ತು...ಒಲೆಯಲ್ಲಿ ಉರಿಯುತ್ತಿದ್ದ ಉರಿ ಯಾವಾ ಗಲೋ ಆರಿ ಹೋಗಿತ್ತು...ಛಮ್ಮಿ ಬೇಗಂ ಸಿಡಿಮಿಡಿ ಗೊಂಡಿದ್ದಳು...ಅವಸರವಸರ

ವಾಗಿ ಕೂದಲುಗಳಿಗೆ ವಸ್ತ್ರ ಕಟ್ಟಿಕೊಳ್ಳುತ್ತ ಸ್ಲಿಪರ್ಸ್ ಹಾಕಿಕೊಳ್ಳುತ್ತಿದ್ದಳು....ಆಗಲೇ ಹೊರಗಿನಿಂದ ಸಲಾಮತ್ ಬುವಾಳ ಮೊಮ್ಮಗಳು ಬಚ್ಚಲು ಮನೆಯ ಗೆಡ್ಡಿ ಹತ್ತಿದ ಬಾಗಿಲದ ಕೊಂಡಿ ಕಟ ಕಟ ಬಾರಿಸಿದಳು ಹಾಗೂ ''ಅಕ್ಕ...ಅಕ್ಕ...ಜಲ್ದಿ ಹೊರಗೆ ಬಾ...'' ಎಂದಳು.

''ಏ....ಏನು...?''

''ಅಕ್ಕ...'ಚಂಬೇಲಿವಾಲಾ ಮಕಾನ'ದಲ್ಲಿರುವವರಿಗೆ, ನಾಲ್ಕೈದು ಕಪ್ ಚಹಾ ಕಳಿಸಬೇಕೆಂದು ನಿನಗೆ ಹೇಳಿದ್ದಾರೆ...''

''ಆಂ !....ಏನಂದೇ?...''

ಛಮ್ಮಿಗೆ ನಂಬಲೆ ಆಗಲಿಲ್ಲ, ಅವಳ ಮಾತನ್ನು...ಆಕೆ ಜಲ್ದಿ ಹೊರಗೆ ಬಂದು ಕಿಟಕಿಯ ಗಾಜಿನಲ್ಲಿ ಹಣಿಕಿ ನೋಡಿದಳು...ಹೊರಗೆ ಎರಡು ಟಾಂಗಾ ನಿಂತಿದ್ದವು... ಪಡಸಾಲೆಯ ಬಾಗಿಲು ತೆರೆದಿತ್ತು...ಒಬ್ಬಿಬ್ಬರು ಸಾಮಾನು ಇಳಿಸುತ್ತಿದ್ದರು...

ಓರ್ವ ಕಪ್ಪು ಬಣ್ಣದ ಆದರೆ ಲಕ್ಷಣವಾದ ಮುಖದ ಹೆಣ್ಣು ಮಗಳು ಕೆಂಪು ಜಾರ್ಜೆಟ್ ಸೀರೆ ಉಟ್ಟು ಹಸಿರು ಬನಾರಸಿ ಶಾಲು ಹೊದ್ದುಕೊಂಡು ಕಟ್ಟೆಯ ಮೇಲೆ ಕುಳಿತು ಆರಾಮುವಾಗಿ ಕಾಲು ಕುಣಿಸುತ್ತ ನೌಕರರಿಗೆ ಆಜ್ಞೆ ಮಾಡುತ್ತಿದ್ದಳು...ಅವಳದೇ ಬಣ್ಣದ ಅವಳ ಹಾಗೇ ಇರುವ ಹದಿಮೂರು...ಹದಿನಾಲ್ಕು ವರ್ಷದ ಓರ್ವ ಹುಡುಗಿ ಬಾಕ್ಸ್ ತೆರೆಯುವಲ್ಲಿ ನಿರತಳಾಗಿದ್ದಳು...

ಇಷ್ಟರಲ್ಲಿ ಒಳಗಿನಿಂದ ಅಜ್ಜುಭಾಯಿ....ಎಂದಿನಂತೆ ಮೋಜಿನ ಅಜ್ಜು ಭಾಯಿ ಹಾಲ್‌ನಲ್ಲಿ ಬಂದ...ಬಾಗಿ ಆ ಹೆಣ್ಣಿಗೆ ಏನೋ ಹೇಳಿದ...ಅವಳು ಜೋರಾಗಿ ನಕ್ಕಳು...ಛಮ್ಮಿ ಬೇಗಂಳ ಕಣ್ಣಲ್ಲಿ ಇದೆಲ್ಲ ನೋಡಿ ಕತ್ತಲೆ ಆವರಿಸಿತು...ಕೊಂಚ ಕತ್ತಲಿದ್ದ ಬಚ್ಚಲು ಮನೆ ಈಗ ಸಂಪೂರ್ಣ ಕತ್ತಲು ತುಂಬಿದ ಬಾವಿಯಾಯಿತು...ಆಕೆ ಕೂಡಲೇ ಗೋಡೆ ಹಿಡಿದುಕೊಂಡಳು...ಜೋಲಾಡುತ್ತ ಹೊರಗೆ ಬಂದಳು...ತನ್ನ ಕೋಣೆಯಲ್ಲಿ ಮೂರ್ಛಿತಳಾಗಿ ಹಾಸಿಗೆಯ ಮೇಲೆ ಬಿದ್ದು ಕೊಂಡಳು...

ಹಲವು ವರ್ಷಗಳಿಂದ ಅಜ್ಜು ಭಾಯಿ ಲಖನೌದಲ್ಲಿರುತ್ತ ಓರ್ವ ಹೆಂಗಸನ್ನು ಇಟ್ಟುಕೊಂಡಿದ್ದ. ಅವಳನ್ನೇ ಈಗ ನಿಕಾಹ ಮಾಡಿಕೊಂಡು ತನ್ನೊಂದಿಗೆ ತನ್ನ ಪೂರ್ವ ಜರ ಮನೆಗೆ ಕರೆ ತಂದಿದ್ದ. ಇದರಿಂದಾಗಿ ಛಮ್ಮಿಗೆ ಆಘಾತವಾಯಿತು. ಅಷರಫಿ ಕಲ್ಲು ಕರೆದುಕೊಂಡು ಬಂದಿದ್ದ ಹುಡುಗಿ ಅಜ್ಜು ಭಾಯಿಯವಲ್ಲ.

ಸಂಜೆ ಅಜ್ಜು ಭಾಯಿ ಹೆಣ್ಣು ಮಕ್ಕಳು ಇರುವ ಈಚೆ ಮನೆಗೆ ಬಂದು ಹಾಲ್‌ನಲ್ಲಿ ನಿಂತು ಕರೆದ–''ಓ ! ಛಮ್ಮು...ಬಾಯಿಲ್ಲಿ ನಿನ್ನ ಅತ್ತಿಗೆಯನ್ನು ಭೆಟ್ಟಿಯಾಗು...''

ಈ ಮಾತು ಕೇಳಿದ ಛಮ್ಮಿ ಬೇಗಂ ನಡುಗಲಾರಂಭಿಸಿದಳು...ಪಲ್ಲಂಗದಿಂದ ಎದ್ದು ಮತ್ತೆ ಬಚ್ಚಲು ಮನೆ ಹೊಕ್ಕು ಜೋರಾಗಿ ಒಳಗಿಂದ ಕೊಂಡಿ ಹಾಕಿ ಕೊಂಡಳು... ಅಜ್ಜು ಭಾಯಿ ಹಾಲ್‌ನಲ್ಲಿ ಒಂದೆಡೆ ನಿಂತಿದ್ದ...ಕಲ್ಲು ಅವನ ಹಿಂದೆ ನಿಂತಿದ್ದಳು...

ಇಬ್ಬರೂ ಕೆಲ ನಿಮಿಷಗಳವರೆಗೆ ಅದೇ ರೀತಿ ಸುಮ್ಮನೆ ನಿಂತಿದ್ದರು... ನಂತರ ತಲೆ ಬಾಗಿಸಿಕೊಂಡು 'ಚಂಬೇಲಿವಾಲಾ ಮಕಾನ'ಗೆ ಮರಳಿದರು...

ಆ ದಿನದಿಂದ ಛಮ್ಮಿ ಬೇಗಂಳ ಜಗತ್ತೇ ಬದಲಿಯಾಯಿತು...ಈಗ ಆಕೆ ಇಡೀ ದಿನ ಕುರಾನ್‌ಷರೀಫ್‌ನ್ನೇ ಓದುತ್ತಿದ್ದಳು...ಅಜ್ಜು ಇಲ್ಲಿಯವರಗೂ ಅವಳನ್ನು ವಂಚಿಸುತ್ತ ಅವಳ ಬದುಕನ್ನು ಹಾಳು ಮಾಡಿದ...ಹಾಗೂ ಬೇರೊಬ್ಬಳೊಂದಿಗೆ ಮದುವೆಯಾದ...ತನ್ನ ವ್ಯಕ್ತಿಗತ ದುಃಖ, ದುಮ್ಮಾನಕ್ಕಿಂತ, ಆಕೆಗೆ ಅಜ್ಜು ಓರ್ವ ವೇಶ್ಯೆ ಯೊಂದಿಗೆ ಮದುವೆಯಾಗಿ, ವಂಶದ ಗೌರವ ಹಾಳು ಮಾಡಿದುದು ಹೆಚ್ಚು ದುಃಖಿತಳ ನ್ನಾಗಿ ಮಾಡಿತ್ತು...ಛಮ್ಮಿಭೇಗಂ ಈ ಪಾಪಕ್ಕಾಗಿ ಅವನನ್ನು ಸಾಯುವ ವರೆಗೂ ಕ್ಷಮಿಸಲಾರದವಳಾಗಿದ್ದಳು...ಕಲ್ಲು ಇವಳ ಜೊತೆ ಸ್ನೇಹ ಬೆಳೆಸಲು ಬಹಳ ಸಲ ಪ್ರಯತ್ನ ಮಾಡಿದಳು...ಅಂಗಳದ ಕಿಟಕಿಯಿಂದ–''ಏನಾದರೂ ಬೇಕಾದರ ಕೇಳು...'' ಎಂದು ಹೇಳುತ್ತಿದ್ದಳು...ವಿಶೇಷ ಅಡಿಗೆ ಮಾಡಿದ ದಿನ ಆಳುಗಳಿಂದ ಕಳಿಸಿ ಕೊಡುತ್ತಿದ್ದಳು...ಆದರ ಛಮ್ಮಿ ಬೇಗಂ 'ಚಂಬೇಲಿವಾಲಾ ಮಕಾನ'ದಿಂದ ಯಾರಾದರೂ ಇತ್ತ ಸುಳಿದರ ಅವರ ಕಾಲು ಮುರಿದು ಹಾಕೆಂದು ಧಮ್ಮುಖಾನನಿಗೆ ಹೇಳಿದ್ದಳು...ಮನೆಗೆ ಮರಳಿ ಬಂದು ಎರಡು ತಿಂಗಳ ನಂತರ ಅಜ್ಜು ಭಾಯಿ ಮಲ್ಲನ್‌ಖಾನನೊಂದಿಗೆ ಎರಡುನೂರು ರೂಪಾಯಿ ಕಳಿಸಿಕೊಟ್ಟ. ಇಲ್ಲಿಯವರೆಗೂ ಈ ಹಣವನ್ನು ಲಖನೌದಿಂದ ಕಳಿಸುತ್ತಿದ್ದ...ಆದರೆ ಈಗ ಪರಿಸ್ಥಿತಿ ಬದಲಾಗಿತ್ತು...

ಛಮ್ಮಿ ಬೇಗಂ ಕಿಟಕಿಯ ಮುಂದೆ ನಿಂತು...ಆರ್ಭಟಿಸಿದಳು–''ದಿವಂಗತ ಜುಮ್ಮಾಖಾನ್‌ನ ಮಗಳು, ಮತ್ತು ಶಬ್ಬೂಖಾನನ ಸೋದರನ ಮಗಳು ಕೆಟ್ಟಿದ್ದರಿಂದ ಬಂದ ಹಣ ಅದು ಹರಾಮದ್ದೆಂದು ಭಾವಿಸಿದ್ದೇನ...ಮಲ್ಲನ್‌ಖಾನ್ ಆತ್ಮಾಭಿಮಾನ ವುಳ್ಳ ಪಠಾಣನಾಗಿದ್ದರೆ ಈ ಎರಡುನೂರು ರೂಪಾಯಿ ಕೊಟ್ಟವನ ಮುಖದ ಮೇಲೆ ಒಗೆದು ಬಾ...'' ಎಂದು ಹೇಳಿದ ಆಕೆ ಕಿಟಕಿ ಧಡರ್ ಎಂದು ಹಾಕಿಕೊಂಡಳು... ಅದಕ್ಕೆ ದೊಡ್ಡ ಕೀಲಿ ಜಡಿದಳು...

ಈಗ ಛಮ್ಮಿ ಬೇಗಂ ತನ್ನ ವಸ್ತ್ರ ಒಡವೆ ಮಾರಿ ಜೀವ ಸಾಗಿಸತೊಡಗಿದಳು... ಒಡವೆಗಳೆಲ್ಲ ಮುಗಿದಾಗ ಮನೆಯಲ್ಲಿದ್ದ ಬೆಲೆಯುಳ್ಳ ವಸ್ತುಗಳನ್ನು ಮಾರಿದಳು... ಆದರೆ ಹಸಿವೆ ಅದೊಂದು ಬಹುದೊಡ್ಡ ರೋಗ...ತನ್ನದಲ್ಲದೆ ಧಮ್ಮುಖಾನ್, ಮಲ್ಲನ್‌ಖಾನ್....ಸಲಾಮತ್ ಬುವಾ ಹಾಗೂ ಆಕೆಯ ಮಕ್ಕಳ ಹೊಟ್ಟೆ ತುಂಬಿಸ ಬೇಕಾಗಿತ್ತು....ಆಕೆ ಮನೆಯಲ್ಲಿಯೇ ಕುರಾನ್ ಷರೀಫ್ ಮತ್ತು ಉರ್ದು ಹೇಳುವ ಪಾಠಶಾಲೆ ಆರಂಭಿಸಿದಳು. ಓಣಿಯಲ್ಲಿಯ ಹೆಣ್ಣುಮಕ್ಕಳಿಗಾಗಿ ಹೊಲಿಗೆ ಕೆಲಸ ಕೂಡ ಪ್ರಾರಂಭಿಸಿದಳು...ದುಡಿದುಡಿದು ದಣಿದು ಜಡ್ಡಿನಿಂದ ಮಲಗಿದಾಗ ಸಲಾಮತ್ ಬುವಾ ಹೆದರಿಕೊಂಡು ಸಿಟ್ಟಿನಿಂದ ಹೇಳಿದಳು–''ಬಿಬಿ, ಗೌರವ ರಕ್ಷಣಾಗಾಗಿ ನಿನ್ನ ಜೀವವನ್ನೇ ಕೊಡಬೇಕೆಂದಿರುವೆಯಾ? ಏನಿದೆ ಈ ಟೊಳ್ಳು ಅಭಿಮಾನವಲ್ಲ?'' ಆದರ ಈ ಯಾವ ಮಾತೂ ಛಮ್ಮಿ ಬೇಗಂಳ ಮೇಲೆ ಯಾವ ಪರಿಣಾಮವನ್ನೂ ಬೀರಲಿಲ್ಲ... ಸಲಾಮತ್ ಬುವಾ ಹದರಿ ಓಡೋಡಿ ''ಚಂಬೇಲಿವಾಲಾ ಮಕಾನ''ಕ್ಕೆ ಹೋದಳು....

ಕಲ್ಲು ಕೂಡಲೇ ಬುರ್ಕಾ ಹಾಕಿಕೊಂಡು ಓಣಿಯೊಳಗಿಂದ ಈ ಮನೆಯೊಳಕ್ಕೆ ಬಂದಳು...ಡಾಕ್ಟರರನ್ನು ಕರೆಯಿಸಲಾಯಿತು....ಕಲ್ಲು ಇಡೀ ರಾತ್ರಿ ಆಕೆಯ ಹತ್ತಿರವೇ ಕುಳಿತು ಸುಶ್ರೂಷೆ ಮಾಡಿದಳು...ಅಜ್ಜುಭಾಯಿ ಅದೆಷ್ಟೋ ಸಲ ಬಂದು ಚಿಕ್ಕಪ್ಪನ ಮಗಳಾದ ತಂಗಿಯ ಸ್ಥಿತಿಯನ್ನು ನೋಡಿದ...ಆದರೆ ಈಗಲೂ ತಾನು ಆಕೆಗೆ ಮಾಡಿದ ವಂಚನೆಯ ಬಗ್ಗೆ ಅವನಿಗೆ ಯಾವ ಪಶ್ಚಾತ್ತಾಪವೂ ಆದಂತೆ ಕಾಣಲಿಲ್ಲ...

ಎಚ್ಚರ ಬಂದ ತಕ್ಷಣ, ತನ್ನೆದುರಿಗೆ ಕುಳಿತ ಕಲ್ಲುಳನ್ನು ನೋಡಿದ ಕೂಡಲೇ ಛಮ್ಮಿಬೇಗಂಳಿಗೆ ಮತ್ತೆ ಸಿಟ್ಟು ಜೋರಾಯಿತು...ಕಲ್ಲು ಆಕೆಯ ಆ ಸಿಟ್ಟು ಕಂಡು ನಡುಗಿ ಹೋದಳು...ಆ ಕೂಡಲೇ ಅಲ್ಲಿಂದ ಎದ್ದು ತನ್ನ ಮನೆಗೆ ಹೊರಟು ಹೋದಳು...

ಬಹಳಷ್ಟು ವೇಶ್ಯೆಯರು ಮದುವೆಯಾಗಿ ತುಂಬ ಪ್ರಾಮಾಣಿಕ ಹೆಂಡತಿಯರಾದಂತೆ ಕಲ್ಲು ಕೂಡ ತುಂಬ ಪತಿವ್ರತೆಯಾಗಿದ್ದಳು...ಛಮ್ಮಿಬೇಗಂ ತನ್ನನ್ನು ಆ ವಂಶದ ಸೊಸೆಯೆಂದು ಪರಿಗಣಿಸಿ, ತನ್ನ ಅತ್ತಿಗೆಯೆಂದು ಸ್ವೀಕರಿಸಿ, ''ಇಮ್ಲಿವಾಲಾ ಮಕಾನ'' ದಲ್ಲಿ ಕರೆದುಕೊಳ್ಳಬೇಕೆಂಬ ಇಚ್ಛೆ ಕಲ್ಲುಗೆ ತುಂಬ ಇತ್ತು. ಆದರೆ ಆಕೆಯ ಈ ಇಚ್ಛೆ ಎಂದೂ ಪೂರ್ಣವಾಗಲಿಲ್ಲ...

ಹತ್ತು ವರ್ಷಗಳು ಕಳೆದುಹೋದವು. ಅಜ್ಜೂಭಾಯಿಗೆ ಛಮ್ಮಿಬೇಗಂಳ ಬಗ್ಗೆ ಯೋಚನೆಯಿತ್ತು...ಆದರೆ ಈಗ ಛಮ್ಮಿಬೇಗಂ ಮಧ್ಯವಯಸ್ಕಳಾಗಿದ್ದಳು...ಈಗ ಅವಳನ್ನು ಮದುವೆ ಆಗುವವರಾರು ?

ಛಮ್ಮಿಬೇಗಂ ಅವನೊಂದಿಗೆ ಹಾಗೂ ಕಲ್ಲುಳೊಂದಿಗೆ ಮೊದಲಿನಂತೆಯೇ ಈಗಲೂ 'ಪರದಾ' ಆಚರಿಸುತ್ತಿದ್ದಳು. ಅದೇ ರೀತಿ ಶಾಲೆ ನಡೆಸಿ ತನ್ನ ಉಪಜೀವನ ನಡೆಸುತ್ತಿದ್ದಳು. ಹೀಗಿರುವಾಗಲೇ ದೇಶ ಒಡೆದು ಎರಡಾದವು...ಅರ್ಧದಷ್ಟು ಶಾಹಜಾಪೂರ ಖಾಲಿಯಾಯಿತು...ಆಕೆಯ ಶಾಲೆಯ ಹುಡುಗಿಯರು ತಮ್ಮ ತಮ್ಮ ತಾಯಿ ತಂದೆಗಳೊಂದಿಗೆ ಪಾಕಿಸ್ತಾನಕ್ಕೆ ಹೊರಟು ಹೋದರು.

ಛಮ್ಮಿಬೇಗಂ ಜೀವಿಸುವುದು ಕಷ್ಟವಾಗತೊಡಗಿತು. ಅದೇ ಕಾಲದಲ್ಲಿ ಆಸ್ತಿಯ ಯಾವುದೋ ಕೆಲಸಕ್ಕಾಗಿ ಅಜ್ಜುಭಾಯಿ ದಿಲ್ಲಿಗೆ ಹೋದ...ಅಲ್ಲಿ ನಡೆದ ಜಾತಿ ಗಲಭೆಗಳಿಂದಾಗಿ ಅವನು ಅದರಲ್ಲಿ ಸಿಕ್ಕು ಸತ್ತು ಹೋದ...ಕಲ್ಲು ಎದೆ ಬಡಿದು ಕೊಂಡು ಅತ್ತಳು...ಬಳೆ ಒಡೆದು ಹಾಕಿದಳು...ಅಂಗಳದಲ್ಲಿದ್ದ ಕಿಟಕಿಗೆ ಕೈ ಗುದ್ದಿ ಗುದ್ದಿ ರಾಮಾರಗತ ಮಾಡಿಕೊಂಡು..... ''ಬಾಗಿಲುತಗೆ....ಹಾಯ್....ನಾನು ಸರ್ವನಾಶ ವಾದೆ....'' ಎನ್ನುತ್ತ ರೋದಿಸಿತೊಡಗಿದಳು...

ಛಮ್ಮಿಬೇಗಂ ಹಾಲ್‌ನಲ್ಲಿ ಗಾಢವಾಗಿ ಕಾಟ್ ಮೇಲೆ ಮಲಗಿದ್ದಳು. ಗೋಳಾಟ ಕೇಳಿ ಎದ್ದಳು...ಗೋಡೆಯ ಮಳೆಗೆ ಹಾಕಿದ್ದ ಕೀಲಿ ಕೈ ತೆಗೆದುಕೊಂಡು ಬಾಗಿಲ ಕೀಲಿ ತೆಗದಳು...ಕಲ್ಲು ಕೂದಲು ಹರವಿಕೊಂಡು ದೆವ್ವದ ಹಾಗೆ ಚೀರುತ್ತಿದ್ದಳು...''ಓ ನನ್ನ ಮುತ್ತೈದೆತನ, ನನ್ನ ಸೌಭಾಗ್ಯ ಕೊಳ್ಳೆ ಹೊಡೆಯಲ್ಪಟ್ಟಿತು...''ಎನ್ನುತ್ತ ಮುಂದೆ ಬಂದು ಛಮ್ಮಿಬೇಗಂಳನ್ನು ಅಪ್ಪಿಕೊಳ್ಳ ಬಯಸಿದಳು...ಆದರೆ ಆಕೆ ಎರಡು ಹೆಜ್ಜೆ ಹಿಂದಕ್ಕೆ

ಸರಿದಳು...ನಿದ್ರೆಯಿಂದ ತುಂಬಿದ ಕಣ್ಣುಗಳು...ಕೆಲ ಹೊತ್ತಿನ ನಂತರ ಅವಳಿಗೂ ಏನಾಯಿತೆಂಬುದರ ಅರಿವು ಬಂದು ಸ್ತಬ್ಧಳಾಗಿ ಕಿಟಕಿಯಲ್ಲಿ ಕುಳಿತಳು...ಬಿಳಿಯ ಮೇಲುದ ಬಾಯಲ್ಲಿ ತುರುಕಿಕೊಂಡಳು...ಬಿಕ್ಕು.... ಬಿಕ್ಕುತ್ತ ಅಳತೊಡಗಿದಳು... ಅಳುತ್ತಲೇ ಹೇಳಿದಳು–''ಅರೆ...ನೀನಂತೂ ಇಂದು ವಿಧವೆ ಆಗಿರುವೆ...ನಾನು... ಈ ದುರ್ದೈವಿ ಸದಾ ಕಾಲದಿಂದ ವಿಧವೆಯಾಗಿದ್ದೇನೆ....''

ಅಜ್ಜೂಭಾಯಿಯ ದಿನಕರ್ಮ ಮುಗಿದ ನಂತರ ಕಲ್ಲೂ ಮಾಯವಾದಳು... ಅವಳ ಮಗಳು ಅಷರ್ಫಿಯನ್ನು ಕೆಲ ವರ್ಷಗಳ ಹಿಂದೆ ಅಜ್ಜೂಭಾಯಿ ತನ್ನ ಸಂಬಂಧಿಯೋರ್ವನಿಗೆ ಮದುವೆ ಮಾಡಿ ಕೊಟ್ಟಿದ್ದ–ಅವಳೀಗ ಲಖನೌದಿಂದ ಬಂದು ''ಚಂಬೇಲಿವಾಲಾ ಮಕಾನ''ದಲ್ಲಿದ್ದ ಎಲ್ಲ ಸಾಮಾನುಗಳನ್ನು ತೆಗೆದು ಕೊಂಡು ಹೊರಟುಹೋದಳು...ಛಮ್ಮಿಬೇಗಂ ಬಚ್ಚಲು ಮನೆಯ ಗಾಜಿನಿಂದ, ನಿರಾಸಕ್ತಿಯಿಂದ ಈ ನಶ್ವರ ಜಗತ್ತಿನ 'ತಮಾಷಾ' ನೋಡುತ್ತಿದ್ದಳು...

''ಚಂಬೇಲಿವಾಲಾ ಮಕಾನ''ಕ್ಕೆ ಕಸ್ಟೋಡಿಯನ್‌ನ ಕೀಲಿ ಹಾಕಲಾಯಿತು.. ಅಜ್ಜೂಭಾಯಿ ಪಾಕಿಸ್ತಾನಕ್ಕೆ ಹೋಗಿಲ್ಲ, ದಂಗೆಯಲ್ಲಿ ಸತ್ತಿದ್ದಾನೆಂಬುದನ್ನು ಕೋರ್ಟಿನಲ್ಲಿ ಛಮ್ಮಿಬೇಗಂಳಿಗೆ ಸಾಬೀತು ಪಡಿಸಲು ಆಗಲಿಲ್ಲ...ಆಕೆ ಯಾವುದೋ ಪುರಾತನ ವಸ್ತುವಿನ ಹಾಗೆ ''ಇಮ್ಲಿವಾಲಾ ಮಕಾನ''ದಲ್ಲಿರತೊಡಗಿದಳು... ಮಲ್ಲನ್ ಖಾನ ಮತ್ತು ಧಮ್ಮುಖಾನ ಹಸಿವೆಯಿಂದಾಗಿ, ವೃದ್ಧಾಪ್ಯದಿಂದಾಗಿ ಸತ್ತು ಹೋದರು... ಸಲಾಮತ್ ಬುವಾ ಕೂಡ ಇಲ್ಲವಾದಳು. ಆಕೆಯ ಮಕ್ಕಳು, ಅಳಿಯಂದಿರು ಪಾಕಿಸ್ತಾನಕ್ಕೆ ಹೊರಟು ಹೋದರು...ಛಮ್ಮಿಬೇಗಂ ಹೊಲಿಗೆ ಕೆಲಸ ಮಾಡುತ್ತ ಜೀವನ ಸಾಗಿಸ ಹತ್ತಿದ್ದಳು...ಏಕಾಕಿಯಿರಲು ಈಗ ಆಕೆಗೆ ಆ ಮನೆಯಲ್ಲಿ ಯಾವ ಹೆದರಿಕೆಯೂ ಅನ್ನಿಸುತ್ತಿರಲಿಲ್ಲ...ಏಕೆಂದರೆ ತಲೆ ಪೂರ್ಣ ಬೆಳ್ಳಗಾಗಿತ್ತು...

ಬಹಳ ಜಲ್ದಿ ಓಣಿಯಲ್ಲಿ ದೊಡ್ಡ ಅಜ್ಜಿ ಅನ್ನಿಸಿಕೊಳ್ಳತೊಡಗಿದಳು...ಕೆಲ ಸಮಯದ ನಂತರ ''ಚಂಬೇಲಿವಾಲಾ ಮಕಾನ'' ದಲ್ಲಿ ಓರ್ವ ಸಿಖ್ ಶರಣಾರ್ಥಿ ಡಾಕ್ಟರ್ ಬಂದು ವಾಸ ಮಾಡಿದ...ಯಾವಾಗಾದರೊಮ್ಮೆ ಸರದಾರನ ಹೆಂಡತಿ ಅಂಗಳದ ಕಿಟಕಿಯ ಹತ್ತಿರ ಬಂದು ಕೂಡುತ್ತಾಳೆ...ಆಕೆ ಮತ್ತು ಛಮ್ಮಿಬೇಗಂ ತಮ್ಮ ತಮ್ಮ ದುಃಖ, ಸುಖ ಹಂಚಿಕೊಳ್ಳುತ್ತಾರೆ...ಡಾಕ್ಟರ್ ಅವರ ಮಗಳು ಚರಣಜೀತಳ ಮದುವೆ ಹೊಸದಿಲ್ಲಿಯಲ್ಲಿರುವ ಯಾವುದೋ ಸರಕಾರಿ ಅಧಿಕಾರಿಯೊಂದಿಗೆ ಆಗಿತ್ತು..

ಈ ಸಲ ಆಕೆ ತವರು ಮನೆಗೆ ಬಂದಾಗ ಆಕೆ ತನ್ನ ಗಂಡನ ಹಿರಿಯ ಮುಸಲ್ಮಾನ ಅಧಿಕಾರಿಯ ಹೆಂಡತಿಗೆ ಓರ್ವ ಅಧ್ಯಾಪಕಿಯ ಅವಶ್ಯಕತೆಯಿದೆ, ಅಧ್ಯಾಪಕಿ ಮನೆಯಲ್ಲಿಯೇ ಇದ್ದು ಅವರ ಮಕ್ಕಳಿಗೆ ಉರ್ದು ಮತ್ತು ಕುರಾನ್‌ಷರೀಫ್ ಓದಿಸಬೇಕು–ಎಂದು ತನ್ನ ತಾಯಿಗೆ ಹೇಳುತ್ತ ಈ ಕೆಲಸಕ್ಕೆ ಛಮ್ಮಿ ಅಂಟಿಗೆ ಕೇಳಲು ನನಗೆ ಹೆದರಿಕೆಯಾಗುತ್ತದೆ...ನೀವೇ ಕೇಳಿ ನೋಡಿ....ಎಂದಳು.

ಡಾಕ್ಟರನ ಹೆಂಡತಿ ಛಮ್ಮಿಬೇಗಂಳೊಂದಿಗೆ ಈ ನೌಕರಿಯ ಬಗ್ಗೆ ಕೇಳಿದಳು... ಹಾಗೂ ತಿಳಿಸಿ ಹೇಳಿದಳು....''ಸೋದರಿ....ಈ ಏಕಾಕಿತನ, ದಾರಿದ್ರ್ಯ ಹೀಗೆ ಎಷ್ಟು

ಕಾಲ ಜೀವನ ಕಳೆವಿರಿ...ದಿಲ್ಲಿಗೆ ಹೋಗಿ...ಸಹಬುದ್ದೀನ ಸಾಹೇಬರಲ್ಲಿ ಗೌರವದಿಂದ ಹಾಗೂ ಸುಖವಾಗಿ ಜೀವಿಸಬಹುದಾಗಿದೆ, ಯಾವ ತೊಂದರೆಗಳಿಲ್ಲದೆ ವೃದ್ಧಾಪ್ಯ ಕಳೆಯುತ್ತದೆ....''

ಇಷ್ಟು ಹೊತ್ತಿಗೆ ಛಮ್ಮಿಬೇಗಂಳ ಸಿಟ್ಟು ಸೆಡವು ಮಾಯವಾಗಿದ್ದವು....ಆಕೆಗೂ ಈ ಮಾತುಗಳು ಹಿಡಿಸಿದವು...ಸತ್ತಾಗ ಯಾರಾದರೂ ಧರ್ಮಗ್ರಂಥ ಓದುವವರಾದರೂ ಬೇಕಲ್ಲ...ಎಂದು ಯೋಚಿಸಿದಳು...

ಛಮ್ಮಿಬೇಗಂ ಬುರ್ಕಾ ಹಾಕಿಕೊಂಡು ಕೇವಲ ಒಂದು ಪೆಟ್ಟಿಗೆ, ಹಾಸಿಗೆ, ಒಂದು ಲೋಟಾ ತೆಗೆದುಕೊಂಡು ಹೊರಟಳು...ಈಗಾಗಲೇ ಮನೆ ಒಂದು ರೀತಿಯಲ್ಲಿ ಅವಶೇಷವಾದ ಹಾಗಿತ್ತು...ಅದು ಹಾಗಾದುದರ ಬಗ್ಗೆ ಆಕೆಗೆ ಈಗ ಯಾವ ದುಃಖವೂ ಇಲ್ಲ. ಏಕೆಂದರೆ ಈಗ ಆಕೆ ತ್ಯಾಗ ಮತ್ತು ಸನ್ಯಾಸದ ಸ್ಥಿತಿ ತಲುಪಿದ್ದಳು...ಆಕೆ ರೈಲಿನಲ್ಲಿ ಕುಳಿತು ದಿಲ್ಲಿ ತಲುಪಿದಳು...ಅಲ್ಲಿ ನಿಲ್ದಾಣಕ್ಕೆ ಸ್ವತಃ ಬೇಗಂ ಸಹಬುದ್ದೀನ ಈಕೆಯನ್ನು ಕರೆದೊಯ್ಯಲು ಬಂದಿದ್ದಳು. ಈಕೆ ಬರುವ ವಿಷಯವನ್ನು ಚರಣಜೀತಸಿಂಗ್ ಮೊದಲೇ ತಿಳಿಸಿದ್ದಳು.

ಅಂದಿನಿಂದ ಆಕೆ ಛಮ್ಮಿಬೇಗಂ ಜಮೀನ್ದಾರ ಶಾಹಜಾನಪುರ ಮೊಗಲಾನಿಜಿ ಆದಳು....

ಛಮ್ಮಿಬೇಗಂ ಸಮಗ್ರ ಹನ್ನೆರಡು ವರ್ಷಗಳನ್ನು ಬಿಳಿಯ ಸೀರೆ, ಬುರ್ಕಾ ಹಾಕಿಕೊಂಡು ಸಹಬುದ್ದೀನ ಸಾಹೇಬನ ಮನೆಯಲ್ಲಿ ಕಳೆದಳು. ಈಕೆ ಕುರಾನ್ ಷರೀಫ್, ಉರ್ದು ಓದಿಸುತ್ತಿದ್ದ ಹುಡುಗರು ದೊಡ್ಡವರಾದರು. ಹಿರಿಯ ಹುಡುಗ ಬಿ. ಎ. ಮುಗಿಸಿ ತನ್ನ ಚಿಕ್ಕಪ್ಪನ ಹತ್ತಿರ ಪಾಕಿಸ್ತಾನಕ್ಕೆ ಹೋದ. ನಡುವಿನ ಹುಡುಗಿ ಕೂಡ ಕರಾಚಿಗೆ ಹೊರಟು ಹೋದಳು...ಕಿರಿಯ ಹುಡುಗಿ ಕಾಲೇಜಿಗೆ ಹೋಗ ತೊಡಗಿದ್ದಳು...ಈಗ ಬೇಗಂ ಸಹಬುದ್ದೀನಳಿಗೆ ಛಮ್ಮಿಬೇಗಂಳ ಅವಶ್ಯಕತೆ ಉಳಿಯ ಲಿಲ್ಲ. ಸಹಬುದ್ದೀನ ಸಾಹೇಬ ನಿವೃತ್ತನಾಗಿ ತನ್ನೂರು ಮಿರ್ಜಾಪೂರಕ್ಕೆ ಹೋಗಲಿದ್ದರು. ದಿಲ್ಲಿಯಿಂದ ಹೊರಡುವ ಮುನ್ನ ಬೇಗಂ ಸಹಬುದ್ದೀನ ಛಮ್ಮಿಬೇಗಂಳನ್ನು ತನ್ನ ಗೆಳತಿ ಬೇಗಂ ರಾಶಿದ್ ಅಲಿಯ ಮನೆಯಲ್ಲಿರಿಸಿದಳು..ರಾಶಿದ್ ಅಲಿ ಸಾಹೇಬ ಕೂಡ ಭಾರತೀಯ ಸರಕಾರದಲ್ಲಿ ಓರ್ವ ಹಿರಿಯ ಅಧಿಕಾರಿಯಾಗಿದ್ದ.

ಛಮ್ಮಿಬೇಗಂ ಸಹಬುದ್ದೀನ ಸಾಹೇಬರಲ್ಲಿ ತುಂಬ ಸುಖ, ಶಾಂತಿಯಿಂದಿದ್ದಳು.... ಆಕೆಯ ಜೊತೆಗೆ ಅವರೆಲ್ಲ ಮನೆಯ ಹಿರಿಯರೊಂದಿಗೆ ವರ್ತಿಸುವ ಹಾಗೆ ವರ್ತಿಸುತ್ತಿದ್ದರು...ಆಕೆಗೆ ಅವರ ಮೂವರೂ ಮಕ್ಕಳೊಂದಿಗೆ ತುಂಬ ಪ್ರೀತಿಯಿತ್ತು.... ಸಿಟ್ಟು ಸಾಕಷ್ಟು ಪ್ರಮಾಣದಲ್ಲಿ ಕಡಿಮೆಯಾಗಿತ್ತು...ಯಾವಾಗಾದರೊಮ್ಮೆ ಬಂದರೂ ತನ್ನ ಕಷ್ಟದ ಪರಿಸ್ಥಿತಿ ಅರಿತು ನುಂಗಿಕೊಳ್ಳುತ್ತಿದ್ದಳು. ಈಗ ಆಕ ಸಿಟ್ಟು ಸೆಡವು ಯಾರ ಮೇಲೆ ಮಾಡಬೇಕು....ಇದನ್ನೆಲ್ಲ ಸಹಿಸಿಕೊಳ್ಳುವವರು ಎಲ್ಲರೂ ಅಲ್ಲಾಗೆ ಪ್ರಿಯ ರಾದರು....ಒಮ್ಮೊಮ್ಮ ಆಕೆಗೆ ಕಲ್ಲೂಳ ನೆನಪಾಗುತ್ತಿತ್ತು...ಈಗ ಆಕ ಎಲ್ಲಿ ಎಂತು

ಎಂದು ಯೋಚಿಸುತ್ತಾಳೆ....ಸತ್ತೇ ಹೋಗಿರಬೇಕೆಂದೂ ಭಾವಿಸುತ್ತಾಳೆ....ಜೀವನದ ಭರವಸೆಯಾದರೂ ಈಗೀಗ ಎಲ್ಲಿದೆ....ಎನ್ನುತ್ತ ಸುಮ್ಮನಾಗುತ್ತಾಳೆ....

ಬೇಗಂ ರಾಶಿದ್ ಅಲಿ, ಬೇಗಂ ಸಹಬುದ್ದಿನಳ ಹಾಗೆ ಸಹೃದಯಿಯಾಗಿರಲಿಲ್ಲ, ಭಗವದ್ ಚಿಂತಕಳಾಗಿರಲಿಲ್ಲ...ಇಂದಿನ ಮಾಡರ್ನ್ ಹುಡುಗಿಯಾಗಿದ್ದಳು... ಆದರೆ ಈಕೆ ಕೂಡ ಗೌರವ ಕೊಡುತ್ತಿದ್ದಳು....ಛಮ್ಮಿಬೇಗಂಳಿಗೆ...ಇಲ್ಲಿಯೂ ಕೂಡ ಮನೆಯ ಹಿರಿಯ ವ್ಯಕ್ತಿಯಾಗಿಯೇ ಇದ್ದಳು....ರಾಶಿದ್ ಅಲಿ ಆಕೆಯ ಬಗ್ಗೆ ತುಂಬ ಕಾಳಜಿ ವಹಿಸುತ್ತಿದ್ದ...ಆಕೆಯ ವ್ಯಕ್ತಿತ್ವ, ಸಂಸ್ಕೃತಿ, ಬಣ್ಣ ರೂಪ, ಉಚ್ಚ ವಿಚಾರಗಳಿಂದ ಎಲ್ಲರೂ ಪ್ರಭಾವಿತರಾಗಿದ್ದರು...ಬೇಗಂ ರಾಶಿದ್ ಆಗಾಗ ತನ್ನ ಗೆಳತಿಯರಿಗೆ ಹೇಳುತ್ತಿರುತ್ತಾಳೆ–''ಓ ! ಜೀವನದಲ್ಲಿ ಎಂಥೆಂಥ ಘಟನೆಗಳು, ಪರಿಸ್ಥಿತಿಗಳು ಬರುತ್ತವೆ...ಕ್ರಾಂತಿ ಉಂಟಾಗುತ್ತವೆ...ಕ್ಷಣ ಕ್ಷಣದಲ್ಲಿ ಏನೆಲ್ಲ ಆಗಿ ಹೋಗುತ್ತದೆ... ನಮ್ಮ ಮನೆಯಲ್ಲಿರುವ ಛಮ್ಮಿ ಬೇಗಂಳ ಕಥೆ ಕೇಳಿದ್ದೀರೇನು ನೀವು...? ಶಾಹಜಾಹಪುರದ ಇಂಥ ಮನೆತನದ...''ಕೇಳುವ ಹೆಂಗಸರೆಲ್ಲ ತಲೆ ಅಲ್ಲಾಡಿಸುತ್ತ ನಿಟ್ಟುಸಿರು ಬಿಡುತ್ತಾರೆ...ಅವರು ಕೂಡ ಇಂಥವೇ ಪ್ರಸಂಗಗಳನ್ನು ಹೇಳುತ್ತಾರೆ...

ಬೇಗಂ ರಾಶಿದ್ ಅಲಿಯ ಮಕ್ಕಳು ಒರಟಾಗಿದ್ದವು. ಅವುಗಳ ಮೇಲೆ ಹೈದರಾಬಾದಿನ ಆಯಾಳ ಪ್ರಭಾವವಿತ್ತು...ಛಮ್ಮಿಬೇಗಂ ಹೌಸ್ ಕೀಪರ್ ಆದಳು... ಮನೆ ನೋಡಿಕೊಳ್ಳಲು ಬೇಗಂ ರಾಶಿದ್‌ಳಿಗೆ ಛಮ್ಮಿಬೇಗಂಳ ಅವಶ್ಯಕತೆ ತುಂಬ ಇತ್ತು...ಏಕೆಂದರೆ ಆಕೆಯ ಬಹಳಷ್ಟು ಸಮಯ ಕ್ಲಬ್‌ಗಳಲ್ಲಿ, ಪಾರ್ಟಿಗಳಲ್ಲಿ ಹಾಗೂ ಸರಕಾರಿ ಸಭೆ ಸಮಾರಂಭಗಳಲ್ಲಿ ಕಳೆದುಹೋಗುತ್ತಿತ್ತು.

ಐದು ವರ್ಷಗಳನ್ನು ಛಮ್ಮಿಬೇಗಂ ರಾಶಿದ್ ಅಲಿ ಅವರ ಮನೆಯಲ್ಲಿ ಕಳೆದಳು. ರಾಶಿದ್ ಅಲಿ ಅವರಿಗೆ ವಾಷಿಂಗ್‌ಟನ್‌ದಲ್ಲಿರುವ ಭಾರತೀಯ ದೂತಾವಾಸಕ್ಕೆ ವರ್ಗವಾದಾಗ ಅವನ ಬೇಗಂಳಿಗೆ ಛಮ್ಮಿಬೇಗಂಳ ಬಗ್ಗೆ ಯೋಚನೆಯಾಯಿತು. ಆಕೆಗೆ ಒಂದು ಬೇರೆ ವ್ಯವಸ್ಥೆ ಮಾಡಬೇಕೆಂದು ಚಿಂತಿತಳಾದಳು...ಒಂದು ದಿನ ಆಕೆ ಲಂಚ್‌ಗಾಗಿ ರೋಷನ್ ಆರಾ ಕ್ಲಬ್‌ಗೆ ಹೋಗಿದ್ದಳು...ಇಷ್ಟು ಹೊತ್ತಿಗೆ, ಕಾರು ತೆಗೆದುಕೊಂಡು ಮುನ್ನಿಯೊಂದಿಗೆ ಕ್ಲಬ್‌ಗೆ ಬರಬೇಕೆಂದು ಹೋಗುವಾಗ ಹೇಳಿ ಹೋಗಿದ್ದಳು...ಛಮ್ಮಿಬೇಗಂ ರೋಷನ್ ಆರಾ ಕ್ಲಬ್ ತಲುಪಿದಾಗ ಇನ್ನೂ ಲಂಚ್ ಮುಗಿದಿರಲಿಲ್ಲ...ಛಮ್ಮಿಬೇಗಂ ಮಗುವಿನ ಕೈ ಹಿಡಿದುಕೊಂಡು ಹೊರಗೆ ಲಾನ್‌ದಲ್ಲಿ ಶತಪಥ ಮಾಡುತ್ತಿದ್ದಳು...ಛಮ್ಮಿಬೇಗಂ ಈಗ ಬುರ್ಕಾ ಹಾಕಿಕೊಳ್ಳುತ್ತಿದ್ದಿಲ್ಲ...ಸೀರೆ ಉಟ್ಟುಕೊಳ್ಳುತ್ತಿದ್ದಳು....ಈ ವಿಚಿತ್ರ ದಿಲ್ಲಿಯಲ್ಲಿ ಆಕೆಯನ್ನು ಈಗ ಗುರುತಿಸುವವರು ಯಾರಿದ್ದಾರೆ....ಎದುರಿನ ಭಾಗದಲ್ಲಿ ಒಂದೆಡೆ ರಮ್ಮಿ ಆಡುವವರ ಗುಂಪು....ಅವರಲ್ಲಿ ಅತ್ಯಂತ ಫ್ಯಾಷನೇಬಲ್, ನಲವತ್ತು ನಲವತ್ತೈದು ವರ್ಷದ ಗಟ್ಟಿ ಮುಟ್ಟಾದ, ಓರ್ವ ಹೆಂಗಸು, ಆರು ಜನ ಗಂಡಸರೊಂದಿಗೆ ನಗೆಯ ಕಾರಂಜಿ ಪುಟಿಸುತ್ತ, ಇಸ್ಪೇಟ್ ಆಡುವಲ್ಲಿ ಮಗ್ನಳಾಗಿದ್ದಳು.

ಹದಿನೇಳು ವರ್ಷ ದಿಲ್ಲಿಯಲ್ಲಿದ್ದ ಛಮ್ಮಿಬೇಗಂ, ಈ ಹೊಸ ಹೈಸೊಸೈಟಿ ಮತ್ತು ಆಧುನಿಕ ಹಿಂದೂಸ್ತಾನಿ ಮಹಿಳೆಯರ ಅಲ್ಟ್ರಾಮಾಡರ್ನ್ ಜೀವನದೊಂದಿಗೆ ಪರಿಚಿತಳಾಗಿದ್ದಳು...ಅಂತೆಯೇ ಛಮ್ಮಿಬೇಗಂ ಶಾಂತಳಾಗಿ ಹುಲ್ಲಿನ ಮೇಲೆ ಹಾಯಾಗಿ ಅಡ್ಡಾಡುತ್ತಲಿದ್ದಳು...ಕೆಲಕ್ಷಣಗಳ ನಂತರ ಆ ಹೆಂಗಸು ತಲೆಯೆತ್ತಿ ಹೊರಗೆ ಅಡ್ಡಾಡು ತ್ತಿದ್ದ ಛಮ್ಮಿಬೇಗಂಳನ್ನು ಆಸಕ್ತಿಯಿಂದ ನೋಡಿದಳು...ಕೆಲ ಹೊತ್ತಿನ ನಂತರ ಮತ್ತೆ ನೋಡಿದಳು...ತನ್ನೊಂದಿಗಿದ್ದವನಿಗೆ ಏನೋ ಹೇಳಿದಳು...ಅವನು ಎದ್ದು ತನ್ನತ್ತ ಬರುತ್ತಿರುವುದನ್ನು ಛಮ್ಮಿಬೇಗಂ ಗಮನಿಸಿದಳು...ಅವನು ಆಕೆಯ ಸಮೀಪ ಬಂದು–''ಹಿರಿಯರೆ, ಇತ್ತ ಕೊಂಚ ಬರುವಿರಾ.....''ಎಂದ.

ಛಮ್ಮಿಬೇಗಂ ಅವನೊಂದಿಗೆ ಬಂದಳು...ಆ ಅಪರಿಚಿತ ಮಹಿಳೆ 'ಈ ಮಗು ಯಾರದು ?' ಎಂದು ಕೇಳಿದಳು...ಅದರೊಂದಿಗೆ ನೀನು ಯಾರ ಮನೆಯಲ್ಲಿ ನೌಕರಿ ಮಾಡುತ್ತಿರುವೆ...? ಎಂದೂ ಪ್ರಶ್ನಿಸಿದಳು...ಛಮ್ಮಿಬೇಗಂ ಎಲ್ಲ ವಿವರ ನೀಡಿದಾಗ ಆ ಅಪರಿಚಿತ ಮಹಿಳೆ...ತಾನು ಮುಂಬೈಯಲ್ಲಿರುವುದಾಗಿಯೂ...ಆಕೆಗೂ ಓರ್ವ ಯೋಗ್ಯ ಹಿರಿಯ ಮಹಿಳೆಯ ಅವಶ್ಯಕತೆ ಇರುವುದಾಗಿಯೂ ಹೇಳಿದಳು...ನಿಮ್ಮ ಹಾಗೆ ಯಾರಾದರೂ ಇದ್ದರೆ ಹೇಳಿ...ಎಂದೂ ಕೇಳಿಕೊಂಡಳು...ಛಮ್ಮಿಬೇಗಂ ಈ ಮಾತು ಕೇಳಿದ ತಕ್ಷಣ ಅಲ್ಲಾನ ಕರುಣೆಯ ಪ್ರಶಂಸೆ ಮಾಡುತ್ತ ಪ್ರಾರ್ಥಿಸಿದಳು... ಒಂದು ಮನೆಯ ಬಾಗಿಲು ಮುಚ್ಚುತ್ತಿರುವಂತೆ ಇನ್ನೊಂದು ಮನೆಯ ಬಾಗಿಲು ತೆರೆಯುವಂತೆಯೂ ಅಲ್ಲಾ ಮಾಡುತ್ತಾನೆ... ಎಂದು ಕೊಂಡಳು...ಕೂಡಲೇ ಛಮ್ಮಿ ಬೇಗಂ ಆ ಅಪರಿಚಿತ ಮಹಿಳೆಗೆ ಹೇಳಿದಳು.... ತಾನು ಈಗಿರುವ ನೌಕರಿಯಿಂದ ಬಹಳ ಜಲ್ದಿ ಮುಕ್ತಳಾಗಲಿದ್ದೇನೆ...... ''ನನ್ನ ಯಜಮಾನಿ ಇನ್ನೇನು ಹೊರಗೆ ಬರಲಿದ್ದಾಳೆ... ಅವರೊಂದಿಗೆ ಮಾತಾಡಿ...'' ಎಂದು ಹೇಳುತ್ತ ಆಕೆ ಬೇಗಂ ರಾಶಿದ್‌ರ ನಿರೀಕ್ಷೆಯಲ್ಲಿ ಅಲ್ಲಿಯೇ ಒಂದೆಡೆ ಕಾಯುತ್ತಲಿದ್ದಳು...ಬೇಗಂ ರಾಶಿದ್ ಲಂಚ್ ಹಾಲ್‌ದಿಂದ ಹೊರಗೆ ಬಂದ ಕೂಡಲೇ ಈ ಅಪರಿಚಿತ ಮಹಿಳೆ ಎದ್ದು ಬಂದು ತನ್ನ ಪರಿಚಯ ಮಾಡಿಕೊಂಡಳು. ತನ್ನ ಹೆಸರು ಮಿಸೆಸ್ ರಜಿಯಾಬಾನು ಎಂದು ಹೇಳುತ್ತ.. ಛಮ್ಮಿಬೇಗಂಳ ಬಗ್ಗೆ ಆಕೆಯ ಜೊತೆ ಮಾತ ನಾಡಿದಳು...ಈ ವಿಷಯ ತಿಳಿದು ಬೇಗಂ ರಾಶಿದ್ ಕೂಡ ತುಂಬ ಸಂತೋಷ ಪಟ್ಟಳು...ವಾಷಿಂಗ್‌ಟನ್‌ಗೆ ಹೋಗುವ ಪೂರ್ವದಲ್ಲಿ ಛಮ್ಮಿಬೇಗಂಳನ್ನು ಸ್ವತಃ ಮುಂಬಯಿಗೆ ರೈಲ್ವೆಯಲ್ಲಿ ಕಳಿಸಲಾಗುವುದು... ಎಂದಳು. ರಜಿಯಾಬಾನು ತಾನು ಇಂದೇ ಮುಂಬೈಗೆ ಹೋಗುವುದಾಗಿ ಹೇಳುತ್ತ ತನ್ನ ಮನೆಯ ವಿಳಾಸವನ್ನು ಬರೆದು ಛಮ್ಮಿಬೇಗಂಳಿಗೆ ಕೊಟ್ಟಳು...ಆಗ ಬೇಗಂ ರಾಶಿದ್ ''ಚಿಕ್ಕಮ್ಮ ನೀವು ಒಬ್ಬರೇ ಅಷ್ಟು ದೂರದ ಪ್ರಯಾಣ ಮಾಡಬಲ್ಲೀರಾ?'' ಎಂದು ಕೇಳಿದಳು. ಅದಕ್ಕೆ ಛಮ್ಮಿಬೇಗಂ ತಲೆ ಅಲ್ಲಾಡಿಸಿ ಒಪ್ಪಿಗೆ ಸೂಚಿಸಿದಳು... ಛಮ್ಮಿಬೇಗಂಳಿಗೆ ಈಗ ಜೀವನದಲ್ಲಿ ಯಾವ ಮಾತಿಗೂ ''ಇಲ್ಲ, ಒಲ್ಲೆ...'' ಎನ್ನುವ ಅವಶ್ಯಕತೆಯೇ ಉಳಿದಿರಲಿಲ್ಲ...ಆಕೆ ರಜಿಯಾಬಾನುಳೊಂದಿಗೆ ವೇತನ ಕೂಡ ನಿಶ್ಚಯಿಸಲಿಲ್ಲ. ಆಕೆ ಎಲ್ಲ ಕಾಲಕ್ಕೂ ಒಂದು ವೇತನ ನಿಶ್ಚಯ ಮಾಡಿಕೊಂಡಿದ್ದಳು...

ನಲವತ್ತು ರೂಪಾಯಿ ತಿಂಗಳ ಪಗಾರ...ಮತ್ತು ಊಟ...ಈ ನಲವತ್ತು ರೂಪಾಯಿಗಳು ಆಕೆಯ ವ್ಯಕ್ತಿಗತ ಖರ್ಚಿಗೆ...ಅವಶ್ಯಕತೆಗಿಂತ ಹೆಚ್ಚಾಗುತ್ತಿತ್ತು...ಬಟ್ಟೆ ಯಾವಾಗಲೂ ಒಡತಿಯಿಂದ ಸಿಗುತ್ತಿದ್ದವು...ಬಟ್ಟೆ ಬರೆ, ವಸ್ತ್ರ ಒಡವೆ, ಆಸ್ತಿ–ಪಾಸ್ತಿ ಸಂಬಂಧಗಳು, ಪ್ರೀತಿ– ಪ್ರೇಮ, ಸ್ನೇಹ–ಇವೆಲ್ಲ ಅರ್ಥವಿಲ್ಲದವು ಹಾಗೂ ನಾಶವಾಗುವಂಥವುಗಳು– ಎಂಬುದು ಆಕೆಗೆ ಮನವರಿಕೆಯಾಗಿ ಹಲವು ವರ್ಷಗಳೇ ಆಗಿದ್ದವು.

ಬೇಗಂ ರಾಶಿದ್ ಅಲಿ ಮತ್ತು ಛಮ್ಮಿಬೇಗಂ ಹೊರಾಂಗಣದಿಂದ ಕೆಳಗಿಳಿಯ ತೊಡಗಿದಾಗ ರಜಿಯಾಬಾನು ತನ್ನ ವ್ಯಾನಿಟಿ ಬ್ಯಾಗ್ ತೆಗೆದು ಆ ಕೂಡಲೇ ಎರಡುನೂರಐವತ್ತು ರೂಪಾಯಿ ತೆಗೆದು ಛಮ್ಮಿಬೇಗಂಳ ಕೈಗಿಡುತ್ತ ''ಪ್ರವಾಸದ ಮತ್ತು ಇನ್ನುಳಿದ ಖರ್ಚಿಗಾಗಿ'' ಎಂದಳು. ಬೇಗಂ ರಾಶಿದ್‌ಳಿಗೆ ಈಕೆಯ ಔದಾರ್ಯ ಕಂಡು ಅಚ್ಚರಿಯೆನ್ನಿಸಿತು...ಆದರ ಮುಂಬೈಯಲ್ಲಿ ಒಬ್ಬರಿಗಿಂತ ಒಬ್ಬ ಶ್ರೀಮಂತ ಸೇಠಾಣಿಯರಿರುತ್ತಾರೆಂಬುದೂ ಆಕೆಗೆ ಗೊತ್ತಿತ್ತು...ಛಮ್ಮಿಬೇಗಂ ಮೌನವಾಗಿಯೇ ಆ ನೋಟಗಳನ್ನು ತೆಗೆದುಕೊಂಡಳು...ಆಕೆ ಜೀವನದ ಯಾವುದೇ ವಿಚಿತ್ರ ಘಟನೆಗಳ ಬಗ್ಗೆಯೂ ಯೋಚಿಸುವುದನ್ನು ಬಿಟ್ಟು ಬಿಟ್ಟಿದ್ದಳು...ಬಂದಂತೆ ಜೀವನ ಸ್ವೀಕರಿಸುತ್ತ ಹೊರಟಿದ್ದಳು.

ಮಿಸ್ಟರ್ ಮತ್ತು ಮಿಸೆಸ್ ರಾಶಿದ ಅಲಿ ಅಮೇರಿಕಾಕ್ಕೆ ಹೋಗುವ ಎರಡು ದಿನ ಮೊದಲು, ಛಮ್ಮಿಬೇಗಂಳು ರೇಲ್ವೆ ಹತ್ತಿ ಮುಂಬೈ ಕಡೆ ಹೊರಟಳು. ಮುಂಬೈ ಸೆಂಟ್ರಲ್ ತಲುಪಿದಾಗ ಆರಂಭದಲ್ಲಿ ಆಕೆ ಕೊಂಚ ಗಾಬರಿಯಾದಳು...ಏಕೆಂದರೆ ದಿಲ್ಲಿಯ ಶಾಂತವಾದ ವಾತಾವರಣದಲ್ಲಿ ಬಂಗ್ಲೆಯಲ್ಲಿ ಆಕೆ ಸುರಕ್ಷಿತ ಹಾಗೂ ಸುಖಮಯ ಜೀವನ ಕಳೆದಿದ್ದಳು...ಅಲ್ಲಾನ ಹೆಸರು ಜಪಿಸುತ್ತ ಪ್ಲ್ಯಾಟ್ ಫಾರ್ಮದಿಂದ ಹೊರಗೆ ಬಂದಳು...ಕೂಲಿಯ ತಲೆಯ ಮೇಲಿಂದ ತನ್ನ ಟ್ರಂಕ್‌ನ್ನು ಹಾಗೂ ಹಾಸಿಗೆ ಗಂಟನ್ನು ಇಳಿಸಿಕೊಂಡಳು...ಲೋಟಾ, ಕೈ ಬೀಸಣಿಕೆ ಮುಂತಾದವುಗಳನ್ನು ಕೈಯಲ್ಲಿ ಹಿಡಿದು ಕೊಂಡು ಟ್ಯಾಕ್ಸಿ ಹೊಂದಿಸಿಕೊಂಡು ಟ್ಯಾಕ್ಸಿ ಡ್ರೈವರ್ ಸರದಾರಜಿಗೆ ಮನೆಯ ವಿಳಾಸ ಹೇಳಿದಳು–''ಗುಲ್ಜಾರ...ಜಾಡನ್ ರೋಡ....''

ಕೆಲವೇ ಕ್ಷಣಗಳಲ್ಲಿ ಟ್ಯಾಕ್ಸಿ ಬಂದು ಬಹು ಮಹಡಿ ಬಂಗ್ಲೆಯ ಪೋರ್ಟಿಕೋದಲ್ಲಿ ನಿಂತಿತು...ಛಮ್ಮಿಬೇಗಂ ಸರದಾರಜಿಗೆ ಬಾಡಿಗೆ ಕೊಟ್ಟಳು...ದಾರಿಯಲ್ಲಿ ಅವನು ಲೋಕದ ರೀತಿ–ರಿವಾಜಿನ ಮಾತುಗಳನ್ನಾಡುತ್ತ, ಆಕೆಯೊಂದಿಗೆ ವಿಚಾರ ವಿನಿಮಯ ಮಾಡುತ್ತ ಬಂದಿದ್ದ...ಅದೇ ಹೊತ್ತಿಗೆ ಇಬ್ಬರು ಅತ್ಯಂತ ಸ್ಮಾರ್ಟ ಹುಡುಗಿಯರು ಲಿಫ್ಟ್‌ದಿಂದ ಹೊರಬಂದು ಸರದಾರಜಿಯ ಟ್ಯಾಕ್ಸಿಯಲ್ಲಿ ಕುಳಿತರು...ಸರದಾಜಿ ಏನನ್ನೂ ಮಾತಾಡದೆ ತನ್ನ ಟ್ಯಾಕ್ಸಿಯ ಮೀಟರ್ ಪ್ಲೇಟ ಹೊರಳಿಸಿದ....ಹಾಗೂ ಅಲ್ಲಿಂದ ಹೊರ ಹೊರಟ...

ಛಮ್ಮಿಬೇಗಂ ವಿಳಾಸ ತೆಗೆದು ನೋಡಿದಳು...ಹನ್ನೊಂದನೆಯ ಮಹಡಿ, ಫ್ಲ್ಯಾಟ ನಂಬರ ಮೂರು...ಸ್ಟೂಲ ಮೇಲೆ ಕುಳಿತಿದ್ದ ಕಾವಲುಗಾರ ಬೇಸರದಿಂದಲೇ ಎದ್ದು

ಆಕೆಯ ಸಾಮಾನುಗಳನ್ನು ಲಿಫ್ಟ್‌ದಲ್ಲಿರಿಸಿದ. ಲಿಫ್ಟ್ ಆಟೋಮೆಟಿಕ್‌ಯಿತ್ತು... ಛಮ್ಮಿಬೇಗಂ ತುಂಬ ಗಾಬರಿಯಾದಳು...ಕಾವಲುಗಾರ ಜಲ್ದಿ ಒಳಗೆ ಬಂದ...ಆಕೆಯನ್ನು ಹನ್ನೊಂದನೆಯ ಮಹಡಿಗೆ ತಲುಪಿಸಿ ಕೆಳಗೆ ಬಂದ...ಈಗ ಛಮ್ಮಿ ಬೇಗಂ ತನ್ನ ಸಾಮಾನು ತೆಗೆದುಕೊಂಡು ಉದ್ದವಾಗಿದ್ದ ಗ್ಯಾಲರಿಯಲ್ಲಿ ಒಬ್ಬಳೇ ನಿಂತಿದ್ದಳು...ಆಕೆ ಅಲ್ಲಿಯೇ ಇದ್ದ ನಂಬರಿನ ಮೇಲೆ ಕಣ್ಣು ಹಾಯಿಸಿದಳು. ಅದು ನಂಬರ ಮೂರೇ ಆಗಿತ್ತು...ಬಾಗಿಲ ಹತ್ತಿರ ಬಂದು ನೋಡಿದಳು...ಬಾಗಿಲ ನಂತರ ಇನ್ನೊಂದು ಗ್ಲಾಸು ಕೂಡಿಸಿದ ಬಾಗಿಲಿತ್ತು...ಛಮ್ಮಿಬೇಗಂ ಬಾಗಿಲದಲ್ಲಿದ್ದ ಬೆಲ್ ಬಾರಿಸಿದಳು...ಕೆಲ ಕ್ಷಣಗಳ ನಂತರ...ಯಾರೋ ಒಳಗಿನ ಬಾಗಿಲದಲ್ಲಿದ್ದ ಕಿಂಡಿಯ ಮುಖಾಂತರ ನೋಡಿದರು.. ಛಮ್ಮಿಬೇಗಂಳಿಗೆ, ಅವೆಷ್ಟೋ ವರ್ಷಗಳ ನಂತರ, ತನ್ನ ಬಚ್ಚಲು ಮನೆಯ ಕಿಟಕಿಯ ಕೆದರಿದ ಗಾಜು ನೆನಪಾಯಿತು...ಕೆಲ ಸಮಯದ ನಂತರ ಎರಡೂ ಬಾಗಿಲು ತೆರೆದುಕೊಂಡವು...ಸಿಟ್ಟಿನ ಮುಖದ ಓರ್ವ ಗೂರ್ಖಾ ಹೊರ ಬಂದ... ಅವನು ನಿರ್ದಯಿ ಕಣ್ಣುಗಳಿಂದ ಛಮ್ಮಿಬೇಗಂಳನ್ನು ನೋಡಿದ...ಛಮ್ಮಿಬೇಗಂ ಮೊದಲಿಗೆ ಹೆದರಿಕೊಂಡಳು...ಆದರೆ ತಾನೂ ಪಠಾಣವೆಂಬುದನ್ನು ನೆನೆದು ಧೈರ್ಯ ತಂದು ಕೊಂಡು...ತಲೆಯೆತ್ತಿ ಗೂರ್ಖಾಗೆ ಹೇಳಿದಳು–''ಬೇಗಂ ಸಾಹಬಳಿಗೆ ಹೇಳು, ದಿಲ್ಲಿಯಿಂದ ಛಮ್ಮಿಬೇಗಂ ಬಂದಿದ್ದಾಳೆಂದು....''

''ಗೊತ್ತಿದೆ...ನೀನು ದಿಲ್ಲಿಯಿಂದ ಬಂದಿರುವೆ...ಒಳಗೆ ಬಾ...'' ಎಂದು ಗೂರ್ಖಾ ಬೇಜಾರಿನಿಂದಲೇ ಹೇಳಿದ. ಹಾಗೂ ತಾನು ಹೊರಗೆ ಬಂದು ಆಕೆಯ ಸಾಮಾನುಗಳನ್ನೆಲ್ಲ ಹೊತ್ತುಕೊಂಡ.. ಅವನ ಹಿಂದೆ ಹಿಂದೆ ಛಮ್ಮಿಬೇಗಂ ಒಳಗೆ ನಡೆದಳು...ಅವನು ಕೂಡಲೇ ಎರಡೂ ಬಾಗಿಲುಗಳನ್ನು ಹಾಕಿಕೊಂಡ...

ಈಗ ಛಮ್ಮಿಬೇಗಂ, ಒಂದು ಮಂದವಾದ ಬೆಳಕಿರುವ, ಏರ್ ಕಂಡಿಷನ್ಡ್ ವೈಭವಪೂರ್ಣವಾದ ಡ್ರಾಯಿಂಗ್ ರೂಮ್‌ದಲ್ಲಿದ್ದಳು...ಇಂಥ ವೈಭವದ, ಭರ್ಜರಿಯಾದ ಡ್ರಾಯಿಂಗ್ ರೂಮ್ ಸಹಬುದ್ದೀನ ಸಾಹೇಬರ ಬಂಗ್ಲೆಯಲ್ಲಾಗಲಿ ಅಥವಾ ರಾಶಿದ್ ಅಲಿ ಸಾಹೇಬರ ಬಂಗ್ಲೆಯಲ್ಲಾಗಲಿ ಆಕೆ ನೋಡಿರಲಿಲ್ಲ..ಒಂದೆಡೆ ಗೋಡೆಯ ಮೇಲೆ ಕಪ್ಪು ಪರದೆ ಇತ್ತು..ಅದು ಕೊಂಚ ಸರಿದಿತ್ತು. ಅದರ ಹಿಂದೆ ಗೋಡೆಯ ಮೇಲೆ ಸಿನೆಮಾದ ಸಣ್ಣ ಸ್ಕ್ರೀನ್ ಕಾಣಿಸುತ್ತಿತ್ತು... ಕೋಣೆಯ ಇನ್ನೊಂದೆಡೆ ಬಾರ್ ಇತ್ತು...

''ಬೇಗಂ ಸಾಹಬಾ ಇದ್ದಾರೆಯೇ?'' ಎಂದು ವಿಚಾರಿಸಿದಳು.

''ಮೇಮ್ ಸಾಹಬ ನಿದ್ರಿಸುತ್ತಿದ್ದಾರೆ...''

''ಮತ್ತೆ ಸಾಹೇಬರು?''–ನೌಕರಿ ಆರಂಭವಾಗುವ ಮೊದಲು ಮನೆಯ ಒಡೆಯನ ಇಂಟರ್‌ವಿವ್‌ದಿಂದ ಆಕೆ ಸದಾ ಹಿಂಜರಿಯುತ್ತಿದ್ದಳು.

ಆಕೆಯ ಪ್ರಶ್ನೆಗೆ ಗೂರ್ಖಾ ಯಾವ ಉತ್ತರವನ್ನೂ ಕೊಡಲಿಲ್ಲ..ಡ್ರಾಯಿಂಗ್ ರೂಮಿನಿಂದ ಹೊರಟು ಬಂದು ಗ್ಯಾಲರಿಯತ್ತ ಹೋದ...ಛಮ್ಮಿಬೇಗಂ ಅವನ ಹಿಂದೆ ಎರಡೂ ಕಡೆ ನೋಡುತ್ತ ಹೊರಟಳು...ಗ್ಯಾಲರಿಯಲ್ಲಿ ನಾಲ್ಕು ಕೋಣೆಗಳಿದ್ದವು.

ನಾಲ್ಕೂ ಕೋಣೆಗಳ ಬಾಗಿಲು ಮುಚ್ಚಿದ್ದವು...ಇದೊಂದು ಬಹಳ ದೊಡ್ಡದಾದ, ಸುಸಜ್ಜಿತ ಫ್ಲ್ಯಾಟ್ ಆಗಿತ್ತು.

ಮುಂದೆ ಹೋಗಿ ಗ್ಯಾಲರಿ ಎಡಕ್ಕೆ ಹೊರಳಿತ್ತು...ಇಲ್ಲಿ ಅಡುಗೆ ಮನೆ ಮತ್ತು ನೌಕರರಿಗಾಗಿ ಎರಡು ಕೋಣೆಗಳಿದ್ದವು. ಅದರ ಹೊರಗೆ ಬಾಲ್ಕನಿ ಇತ್ತು...ಒಂದು ಸ್ವಚ್ಛವಾದ, ಗಾಳಿ ಬೆಳಕಿರುವ ಕೋಣೆಯೊಳಕ್ಕೆ ಹೋಗಿ ಛಮ್ಮಿಬೇಗಂಳ ಸಾಮಾನ ಇರಿಸಿ ಮೌನವಾಗಿಯೇ ಹೊರಗೆ ಹೊರಟು ಹೋದ.

ಛಮ್ಮಿಬೇಗಂ ತನ್ನ ಕೈಯಲ್ಲಿದ್ದ ಸಾಮಾನುಗಳನ್ನು ಮೇಜಿನ ಮೇಲಿರಿಸಿ ತನ್ನ ಹೊಸ ವಾಸಸ್ಥಾನವನ್ನು ಒಮ್ಮೆ ಸುತ್ತಲೂ ನೋಡಿದಳು...ಮೂಲೆಯಲ್ಲಿ ಒಂದು ಪಲ್ಲಂಗವಿತ್ತು. ಗೋಡೆಯ ಮೇಲೆ ಮೊದಲಿದ್ದ ರಸಿಕ ನೌಕರಳು ಹಚ್ಚಿದ ಸಿನೆಮಾ ನಟಿಯರ ಚಿತ್ರಗಳು ಮುಗುಳ್ನಗುತ್ತಿದ್ದವು. ಕೋಣೆಯಲ್ಲಿಯ ಕಿಟಕಿ ತೆಗೆದಾಗ ಕಣ್ಣೆದುರಿಗೆ ಭೋರ್ಗರೆವ ಸಮುದ್ರ...ನೀಲಿ ಬಣ್ಣದ, ವಿಶಾಲವಾದ ಸಮುದ್ರದಲ್ಲಿ ತೆರೆಗಳ ಆರ್ಭಟ....ಜೀವನ ದಲ್ಲಿಯ ಆಕಸ್ಮಿಕ ಘಟನೆಗಳಂತೆ ಇದೊಂದು ಆಕಸ್ಮಿಕ...ಆಕೆ ಇದಕ್ಕೂ ಮುಂಚೆ ಸಮುದ್ರ ಕಂಡವಳೇ ಅಲ್ಲ...ಭಗವಂತನ ಲೀಲೆಗೆ ಆಕೆ ಮನ ಸೋತು ಹೋದಳು...ಸಮುದ್ರ ದವರೆಗೂ ತಲುಪಿದ್ದೇನೆ....ಅಲ್ಲಾನ ಕರುಣೆಯಿದ್ದರೆ ಹಜ್ ಯಾತ್ರೆಯನ್ನೂ ಮಾಡಿ ಬರುವೆ...ಇದೇ ಸಮುದ್ರದ ಆಚೆಯಲ್ಲಿ ಮಕ್ಕಾ, ಮದೀನಾಗಳಿವೆ...ಹೀಗೆ ಯೋಚಿಸುತ್ತಿರುವಂತೆ ಆಕೆಯ ಹೃದಯ ತುಂಬಿಬಂತು.

ಕೋಣೆಯ ಸಮೀಪವೇ ನೌಕರರ ಬಾತ್‌ರೂಂಗಳಿದ್ದವು. ಛಮ್ಮಿಬೇಗಂ ಟ್ರಂಕ್ ತೆಗೆದಳು...ಬಾತ್‌ರೂಂನಲ್ಲಿ ಹೋದಳು...ತನ್ನ ಆ ಸ್ವಂತ ಮನೆಯ ವಿಶಾಲವಾದ, ಮಬ್ಬುಗತ್ತಲೆಯ ಬಚ್ಚಲು ಮನೆ...ಮನುಷ್ಯ, ಜೀವನದಲ್ಲಿ ಬರುವ ಏರು–ಇಳವು, ಬದಲಾವಣೆಗಳಿಗೆ ಹೊಂದಿಕೊಂಡು ಮುನ್ನಡೆಯುತ್ತಾನೆ.... ಹಾಗೆ ಮಾಡದಿದ್ದಲ್ಲಿ ಆತ ಸತ್ತು ಹೋಗುತ್ತಿದ್ದ...

ಸ್ನಾನ ಮಾಡಿ, ಮಡಿ ಬಟ್ಟೆ ತೊಟ್ಟು ಆಕೆ ತನ್ನ ಕೋಣೆಗೆ ಬಂದಳು...ಇಡೀ ಮನೆ ನಿರ್ಜನವಾಗಿತ್ತು...

ಅಷ್ಟು ಶಾಂತ...ನೌಕರ–ಚಾಕರ ಯಾರ ಗದ್ದಲವೂ ಇಲ್ಲ...ಬಹುಶಃ ಸಾಹೇಬರು ಕಚೇರಿಗೆ ಹೋಗಿರಬೇಕು...ಮಕ್ಕಳು ಸ್ಕೂಲಿಗೆ ಹೋಗಿರಬೇಕು... ಮೇಮ ಸಾಹಬ ನಿದ್ರಿಸುತ್ತಿದ್ದರು...ಮಧ್ಯಾಹ್ನದ ಹೊತ್ತು...ಈಗ ಆಕೆಗೆ ಚಹಾದ ಚಟ ಬಾಧಿಸುತ್ತಿತ್ತು. ಇಡೀ ಆಯುಷ್ಯ ತೀವ್ರವಾದ ಮಾನಸಿಕ ಯಾತನೆಗಳಿಂದ, ಕಷ್ಟ ಕಾರ್ಪಣ್ಯಗಳಿಂದ ಜರ್ಜರಿತಳಾದ ಛಮ್ಮಿಬೇಗಂಳು ನಿತಾಂತ ಶಾಂತಳಾಗಿದ್ದಳು... ಮುಪ್ಪಿನಿಂದಾಗಿ ಅರಳು–ಮರಳುಗಳಿಂದ ಕೂಡಿದ್ದಳು...ಈಗ ಅಡುಗೆ ಮನೆಯಲ್ಲಿ ಹೋಗಿ ಚಹಾ ಮಾಡಬೇಕೆಂದು ಯೋಚಿಸಿದಳು...ಯಾರೂ ಇಲ್ಲದ ಅಡುಗೆ ಮನೆಯೊಳಕ್ಕೆ ಹೋದರೆ ಅಲ್ಲಿ ಗ್ಯಾಸಿನ ಒಲೆ ಕಂಡವು...ಅವುಗಳನ್ನು ಉಪಯೋಗಿಸು ವುದು ಹೇಗೆಂಬುದು ಆಕೆಗೆ ಗೊತ್ತಿರಲಿಲ್ಲ...ಬೇಸರದಿಂದಲೇ ಗ್ಯಾಲರಿಗೆ ಬಂದಳು...

ಅಲ್ಲಿದ್ದ ನಾಲ್ಕು ಕೋಣೆಗಳ ಪೈಕಿ ಒಂದು ತೆರೆದಿತ್ತು. ಅದಕ್ಕೆ ಹಾಕಿದ್ದ ಅತ್ಯಂತ ಬೆಲೆಬಾಳುವ ಕರ್ಟನ್ ಕಾಣಿಸುತ್ತಿತ್ತು.

ಅವಳ ಹೆಜ್ಜೆ ಸಪ್ಪಳ ಕೇಳಿ ಕರ್ಟನ್‌ದ ಹಿಂದಿನಿಂದ ಯಾರೋ ''ಯಾರವರು?'' ಎಂದರು.

''ನಾನು...ಛಮ್ಮಿಬೇಗಂ...ದಿಲ್ಲಿಯಿಂದ ಬಂದಿರುವೆ...'' ಎಂದಳು ಛಮ್ಮಿ ಬೇಗಂ... ''ಓ ! ಬಂದೆಯಾ...ಬಾ...ಒಳಗೆ ಬಾ...'' ಎಂದು ಕರೆದಳು ಒಳಗಿದ್ದವಳು. ಕರ್ಟನ್ ಸರಿಸಿ ಒಳಗೆ ಹೋದಳು...ಅಲ್ಲಿ ಅದ್ಭುತವಾದ ಕನಸಿನ ಲೋಕ ಕಂಡಂತಾಯಿತು ಆಕೆಗೆ. ಅಮೇರಿಕದ ಬಹು ಬೆಲೆಯ ಕಾಟ ಮೇಲೆ ರಜಿಯಾಬಾನು, ಗುಲಾಬಿ ಬಣ್ಣದ, ನೈಲಾನ ನೈಟ್ ಗೌನ್‌ದಲ್ಲಿ ಅರೆ ನಿದ್ರೆಯಲ್ಲಿದ್ದಳು. ಬೆರಳುಗಳಲ್ಲಿ ಸಿಗರೇಟ ಉರಿಯುತ್ತಲಿತ್ತು...ಛಮ್ಮಿಬೇಗಂಳಿಗೆ ಪಾರದರ್ಶಕ ವಸ್ತ್ರದಲ್ಲಿ ಅರೆನಗ್ನಾವಸ್ಥೆ ಹಿಡಿಸಲಿಲ್ಲ...ಅವರವರ ರೀತಿ–ರಿವಾಜು.... ಈ ನಗರದ ಬಣ್ಣವೇ ಹೀಗಿರಬೇಕೆಂದು ಸುಮ್ಮನಾದಳು...ರಜಿಯಾಬಾನು ಸಿಗರೇಟ ಸೇದುವುದು ಕೂಡ ಆಕೆಗೆ ಸರಿಯೆನ್ನಿಸ ಲಿಲ್ಲ...ಬೇಗಂ ಸಹಬುದ್ದೀನ ಮತ್ತು ಬೇಗಂ ರಾಶಿದ್ ಇಬ್ಬರೂ ಸಿಗರೇಟ ಸೇದುತ್ತಿರ ಲಿಲ್ಲ...ಆದರೂ ಆಕೆ ಪದ್ಧತಿಯಂತೆ, ವಿನಯಪೂರ್ವಕ–''ಅಸ್ಸಲಾಮು ಆಲೆಕುಮ್'' ಎಂದಳು.

''ಆಜಾವ್...ಬಾಬಾ...ಬುವಾ...ಕೂತುಕೊ...'' ಎಂದು ರಜಿಯಾಬಾನು ನೆಲದ ಕಡೆ ಸನ್ನೆ ಮಾಡಿದಳು...ಛಮ್ಮಿಬೇಗಂ ಬುರ್ಕಾ ಹಾಕಿಕೊಂಡು ದಿನದ ಊಟ ಸಂಪಾದನೆಗಾಗಿ ಅಜ್ಜ ತಂದೆಯ ಮನೆಯ ಹೊಸಲು ದಾಟಿ ಎಂದು ಹೊರ ಹೊರಟಳೋ ಅಂದಿನಿಂದ ಯಾರೂ ಆಕೆಗೆ 'ಬುವಾ' ಎಂದು ಕರೆದಿರಲಿಲ್ಲ. ಸಹಬುದ್ದೀನ ಸಾಬ ಮತ್ತು ರಾಷಿದ್ ಸಾಬ ಇಬ್ಬರಲ್ಲಿಯೂ ಆಕೆಗೆ ''ಛಮ್ಮಿಖಾಲಾ'' ಅಥವಾ ''ಖಾಲಾ'' ಎಂದು ಕರೆಯುತ್ತಿದ್ದರು.... ಆಕೆ ಅಚ್ಚರಿಯಿಂದ ಗೋಡೆಗೆ ತಾಗಿ ನಿಂತುಕೊಂಡಳು. ರಜಿಯಾಬಾನುಳ ತಲೆದಿಂಬಿನ ಹತ್ತಿರ ಎರಡು ಟೆಲಿಫೋನ್ ಗಳಿದ್ದವು.... ಒಂದು ಬಿಳಿಯದು.... ಇನ್ನೊಂದು ಕೆಂಪು ಬಣ್ಣದ್ದು.... ಬಿಳಿಯದರ ರಿಂಗ್ ಆಯಿತು.... ರಜಿಯಾಬಾನು ರಿಸೀವರ್ ಎತ್ತಿಕೊಂಡು ಇಂಗ್ಲೀಷನಲ್ಲಿ ಮೆಲ್ಲನೆ ಮಾತನಾಡಿದಳು.... ಕೈ ಚಾಚಿ ಪಕ್ಕದಲ್ಲಿದ್ದ ಟೇಬಲ್ ಮೇಲಿಂದ ಒಂದು ದೊಡ್ಡ ನೋಟಬುಕ್ ಎತ್ತಿಕೊಂಡಳು.... ಅದರಲ್ಲಿ ಏನೋ ಬರೆದಳು.... ಮತ್ತೇ ರಿಸೀವರ್ ಇಟ್ಟು ಕೆಂಪು ಬಣ್ಣದ ಟೆಲಿಫೋನ್‌ದಲ್ಲಿ ನಂಬರ ಕೂಡಿಸಿ ಮೆಲ್ಲನೆ– ''ಮಾಧು.... ನಂಬರ ನಾಲ್ಕು...ನೈನ್ ಥರ್ಟಿ....'' ಎಂದು ಹೇಳುತ್ತ ಫೋನ್ ಬಂದ್ ಮಾಡಿದಳು.... ಛಮ್ಮಿಬೇಗಂ ಮೌನವಾಗಿ ಕೋಣೆಯ ಅಂದ ಚೆಂದ ಛತ್ ನೋಡುತ್ತಿಲಿದ್ದಳು.... ದೊಡ್ಡ ದೊಡ್ಡ ಚಿತ್ರಗಳು.... ರೇಡಿಯೋ ಗ್ರಾಮ್.... ಬೆಳ್ಳಗಿನ ವಾರ್ಡ್‌ರೋಬ..... ಅಷ್ಟರಲ್ಲಿ ಪರದಾ ವಾರಿಗೆ ಸರಿಸಿ ಓರ್ವ ತರುಣಿ ಹೌಸ್ ಕೋಟ್ ತೊಟ್ಟು ಒಳಗೆ ಬಂದಳು.... ಗ್ಯಾಲರಿಯಲ್ಲಿ ಮುಚ್ಚಿದ್ದ ಒಂದು ಕೋಣೆಯ ಬಾಗಿಲು ತೆರೆಯಿತು.... ಕೋಣೆಯಲ್ಲಿಂದ ಜೋರಾಗಿ ''ಹಾಯ್ ಫಾಯ್'' ಎನ್ನುವ

ಸಪ್ಪಳ ಕೇಳಿಬಂತು. ಹುಡುಗಿ ರಜಿಯಾಬಾನುಗೆ ಏನೋ ಹೇಳಿ ಬಂದಂತೆ ಹೊರಟು ಹೋದಳು.... ಗ್ಯಾಲರಿಯಲ್ಲಿಯ ಬಾಗಿಲು ಮತ್ತೆ ಮುಚ್ಚಿ ಕೊಂಡಿತು.

''ದೇವರ ಕರುಣೆಯಿರಲಿ.... ಎಷ್ಟು ಮಂದಿ ಮಕ್ಕಳು....'' ಎಂದು ಛಮ್ಮಿ ಬೇಗಂ ವಿಚಾರಿಸಿದಳು.

''ನನಗಾವ ಮಕ್ಕಳೂ ಇಲ್ಲ.... ಇವರೆಲ್ಲ ನನ್ನ ಸೊಸೆಯಂದಿರು.... ನನ್ನಲ್ಲಿಯೇ ಇರುತ್ತಾರೆ....'' ಎಂದು ಸಂಕ್ಷಿಪ್ತವಾಗಿ ಹೇಳಿ ರಜಿಯಾಬಾನು ಮತ್ತೆ ಆ ನೋಟುಬುಕ್ ತೆರೆದಳು....

''ಕಾಲೇಜಿನಲ್ಲಿ ಓದುತ್ತಿರಬೇಕು....'' ಎಂದಳು ಛಮ್ಮಿಬೇಗಂ.

''ಯಾರು ?''

''ನಿಮ್ಮ ಸೊಸೆಯಂದಿರು....''

''ಹುಂ ! ಹೌದು....''

''ಅಲ್ಲಾನ ಕರುಣೆಯಿರಲಿ.... ನಿಮ್ಮ ಮನೆಯವರು ಬಿಜಿನೆಸ್ ಮಾಡುತ್ತಿರಬೇಕು....'' ಎಂದಳು. ಛಮ್ಮಿಬೇಗಂಳಿಗೆ ಮುಂಬೈಯನಲ್ಲಿರುವವರೆಲ್ಲ ಬಿಜಿನೆಸ್ ಮಾಡುತ್ತಿರುವುದಾಗಿ ತಿಳಿದುಕೊಂಡಿದ್ದಳು.

''ಹಾಂ !.... ಏನಂದೆ....?'' ರಜಿಯಾಬಾನು ನೋಟ್‌ಬುಕ್‌ನಿಂದ ತಲೆಯೆತ್ತಿ ಕೊಂಚ ಸಿಡುಕಿನಿಂದಲೇ ಕೇಳುತ್ತ ''ಗಂಡ....? ಸತ್ತು ಹೋದ....'' ಎಂದಳು.

''ಅಯ್ಯೋ ದೇವರೆ....'' ಛಮ್ಮಿಬೇಗಂಳ ಬಾಯಿಂದ ಹೊರಟಿತು.... ಈ ಮಾತಿನಿಂದ ಅಜ್ಜೂಭಾಯಿಗೆ ದೇವರು ಕರುಣಿಸಿದ ಸಾವಿನ ಗಾಯ ಮತ್ತೆ ಹಚ್ಚ ಹಸಿರಾಯಿತು.... ಸಾವಿನ ಸುದ್ದಿ ಕೇಳಿದಾಗಲೆಲ್ಲ ಆಕೆಗೆ ಅಜ್ಜೂಭಾಯಿಯ ಸಾವಿನ ನೋವು ಮತ್ತೆ ಹಸಿರಾಗುತ್ತಿತ್ತು.... ಛಮ್ಮಿಬೇಗಂ ತನ್ನ ಇಡೀ ಜೀವನವನ್ನು ದುಃಖ, ದುಮ್ಮಾನದಲ್ಲಿದ್ದು ಹೇಗೆ ಕಳೆದಳೆಂಬುದು ಯಾರಿಗೆ ಗೊತ್ತು.... ಏನೆಲ್ಲ ಸಹಿಸಿದಳು.... ಆಕೆ.... ಸಹನೆ.... ಸಹನೆ.... ಅದ್ಭುತ ಸಹನೆ ಆಕೆಯದು.

ಚೂಡಿದಾರ ಪೈಜಾಮಾ ತೊಟ್ಟ ಇನ್ನೋರ್ವ ಥಳಕಿನ ತರುಣಿ ತೆರೆಗಳ ಹಾಗೆ ಬಳುಕುತ್ತ ಕೋಣೆಯಲ್ಲಿ ಬಂದಳು. ರಜಿಯಾಬೇಗಂ ಇಂಗ್ಲೀಷಿನಲ್ಲಿ ಆಕೆಗೆ ಏನೋ ಹೇಳಿದಳು. ಹುಡುಗಿ ಅದೇ ರೀತಿ ಬಳುಕುತ್ತ ಮುಗುಳ್ನಗುತ್ತ ಹೊರಗೆ ಹೋದಳು.... ಈಗ ರಜಿಯಾಬಾನು ಛಮ್ಮಿಬೇಗಂಳತ್ತ ದೃಷ್ಟಿ ಹಾಯಿಸಿದಳು.... ಆಕೆಗೆ ನೋಡಿದರೆ ಚಹಾದ ಚಟ ವಿಪರೀತವಾಗುತ್ತಲಿತ್ತು.... ರಜಿಯಾಬಾನು ಒಂದು ದಿಂಬು ತೆಗೆದು ಕೊಂಡು ತೊಡೆಯ ಮೇಲಿಟ್ಟು ಅದರ ಮೇಲೆ ಮೊಣಕೈ ಊರಿ ಮಾತಾಡ ತೊಡಗಿದಳು.... ''ಬುವಾ (ಛಮ್ಮಿಬೇಗಂ ಮತ್ತೆ ಬೇಸರಿಸಿದಳು) ನನ್ನಲ್ಲಿಗೆ ಬಂದು ನೀವು ತುಂಬ ಒಳ್ಳೆಯದನ್ನು ಮಾಡಿದೆ.... ನಾನು ಮೊದಲ ನೋಟದಲ್ಲಿಯೇ ಕಂಡುಕೊಂಡೆ ನೀವೊಬ್ಬ ಆಶ್ರಯವಿಲ್ಲದವರು ಹಾಗೂ ತುಂಬ ದುಃಖಿತರು ಎಂದು.... ಇನ್ನು ಮೇಲೆ

ನೀವು ಈ ಮನೆಯನ್ನು ನಿಮ್ಮ ಮನೆಯೆಂದೇ ತಿಳಿದು ಇಲ್ಲಿರಿ.... ಈ ಮನೆಯಲ್ಲಿ ಯಾರಾದರೂ ಹಿರಿಯ ಬಿಬಿ ನಮಾಜ ಮಾಡುತ್ತ ಕುರಾನ್ ಷರೀಫ್ ಓದುತ್ತಲಿರಬೇಕೆಂದು ನಾನು ಸದಾ ಬಯಸುತ್ತಲಿದ್ದೆ.... ಹಲವು ವರ್ಷಗಳಿಂದ ನನ್ನಲ್ಲಿ ಹೈದರಾಬಾದಿನ ಹಿರಿಯ ಬಿಬಿ ಇದ್ದಳು. ಕಳೆದ ವರ್ಷ ಹಜ್ ಯಾತ್ರೆಗೆ ಹೋದಳು.... ಅಲ್ಲಿಯೇ ಮೃತಳಾದಳು....'' ರಜಿಯಾಬಾನು ಮಾತಿನ ವಿಷಯ ಬದಲಿಸಿ ಮತ್ತೆ ಮಾತು ಆರಂಭಿಸಿದಳು.... ''ಬುವಾ, ಈ ಮುಂಬೈ ನಗರವಿದೆಯಲ್ಲ.... ಬಹಳ ವಿಚಿತ್ರ ನಗರ.... ಇಲ್ಲಿ ತರಹ ತರಹದ ಜನ, ತರ ತರಹದ ಮಾತು.... ಯಾವ ಮಾತನ್ನೂ ಕಿವಿಯ ಮೇಲೆ ಹಾಕಿಕೊಳ್ಳಬೇಡಿ.... ನಿಮ್ಮ ಕೆಲಸವೇನೋ ನೀವೇನೋ.... ಬಸ್.... ಕಿಚನ್‌ದ ವ್ಯವಸ್ಥೆ ನೋಡಿಕೊಳ್ಳಿ.... ಉಳಿದ ಸಮಯವನ್ನೆಲ್ಲ ನಮಾಜ ಮಾಡುವಲ್ಲಿ, ವ್ರತಾಚರಣೆಯಲ್ಲಿ ಕಳೆಯಿರಿ.... ಈಗ ನಿಮಗೆ ಪರಿಶ್ರಮವಲ್ಲ ಆರಾಮದ, ವಿಶ್ರಾಂತಿಯ ಅವಶ್ಯಕತೆಯಿದೆ. ಕುರಾನ್ ಷರೀಫ್ ಓದಿ.... ನನಗಾಗಿ ಪ್ರಾರ್ಥನೆ ಮಾಡಿ.... ನನ್ನ ಒಳಿತಿಗಾಗಿ ಪ್ರಾರ್ಥಿಸಿ.... ನನ್ನ ಸೊಸೆಯರ, ಈ ಹುಡುಗಿಯರ ಯೋಗಕ್ಷೇಮ ನೋಡಿಕೊಳ್ಳಲು ಇನ್ನೋರ್ವ ಆಯಾ ಇದ್ದಾಳೆ.... ಇಬ್ರಾಹಿಮ್ ಅಡುಗೆ ಮಾಡಲಿದ್ದಾನೆ.... ಬಿಷನ್‌ಸಿಂಗ್ ಗೂರ್ಖಾ ಇದ್ದಾನೆ.... ಮಾಧು ನನ್ನ ಡ್ರೈವರ್.... ಆದರೆ ಒಂದು ಮಾತು..... ಯಾರದೇ ಸಂಬಂಧದಲ್ಲಿ ಕೈ ಹಾಕಬೇಡಿ.... ಜಗಳಗಿಗಳದಲ್ಲಿ ತಲೆ ಹಾಕಬೇಡಿ....''

''ನಾನು ಸ್ವತಃ....'' ಛಮ್ಮಿಬೇಗಂ ಏನನ್ನೋ ಹೇಳ ಹೊರಟಿದ್ದಳು.... ಆದರೆ ಆಕೆಯ ಮಾತಿನ ಮಧ್ಯದಲ್ಲಿಯೇ ರಜಿಯಾಬಾನು ಹೇಳತೊಡಗಿದಳು– ''ಅಲ್ಲಾನ ದಯೆಯಿಂದ ನನ್ನ ಬಿಜಿನೆಸ್ ಭರ್ಜರಿಯಾಗಿದೆ....'' ಎನ್ನುತ್ತ ನಡುವೆ ಸ್ವಲ್ಪ ತಡೆದು ಮತ್ತೆ ಹೇಳತೊಡಗಿದಳು– ''ಎಕ್ಸಪೋರ್ಟ ಇಂಪೋರ್ಟ ಬಿಜಿನೆಸ್.... ಗೊತ್ತೇನು?.... ಎಕ್ಸಪೋರ್ಟ ಇಂಪೋರ್ಟ....?''

''ಹಾಂ ! ಗೊತ್ತು...'' ಎಂದು ತಲೆ ಅಲ್ಲಾಡಿಸಿದಳು.... ಛಮ್ಮಿಬೇಗಂ.... ಸಹ ಬುದ್ದೀನಸಾಬ ವ್ಯಾಪಾರ ಉದ್ಯೋಗ ಇಲಾಖೆಯಲ್ಲಿ ದೊಡ್ಡ ಅಧಿಕಾರಿ ಗಳಾಗಿದ್ದರು.... ಇಂಥ ಶಬ್ದಗಳು ಅವರಲ್ಲಿದ್ದಾಗ ಛಮ್ಮಿಬೇಗಂಳ ಕಿವಿಗೆ ಆಗಾಗ ಕೇಳಿಸುತ್ತಿದ್ದವು.... ರಜಿಯಾಬಾನು, ಛಮ್ಮಿಬೇಗಂಳಿಗೆ ತುಂಬ ಒಳ್ಳೆಯ, ತಿಳುವಳಿಕೆಯ ಮತ್ತು ಪರಿಶುದ್ಧ ಮಹಿಳೆಯಾಗಿ ತೋರಿದಳು.... ಇಷ್ಟೊಂದು ದೈವ ಭೀರು.... ಎಂದು ಪ್ರಶಂಸಿದಳು.... ಛಮ್ಮಿಬೇಗಂ ಆಗಲೇ ಆಕೆಯ ನಾಜೂಕು, ಪಾರದರ್ಶಕ ನೈಟ್‌ಗೌನ್ ಮತ್ತು ಸಿಗರೇಟ ಚಟ ಎಲ್ಲ ಕ್ಷಮಿಸಿ ಬಿಟ್ಟಳು....

''ನಾನು ಹೆಣ್ಣು ಹೆಂಗಸು.... ಇಷ್ಟು ದೊಡ್ಡ ಕಾರೋಬಾರ ನಡೆಸುತ್ತಿದ್ದೇನೆ. ಇದಕ್ಕಾಗಿ ನಾನಾ ರೀತಿಯ ಜನರನ್ನು ಕಾಣಬೇಕಾಗುತ್ತದೆ. ಸೊಸೆಯರೂ ಈ ಕಾಲದ ಹುಡುಗಿಯರು. ಅವರ ಗೆಳೆಯರು, ಮಿತ್ರರು ಬರುತ್ತ ಹೋಗುತ್ತಿರುತ್ತಾರೆ. ನನ್ನೀ ವ್ಯವಹಾರಕ್ಕಾಗಿ ಎರಡು ಸಲ ಪೋಲೀಸರು ರೇಡ್ ಮಾಡಿದ್ದಾರೆ''.

"ಪೋಲೀಸ್ ?" ಛಮ್ಮಿಬೇಗಂ ಕೊಂಚ ಹೆದರಿಕೆಯಿಂದ ಉಚ್ಚರಿಸಿದಳು. ರಜಿಯಾಬಾನು ಅವಳ ಹೆದರಿಕೆಗಾಗಿ ನಕ್ಕಳು. "ಹೆದರಬೇಡಿ, ಇಲ್ಲಿ ದೊಡ್ಡ ದೊಡ್ಡ ವ್ಯಾಪಾರಸ್ಥರಿಗೆ ಪೋಲಿಸ್ ಮತ್ತು ಇನ್‌ಕಂಟ್ಯಾಕ್ಸ್ ಜನ ಮೇಲಿಂದ ಮೇಲೆ ತೊಂದರೆ ಕೊಡುತ್ತಾರೆ. ನಾನು ಏಕಾಕಿ ಹೆಂಗಸು. ಹತ್ತಾರು ವೈರಿಗಳು ಹುಟ್ಟಿಕೊಂಡಿದ್ದಾರೆ. ಯಾರೋ ಹೋಗಿ ನಾನು ಇನ್‌ಕಂಟ್ಯಾಕ್ಸ್ ತುಂಬಲಿಲ್ಲವೆಂದು ಪೋಲೀಸ್‌ರಿಗೆ ಹೇಳಿದರು, ಸರಿ ರೇಡ್ ಮಾಡಿದರು. ಅದಕ್ಕಾಗಿಯೇ ನಾನು ಹೊರಗೆ ಕಬ್ಬಿಣದ ಬಾಗಿಲು ಹಚ್ಚಿಸಿರುವೆ. ನಿಮಗೆ ಹೇಳುವುದೇನೆಂದರೆ ಹೊರಗೆ ಬೆಲ್ ಆದರೆ ನೀವು ಮೊದಲು ಬಾಗಿಲಿನಲ್ಲಿರುವ ತೂತಿನಲ್ಲಿ ನೋಡಿ, ಯಾರೆಂಬುದನ್ನು ಕಂಡುಕೊಳ್ಳಿ. ಕೆಲವು ಸಲ ಈ ಪೋಲಿಸರು ಕೂಡ ಸಾದಾ ಡ್ರೆಸ್‌ನಲ್ಲಿಯೂ ಬರುತ್ತಾರೆ".

ಛಮ್ಮಿಬೇಗಂ ಪ್ರವಾಸದ ದಣಿವು ಹಾಗೂ ಚಹಾದ ಚಟದಿಂದ ಚಡಪಡಿಸ ತೊಡಗಿದ್ದಳು. ಎದ್ದು ಕೇಳಿದಳು– "ಬಿಬಿ, ಗ್ಯಾಸಿನ ಒಲೆ ಹಚ್ಚುವುದು ಹೇಗೆ ?" ಎಂದು.

ರಜಿಯಾಬಾನು ಪಕ್ಕದಲ್ಲಿಯೇ ಇದ್ದ ಬಟನ್ ಒತ್ತಿದಳು. ಒಂದೇ ಕ್ಷಣದಲ್ಲಿ ಇಬ್ರಾಹಿಮ ಬಾಗಿಲಲ್ಲಿ ಹಾಜರಾದ.

"ಇಬ್ರಾಹಿಮ್.... ಇವರು ನಮ್ಮ ಹೊಸ ಬುವಾ.... ಅವರಿಗೆ ಚಹಾ ಮಾಡಿಕೊಂಡು ಬಾ. ಝಟ್‌ಪಟ್...."

ಛಮ್ಮಿಬೇಗಂ ಅಲ್ಲಿಂದ ಜಲ್ದಿ ಎದ್ದು ಇಬ್ರಾಹಿಮ್‌ನ ಹಿಂದೆ ಕಿಚನ್ ಕಡೆ ಹೊರಟಳು.

ಬೆಳಗಿನ, ಮಧ್ಯಾಹ್ನದ, ಸೂರ್ಯಾಸ್ತದ ಎಲ್ಲ ನಮಾಜ ಓದಿ, ಆಕೆ ಬಾಲ್ಕನಿಯಲ್ಲಿ ಹೋಗಿ ನಿಂತಳು. ಮನೆಯಲ್ಲಿ ಮಾಡಲು ಆಕೆಗೆ ಯಾವ ಕೆಲಸವೂ ಇಲ್ಲ. ರಜಿಯಾಬಾನು ಹೊರಗೆ ಹೋಗಿದ್ದಳು. ಇಬ್ಬರು ಸೊಸೆಯಂದಿರ ಕೋಣೆಯಲ್ಲಿ ಬೆಳಕಿತ್ತು. ಮೂರನೆಯ ಸೊಸೆಯೂ ಮನೆಯಲ್ಲಿರಲಿಲ್ಲ. ಮೂರು ನಾಲ್ಕು ಜನ ಚಾಕರರು ಕೂಡ ಫ್ಲ್ಯಾಟ್‌ನಲ್ಲಿರಲಿಲ್ಲ. ಬೆಲ್ ಬಾರಿಸುತ್ತಲಿದ್ದವರು ಒಂದೇ ಸವನೆ ಬಾರಿಸುತ್ತಲೇ ಇದ್ದರು. ಛಮ್ಮಿಬೇಗಂ ದಿಲ್ಲಿಯಲ್ಲಿ ಮಾಡಿದಂತೆ ಆ ಕೂಡಲೇ ಬಾಗಿಲು ತೆಗೆಯಲು ಡ್ರಾಯಿಂಗ್ ರೂಮಿನತ್ತ ನಡೆದಳು, ಹಾಗೂ ಒಳಗಿನ ಬಾಗಿಲು ತರೆದಳು. ಹೊರಗಿನ ಬಾಗಿಲು ಈ ಮೊದಲೇ ಅರ್ಧದಷ್ಟು ಸರಿಸಿದ್ದರು. ದಿಲ್ಲಿಯಲ್ಲಿ ಸಹಬುದ್ದೀನ ಸಾಬ ಮತ್ತು ರಾಶಿದ್ ಸಾಬರ ಕೋಠಿಗಳಲ್ಲಿದ್ದಾಗ ಮಾಡಿದಂತೆ ಇಲ್ಲಿಯೂ ತುಂಬ ಗೌರವದಿಂದ ಡ್ರಾಯಿಂಗ್ ರೂಮಿನಲ್ಲಿ ಬಂದವರನ್ನು ಒಳಗೆ ಬರಲು, ಕೂಡಲು ಹೇಳಿದಳು.

ಇಬ್ಬರು ಮಾರ್ವಾಡಿಗಳು ಓರ್ವ ಶ್ರೀಮಂತ ತರುಣ ಒಳಗೆ ಬಂದರು. ಶ್ರೀಮಂತ ತರುಣ ನೇರವಾಗಿ ಬಾರ್‌ನತ್ತ ಹೋದ. ಮಾರ್ವಾಡಿ ಧಪ್ಪೆಂದು ಸೋಫಾದಲ್ಲಿ ಕುಳಿತರು. ಇಂಥ ವ್ಯಾಪಾರಿ ಜನ ಸಹಬುದ್ದೀನ ಸಾಹೇಬರಲ್ಲಿಯೂ

ಬರುತ್ತಿದ್ದರು ತಮ್ಮ ಕೆಲಸಕ್ಕಾಗಿ. ಆದರೆ ತರುಣನನ್ನು ಕಂಡು ಆಕೆಗೆ ಕೊಂಚ ಅಚ್ಚರಿಯಾಯಿತು. ಮತ್ತೆ ಯೋಚಿಸಿದಳು. ಈ ನಗರದ ರೀತಿ–ನೀತಿ ಹೀಗೆಯೇ ಇರಬೇಕೆಂದು. ಆಕೆ ಇವರಿಗೆ ಚಹಾಕ್ಕಾಗಿ, ಕಾಫಿಗಾಗಿ ಕೇಳಬೇಕೆನ್ನುತ್ತಿರುವಾಗಲೇ ಬಂಗಾರದ ಬಟನ್ ಹಾಕಿದ ವಜ್ರದ ಉಂಗುರ ಇಟ್ಟಿದ್ದ ಮಾರವಾಡಿ ಆರ್ಭಟಿಸಿದ ''ಮೇಡಂ ಎಲ್ಲಿದ್ದಾರೆ ?''

ಛಮ್ಮಿಬೇಗಂಳಿಗೆ ಇಂಗ್ಲೀಷಿನಲ್ಲಿ ಬೇಗಂಗೆ ಮೇಡಂ ಎನ್ನುತ್ತಾರೆಂಬುದು ಗೊತ್ತಿತ್ತು. ತುಂಬ ವಿನಯದಿಂದ ಉತ್ತರಿಸಿದಳು–

''ಮೇಡಂ ಹೊರಗೆ ಹೋಗಿದ್ದಾರೆ.''

''ಬದ್ಮಾಷ, ಈ ಹುಡುಗಿಯರೆಲ್ಲ ಎಲ್ಲಿದ್ದಾರೆ?'' ಈ ಮಾತು ಕೇಳಿ ಛಮ್ಮಿ ಬೇಗಂಳಿಗೆ ವಿಪರೀತ ರೇಗಿತು. ಮುಂಬೈಯಲ್ಲಿ ಸಂಸ್ಕೃತಿ, ಸುಸಂಸ್ಕೃತ ಭಾಷೆ ಇಲ್ಲ ವೆಂಬುದು ನಿಜವಾದರೂ ಈ ಬೈಗಳು ? ಏನಿದರರ್ಥ ?.... ಆಕೆ ತುಟಿ ಕಚ್ಚಿಕೊಂಡು ಕೇಳಿದಳು–

''ಏನು, ಬೇಗಂ ಸಾಬಳ ಸೊಸೆಯಂದಿರು?'' ಇಷ್ಟರಲ್ಲಿ ಬಾಗಿಲು ತೆರೆಯಿತು. ರಜಿಯಾಬಾನು ಸ್ವತಃ ಒಳಗೆ ಬಂದಳು. ಛಮ್ಮಿಬೇಗಂಳಿಗೆ ಹೇಳಿದಳು ''ಬುವಾ, ನೀನು ಹೋಗಿ ನಿನ್ನ ಕೋಣೆಯಲ್ಲಿರು, ವಿಶ್ರಾಂತಿ ತಗೋ''.

''ಹಾಗೇ ಆಗಲಿ'' ಎಂದು ಹೇಳಿದ ಆಕೆ, ಗ್ಯಾಲರಿಯಿಂದ ಹೊರಟು ಹೋದಳು. ಆಕೆ ಹೋದ ಮೇಲೆ ಓರ್ವ ಸೊಸೆಯ ಕೋಣೆಯಿಂದ ಗಂಡಸು ಹೊರ ಬಂದು ಆ ಮನೆಯಿಂದ ಹೊರ ಹೊರಟ. ಛಮ್ಮಿಬೇಗಂ ತನ್ನ ಕೋಣೆಗೆ ಬಂದು ಮತ್ತೊಮ್ಮೆ ನಮಾಜ ಮಾಡಿದಳು. ಕುರಾನ್ ಷರೀಫ್ ಪಠಣ ಆರಂಭಿಸಿದಳು. ಆ ಕರುಣಾಮಯಿ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಿದಳು. ಅದೇ ಕರುಣಾನಿಧಿ ಪರಮಾತ್ಮ ಆಕೆಯ ತಂದೆ, ಅಜ್ಜನ ಗೌರವ, ವಂಶ ಪರಂಪರೆಯ ಗೌರವ ಕಾಪಾಡಿದ ಮತ್ತು ಒಂದು ಸುಸಂಸ್ಕೃತ, ದೈವ ಭೀರು ಮನೆಯಲ್ಲಿ ದುಡಿದು ಉಣ್ಣುವ ಅವಕಾಶ ನೀಡಿದ.... ಅಂಥ ಕಾರುಣ್ಯ ಶರಧಿ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸುತ್ತಲಿದ್ದಳು ಛಮ್ಮಿಬೇಗಂ....

# ಜಾರ್ಜಿಯಾದ ಸೇಂಟ್ ಫ್ಲೋರಾಳ ಆತ್ಮ ಸ್ವೀಕೃತಿ

ನನ್ನನ್ನು ಸತ್ತವರೊಳಗಿಂದ ಬದುಕಿಸಿದ ಮತ್ತು ಇನ್ನೊಮ್ಮೆ ಸರ್ವನಾಶವಾಗುವ ದಿನದವರೆಗೆ ಮಲಗಿಸಲಿದ್ದಾನೋ ಆ ಪರಾತ್ಪರ ವಸ್ತುವಿನ ಹಾಗೂ ದೇವಪುತ್ರ ಕ್ರೈಸ್ತನ ಸ್ತುತಿ ಮಾಡುತ್ತೇನೆ. ನಾನು ಮಾಡಿದ, ಗಾಢವದ ಪಾಪಗಳನ್ನು ಒಪ್ಪಿಕೊಳ್ಳುತ್ತೇನೆ ಮತ್ತು ಕ್ಷಮೆಯ ಯಾಚನೆ ಮಾಡುತ್ತೇನೆ. ಪವಿತ್ರ ಪರಮಾತ್ಮ ನಿನಗೆಲ್ಲವೂ ಗೊತ್ತಿದೆ, ಈ ಶತಮಾನ, ಈ ವರ್ಷ, ಈ ಮಾಸ, ಈ ದಿನ ಯಾವುದೆಂಬುದು ನನಗೆ ಗೊತ್ತಿರಲಿಲ್ಲ. ನಾನು ನನ್ನ ತೆರೆದ ಶವಪೆಟ್ಟಿಗೆಯಲ್ಲಿ ಮಲಗಿಕೊಂಡಿದ್ದೆ, ಆಗ ನಿನ್ನ ದೇವದೂತನ ಯಾವುದೇ ಭಾಗಕ್ಕೆ ನನ್ನ ಎಲುಬು ಹತ್ತಿತ್ತು, ಅದರಿಂದಾಗಿ ನಾನೆದ್ದು ಕುಳಿತೆ, ನನ್ನ ತಲೆಬುರುಡೆ ಮತ್ತೆ ಏನೋ ಬಿದ್ದಿತ್ತು, ಕೈ ಚಾಚಿ ಅದನ್ನೆತ್ತಿಕೊಂಡೆ. ಅದಕ್ಕೆ ಹತ್ತಿದ್ದ ಧೂಳ ಝಾಡಿಸಿ, ಕುತ್ತಿಗೆಗೆ ಅಂಟಿಸಿಕೊಂಡೆ. ಭಯಾನಕ ಕತ್ತಲು ಆವರಿಸಿತ್ತು. ತಲೆ ಬುರುಡೆ ತಪ್ಪಾಗಿ ಫಿಟ್ ಆಗಿತ್ತು. ನನಗೆ ಮುಂದೆ ಕಾಣುವ ಬದಲು ಹಿಂದೆ ಕಾಣಲಾರಂಭಿಸಿತು ಮತ್ತೆ ಅತ್ಯಂತ ಕಷ್ಟದಿಂದ ಅದನ್ನು ಸರಿಪಡಿಸಿದೆ. ಓ ! ದೇವರೆ, ಕಾರುಣ್ಯಾಶರಧಿ, ಆ ಸಮಯದಲ್ಲಿ ನಾನು ಹೇಗೆ ಕಾಣತ್ತೇನೆ ಎಂಬುದನ್ನೂ ಕನ್ನಡಿಯಲ್ಲಿ ನೋಡುವುದೇ ನನ್ನ ಬಲಿಷ್ಠ ಆಶೆಯಾಗಿತ್ತು, ಸುತ್ತಲೂ ಕಣ್ಣಾಡಿಸಿದೆ. ಆ ಘನ ಘೋರ ಕತ್ತಲೆಯಲ್ಲಿ ಆ ಹಳೆಯ ನೆಲಮನೆಯಲ್ಲಿ ಏಳೆಂಟು ಕಲ್ಲಿನ ಶವ ಪೆಟ್ಟಿಗೆ ಇದ್ದವು. ಅವೆಲ್ಲ ಎಲುಬು, ರುಂಡಗಳಿಂದ ತುಂಬಿದ್ದವು. ಅವನ್ನೆಲ್ಲ ಗೋಡೆಗೆ ಆನಿಸಿಟ್ಟಿದ್ದರು. ನನಗೆ ತುಂಬಾ ಭಯವೆನಿಸಿತು. ನಾನು ನನ್ನ ಶವ ಪೆಟ್ಟಿಗೆಯ ಹತ್ತಿರ ಕುಳಿತು ಪರಮಾತ್ಮನ ಹೆದರಿಕೆಯಿಂದ ನಡುಗುತ್ತಿದ್ದೆ. ಆಗ ಒಮ್ಮೆಲೇ ಕಿಟಕಿಗಳೆಲ್ಲ ಬೆಳಗಿದವು. ಮತ್ತೆ ದೇವದೂತ ಕಾಣಿಸಿಕೊಂಡ.

''ನಾನು ನನ್ನ ಜಪಮಾಲೆ ಇಲ್ಲಿ ಮರೆತು ಬಿಟ್ಟಿದ್ದೆ. ನೀನು ಯಾರು ?'' ಎಂದು ಕೇಳಿದ.

''ಸೇಂಟ್ ಫ್ಲೋರಾ ಸಾಬೀನಾ ಆಫ್ ಜಾರ್ಜಿಯಾ''

''ದೇವರ ಕೃಪೆಯಿರಲಿ ನಿನ್ನ ಮೇಲೆ'' ಎಂದು ಹೇಳುತ್ತ ಅವನು ಜಪಮಾಲೆ ಹುಡುಕತೊಡಗಿದ. ಆಕಾಶಗಂಗೆಯ ನಕ್ಷತ್ರಗಳಿಂದ ಮಾಡಿದ ಆ ಜಪಮಾಲೆ, ಒಂದು ಶವಪೆಟ್ಟಿಗೆಯ ಹಿಂದೆ ಬಿದ್ದಿರುವುದು ನನಗೆ ಕಂಡಿತು. ನಾನು ಆ ಕೂಡಲೇ ಹೇಳಿದೆ

''ಬೆಳಕನ್ನು ಹರಡುವ ನನ್ನ ಪ್ರಿಯ ದೇವದೂತ, ಒಂದು ವೇಳೆ ವಸ್ತುವನ್ನು ಹುಡುಕಿ ಕೊಟ್ಟರೆ ನನಗೇನು ಕೊಡುವೆ ?''

ಅವನು ಬಹಳ ಚಿಂತೆಯಲ್ಲಿ, ವ್ಯಾಕುಲತೆಯಲ್ಲಿದ್ದಂತೆ ತೋರಿದ. ಚಿಕ್ಕವಯಸ್ಸಿನ ದೇವದೂತನಾಗಿದ್ದ. ''ಸೇಂಟ್ ಪೀಟರನ ಕಚೇರಿಯಲ್ಲಿ ಒಂದೊಂದು ಕಾಳಿನ ಲೆಕ್ಕ ಕೊಡಬೇಕಾಗುತ್ತದೆ ನನಗೆ... ನಾನೊಬ್ಬ ವಿಸ್ಮರಣಶೀಲ ದೇವದೂತನಿದ್ದೇನೆ... ಆ

ವಿಸ್ಮರಣೆಯಿಂದಾಗಿಯೇ ಎಪ್ಪತ್ತು ಸಾವಿರ ವರ್ಷಗಳವರೆಗೆ ಓರ್ವ ಟ್ರೇನಿ ದೇವದೂತ ನಾಗಿಯೇ ಇರಬೇಕಾಯಿತು.... ಈಗ ಕಾಯಂ ಆಗಿದೆ'' ಎಂದು ಅವನು ಹೇಳುತ್ತ ಸಂತೋಷದಿಂದ ತನ್ನ ಜ್ಯೋತಿಮಂಡಲದತ್ತ ಸನ್ನೆ ಮಾಡಿದ. ಮತ್ತೆ ''ಆದರೆ ಈಗ ನಾನು ನನ್ನ ಜಪಮಾಲೆಯನ್ನು ಕಳೆದುಕೊಂಡೆ'' ಎಂದ.

''ಏನನ್ನು ಕೊಡುವೆ ?''

''ಏನನ್ನು ಬಯಸುತ್ತಿರುವೆ ?''

''ನಾನು ತಾರುಣ್ಯದಲ್ಲಿಯೇ ಸತ್ತು ಹೋದೆ. ನನಗೆ ಕೇವಲ 19 ವರ್ಷ. ಆಗ ನನ್ನ ತಂದೆ ಸಿರಿಯಾದ ಒಂದು ಕಾನ್ವೆಂಟ್‌ನಲ್ಲಿರಿಸಿದ. ಮುಂದಿನ 25 ವರ್ಷ ನಾನೊಂದು ಆಶ್ರಮದಲ್ಲಿ ಬಂಧಿಯಾಗಿದ್ದು ಕಾಲ ಕಳೆದೆ. ನಾನೀಗ ಲೋಕವನ್ನು ನೋಡಬೇಕೆನ್ನುತ್ತೇನೆ ಹಾಗೂ ಒಳ್ಳೊಳ್ಳೆಯ ಬಟ್ಟೆ ತೊಡಬೇಕೆನ್ನುವ ಅಭಿಲಾಷೆ ಯುಳ್ಳವಳಾಗಿದ್ದೇನೆ.''

''ಆದರೆ ನಾನು ನಿನಗೆ ರಕ್ತ, ಮಾಂಸ ಮಜ್ಜೆ ತುಂಬುವ ಶಕ್ತಿ ಪಡೆದಿಲ್ಲ. ಕೇವಲ ಪ್ರಳಯದ ದಿನ ಮಾತ್ರ ಸಾಧ್ಯ. ಕೇವಲ ಒಂದು ವರ್ಷದ ಮಟ್ಟಿಗೆ ಜೀವ ಹಿಡಿದು ಕೊಂಡು ಇರುವಂತ ಅಪ್ಪಣೆ ಕೊಡಿಸಬಲ್ಲೆ. ಜಪಮಾಲೆ ತಾ.''

''ಪ್ರೀತಿಯ ಕಾರುಣ್ಯ ಸಿಂಧು ದೇವದೂತ ! ನನ್ನೀ ಒಣ ಎಲುಬಿನ ಪಂಜರ, ಒಂದು ವರ್ಷದವರೆಗೆ ಈ ವಿಚಿತ್ರ ಜಗತ್ತಿನಲ್ಲಿ, ಒಂಟಿಯಾಗಿ ಎಲ್ಲೆಲ್ಲಿ ಅನಾಹುತಕ್ಕೀ ಡಾಗುತ್ತ ತಿರುಗುತ್ತಿರಬೇಕು. ಯಾವುದಾದರೊಂದು ಮನೋರಂಜನ ನೀಡುವ ಹೆಣವನ್ನು ನನಗಾಗಿ ಜೀವಂತಗೊಳಿಸು. ನಾನು ಅದರಲ್ಲಿದ್ದು ಜಗತ್ತನ್ನೆಲ್ಲ ಒಮ್ಮೆ ನೋಡುತ್ತೇನೆ.''

''ಮನೋರಂಜಕ ಹೆಣ ಹೇಗಿರುತ್ತದೆ ?''

''ನನ್ನ ಮನೀಷೆ ಏನೆಂದರ.....''

''ಮೊದಲು ಜಪಮಾಲೆ ತಾ.....''

''ಇಲ್ಲ, ಮೊದಲು ಇನ್ನೊಂದು ಹೆಣವನ್ನು ಜೀವಂತಗೊಳಿಸು. ದೇವರ ಅಪ್ಪಣೆಯಂತ ಜೀವಿತವಾಗು'' ಎಂದು ಹೇಳು.

''ನೀನು ಸ್ವತಃ ಸಂತಳಾಗಿದ್ದಿ, ಮಹಾತ್ಮಳಾಗಿದ್ದಿ...... ಹೀಗಿರುವಾಗ ನೀನೇ ಒಂದು ಚಮತ್ಕಾರ ಮಾಡಿ ತೋರಿಸು.....'' ಎಂದು ಅವನು ಬೇಸತ್ತು ಹೇಳಿದ.

''ನಾನು ಹಾಗೆ ಮಾಡಲಾರೆ..... ಅದಕ್ಕೊಂದು ಟೆಕನಿಕಲ್ ಕಾರಣವಿದೆ... ಹೇಳು.... ದೇವರ ಅಪ್ಪಣೆ.....''

ದೇವದೂತ ಮೊಣಕಾಲೂರಿ ಪ್ರಾರ್ಥನೆಯಲ್ಲಿ ನಿರತನಾದ.

ಆಗ ಒಮ್ಮೆಲೇ ನನ್ನ ಸಮೀಪದ ಹೆಣದ ಪೆಟ್ಟಿಗೆಯಲ್ಲಿ ಸಪ್ಪಳ, ಅಲುಗಾಟ ಆರಂಭವಾಯಿತು. ಜೀರೊಂದು ಕಂಕಾಲ ಎದ್ದು ಕುಳಿತಿತು. ಆಗ ದೇವದೂತ ನನಗೆ

ಹೇಳಿದ– ''ಕೇವಲ ಒಂದು ವರ್ಷಮಾತ್ರ..... ಬರುವ ವರ್ಷ ಇದೇ ತಿಂಗಳು.... ಇದೇ ತಾರೀಖು ಮತ್ತು ಇದೇ ಸಮಯ ಹನ್ನೊಂದುವರೆ ಗಂಟೆ ರಾತ್ರಿ.... ಅದಕ್ಕೂ ಸರಿಯಾಗಿ ತಿಳಿಸಿ ಹೇಳು.... ನನಗೆ ಹೊತ್ತಾಗುತ್ತಲಿದೆ... ಖುದಾ ಹಾಫೀಜ.... ದೇವರು ನಿನ್ನ ರಕ್ಷಿಸಲಿ.....''

ನಾನು ಜಪಮಾಲೆ ಅವನಿಗೆ ಎತ್ತಿ ಕೊಟ್ಟೆ ಆತ ಮತ್ತೆ ಮಾಯವಾದ.....

ಮತ್ತೆ ಕತ್ತಲೆ ಕವಿಯಿತು. ಆದರೆ ನಾನು ಭಯಭೀತಳಾಗಿರಲಿಲ್ಲ. ಎರಡನೆಯ ಎಲುಬಿನ ಹಂದರ, ಹೆಣದಪೆಟ್ಟಿಗೆಯಲ್ಲಿ ಕುಳಿತಂತೆಯೇ ಎಡಗೈಯನ್ನು ಚಾಚಿ ತಲೆಯ ಹತ್ತಿರ ಏನನ್ನೋ ಹುಡುಕಾಡಿತು, ಎದ್ದ ಕೂಡಲೇ ರೂಢಿಯಂತೆ ದೀಪ ಹಚ್ಚಿ ಪುಸ್ತಕ ತೆಗೆದುಕೊಳ್ಳುವ ಹಾಗೆ..... ನಾನು ಕೂಡಲೇ ಅದನ್ನು ಮಾತನಾಡಿಸಿದೆ... ಎಲ್ಲ ಸಮಾಚಾರ ತಿಳಿಸಿದೆ ಹಾಗೂ ನನ್ನ ಹೆಸರು ಹೇಳಿದೆ... ''ಸೇಂಟ್ ಫ್ಲೋರಾ ಸಾಬೀನಾ ಆಫ್ ಜಾರ್ಜಿಯಾ.....''

''ಫಾದರ ಗ್ರ್ಯಾಗರಿ ಬೆಲಿಯಾನೀ ಆಫ್ ಜಾರ್ಜಿಯಾ.....''

''ದೇವರ ಕೃಪೆಯಿರಲಿ ನಿಮ್ಮ ಮೇಲೆ ಓ ! ಪವಿತ್ರ ತಂದೆಯೇ....''

''ತಾವು ದೇವದೂತರೇನು ?'' ಎನ್ನುತ್ತ ಫಾದರ ಗ್ರ್ಯಾಗರಿ ಭಯಭೀತನಾಗಿ ಹೆಣದ ಪೆಟ್ಟಿಗೆಯೊಳಗಿಂದ ಹೊರಬಂದ ಹಾಗೂ ನನ್ನೆದುರಿಗೆ ಮೊಣಕಾಲೂರಿ ಕೂಡ ಬಯಸಿದ. ಆದರೆ ಜೋಲಿ ಹೊಡೆಯುತ್ತ ಬಿದ್ದ.... ಆತನ ಮೊಣಕಾಲಲ್ಲಿ ಎಳ್ಳಷ್ಟೂ ಶಕ್ತಿಯಿರಲಿಲ್ಲ. ಒಂದು ವರ್ಷದ ಮಟ್ಟಿಗೆ ಎಸ್ಕಾರ್ಟ ನೀಡಿದ್ದೇ ಆಗಿದ್ದರೆ, ಓ ! ದೇವರೇ, ಇದಕ್ಕೆ ಸಂಪೂರ್ಣ ಶಕ್ತಿ ನೀಡು ಎಂದು ದೇವರಲ್ಲಿ ಅಂಗಲಾಚಿ ಬೇಡಿದೆ.

ಫಾದರ್ ಗ್ರ್ಯಾಗರಿ ಆ ಕೂಡಲೇ ಎದ್ದು ನಿಂತ. ಕಿಟಕಿಯಿಂದ ತುಂಬ ಜೋರಾಗಿ ತಂಗಾಳಿ ಒಳಗೆ ನುಗ್ಗಿ ನಮ್ಮ ಎಲುಬುಗಳು ಥರಗುಟ್ಟುವ ಹಾಗೆ ಮಾಡಿತು. ಅವನು ಹೇಳಿದ–''ತುಂಬ ಛಳಿ.... ಮೊದಲು ಅಗ್ಗಿಷ್ಟಿಗೆಯ ವ್ಯವಸ್ಥೆ ಮಾಡಿ.''

''ಎಲ್ಲಿಂದಾದರೂ ಚಕಮಕಿ ಸಿಗುವುದಾದರೆ....'' ನಾನೆಂದೆ. ಅವನು ಕಿಟಕಿ ಯಿಂದ ಹೊರಗೆ ಹಣಿಕಿಕ್ಕಿದ. ಅಲ್ಲಿ ಪಾಯಿನ್ ಮರಗಳು ಸೊಂಯ್...ಸೊಂಯ್.... ಎಂದು ಸಪ್ಪಳ ಮಾಡುತ್ತಿದ್ದವು.

''ಫಾದರ ಇತ್ತ ಬನ್ನಿ.... ಇಲ್ಲದಿದ್ದರೆ ನೆಗಡಿ ಆಗಬಹುದು....'' ನಾನು ಅತ್ಯಂತ ನಮ್ರತೆಯಿಂದ ಹೇಳಿದೆ. ಅವನು ಬಂದು ತನ್ನ ಹೆಣದ ಪೆಟ್ಟಿಗೆಯ ಹತ್ತಿರ ಕುಳಿತ. ನಾನು ಕಿಟಕಿ ಮುಚ್ಚಲೆಂದು ಎದ್ದೆ. ಕಿಟಕಿಯ ಒಂದು ಪಟಗ ಮುರಿದು ಬಿದ್ದಿತ್ತು. ಎರಡನೆಯ ಪಟಗದತ್ತ ಕೈ ಚಾಚಲು ಹೊರಗೆ ಹಣಿಕಿಕ್ಕಿದೆ. ಗುಡ್ಡದ ಕೆಳಗೇನೇ ನದಿಯೊಂದು ಹರಿಯುತ್ತಲಿತ್ತು. ಅದು ಕೋಹಿಸ್ತಾನ ಖಫಕಾಜ ಗುಡ್ಡದ ಪ್ರದೇಶದಿಂದ ಹೊರಟು ಮುಂದೆ ಹೋಗಿ ಕಪ್ಪು ಕಡಲು ಸೇರುತ್ತಿತ್ತು. ಆಗ ನನಗೆ ಒಮ್ಮೆಲೇ ಅಲ್ಲಿಯ ಬೆಟ್ಟದ ಧರ್ಮಶಾಲೆಯಲ್ಲಿ ಅದೆಷ್ಟೋ ವರ್ಷ ಇದ್ದುದು ನೆನಪಾಯಿತು. ಮತ್ತೆ ಆ ನದಿಯ ಮೇಲೆ ಒಂದು ವೈಭವಪೂರ್ಣ ನಾಲ್ಕು ಅಂತಸ್ತಿನ ಬೆಳ್ಳಗಿನ ಹೊಳೆಹೊಳೆ

ಯುವ ಮಹಲ್ ಒಂದು ಆವಿರ್ಭಾವವಾಯಿತು. ಮತ್ತೆ ಒಂದು ಭಯಾನಕ ಬಿಗುಲ್ ಧ್ವನಿ.... ಪ್ರಳಯದ ದಿನ ಹೆಣ ಎಬ್ಬಿಸುವುದಕ್ಕೆ ನುಡಿಸುವ ಬಿಗುಲ್.... ನಾನು ತುಂಬ ಚಿಂತೆಯಲ್ಲಿ ಮುಳುಗಿದೆ. ಈ ಜಗತ್ತಿನಲ್ಲಿ ಒಂದು ವರ್ಷವಾದರೂ ಇರಲು ಅವಕಾಶ ಸಿಕ್ಕಲಿಲ್ಲ. ಮತ್ತೆ ಎರಡನೇ ಬಾರಿ ಧ್ವನಿ.... ಮೂರನೇ ಬಾರಿ.... ಆಗ ಫಾದರ್ ಗ್ರ್ಯಾಗರಿ ಕಿಟಕಿಯ ಹತ್ತಿರ ಬಂದು ಹೊರಗೆ ಹಣಿಕಿಕ್ಕಿ ನನಗೆ ಹೇಳಿದ–

''ಪವಿತ್ರ ದೇವದೂತೆ.... ಇದೊಂದು ಉಗಿಯ ಹಡಗ ತನ್ನ ಸೈರನ್ ಬಾರಿಸುತ್ತದೆ. ಏಳು.....''

ನಾನು ಎದ್ದು ನಿಂತೆ... ಅಲ್ಲಲ್ಲಿ ಬೆಂಕಿಯಿಂದ ಝಗಝಗಿಸುವ ಕುಣಿಗಳು... ವಾದ್ಯಗಳನ್ನು ಬಾರಿಸುತ್ತಲಿದ್ದರು ಹಾಗೂ ನಗೆ...... ಕೇಕೆಗಳು..... ಕೂಗು.... ಓ ! ದೇವರೇ..... ಈ ಜಾತ್ರೆಯಲ್ಲಿ ನಾನೂ ಹೋಗಿ ಕೂಡಿಕೊಳ್ಳಲೇ ಎನ್ನಿಸುತ್ತಲಿದೆ..... ಆಗಲೇ ಫಾದರರ ಧ್ವನಿ ನನ್ನನ್ನು ಎಚ್ಚರಿಸಿತು... ''ಬನ್ನಿ ಹೊರಗೆ ಹೋಗಿ ಬೆಂಕಿ ಹುಡುಕೋಣ.....''

ನಾವಿಬ್ಬರೂ ಹೇಗೋ ಕೈಯಾಡಿಸುತ್ತ ಆ ನೆಲಮನೆಯಿಂದ ಹೊರಹೊರಟು ಒಂದು ಸುರಂಗ ಮಾರ್ಗ ತಲುಪಿದೆವು. ಅದರ ಪಾವಟಿಗೆಗಳ ಮೇಲಿಂದ ನಡೆದು ಬಂದರೆ ಮೇಲೆ ಅದರ ಬಾಗಿಲು ಒಂದು ತೋಟದೊಳಗ ಹೋಗಲು ತೆರೆದು ಕೊಳ್ಳುತ್ತಿತ್ತು, ಬಾಗಿಲದಲ್ಲಿ ಮುಳ್ಳು ಕಂಟಿ, ಹುಲ್ಲು ಬೆಳೆದಿತ್ತು, ತೋಟದಲ್ಲಿಯ ಮಡಿಗಳು ಹಚ್ಚಹಸಿರಿನಿಂದ ಶೋಭಾಯಮಾನವಾಗಿದ್ದವು. ನಾವು ಪರಸ್ಪರರ ಕೈ ಹಿಡಿದುಕೊಂಡು ಮುಳ್ಳು ಕಂಟಿಗಳ ದಾಟುತ್ತ ತೋಟದಲ್ಲಿ ಬಂದೆವು..... ಅದರ ಎದುರಿಗೆ ದೊಡ್ಡದಾದ ಚರ್ಚ್ ಇದೆ. ಅದರ ಸುತ್ತ ಮುತ್ತ ಓಕ್ ಮತ್ತು ಪಾಯಿನ್ ಮರಗಳಿವೆ. ಒಂದು ಮರದ ಕೆಳಗೆ ಕಾಗದದ ಪ್ಲೇಟಗಳು, ಗ್ಲಾಸು ಮತ್ತು ನ್ಯಾಪಕಿನ್ ಬಿದ್ದಿರುವುದು ಕಾಣಿಸಿತು. ನಾನು ಕಟ್ಟಿಗೆ ಆರಿಸತೊಡಗಿದೆ. ಫಾದರ ಈ ಎಲ್ಲ ಹೊಲಸು ಕೂಡಿಸಿದ. ಒಂದು ಕಡ್ಡಿ ಪೆಟ್ಟಿಗೆ ಇತ್ತು, ಅದರಲ್ಲಿಯ ಕಡ್ಡಿ ತೆಗೆದು ಪೆಟ್ಟಿಗೆಗೆ ತಿಕ್ಕಿದ. ಬೆಂಕಿ ಹೊತ್ತಿ ಕೊಂಡಿತು. ಫಾದರ್ ಹೇಳಿದ–

''ಇದು ಮ್ಯಾಚಿಸ್..... ಪಿಕ್‌ನಿಕ್‌ಗೆ ಬಂದ ಯಾವುದೋ ಟೋಲಿ ಇದನ್ನಿಲ್ಲಿ ಬಿಟ್ಟು ಹೋಗಿರಬೇಕು..... ದೇವರು ನಮ್ಮೊಂದಿಗಿದ್ದಾನೆ....''

ನಾವು ಕಟ್ಟಿಗೆಗೆ ಬೆಂಕಿ ಹಚ್ಚಿ ಕಾಯಿಸಿ ಕೊಳ್ಳತೊಡಗಿದೆವು.....

''ಓ ! ದೇವರೇ ನಾನು ಚಾಡಿ ಹೇಳುವುದಿಲ್ಲ.... ದೇವದೂತ ಸೈಮನ್‌ನ ಆಣೆ.... ಆ ಗಳಿಗೆಯಲ್ಲಿ ಫಾದರ್ ಗ್ರ್ಯಾಗರಿಯ ಹೊಳ್ಳೆಗಳಿಂದ ಹೊಗೆಯಾಡುತ್ತ ಲಿತ್ತು... ನಾನು ತುಂಬ ಹೆದರಿಕೊಂಡೆ.... ಹೊಗೆಯ ಸುರಳಿಗಳ ಹಿಂದೆ ಒಂದು ಚಿಕ್ಕದಾದ ಕಿಂಡಿ ಅವನ ಬಾಯಲ್ಲಿ ಬೆಳಕು ನೀಡುತ್ತಲಿತ್ತು... ಓ ! ದೇವರೇ, ಹೊಗೆ ಮತ್ತು ಬೆಂಕಿಯ ಜ್ವಾಲೆ ಕೇವಲ ಸೈತಾನನ ಬಾಯಿಂದ ಹೊರಡುತ್ತದೆಂಬುದನ್ನು ನಾನು ಚೆನ್ನಾಗಿ ಬಲ್ಲೆ.... ನಾನು ಆ ಕೂಡಲೇ ನಿನ್ನ ಸಿಲುಬೆಯ ಗುರುತು ಮಾಡಿದೆ....

ನಿಸ್ಸಂದೇಹವಾಗಿ ಯಾವುದೋ ಒಂದು ದುಷ್ಟ ಆತ್ಮ ಅವನ ಎಲುಬಿನ ಹಂದರದಲ್ಲಿ ಹೊಕ್ಕು ಕೊಂಡಿದೆ. ಅಥವಾ ಆ ಮರಗುಳಿ ದೇವದೂತನ ತಪ್ಪಿನಿಂದ ಅವನು ಒಳ್ಳೆಯ ಆತ್ಮದ ಬದಲಿ ಯಾವುದೋ ಭೂತದ ಹೆಣವನ್ನು ಎಚ್ಚರಿಸಿದ್ದಾನೆ.....''

ಒಮ್ಮೆಲೇ ಫಾದರ್ ನಗುತ್ತ ಹೇಳಿದ–

''ಹೆದರಬೇಡ. ಇದಕ್ಕೆ ಸಿಗರೇಟ್ ಎಂದು ಹೇಳಲಾಗುತ್ತದೆ. ಇಲ್ಲಿಗೆ ಬಂದ ಯಾತ್ರಿಗಳು ಮ್ಯಾಚಿಸ್‌ದೊಂದಿಗೆ ಒಂದು ಪ್ಯಾಕೆಟ್ ಸಿಗರೇಟನ್ನೂ ಇಲ್ಲಿ ಮರೆತು ಹೋಗಿದ್ದಾರೆ. ಎಲೆಗಳ ರಾಶಿಯಲ್ಲಿ ಬಿದ್ದುದು ನನಗೆ ಸಿಕ್ಕಿತು.....''

ನಾನು ಹೇಳಿದೆ– ''ಇದು ಸಿಗರೇಟ್ ಎಂದು ನಿನಗೆ ಹೇಗೆ ಗೊತ್ತಾಯಿತು ? ಇದನ್ನು ಹಚ್ಚಿದರೆ ಬಾಯಿಂದ ಇದು ಹೊಗೆ ಹೊರಡಿಸುತ್ತದೆ ಎಂಬುದು ನಿನಗೆ ಹೇಗೆ ತಿಳಿಯಿತು ? ಇದು ಸ್ಪಷ್ಟವಾಗಿ ಪೈಶಾಚಿಕ ವೃತ್ತಿಯ ಸೈತಾನನ ಕೆಲಸವಾಗಿದೆ.....''

ಫಾದರ್ ಮೃದುವಾಗಿ ನಗುತ್ತ ತಿಳಿಸಿ ಹೇಳಿದ– ''ಬೀಬಿ ಫ್ಲೋರಾ.... ಅಮೇರಿಕೆಯ ವಿಜ್ಞಾನಿಗಳು ಇತ್ತೀಚೆಗೆ ಒಂದು ಯಂತ್ರ ಸಿದ್ಧಗೊಳಿಸಿದ್ದಾರೆ.... ರಾತ್ರಿ ಅದನ್ನು ತಲೆಗೆ ಅಳವಡಿಸಿಕೊಂಡು ಮನುಷ್ಯ ಮಲಗುತ್ತಾನೆ.... ನಿದ್ರೆಯಲ್ಲಿಯೇ ಆ ಉಪಕರಣದ ಮುಖಾಂತರ ಅನೇಕ ವಿದ್ಯೆಯನ್ನು ತನ್ನ ತಲೆಯಲ್ಲಿ ಸಮಾವೇಷ ಗೊಳಿಸಿಕೊಳ್ಳುತ್ತಾನೆ.....''

''ನೀನು ಸರ್ವಶಕ್ತಿ ಶಾಲಿಯಾದ ಪರಮಾತ್ಮನ ಸೃಷ್ಟಿಯ ಬಗ್ಗೆ ಸಂಶಯಪಡಲು ಸಾಧ್ಯವೇ ? ಹದಿಮೂರು ನೂರ ಐವತ್ತು ವರ್ಷಗಳವರೆಗಿನ ಸುದೀರ್ಘ ನಿದ್ರೆಯ ಅವಧಿಯಲ್ಲಿ ಈ ಹೆಣಗಳ ಕೆಳಮನೆಯಲ್ಲಿ ನನಗೆ ಇಂದಿನವರೆಗೂ ವಿಭಿನ್ನ ವಿದ್ಯೆ ಮತ್ತು ಆಧುನಿಕ ಭಾಷೆಗಳನ್ನಲ್ಲದೆ ಇನ್ನೂ ಅನೇಕ ವಿಷಯಗಳ ಬಗ್ಗೆ ಪರಿಚಯ ನೀಡಿದ. ಒಂದು ರೀತಿಯಲ್ಲಿ ನೀನು ಕೂಡ ಬಹಳಷ್ಟು ವಿಷಯಗಳ ಪರಿಚಯ ಹೊಂದಿರುವೆ.... ಇವೆಲ್ಲದರ ಅನುಭವ ನೀನು ಈ ಒಂದು ವರ್ಷದಲ್ಲಿ ಸ್ವತಃ ಪಡೆಯಲಿರುವೆ..... ಅಷ್ಟೇಕೆ ಈಗಲೇ..... ಈ ಕ್ಷಣದಲ್ಲಿಯೇ ಅನುಭವವಾಗುತ್ತದೆ...... ಕೊಂಚ ಧ್ಯಾನದಿಂದ ಕಿವಿಗೊಟ್ಟು ಆಲಿಸು....''

ಕೆಳಗೆ ಕೊಳ್ಳದಲ್ಲಿ ಬಾರಿಸುತ್ತಿರುವ ವಾದ್ಯ, ಗಿಟಾರ್, ಸೆಕ್ಸೊಫೋನ್ ಎಂದು ನಾನು ತಿಳಿದುಕೊಂಡೆ..... ಅದರಲ್ಲಿ ರಶಿಯಾದ ತರುಣ, ಜಾರ್ಜಿಯನ್ ಭಾಷೆಯ ಗೀತ ನುಡಿಸುತ್ತಲಿದ್ದಾನೆ..... ಮತ್ತೆ ಗಾಳಿಯ ಸುಂಯ್.... ಸುಂಯ್..... ಎನ್ನುವ ಸಪ್ಪಳದೊಂದಿಗೆ ಕೊಳ್ಳದ ಸಪ್ಪಳವೂ ನಮ್ಮ ಕಿವಿಗಳಿಗೆ ಕೇಳಿಸುತ್ತಲಿತ್ತು.... ತೀರ ಕೆಳಗಿರುವ ತೆರೆಗಳಲ್ಲಿ ಓರ್ವ ತರುಣ ಗಿಟಾರ ನುಡಿಸುತ್ತ ನುಡಿಸುತ್ತ ಓರ್ವ ತರುಣಿಗೆ ಹೇಳುತ್ತಿದ್ದ– ''ನಟಾಶಾ..... ನೋಡಲ್ಲಿ ಮೇಲೆಯೂ..... ಕಟ್ಟಿಗೆ ಉರಿಯುತ್ತ ಲಿದೆ.... ಕೆಲಜನ ತೋಟದಲ್ಲಿ ಮೊದಲೇ ಕ್ಯಾಂಪಿಂಗ್ ನಡೆಸಿದ್ದಾರೆ....''

ಅಷ್ಟರಲ್ಲಿ ಗಾಳಿಯ ದಿಕ್ಕು ಬದಲಿಸಿತು..... ಆ ಎಲ್ಲ ಸಪ್ಪಳ ಕಡಿಮೆ ಯಾಯಿತು....

ಆಗ ಫಾದರ್ ಹೇಳಿದ– ''ಓ ! ಪವಿತ್ರ ದೇವದೂತಳೇ.....''

''ನೀನು ನನ್ನನ್ನು ಈ ವಿಶೇಷಣದಿಂದ ಕರೆಯದಿದ್ದರೆ ಒಳ್ಳೇದು. ಕಾರಣ ಈಗಲೇ ಹೇಳುವೆ....''

''ಏನು ಕಾರಣ ? ಹಾಂ ! ಹಾಗೆಯೇ ಆಗಲಿ. ನಮ್ಮಿಬ್ಬರಿಗೂ ಇಡೀ ವರ್ಷ ಕೂಡಿಯೇ ಇರಬೇಕಾಗಿದೆ. ನಮ್ಮ ನಮ್ಮ ಸ್ಥಿತಿಯನ್ನು ನಿಸ್ಸಂಕೋಚವಾಗಿ ಪರಸ್ಪರರು ಹೇಳಿಕೊಂಡರೆ ಒಳ್ಳೇದು. ಏಕೆಂದರೆ ಮುಂದೆ ಯಾವುದೇ ತಪ್ಪು ಕಲ್ಪನೆಗೆ ಅವಕಾಶವಾಗಬಾರದು. ನಾನು ಗ್ರ್ಯಾಂಡ್ ಡ್ಯುಕ್ ಆಫ್ ತಿಫಿಲಸ್‌ನ ಮಗ ನಿನ್ನ ಸೇವೆಯಲ್ಲಿ ಹಾಜಿರ ಇದ್ದೇನೆ....''

''ನಾನು one-upmanship ಮಾಡಲು ಬಯಸುತ್ತಿರಲಿಲ್ಲ... ಆದರೆ ಕೊನೆಗೂ ಉಪಾಯಗಾಣದೆ ಹೇಳಬೇಕಾಗಿ ಬಂತು.... ನನ್ನ ತಂದೆ ಈ ಇರಾನಕ್ಕೆ ಬೈಜಾಂಟೆಯಮ್ ರಾಜದೂತ.....''

''ಇದ್ದ'' ಅವನು ನೆನಪಿಸಿದ–

''ಕುಸ್‌ತುನ್‌ತುನಿಯಾದಿಂದ ಉತ್ತರದ ಗಿರ್ಜಿಸ್ತಾನದ ಈ ದೂರದ ಬೆಟ್ಟದ ಮೇಲೆ ನೀನು ಹೇಗೆ ಬಂದು ತಲುಪಿದೆ ?.....''

''ನಾವು ಬಾಸಫೋರಸ್‌ದಿಂದ ಹೊರಟಾಗ ಸಮುದ್ರ ಪ್ರಶಾಂತವಾಗಿತ್ತು.... ಹವೆ ಕೂಡ ಅನುಕೂಲಕರವಾಗಿತ್ತು....''

''ಆದರೆ ಬಾಸಫೋರಸ್‌ದಿಂದ ಇರಾನಕ್ಕೆ ಹೋಗಲು ಕಪ್ಪು ಸಮುದ್ರದತ್ತ ಏಕೆ ಬರಬೇಕು ?.... ನಿನ್ನ ಹಡಗದ ಕಪ್ತಾನನೇನು ಹುಚ್ಚನಿದ್ದನೇನು ?...'' ಎಂದು ಫಾದರ್ ಗ್ರ್ಯಾಗರಿ ಸಿಗರೇಟ ಸೇದುತ್ತ ನನ್ನ ಮಾತಿನ ನಡುವೇ ಹೇಳಿದ.

''ಇಲ್ಲ, ಹಾಗೇನಿಲ್ಲ.... ಕೇಳಿ..... ಹಾಂ ! ಆರಂಭದಿಂದಲೇ ಎಲ್ಲ ಹೇಳುತ್ತೇನೆ.....ನಿನಗೆ ಗೊತ್ತಿಲ್ಲ... ನಾವು ಏನೆಂಥ ವೈಭವದ ಜನರೆಂದು....'' ಕುಸ್‌ತುನ್‌ತುನಿಯಾ ಸರಕಾರದ ರಿವಾಜಿನ ಪ್ರಕಾರ 'ಎರಡನೆಯ ರೋಮ' ಅನ್ನಿಸಿಕೊಳ್ಳುತ್ತಿತ್ತು. ಜಸ್ಟನೀನ ಸಾಂತಾ ಸೋಫಿಯಾ ಚರ್ಚದ ನಿರ್ಮಾಣದ ನಂತರ ಹೇಳಿದ್ದ– ''ದೇವ ಮನುಷ್ಯ.... ನಾನು ನಿನ್ನ ದೊರೆ ಸುಲೇಮಾನನೊಂದಿಗೆ ಛಲಕ್ಕಿಳಿದೆ.... ಥ್ಯೊಸೋಡಿಯಮ್ ಮತ್ತು ಆರ್ಕೇಡಿಯಸ್ ಯುಗದ ಕಲೆ, ವಿದ್ಯೆ, ಓಲಂಪಿಕ್.... ಆಟ ಮತ್ತು ನಮ್ಮ ಅದ್ವಿತೀಯ ಕಲೆಗಳು.....''

''ಥ್ಯೊಡೋರಾಗೆ ವಂಚಿಸಿ ಹೋದೆಯಲ್ಲ.''

''ಸರಿ, ಹಾಂ ! ಅದೂ ಇತ್ತು... ಓರ್ವ ಕ್ಲೊಪತ್ರಾ ಓರ್ವ ಥ್ಯೋಡೋರಾ ಈ ಇಬ್ಬರು ಕೊಂಚ ಶ್ರೇಷ್ಠ ಧೈರ್ಯ ತೋರಿದರೆ ನೀವು ಗಂಡಸರು ಅದನ್ನು ಈವರೆಗೂ ಸಹಿಸಿಕೊಳ್ಳಲಿಲ್ಲ... ಹೋಗಲಿ ಬಿಡು. ಸಾಸಾನಿಗಳು ಜೋರಾದಾಗ ಮತ್ತು ನಮ್ಮ ಪ್ರದೇಶ, ಶಾಮ ಮೇಲೆ ಆಕ್ರಮಣ ಮಾಡಿ ತಮ್ಮ ವಶ ಮಾಡಿಕೊಂಡು

ಯರೋಶಲಮ್‌ದಿಂದ ಪ್ರಭು ಏಸುವಿನ ನಿಜವಾದ ಸಿಲುಬೆ ಎತ್ತಿಕೊಂಡು ತೇಸ್‌ಫೂನ್‌ಗೆ ಒಯ್ದರು. ನಮ್ಮ ಹರ್ಕಲ್ ಅವರೊಂದಿಗೆ ಹೋರಾಡಿ ಅದನ್ನು ಯರೋಶಲಮ್‌ಗೆ ತಂದ.... ಅರಬರು ಯರೋಶಲಮ್ ಗೆದ್ದುಕೊಂಡಾಗ, ಆ ಸಿಲುಬೆಯನ್ನು ನಮ್ಮ ಹರ್ಕಲ್ ಕುಸ್‌ತುಂತುನಿಯಾಕ್ಕೆ ತೆಗೆದುಕೊಂಡು ಬಂದ.....''

''ತಬ್ಲಿಸಿಯಲ್ಲಿ ನಾನು ಕೂಡ ನನ್ನ ತಂದೆಯೊಂದಿಗೆ ಅರಬ್ ಸೈನಿಕರೊಂದಿಗೆ ಹೋರಾಡಿದ್ದೆ. ಆದರೆ ಗೆಲುವು ಸಿಗಲಿಲ್ಲ.... ಅದು ಜಗತ್ತಿನ ಬಹು ಅದ್ಭುತ ಶಕ್ತಿಯಾಗಿತ್ತು..... ಇಂದಿನ ರಶಿಯಾ ಮತ್ತು ಅಮೇರಿಕಾದ ಶಕ್ತಿಯಿದ್ದ ಹಾಗೆ....'' ಎಂದು ಫಾದರ್ ಬೆಲಿಯಾನಿ ನೀರಸವಾದ ರೀತಿಯಲ್ಲಿ ಹೇಳಿದರು.....

''ನಾವು, ಷಡ್‌ಯಂತ್ರ ರಚಿಸುವಲ್ಲಿ ತುಂಬ ಆಸಕ್ತರು..... ನಮ್ಮ ದರ್ಬಾರದ ಷಡ್‌ಯಂತ್ರ, ರಾಜನೀತಿಯಲ್ಲಿ ಕೊಲೆ ಸುಲಿಗೆಗಳು ರಾಜಕುಮಾರಿಯರ ಪ್ರೇಮ ಲೀಲೆಗಳು, ರಾಜಕುಮಾರರ ಸ್ಕ್ಯಾಂಡಲ್‌ಗಳು ಇಡೀ ಜಗತ್ತಿನಲ್ಲಿ ಪ್ರಸಿದ್ಧ ವಾಗಿದ್ದವು..... ನಮ್ಮ ಬಾದಷಾಹರನ್ನು ಅವರ ರಾಣಿಯರು ಅಥವಾ ಮಕ್ಕಳು ವಿಷ ಹಾಕಿ ಕೊಲ್ಲುವುದು ಒಂದು ಸಾಮಾನ್ಯ ಪರಂಪರೆಯಾಗಿತ್ತು. ಕೈಸಾಕಾದ ಆಡಳಿತದ ಮೇಲೆ ತುಂಬ ಒತ್ತಡವಿತ್ತು. ಆದರೆ ಪಾದ್ರಿ ಜನ ಸ್ವತಃ ಧಾರ್ಮಿಕ ಸಮಸ್ಯೆಗಳಲ್ಲಿ ಸಿಲುಕಿಕೊಂಡು ಎಲ್ಲ ಸಮಯ ಅದಕ್ಕೇ ವ್ಯಯಿಸುತ್ತ ಸಾರ್ವಜನಿಕರ ಸಮಯವನ್ನೂ ಹಾಳು ಮಾಡುತ್ತಿದ್ದರು. ನನ್ನ ತಂದೆ ಸ್ಟೀಫನ್ ಹೋನೊರಿಸ್ ಸರಕಾರದಲ್ಲಿ ಓರ್ವ ಪ್ರಮುಖ ಮಂತ್ರಿಯಾಗಿದ್ದರು. ತಾಯಿ ಆಯರೀನ್ ಮಾರಿಯಾ ಮಹಾರಾಣಿಯ ಆಪ್ತ ವಲಯದಲ್ಲಿದ್ದಳು. ಅಣ್ಣ ಅಲೆಗ್ಸಾಂಡರ್ ಸಿಲ್ವೇರಿಯಸ್ ಆಳರಸರ ಕಾವಲು ಪಡೆಯಲ್ಲಿ ಹಿರಿಯ ಅಧಿಕಾರಿಯಾಗಿದ್ದ.''

ನಾವೆಲ್ಲ ಅತ್ಯಂತ ವಿಲಾಸದ ಜೀವನ, ವೈಭವದ ಬದುಕು ನಡೆಸುತ್ತಿದ್ದೆವು. ಇಡೀ ದರ್ಬಾರ ಷಡ್‌ಯಂತ್ರದಲ್ಲಿ ಮುಳುಗಿತ್ತು. ತುಂಬ ಕುತೂಹಲದಲ್ಲಿ ಸಮಯ ಕಳೆಯುತ್ತಿತ್ತು.. ಥೇಟರ, ಓಲಂಪಿಕ್ ಆಟಗಳು, ಗ್ಲೈಡೀಯೇಟರ್ಸ್ ಸ್ಪರ್ಧೆಗಳಲ್ಲಿ ಕಾಲ ಹೋದುದೇ ತಿಳಿಯುತ್ತಿರಲಿಲ್ಲ. ನಮ್ಮ ನೆರೆಯಲ್ಲಿಯೇ ಇರುತ್ತಿದ್ದ ಸರ್ಜಿಯಸ್ ಪೆಲಾಲಿಸ್ ತಂದೆಯ ಆತ್ಮೀಯ ಮಿತ್ರರಾಗಿದ್ದರು. ಸಾಲೋನಿಕಾದಲ್ಲಿ ಅವರ ದ್ರಾಕ್ಷಿ ತೋಟವಿತ್ತು. ಕಪ್ಪು ಸಮುದ್ರದಲ್ಲಿ ಅವರು ತಮ್ಮ ವ್ಯಾಪಾರಿ ಹಡಗಗಳನ್ನಿರಿಸಿದ್ದರು. ಅವರ ಮಗ ಥಿಯೋಡೋರಕ್ ಗೈಲಾಸಿಸ್‌ನೊಂದಿಗೆ ನನ್ನ ಮದುವೆ ಆಗಲಿತ್ತು ಅವನು ಅತ್ಯಂತ ಸುಂದರ ಹಾಗೂ ಪ್ರತಿಭಾವಂತನಿದ್ದ.

ಅವನು ಒಂದು ದಿನ ನನ್ನನ್ನು ಕರೆದು ''ನಾನು ಬೈಜಾಂಟಿಯಮ್‌ದ ಹೈ ಸೊಸೈಟಿಯ ಹಾಗೂ ಅದರ ಅತ್ಯಂತ ಭ್ರಷ್ಟ ಜೀವನದಲ್ಲಿ ಬೆರೆಯಲು ಸಿದ್ಧನಿಲ್ಲ. ಮದುವೆಯ ನಂತರ ನನ್ನೊಂದಿಗೆ ಸಾಲೋನಿಕಾಕ್ಕೆ ಬಂದು ವಾಸಿಸು. ನಮ್ಮ ದ್ರಾಕ್ಷಿ ತೋಟದಲ್ಲಿ ಹಾಯಾಗಿ ಕುಳಿತು ನಾನು ಫಿಲಾಸಫಿ ಓದುವೆ, ನೀನು ವಾದ್ಯ ನುಡಿಸುತ್ತಲಿರು, ಕೈ ಕುಸುರಿನ ಕೆಲಸ ಮಾಡುತ್ತಿರು. ಆದರೆ ಫಾದರ್, ನಾನು ಈ ಹೈ ಸೊಸೈಟಿಯ ಜೀವನದಲ್ಲಿ ಹಾಸು ಹೂಕ್ಕಾಗಿ ಹೋಗಿದ್ದೆ. ನನಗೆ ಈ ಜೀವನ ತುಂಬ

ಒಗ್ಗಿಹೋಗಿತ್ತು. ದಿನಾಲೂ ನಾನು ತಾಯಿ–ತಂದೆಯೊಂದಿಗೆ ದರ್ಬಾರಿ ಉತ್ಸವ, ಸಮಾರಂಭಗಳಲ್ಲಿ ಭಾಗವಹಿಸಲು ಹೋಗುತ್ತಿದ್ದೆ. ಡಾನ್ಸ್ ಮಾಡುತ್ತಿದ್ದೆ. ಒಂದಕ್ಕಿಂತ ಒಂದು ಶ್ರೇಷ್ಠವಾದ ವಸ್ತ್ರ, ಆಭೂಷಣ ತೊಡುತ್ತಿದ್ದೆ. ಆಗ ನನಗೆ ಕೇವಲ ಹದಿನಾರು ವರ್ಷದ ನವ ತಾರುಣ್ಯ. ಷೋಡಶ ಕನ್ಯೆಯಾಗಿದ್ದೆ.''

ಗ್ಲೈಡೀಯೇಟರ್ಸ್‌ದ ಆಟಗಳಲ್ಲಿ ನನಗೆ ತುಂಬ ಆಸಕ್ತಿಯಿತ್ತು. ಆದರೆ ಥಿಯೋಡರಕ್‌ಗೆ ಆ ಆಟದ ಬಗ್ಗೆ ಅಷ್ಟೇ ದ್ವೇಷವಿತ್ತು. ''ನಾವು ಕ್ರೈಸ್ತರಾದೆವು, ಆದರೆ ರೋಮನ್‌ರ ಈ ನಿಷ್ಕರುಣೆಯ, ಅಮಾನುಷವಾದ ಆಟ, ತಮಾಷಾಗಳಲ್ಲಿಯ ಆಸಕ್ತಿ ಮಾತ್ರ ಹೋಗಲಿಲ್ಲ'' ಎಂದು ಅವನು ಹೇಳುತ್ತಿದ್ದ. ಈ ಗ್ಲೈಡೀಯೇಟರ ಆಟದವರು ಎರಡು ಬೇರೆ ಬೇರೆ ಪಂಗಡಗಳಲ್ಲಿ ಹಂಚಿ ಹೋಗಿದ್ದರು. ಹಸಿರು ಬಣ್ಣದ ವೇಷದಲ್ಲಿ ಒಂದು ಪಂಗಡ ಬೂದಿ ಬಣ್ಣದ ವೇಷದಲ್ಲಿ ಇನ್ನೊಂದು ಪಂಗಡ. ಒಬ್ಬರಿಗೊಬ್ಬರು ದ್ವೇಷ ಮತ್ಸರಗಳಲ್ಲಿ ಒದ್ದಾಡುತ್ತಿದ್ದರು. ನನ್ನ ಮೂವರೂ ಸೋದರರು ಹಸಿರು ವೇಷದ ಪಂಗಡದಲ್ಲಿದ್ದರು.

''ನಮ್ಮ ಮದುವೆ ಸೇಂಟ್ ಸೂಫಿಯಾ ಚರ್ಚದಲ್ಲಿ ತುಂಬ ವೈಭವಪೂರ್ಣವಾಗಿ ನಡೆಯುವುದರಲ್ಲಿತ್ತು. ಚಕ್ರವರ್ತಿ ನನ್ನ ಗಾಡ್‌ಫಾದರ್ ಆಗಿದ್ದರು. ತಿಂಗಳ ಮೊದಲೇ ನನ್ನ ಬಟ್ಟೆಗಳ ಸಿದ್ಧತೆ ನಡೆದಿತ್ತು. ಉತ್ಕೃಷ್ಟವಾದ ಆಭರಣಗಳನ್ನು ಸಿದ್ಧಗೊಳಿಸಲಾಗಿತ್ತು. ಮದುವೆಗೆ ಕೆಲದಿನವಿರುವಾಗಲೇ ಥಿಯೋಡರಕ್‌ನ ತಂದೆ ''ಚಕ್ರವರ್ತಿಗಳು ಮದುವೆಯ ಕಾಣಿಕೆಯಾಗಿ ಥಿಯೋಡರಕ್‌ನನ್ನು ತಮ್ಮ ಆಪ್ತ ವಲಯದ ಸದಸ್ಯನನ್ನಾಗಿ ಸೇರಿಸಿಕೊಂಡಿದ್ದಾರೆ'' ಎಂಬ ಈ ಸಂತೋಷದ ಸುದ್ದಿಯನ್ನು ತಿಳಿಸಿದರು. ಇದನ್ನು ಕೇಳಿದ ಥಿಯೋಡೆರಕ್ ಗಾಬರಿಗೊಂಡು ನನ್ನ ಹತ್ತಿರ ಬಂದ. ನಾನು ನನ್ನ ಕೋಣೆಯಲ್ಲಿ ಕುಳಿತು ವರದಕ್ಷಿಣೆಯಲ್ಲಿ ಕೊಡುವ ಚಿತ್ರ ವಸ್ತ್ರ ಹೆಣಿಕೆಯಲ್ಲಿ ತೊಡಗಿದ್ದೆ. ಕೊನೆಯ ಎಳೆ ಜೋಡಿಸುತ್ತಲಿದ್ದೆ. ಅಷ್ಟರಲ್ಲಿ ಅವನು– ''ತುಂಬ ಅನಾಹುತವಾಯಿತು. ನಾನು, ಚಕ್ರವರ್ತಿಗಳ ಆಪ್ತವಲಯದ ಸದಸ್ಯ ? ನಾನು ರಾತ್ರಿಯೇ ಹಡಗು ತಾಣಕ್ಕೆ ಹೋಗಿ ಫ್ರಾನ್ಸ್ ದೇಶಕ್ಕೆ ಹೋಗುವ ವ್ಯವಸ್ಥೆ ಮಾಡುತ್ತೇನೆ. ಮದುವೆಯಾದ ತಕ್ಷಣ ನನ್ನೊಂದಿಗೆ ಹೊರಡಬೇಕು....'' ಎಂದ.

ಫಾದರ್, ಥಿಯೋಡರಕ್ ದುರಹಂಕಾರಿ ಹಾಗೂ ವಿದ್ರೋಹಿ ಯುವಕರ ಪೈಕಿಯೊಬ್ಬ ಎಂಬುದು ನನಗಾಗ ಗೊತ್ತಿರಲಿಲ್ಲ....

''ಫಾದರ್, ನಾನು ತಾಯಿ, ತಂದೆ ಅಣ್ಣಂದಿರರಿಗೆ ಅತ್ಯಂತ ಪ್ರೀತಿಯವಳಾಗಿದ್ದೆ. ಹೀಗಾಗಿ ಹಟಮಾರಿಯೂ ಆಗಿದ್ದೆ. ಅಮಾನುಷರ ದೇಶಕ್ಕೆ ನನ್ನ ಚಪ್ಪಲಿ ಕೂಡ ಹೋಗುವುದಿಲ್ಲ. ನಾನಂತೂ ಇಲ್ಲಿಯೇ ಇರುವೆ ಹಾಗೂ ನೀನು ಕೂಡ ಇಲ್ಲಿಯೇ ಇರಬೇಕು.'' ಆಗ ಅವನು– ''ನಿನ್ನ ಚಕ್ರವರ್ತಿ, ಅವನ ರಾಜಮನೆತನ, ಲಾಟಪಾದ್ರಿ, ಅಷ್ಟೇ ಅಲ್ಲ, ನಿಮ್ಮ ಸಮಸ್ತ ಸಾಮ್ರಾಜ್ಯದ ಬಗ್ಗೆ ನನಗೆ ದ್ವೇಷವಿದೆ. ನಾನು ಆ ದರ್ಬಾರದ ನೌಕರಿ ಮಾಡಲೇ ?.... ಅಸಾಧ್ಯ....'' ಎಂದು ಹೇಳಿದ. ನಮ್ಮಿಬ್ಬರಲ್ಲಿ

ಬಹಳಷ್ಟು ವಾದವಿವಾದ ನಡೆಯಿತು. ಅವನು ಏನೇನೋ ಬಡಬಡಿಸುತ್ತ ತೋಟದ ಗೋಡೆ ಹಾರಿ ತನ್ನ ಮನೆಗೆ ಹೊರಟು ಹೋದ.

''ಫಾದರ್, ಬೈಜಾಂಟಿಯಮ್‌ದ ಪರಂಪರೆಗೆ ಅನುಸಾರವಾಗಿ ನನ್ನ ತಾಯಿಯ ಓರ್ವ ದಾಸಿ ರೇಶಿಮೆ ಪರದೆಯ ಹಿಂದೆ ನಿಂತು ನಮ್ಮ ಎಲ್ಲ ಮಾತುಗಳನ್ನು ಕದ್ದು ಕೇಳಿದ್ದಳು. ಬಲ್ಗಾರಿ ಸೇವಿಕಿಯಾದ ಈಕೆ ಸರಕಾರದ ಗುಪ್ತಚಾರಿಕೆಯಾಗಿದ್ದಳು. ಅವಳು ಹೋಗಿ ಇಡೀ ವೃತ್ತಾಂತವನ್ನು ರಾಜರಿಗೆ ತಿಳಿಸಿದಳು. ಮಾರನೆಯ ದಿನ ಥಿಯೋಡೋರಕ್‌ನನ್ನು ಬಂಧಿಸುವ ಕಾರ್ಯವನ್ನು ನನ್ನಣ್ಣ ಅಲೆಗ್ಝಾಂಡರ್ ಸಿಲ್ವೇರಿಯಸ್‌ಗೇನೇ ಒಪ್ಪಿಸಲಾಯಿತು. ಅದೂ ಅಲ್ಲದೆ ಥಿಯೋಡೋರಕ್‌ನಿಗೆ ಮಾದಕ ಪೇಯದಲ್ಲಿ ವಿಷ ಕೂಡಿಸಿ, ಕುಡಿಸಬೇಕೆಂದು ಕಟ್ಟಪ್ಪಣೆ ವಿಧಿಸಲಾಯಿತು.

ನನ್ನ ಅಣ್ಣ ರಾಜನ ಅಪ್ಪಣೆ ಪಾಲಿಸಲು ಸಿದ್ದನಾದ. ಒಂದು ವೇಳೆ ಆತ ಆಜ್ಞೆಯನ್ನು ಪಾಲಿಸದೇ ಇದ್ದರೆ ಆತನನ್ನೂ ಕೊಲೆ ಮಾಡಲಾಗುತ್ತಿತ್ತು. ಆಗ ನಾನು ಅದೇ ದಿನ ರಾತ್ರಿ ಪರದೆ ಹೊದ್ದುಕೊಂಡು ಕಟಾರಿ ಹಾಗೂ ಅಷರಫಿ (ಚಿನ್ನದ ನಾಣ್ಯ)ಗಳ ಚೀಲ ನಿಲುವಂಗಿಯೊಳಗೆ ಮುಚ್ಚಿಕೊಂಡು ಥಿಯೋಡೋರಕ್‌ನ ಮನೆ ತಲುಪಿದೆ. ಅವನ ತೋಟದ ಗೋಡೆಯ ಕೆಳಗೇನೇ ಸಮುದ್ರವಿತ್ತು, ನಾವು ಸಾಮಾನ್ಯವಾಗಿ ಇಲ್ಲಿಯೇ ಸೇರುತ್ತಿದ್ದೆವು. ಥಿಯೋಡೋರಕ್‌ನಿಗೆ ಈ ಆಜ್ಞೆಯ ವಿಷಯ ಗೊತ್ತಿರಲಿಲ್ಲ. ಅವನು ಸಂತಸದಿಂದಲೇ ಗುಲಾಬಿ ಹೂಗಳ ಮಡಿ ಹಾರಿ ಹಾರಿ ದಾಟುತ್ತ ಗೋಡೆಯ ಮೇಲೆ ಬಂದ. ನಾನು ಅವನಿಗೆ ಈ ಕೆಟ್ಟ ಸುದ್ದಿ ತಿಳಿಸಿದೆ. ಅವನು ಅಚ್ಚರಿಯೊಂದಿಗೆ ಗಾಬರಿಗೊಂಡ. ಆಗ ನಾನು– ''ನಾನು ನನ್ನ ಮೂರ್ಖತನ ಮತ್ತು ತಪ್ಪಿಗಾಗಿ ಲಜ್ಜಿತಳಾಗಿದ್ದೇನೆ. ಈಗ ನಾನು ನಿನ್ನೊಂದಿಗೆ ಬರಲು ಸಿದ್ಧಳಾಗಿದ್ದೇನೆ. ಬಾ, ಈ ಕೂಡಲೇ ಇಲ್ಲಿಂದ ಓಡಿ ಹೋಗೋಣ. ಇಲ್ಲದಿದ್ದರೆ ಬೆಳಗಾಗುತ್ತಲೇ ನನ್ನಣ್ಣ ನಿನ್ನನ್ನು ಗಿರಫ್ತಾರ ಮಾಡುತ್ತಾನೆ'' ಎಂದು ಹೇಳಿದೆ. ಅದಕ್ಕೆ ಥಿಯೋಡೋರಕ್ ಏನು ಹೇಳಿದ ಗೊತ್ತೇ ? ಅವನು ಗೋಡೆಯ ಮೇಲಿಂದ ಹಾರಿ ಸಮುದ್ರದತ್ತ ಮುಖಮಾಡಿ ನಿಂತ. ನಿಂತು ತೋಳು ಚಾಚಿ ಹೇಳಿದ– ''ಸಂಪತ್ತಿನ ದಾಸಿ, ಶ್ರೀಮಂತ ಪುತ್ರಿಯೇ.....ಈ ರೀತಿಯಿಂದ ನನ್ನನ್ನು ಈಗಲೇ ಹಿಡಿಸಬೇಕೆಂದು ಬಂದಿದ್ದಿಯಾ ?.... ಖುದಾ ಹಾಫಿಜ....'' ಎಂದು ಹೇಳುತ್ತ ನೀರಲ್ಲಿ ಹಾರಿದ.

ನಾನು ಮೂಕವಿಸ್ಮಿತಳಾಗಿ ನಿಂತಲ್ಲಿ ನಿಂತೇ ಇದ್ದೆ. ನಾನು ಆಗ ಚಿಕ್ಕವಳಾಗಿದ್ದೆ. ಅಪ್ರಬುದ್ಧಳಾಗಿದ್ದೆ. ಒಂದು ದುರಾಚಾರಗ್ರಸ್ತ ಸಮಾಜದಲ್ಲಿ ಮನುಷ್ಯ ಮನುಷ್ಯನ ಮೇಲೆ ವಿಶ್ವಾಸವಿರಿಸದ ಸಮಯ ಬರುತ್ತದೆಂಬ ಮಾತಿನ ಮನವರಿಕೆ ಅಂದು ನನಗಾಯಿತು. ನಾನು ಥಿಯೋಡೋರಕ್‌ನೊಂದಿಗೆ ನನ್ನ ಜೀವದ ಹಂಗುದೊರೆದು ಓಡಿ ಹೋಗಲು ಸಿದ್ಧಳಾಗಿದ್ದೆ. ನಾವು ಬಲ್ಗಾರಿಯಾಕ್ಕೆ ಹೋಗಬಹುದಾಗಿತ್ತು. ಕಾರ್ಪೇಥಿಯನ್ ಪರ್ವತಗಳ ಮಧ್ಯದಲ್ಲಿ ಅಡಗಿಕೊಳ್ಳಬಹುದಾಗಿತ್ತು. ಮತ್ತೆಲ್ಲಿಗಾದರೂ ಹೋಗಬಹುದಾಗಿತ್ತು. ಆದರೆ ಅವನು ನನ್ನ ಬಗ್ಗೆಯೂ ಸಂಶಯ ತಾಳಿದ ಹಾಗೂ ಓರ್ವನೇ ಹೊರಟು ಹೋದ.

ನಂತರ ಗೊತ್ತಾಯಿತು, ಅವನು ಫ್ರಾನ್ಸ್ ತಲುಪಿದ ಅಲ್ಲಿಂದ ಇಂಗ್ಲಂಡ್. ನನ್ನನ್ನು ಬಿಟ್ಟು ಹೀಗೆ ಅವನು ದೇಶ ದೇಶಾಂತರ ಹೊರಟುಹೋದ. ಯಾರು ಬಲ್ಲರು ಅವನನ್ನು ಅಲ್ಲಿಯ ನರಭಕ್ಷಕರು ಹಿಂಸ್ರಪಶುಗಳು ತಿಂದು ಹಾಕಿದವೋ.... ನಾನು ಕಣ್ಣೀರು ಒರಸಿಕೊಂಡೆ.... ಫಾದರ್ ಗ್ರ್ಯಾಗರಿ ಮೃದುವಾಗಿ ಹೇಳಿದರು– ''ಬೀಬೀ ಫ್ಲೋರಾ ಸಾಬೀನಾ, ಬರ್ತಾನಿಯಾದ ಹಿಂಸ್ರಪಶುಗಳು ನರಭಕ್ಷಣೆ ಮಾಡುವುದಿಲ್ಲ. ಹುಂ !.... ಮತ್ತೆ ಮುಂದೇನಾಯಿತು..... ?''

ದೇವರ ಕೃಪೆ. ತಂದೆಯ ಮೇಲೆ ದೊರೆಯ ಅವಕೃಪೆಯಾಗಲಿಲ್ಲ. ಆದರ, ಎಷ್ಟು ತೀವ್ರ ಸಾಧ್ಯವೋ ಅಷ್ಟು ತೀವ್ರ ಕುಸ್ತುಂತುನಿಯಾದಿಂದ ಹೊರಟು, ತೆಸಫೂನದಲ್ಲಿಯ ದೂತಾವಾಸದ ಅಧಿಕಾರ ವಹಿಸಿಕೊಳ್ಳಬೇಕೆಂಬ ಆಜ್ಞೆಯಾಯಿತು. ಇದು ಕೂಡ ಒಂದು ರೀತಿಯ ಶಿಕ್ಷೆಯಾಗಿತ್ತು. ಮದಾಯಿನದ ಮೇಲೆ ಶೀಘ್ರದಲ್ಲಿಯೇ ಅರಬರ ಕಾರಣದಿಂದಾಗಿ ಗಂಡಾಂತರ ಬರಲಿದೆಂಬುದು ದೊರೆಗೆ ಗೊತ್ತಿತ್ತು. ಅದರಲ್ಲಿ ನಾವೆಲ್ಲ ಸತ್ತು ಹೋಗಬಹುದು. ಹೀಗಿರಲು ಕೆಲ ದಿನಗಳ ನಂತರ ನಮ್ಮ ಪರಿವಾರವೆಲ್ಲ ಹಡಗದಲ್ಲಿ ಪ್ರವಾಸ ಹೊರಟು ಮೆಡಿಟೇರಿಯನ್ ಸಮುದ್ರದತ್ತ ಸಾಗಿತ್ತು. ಸಮುದ್ರ ಪ್ರಶಾಂತವಾಗಿತ್ತು, ಪ್ರಯಾಣಕ್ಕೆ ಹವೆ ಅನುಕೂಲಕರವಾಗಿತ್ತು. ಹಡಗ ಅಂತಾಕಿಯಾದ ದಡದಲ್ಲಿ ಲಂಗರ್ ಹಾಕಿತು. ನಾವು ಹಡಗು ತಂಗುದಾಣದ ಪಾವಟಿಗೆ ಹತ್ತಿದೆವು.

ಪಟ್ಟಣದ ವಸ್ತುಪ್ರದರ್ಶನಾಲಯದಲ್ಲಿ ಚಂದ್ರಕಾಂತಶಿಲೆಯಲ್ಲಿ ಕೆತ್ತಿದ ಇಜಿಪ್ತದ ಮಹಾರಾಣಿಯ ಮೂರ್ತಿ ನೋಡಿದೆ. ರೋಮದ ಶಿಲ್ಪಿ ಕ್ಲಿಯೋಪಾತ್ರಾಳನ್ನು ತನ್ನೆದುರಿಗೆ ಕೂಡಿಸಿಕೊಂಡು ಆ ಶಿಲ್ಪ ನಿರ್ಮಿಸಿದ್ದ. ನಾನು ನಿಜ ಹೇಳುತ್ತೇನೆ ಫಾದರ್, ಕ್ಲಿಯೋಪಾತ್ರಾ ಎಳ್ಳಷ್ಟೂ ಸುಂದರಿಯಾಗಿರಲಿಲ್ಲ. ಅವಳನ್ನು ಇಷ್ಟೊಂದು ಚೆಲುವೆ ಯೆಂದು ಏಕೆ ಪ್ರಸಿದ್ಧ ಮಾಡಲಾಯಿತೋ ತಿಳಿಯದಾಗಿದೆ.

ಸಾಕಷ್ಟು ದಪ್ಪ, ಸುಂದರವಲ್ಲದ ಮೂಗು, ಮೇಲಿನ ದಪ್ಪದುಟಿ, ಕೆಳಗಿನದು ತುಂಬ ತೆಳು, ಗಂಡಸಿನ ಹಾಗೆ ಕಾಣುವ, ಯಾವುದೇ ಮಾರ್ದವತೆಯಿಲ್ಲದ ಮುಖ. ಅದಕ್ಕೆ ಒಳ್ಳೆಯ ಮುಖ ಎನ್ನಬಹುದೇ ಹೊರತು, ಅಪ್ಸರೆಯಂಥ ಮುಖವೆಂದು ಹೇಳಲಾಗದು. ನಾವು ಅಂತಾಕಿಯಾದಿಂದ ಸೈಪ್ರಸ್ ಅಲ್ಲಿಂದ ಎಡಿಸಾ ಮತ್ತು ನಿಸಿಬಸ್ ಮಾರ್ಗವಾಗಿ ಮದಾಯಿನ್ ತಲುಪಿದೆವು. ದಜಲಾದ ತಟದಲ್ಲಿ, ಕೆಲದಿನಗಳ ನಂತರ ಅಲ್ಲಿಯ ಅರಮನೆಯಲ್ಲಿ ತಂದೆಯವರು ದೊರೆಗೆ ರಾಜದೂತ ಸಂಬಂಧಿ ಕಾಗದ ಪತ್ರಗಳನ್ನು ನೀಡಿದರು. ಅವನು ಸಾಯಿರಸ್ ಮತ್ತು ದಾರಾನ ಉತ್ತರಾಧಿಕಾರಿ. ಆದರೆ ಇವರೂ ಕೂಡ ಈಗ ನಮ್ಮ ಹಾಗೆಯೇ ಅತ್ಯಂತ ಅಧೋಗತಿಗೆ ಇಳಿದಿದ್ದರು. ಇಲ್ಲಿಯೂ ಕುಸ್ತುಂತುನಿಯಾದ ಹಾಗೆಯೇ ರಾಜಕೀಯ ಷಡ್‌ಯಂತ್ರಗಳ ಮತ್ತು ರಾಜವಂಶದಲ್ಲಿ ಒಬ್ಬರನ್ನೊಬ್ಬರು ಕೊಲ್ಲುವ ಕಾರ್ಯ ಭರದಿಂದ ಸಾಗಿತ್ತು. ಭೋಗ, ವಿಲಾಸ, ಶೃಂಗಾರದಲ್ಲಿ ಈ ಜನ ಮುಳುಗಿ ಹೋಗಿದ್ದರು. ಅರಮನೆಗಳಲ್ಲಿ ರಾಜರ ಸುಂದರ ಹೂದೋಟಗಳಲ್ಲಿ ದಿನವೂ ರಾಸಲೀಲೆಗಳು ನಡೆಯುತ್ತಿದ್ದವು.

''ತೆಸ್‌ಫೂನ್‌ದಲ್ಲಿ ಓರ್ವ ರೋಮನ್ ಜನರಲ್, ನನ್ನ ಮೇಲೆ ಮೋಹಿತನಾದ. ಆದರೆ ಅವನು ಕೆಥೊಲಿಕ್, ನಾವು ಗ್ರೀಕ ಅರ್ಥೋಡೊಕ್ಸ್. ತಂದೆಯವರು ಅವನೊಂದಿಗೆ ನಾನು ಮದುವೆ ಆಗಲು ರಾಜಿ ಆಗಲಿಲ್ಲ. ಆದರೆ ನಾನು ಈ ಮದುವೆಗೆ ಸಿದ್ಧಳಿದ್ದೆ. ಈರಾನ ಮತ್ತು ತೂರಾನದ ಗುಂಗುರುಗೂದಲಿನ ಗಡ್ಡಧಾರಿಗಳು ಅತ್ಯಂತ ಸಿಟ್ಟಿನ ಅಗ್ನಿಪೂಜಕರೆಂದು ಹಾಗೂ ತಮ್ಮ ಹೆಂಗಸರನ್ನು ಪರದೆಯೊಳಗೆ ಒಂದು ರೀತಿ ಕೈದಿಗಳ ಹಾಗಿಟ್ಟು ಸತಾಯಿಸುತ್ತಾರೆಂದೂ, ಅಸಭ್ಯ, ಅನಾಗರಿಕರೆಂದೂ, ಕುಸ್ತುಂತುನಿಯಾದಲ್ಲಿ ನಾನು ಕೇಳಿದ್ದೆ. ಆದರೆ ಅವರು ಬೈಜಾಂಟಿಯಮ್‌ದ ನಮಗಿಂತ ಎಷ್ಟೋ ಪಟ್ಟು ಸಭ್ಯರೂ, ನಾಗರಿಕರೂ, ಸುಧಾರಿಸಿದವರೂ, ವಿನಯಿಗಳೂ, ರಸಿಕರೂ ಆಗಿದ್ದರಲ್ಲದೆ ನಮ್ಮ ಹಾಗೆಯೇ ಸುಂದರರೂ ಆಗಿದ್ದರು.... ಅವನು ಅಗ್ನಿ ಮಂದಿರದ ಮುಖ್ಯ ಪೂಜಾರಿಯ ಮಗನಾಗಿದ್ದ...... ದಸ್ತೂರ ಜಾದಾ ಮನೋಚಹರ ಫೀರೋಜ.... ನಾನು ಏನನ್ನೋ ನೆನೆಸಿಕೊಂಡು ದುಃಖಿತಳಾದೆ. ಫಾದರ್ ಗ್ರೆಗರಿ ಕನ್ಫೆಷನ್ ಹೇಳುವ ದನಿಯಲ್ಲಿ– ''ಬೀಬಿ ಹೇಳು, ನಿನ್ನ ಕಥೆಯನ್ನೆಲ್ಲ ಹೇಳುತ್ತ ಹೋಗು.... ನಾನು ಆಸಕ್ತಿಯಿಂದ ಕೇಳುತ್ತಿದ್ದೇನೆ....''

ಫಾದರ್, ಮನೋಚಹರ.... ನಿಜವಾಗಿಯೂ ಮನೋಚಹರನಾಗಿದ್ದ..... ಅವನು ತನ್ನ ಭಾಷೆಯಲ್ಲಿ ನನ್ನ ಹೆಸರನ್ನು 'ಗುಲ್‌ಬಾನೊ' ಎಂದು ಅನುವಾದಿಸಿದ್ದ. ಅವನು ನನಗೆ ಹೇಳುತ್ತಿದ್ದ..... ಗುಲ್‌ಬಾನೊ..... ಗುಲ್ ಚೆಹರೆ..... ಗೂಂಚೆ..... ಗುಲ್‌ಬದನ್..... ಪೈಗಂಬರರ ಆಣೆ...... ನೀನು ನನ್ನನ್ನು ವರಿಸದಿದ್ದರೆ ನಾನು ದಜಾಲಾ ಸಮುದ್ರದಲ್ಲಿ ಹಾರಿ ಜೀವ ಬಿಡುತ್ತೇನೆ.... ನಡಿ.... ನಾವಿಬ್ಬರೂ ಅಗ್ನಿ ಮಂದಿರದಲ್ಲಿ, ಅಗ್ನಿ ಸಾಕ್ಷಿಯಾಗಿ ಯಾರಿಗೂ ಗೊತ್ತಾಗದಂತೆ ಮದುವೆ ಮಾಡಿಕೊಳ್ಳೋಣ... ನಾನು ರಾಜಿ ಆದೆ.... ಆ ಸಂಜೆ ದಜಾಲಾದ ತೀರದಲ್ಲಿಯ ಒಂದು ಲತಾಮಂಟಪದಲ್ಲಿ ಕುಳಿತು ಒಂದು ಸ್ಕೀಮ್ ಹಾಕುತ್ತಿದ್ದೆವು. ನಮ್ಮ ದುರ್ಭಾಗ್ಯದಿಂದ ಇಲ್ಲಿಯ ಲತಾಬಳ್ಳಿಗಳ ಮರೆಯಲ್ಲಿ ಓರ್ವ ಸಾಸಾನಿ ಪತ್ತೇದಾರ ಕುಳಿತು ನಮ್ಮ ಈ ಸ್ಕೀಮ್ ಅರಿತುಕೊಂಡಿರಬೇಕು. ಸಂಜೆ ನಾನು ನನ್ನ ಮನೆ ತಲುಪಿದಾಗ ನನ್ನನ್ನು ಕೂಡಲೇ ನನ್ನ ಕೋಣೆಯಲ್ಲಿ ಬಂದಿಯನ್ನಾಗಿ ಇಡಲಾಯಿತು. ನಾನು ಆಗಾಗ ಆ ದುರ್ದೈವಿ ಥಿಯೋಡೋರಕ್‌ನ ನೆನಪಿನಲ್ಲಿ ಕಣ್ಣೀರು ಹಾಕುತ್ತೇನೆ. ಮತ್ತೊಮ್ಮೆ ರೋಮನ್ ಜನರಲ್ ಲೂಸಿಲಾಯಿಸ್, ಮಗುದೊಮ್ಮೆ ದಸ್ತೂರಜಾದಾ ಮನೋಚಹರ ಫೀರೋಜನ ನೆನಪಿನಲ್ಲಿ.... ಮೂರು ದಿನಗಳ ನಂತರ ಒಂದು ಬೆಳಗಿನಲ್ಲಿ ತಾಯಿ, ಅತ್ತತ್ತು ಕಣ್ಣು ಕೆಂಪಗಾಗಿದ್ದವೆಂದು ತೋರುತ್ತದೆ–ಬಂದು ''ಪ್ರವಾಸಕ್ಕೆ ಸಿದ್ಧಳಾಗು'' ಎಂದಳು.

ಬೈಜಾಂಟಿಯಮ್‌ಕ್ಕೆ ಮರಳುತ್ತಿದ್ದೇವೆಂದು ನಾನು ಭಾವಿಸಿದೆ. ಕೂಡಲೇ ನಾನು ಗುಲಾಬಿಯ ನೀರಿನಿಂದ ಮುಖ ತೊಳೆದುಕೊಂಡೆ, ಸ್ನಾನ ಮಾಡಿದೆ, ಒಳ್ಳೆಯ ಬಟ್ಟೆ ಧರಿಸಿದೆ, ಹೊರಗೆ ಬಂದೆ, ಆದರೆ ನನ್ನನ್ನು ನೋಡಿ ಮನೆಯವರೆಲ್ಲ ಮೌನವಾಗಿದ್ದರು. ಬಲ್ಗಾರಿಯದ ಗುಲಾಮ ಮತ್ತು ದಾಸಿ ಕೂಡ ಅತ್ಯಂತ ಮೌನವಾಗಿದ್ದರು. ಎಲ್ಲಿಗೆ

ಹೋಗುತ್ತೇವೆಯೆಂಬುದು ಎಳ್ಳಷ್ಟೂ ಗೊತ್ತಾಗಲಿಲ್ಲ. ಬಹುಶಃ ನನ್ನನ್ನು ಸಮುದ್ರದಲ್ಲಿ ಮುಳುಗಿಸಲು ಕರೆದೊಯ್ಯುತ್ತಿರಬಹುದೆಂದು ಊಹಿಸಿದೆ. ತಂದೆಯವರು ತಮ್ಮ ಕಠೋರತೆಗೆ, ಸಂಕುಚಿತ ಮನಸ್ಸಿಗೆ ಹೆಸರುವಾಸಿಯಾಗಿದ್ದರು. ಥರ....ಥರ..... ನಡುಗುತ್ತ ಬಾಗಿಲದಿಂದ ಹೊರಬಂದೆ. ತಾಯಿ ನನ್ನನ್ನಪ್ಪಿಕೊಂಡು ತುಂಬ ಅತ್ತರು. ಆದರ ಆಕೆ ಕೂಡ ಏನನ್ನೂ ಹೇಳಲಿಲ್ಲ. ಕೇವಲ ಅಪ್ಪಿಕೊಂಡು ತನ್ನ ಕಣ್ಣೀರಿನಿಂದ ನನ್ನ ತೋಯಿಸಿದಳು ಅಷ್ಟೆ. ಸೇವಕರು, ನನ್ನನ್ನು ಮಲಗಿದ್ದ ಒಂಟೆಯ ಮೇಲೆ ಅಂಬಾರಿಯಲ್ಲಿ ಕೂಡಿಸಿದರು. ಒಂಟೆ ಅಲ್ಲಾಡುತ್ತ ಎದ್ದು ನಿಂತಿತು. ನನಗನ್ನಿಸಿತು.... ಇನ್ನೇನು ಭೂಕಂಪವಾಗುತ್ತದೆ..... ಒಂಟೆ ಮುಂದೆ ಹೋಗತೊಡಗಿತು.... ಬಿದ್ದೆ.... ಬಿದ್ದೆ.... ಎನ್ನಿಸತೊಡಗಿತು.... ಒಂಟೆಯ ಡೋಲಾಯಮಾನ ನಡಿಗೆಗೆ..... ತಂದೆ ಹಾಗೂ ಇಬ್ಬರೂ ಸೋದರರು ಕುದುರೆಗಳ ಮೇಲೆ ಬರತೊಡಗಿದ್ದರು.... ನನ್ನ ಮದುವೆಯಲ್ಲಿ ವರದಕ್ಷಿಣೆಯ ರೂಪದಲ್ಲಿ ಕೊಡಲು ತಂದಿದ್ದ ವಜ್ರ–ವೈಢೂರ್ಯ, ಬೆಳ್ಳಿ–ಬಂಗಾರದ ಒಡವೆಗಳನ್ನು, ಭಾಂಡೆ ಮುಂತಾದ ಸಾಮಾನುಗಳನ್ನು ನೌಕರರು ಪಶುಗಳ ಮೇಲೆ ಹೇರಿದರು. ಇವುಗಳನ್ನೆಲ್ಲ ನಾವು ಬರುವಾಗ ಕುಸ್ತುಂತುನಿಯಾದಿಂದ ನಮ್ಮೊಂದಿಗೇ ತಂದಿದ್ದೆವು. ತಾಯಿ ಬಾಗಿಲದಲ್ಲಿ ನಿಂತು ಒಂದೇ ಸಮನೆ ಅಳುತ್ತಿದ್ದರು. ನಮ್ಮ ಕಾರವಾನ ಅಲ್ಲಿಂದ ಚಲಿಸಿತು....ತೆಸ್‌ಫೂನ್ ನಗರದಿಂದ ಹೊರಹೊರಟು ಶಾಮದತ್ತ ಹೊರಟೆವು.....ದಮಿಷ್ಕ ತಲುಪಿದೆವು.....ಅಲ್ಲಲ್ಲಿ ದಾರಿಗಳಲ್ಲಿ ವಿಶ್ರಾಂತಿ ಗಾಗಿ ತಂಗಿದಾಗ ಕೂಡ ತಂದೆ, ಸೋದರರು ಮೌನವಾಗಿಯೇ ಇದ್ದರು..... ಓರ್ವ ಕಾಫಿರ್ ಅಗ್ನಿ ಪೂಜಕನನ್ನು ಪ್ರೀತಿಸಿದ ತಪ್ಪಿಗಾಗಿ, ತಂದೆಯವರಲ್ಲಿ ಮರಣ ದಂಡನೆಗಿಂತ ಬೇರಾವ ಶಿಕ್ಷೆಯೂ ಇಲ್ಲವೆಂಬುದು ನನಗೆ ಈಗೀಗ ಅನ್ನಿಸತೊಡಗಿತು.

ದಮಿಷ್ಕದಿಂದ ಸಾಕಷ್ಟು ದೂರ ಹೋದ ನಂತರ, ಒಂದು ಪರ್ವತ ಶಿಖರದ ಮೇಲೆ, ಹೊಂಗಿ ಮರಗಳ ಮಧ್ಯದಲ್ಲಿರುವ ಒಂದು ಗ್ರೀಕ್ ಆರ್ಥೋಡೋಕ್ಸ್ ಜನಾಂಗದ ಮಠವೊಂದು ಕಾಣಿಸಿತು. ಮಠದ ಬಾಗಿಲಿಗೆ ಹೋಗಿ ನಮ್ಮ ಕಾರವಾನ್ ನಿಂತಿತು. ತಂದೆಯವರು ಕುದುರೆಯಿಂದ ಇಳಿದು ಮಠದ ಮುಂದೆ ಕಟ್ಟಿದ್ದ ಗಂಟೆಯ ಹಗ್ಗವನ್ನು ಮೂರು ಸಲ ಜಗ್ಗಿದರು. ಕೆಲಸಮಯದ ನಂತರ ಕಟ್ಟಿಗೆಯ ದೊಡ್ಡ ದೊಡ್ಡ ಬಾಗಿಲು ಸಪ್ಪಳ ಮಾಡುತ್ತ ತೆರೆದುಕೊಂಡವು. ಓರ್ವ ಗ್ರೀಕ್ ವೃದ್ಧ ಸನ್ಯಾಸಿನಿ ಹಣಿಕಿ ಹಾಕಿ ನೋಡಿದಳು. ಕೆಲ ನಿಮಿಷಗಳ ನಂತರ ಇನ್ನೋರ್ವ ಗ್ರೀಕ್ ವೃದ್ಧೆ ಬಂದು ನಮ್ಮನ್ನು ಒಳಗೆ ಕರೆದುಕೊಂಡು ಹೋದಳು. ಒಂದು ದೊಡ್ಡ ಕೋಣೆ..... ಕಂದು ಬಣ್ಣದ ಶೀತಲ ಕಲ್ಲಿನ ಹಾಸಿಗೆ ಹಾಸಿತ್ತು. ಅಷ್ಟೇ ತಣ್ಣಗಿನ ಕಲ್ಲಿನ ಗೋಡೆಗಳು... ಆ ಗೋಡೆಯಲ್ಲಿ ಒಂದು ಸಣ್ಣ ಕಿಟಕಿ.... ಎರಡು ಒರಟಾದ ಬೆಂಚುಗಳು.... ಆ ವೃದ್ಧೆ ಮಠದಲ್ಲಿ ಸನ್ಯಾಸ ದೀಕ್ಷೆ ತೆಗೆದುಕೊಳ್ಳುವ ಪೂರ್ವದಲ್ಲಿ ಬೈಜಾಂಟೆಯಮ್‌ದ ಓರ್ವ ರಾಜಕುಮಾರಿಯಾಗಿದ್ದಳು....ಮತ್ತೊಂದು ಕೋಣೆಗೆ ಹೋಗಿ ತಂದೆಯವರು ಆಕೆಯೊಂದಿಗೆ ಬಹಳಷ್ಟು ಹೊತ್ತು ಮಾತನಾಡಿದರು.... ನಂತರ ನನ್ನನ್ನು ಕರೆದರು.... ಇಷ್ಟು ದಿನಗಳ ನಂತರ ನನ್ನ ತಂದೆ ನನ್ನೊಂದಿಗೆ ಇಂದು ಮಾತನಾಡಿದರು....

''ಇಲ್ಲಿ ನೋಡು ಮಗಳೆ.... ಯಾವುದು ಆಗಬೇಕಿತ್ತೊ ಅದೆಲ್ಲ ಆಯಿತು... ಅದನ್ನೆಲ್ಲ ಮರೆತು ಬಿಡು....ನಾನು ನಿನ್ನನ್ನು ಶಾಶ್ವತವಾಗಿ ಪ್ರಭು ಏಸುವಿನ ಚರಣತಲದಲ್ಲಿ ಒಪ್ಪಿಸುತ್ತಿದ್ದೇನೆ....ನಿನ್ನ ಹಿತ ಇದರಲ್ಲಿಯೇ ಇದೆ.... ಎಂದು ನಾನು ಭಾವಿಸಿದ್ದೇನೆ....''

''ಹೌದು, ತಂದೆಯೇ.....'' ಎಂದು ನಾನು ತಲೆಬಾಗಿ ಹೇಳಿದೆ. ಇದರ ಹೊರತಾಗಿ ನಾನು ಇನ್ನೇನು ಮಾಡಬಲ್ಲೆ.... ತಂದೆಯವರು ಆ ಇನ್ನೊಂದು ಕೋಣೆಗೆ ಬಂದರು.... ಒಂಟೆಯ ಜೊತೆ ಬಂದಿದ್ದ ಚಾಕರರನ್ನು ಕರೆದರು.... ಅವರು ಚಿನ್ನದ ನಾಣ್ಯ ಮುಂತಾದ ವಸ್ತುಗಳಿಂದ ತುಂಬಿದ್ದ ಪೆಟ್ಟಿಗೆಗಳನ್ನು ಮದರ್ ಸುಪೀರಿಯರಳ ಮುಂದೆ ಇರಿಸಿದರು....ಪದ್ಧತಿಯ ಪ್ರಕಾರ ನನ್ನ ತಂದೆ ನನ್ನ ''ಸ್ವರ್ಗದ ವರದಕ್ಷಿಣೆ'' ಯ ರೂಪದಲ್ಲಿ ಅವನ್ನೆಲ್ಲ ಮಠಕ್ಕೆ ಅರ್ಪಿಸಿದರು... ಆನಂತರ ತಂದೆಯವರು ನನ್ನನ್ನು ಅಪ್ಪಿಕೊಂಡರು. ನನ್ನ ತಲೆಯ ಮೇಲೆ ಅತ್ಯಂತ ಪ್ರೀತಿಯಿಂದ ಕೈಯಾಡಿಸಿದರು... ತುಂಬ ಕಷ್ಟದಿಂದ ಕಣ್ಣೀರು ಹತ್ತಿಟ್ಟುಕೊಂಡರು... ಸೋದರರು ಕೂಡ ತಮ್ಮ ಒದ್ದೆಯಾದ ಕಣ್ಣುಗಳನ್ನು ಒರೆಸಿಕೊಂಡರು... ನಾನೀಗ ಏಸುವಿನ ವಧುವಾಗಲಿದ್ದೆ..... ಅವರು ಮೂವರೂ, ನನ್ನ ತಂದೆ ಮತ್ತು ನನ್ನ ಸೋದರರು ನನ್ನೆದುರಿನಲ್ಲಿ ಬಾಗಿ, ನನಗೆ ಗೌರವ ಸಲ್ಲಿಸಿದರು....

ಹಾಗೂ–''ನಮಗಾಗಿ ಪ್ರಾರ್ಥನೆ ಸಲ್ಲಿಸಿ'' ಎಂದು ಕೇಳಿಕೊಂಡರು.... ನಂತರ ಹೊರಗೆ ಹೊರಟು ಹೋದರು.... ಎದೆ ಬಡಿದುಕೊಂಡು ಅಳಬೇಕೆನ್ನಿಸಿತು ನನಗೆ... ಆದರೂ ಧೈರ್ಯ ತಂದುಕೊಂಡು ಸಲಾಕಿಯುಳ್ಳ ಕಿಟಕಿಯಿಂದ ಹೊರಗೆ ಹಣಿಕಿಕ್ಕಿದೆ... ಅವರು ಮೂವರೂ ಗೇಟಿನಿಂದ ಹೊರಗೆ ಹೋದರು.... ಕುದುರೆಗಳ ಮೇಲೇರಿದರು.... ತಲೆಬಾಗಿಸಿಕೊಂಡು ಬೆಟ್ಟಗಳ ದಾರಿಯಿಂದ ಹೊರಟರು... ರಾತ್ರಿಯ ಮಂಜಿನಲ್ಲಿ ನನ್ನ ಕಣ್ಣಿಗೆ ಕಾಣದಾದರು....

ಅವರ ಹಿಂದೆ ಹಿಂದೆ ನನ್ನನ್ನು, ನನ್ನ ವರದಕ್ಷಿಣೆ ಹೇರಿಕೊಂಡು ಬಂದಿದ್ದ ಒಂಟೆಗಳು ಈಗ ಖಾಲಿಯಾಗಿ ಹೊರಟಿದ್ದವು..... ಮರಳಿ..... ಗ್ರೀಕ್ ಮುದುಕಿ ಹೊರಗೆ ಹೋಗಿ ಗೇಟಿಗೆ ಕೀಲಿ ಹಾಕಿದಳು..... ಕೀಲಿ ಕೈ ಗುಚ್ಛ ಸಪ್ಪಳ ಮಾಡುತ್ತ ಮೇಣಬತ್ತಿಯನ್ನು ಕೈಯಲ್ಲಿ ಹಿಡಿದುಕೊಂಡು ಮರಳಿ ಬಂದು ಹೇಳಿದಳು.... ''ನಡಿ...'' ಎಂದು.

ನಾನೊಂದು ಕತ್ತಲೆ ತುಂಬಿದ ಶೀತಲ ಗ್ಯಾಲರಿಯಲ್ಲಿ ಆಕೆಯ ಹಿಂದೆ ಹಿಂದೆ ಹೊರಟೆ.... ಆಕೆ ಒಂದು ಕೋಣೆಯಲ್ಲಿ ಪ್ರವೇಶಿಸಿದಳು... ಶೀತಲ ಕಲ್ಲಿನ ಗೋಡೆಗಳು.... ಅಷ್ಟೇ ಶೀತಲವಾಗಿತ್ತು ನೆಲದ ಹಾಸು.... ಒಂದು ಸಣ್ಣ ಸಲಾಕೆಯಿದ್ದ ಕಿಟಕಿ....ಒಂದು ಕಟ್ಟಿಗೆಯ ಮಣೆ.... ಅದರ ಮೇಲೆ ಕುರಿ ಉಣ್ಣೆ ಕಂಬಳಿ ಹಾಸಿತ್ತು... ಮತ್ತೊಂದು ಒರಟಾದ ಕಂಬಳಿಯನ್ನು ಅದರ ಮೇಲೆ ಇರಿಸಲಾಗಿತ್ತು.... ನನಗಾಗಿ ಒಂದು ಜಪಮಾಲೆ.... ಒಂದು ದೀಪಸ್ತಂಭ..... ಗೋಡೆಯ ಮೇಲೊಂದು ಕಪ್ಪಗಿನ ಶಿಲುಬೆ.... ಏಸು ಹಾಗೂ ಮೇರಿಯ ಚಿತ್ರಗಳು... ಸಣ್ಣ ಸ್ಟೂಲಿನ ಮೇಲೆ ಮಾರ್ಬಲ್ಲಿನ

ಲೋಟಾ, ಕಟ್ಟಿಗೆಯ ಒಂದು ಚಮಚಾ, ತಟ್ಟೆ ಇರಿಸಲಾಗಿತ್ತು.. ವೃದ್ಧ ಸನ್ಯಾಸಿನಿ ಗ್ಯಾಲರಿಯತ್ತ ಹೊರಟು ಹೋದಳು.... ನಾನು ಮುತ್ತು ರತ್ನ ಖಚಿತ ನಿಲುವಂಗಿ ಕಳೆದೆ.... ಒರಟಾದ ಬಟ್ಟೆ ಉಟ್ಟು ಕೊಂಡೆ.... ನಿಲುವಂಗಿಯನ್ನು ಉಳಿದ ಬಟ್ಟೆಯನ್ನು ಒಂದು ಗಂಟು ಕಟ್ಟಿ ಸನ್ಯಾಸಿಗೆ ಒಪ್ಪಿಸಿದೆ.... ಒಳಗಿನಿಂದ ಬಾಗಿಲು ಚಿಲಕ ಹಾಕಿಕೊಂಡು ಏಸುವಿನ ಮುಂದೆ ಮೊಣಕಾಲೂರಿ ಬಾಗಿಬಿಟ್ಟೆ.....

ನಾನು ಮಾತು ಮುಗಿಸಿದೆ.... ಅಷ್ಟರಲ್ಲಿ ಫಾದರ್ ಅರ್ಧ ಪ್ಯಾಕೆಟ್ ಸಿಗರೇಟ್ ಮುಗಿಸಿದ್ದ.

''ಆ ನಂತರ.... ?'' ಅವನು ಗಾಬರಿಯಿಂದ ಕೇಳಿದ.....

''ಅದು..... ಆ ಕಾಲ ತುಂಬ ಆಘಾತಗಳಿಂದ, ತೊಂದರೆಗಳಿಂದ ಕೂಡಿದ್ದಾಗಿತ್ತು... ನಮ್ಮ ದೊರೆ ಸದಾಕಾಲ ಅರಬರೊಂದಿಗೆ ಯುದ್ಧ ಮಾಡುತ್ತಿದ್ದ ಹಾಗೂ ಸೋತು ಬರುತ್ತಿದ್ದ.... ನಾವು ಬಹಳಷ್ಟು ತಪ್ಪಿತಸ್ಥರಾಗಿದ್ದೇವೆ.... ಕೆಟ್ಟವರಾಗಿದ್ದೇವೆ.... ಎಂದು ನಮ್ಮಲ್ಲಿಯ ವೃದ್ಧ ಪಾದ್ರಿಗಳ ಹೇಳಿಕೆಯಾಗಿತ್ತು.... ಅಂತೆಯೇ ದೇವರು ನಮ್ಮ ಮೇಲೆ ಸಿಟ್ಟಾಗಿದ್ದಾನೆ... ಎಂದೂ ಅವರು ಅನ್ನುತ್ತಿದ್ದರು.... ನಾವು ಇಲ್ಲಿಗೆ ಬರುವ ಕೆಲ ವರ್ಷಗಳ ಮುಂಚೆ ಒಂದು ರೋಮಾಂಚನಗೊಳಿಸುವಂಥ ಘಟನೆ ನಡೆದಿತ್ತು.. ಅರಬ್ ದೇಶದ ಮರುಭೂಮಿಯಿಂದ ಹೊರಟು ಇಬ್ಬರು ಫಕೀರರ ಹಾಗೆ ತೋರುವ ರಾಜದೂತರು ಪೈಗಂಬರ ಮೊಹಮ್ಮದರ ಒಂದು ಮಹತ್ವಪೂರ್ಣ ಪತ್ರ ತೆಗೆದುಕೊಂಡು ಈರಾನದ ದೊರೆಯ ಹತ್ತಿರ ಬಂದಿದ್ದರು.... ಇದೇ ರೀತಿಯ ಪತ್ರ ಇದೇ ಪ್ರಕಾರದ ವೇಷಧಾರಿ ರಾಜದೂತರನ್ನು ನಮ್ಮ ದೊರೆಯ ಹತ್ತಿರ ತಂದಿದ್ದರು.... ಅವರೊಂದಿಗೆ ಹೇಗೆ ಅಪಮಾನಪೂರ್ಣ ವರ್ತನೆ ಮಾಡಿದನೋ ಅದೇ ರೀತಿ ಖುಶರೋಪರವೇಜ ಕೂಡ ಚೇಷ್ಟೆ ಮಾಡುತ್ತ ಪತ್ರ ಓದಿದ ಮತ್ತು ರಾಜದೂತರನ್ನು ರಾಜಸಭೆಯಿಂದ ಹೊರಹಾಕಿದ.... ಈ ಘಟನೆ ನಡೆದು ಕೆಲ ವರ್ಷಗಳ ನಂತರ ಸಾಸಾನಿ ಸಾಮ್ರಾಜ್ಯ ಶಾಶ್ವತವಾಗಿ, ಸರ್ವನಾಶವಾಗಿ ಹೋಯಿತು.... ಹೆಸರು ದೆಸೆಯಿಲ್ಲದಂತಾಯಿತು..... ನಾವು ಮದಾಯಿನ್‌ದಲ್ಲಿದ್ದಾಗ ದೊರೆ ಶಾಹಖುಶ್‌ರೋನ ಕೊನೆಯ ಉತ್ತರಾಧಿಕಾರಿಯ ಕಾಲವಾಗಿತ್ತು.... ಅವನು ಈಗಲೂ ತನ್ನ ಸ್ವರ್ಣಸಿಂಹಾಸನದ ಮೇಲೆ ಪರದೆಯ ಹಿಂದೆ ಕುಳಿತು ಕೊಂಡಿರುತ್ತಿದ್ದ.....''

''ಮಠದಲ್ಲಿ ಕೈದಿಯ ಹಾಗಿದ್ದ ನನಗೆ ಹೊರಜಗತ್ತಿನ ಆಗುಹೋಗುಗಳು ಏನೊಂದೂ ತಿಳಿಯುತ್ತಿರಲಿಲ್ಲ..... ಸಂಪೂರ್ಣವಾಗಿ ಹೊರ ಜಗತ್ತಿನಿಂದ ನಾನು ವಂಚಿತಳಾಗಿದ್ದೆ..... ಷಾಹ ಕೆಲಸಮಯದಿಂದ ಅರಬ್‌ರ ವಿರುದ್ಧ ಹೋರಾಡಲು ಕಲ್ಡಾನಿಯಾಕ್ಕೆ ಸೈನ್ಯ ಕಳಿಸಿದ್ದ. ಅದಕ್ಕೆ ಉತ್ತರವಾಗಿ ಅರಬ್ ಖಲೀಫಾರ ಸೈನ್ಯ ತೆಸ್‌ಫೂನ್‌ನನ್ನೇ ನಾಶಗೊಳಿಸಿದರೆಂಬ ಸುದ್ದಿಯನ್ನು ಕೆಲ ವರ್ಷಗಳ ನಂತರ ದಮಿಷ್ಕದಿಂದ ಬಂದ ಕೆಲ ಪಾದ್ರಿಗಳು ತಂದಿದ್ದರು. ತಂದೆಯವರನ್ನು ಈ ಯುದ್ಧಕ್ಕಿಂತ ಕೊಂಚ ಪೂರ್ವದಲ್ಲಿ ಕುಸ್ತುಂತುನಿಯಾಕ್ಕೆ ಮರಳಿ ಕರೆಯಿಸಿಕೊಳ್ಳಲಾಗಿತ್ತು. ಶಾಮ ಮತ್ತು ಈಜಿಪ್ತ ನಮ್ಮ ಕೈಬಿಟ್ಟು ಹೋಗಿದ್ದವು. ಈರಾನನ್ನು ಸಾಸಾನ ಕಳೆದು

ಕೊಂಡಿತು... ತಂದೆಯವರ ಬಗ್ಗೆ ನನಗೆ ತುಂಬ ಚಿಂತೆಯಾಗಿತ್ತು.... ಸೇನೆಯಲ್ಲಿದ್ದ ಮೂವರು ಸೋದರರ ಬಗ್ಗೆಯೂ...... ಅವರನ್ನು ಈಗ ಯಾವ ಕೊಲೆಯ ಸ್ಥಾನ ದಲ್ಲಿರಿಸಿದ್ದಾರೋ ನಾನು ದಿನಾ–ರಾತ್ರಿ ಅವರಿಗಾಗಿ ಪ್ರಾರ್ಥನೆ ಸಲ್ಲಿಸುತ್ತಿರುತ್ತೇನೆ.... ಪ್ರಾರ್ಥನೆಯ ಹೊರತಾಗಿ ನನಗೆ ಬೇರೇನೂ ಕೆಲಸವೇ ಇರಲಿಲ್ಲ...''

''ಆದರೆ, ವಿಚಿತ್ರವೇನೆಂದರೆ ಹೊಸ ಸರಕಾರ ನಮ್ಮೊಂದಿಗೆ ತುಂಬ ಒಳ್ಳೆಯ ರೀತಿಯಿಂದ ವರ್ತಿಸಿತು.... ತಮ್ಮ ಪ್ರೊಫೆಟ್, ಮಠದ ಸೇಂಟ್ ಕ್ಯಾಥ್ರೀನ ಸನ್ಯಾಸಿಗಳಿಗೆ ನೀಡಿದ ಸಂದೇಶದಂತೆ ಅವರು ನಡೆಯುತ್ತಿದ್ದಾರೆಂದು ಪಾದ್ರಿಗಳು ಹೇಳಿದರು.... ಸೂರ್ಯ ಮುಳುಗಿದ ನಂತರ, ನಮ್ಮಲ್ಲಿಯ ಯಾರಾದರೂ ಸನ್ಯಾಸಿನಿ ಕಂದೀಲ ಹಚ್ಚಲು ಮಾಳಿಗೆ ಮೇಲೆ ಹೋದರೆ, ಲೆಬನಾನ್ ಮತ್ತು ಪೆಲಸ್ತೀನ ಮತ್ತು ಈಜಿಪ್ತ ಕಡೆ ಹೋಗುವ ಕಾರವಾನ್ ಗಂಟೆ ಬಾರಿಸುತ್ತ ಕಣಿವೆಯಲ್ಲಿ ಹೋಗುತ್ತಿರು ವಂತೆ ಕಂಡುಬರುತ್ತದೆ...... ಒಮ್ಮೊಮ್ಮೆ ಆ ದಾರಿಕಾರರಲ್ಲಿ ಯಾರಾದರೂ ಒಬ್ಬರು ದನಿಯೆತ್ತಿ ಮಾತಾಡುತ್ತಾರೆ–ಏಸು ಪರಮಾತ್ಮನ ಶ್ರದ್ಧಾವಂತ ಅನುಯಾಯಿಗಳಾದ ಸನ್ಯಾಸಿನಿಯರೇ.... ನಿಮ್ಮ ಮೇಲೆ ದೇವರ ಕೃಪೆಯಿರಲಿ.... ಉತ್ತರ ರೂಪದಲ್ಲಿ ನಾವು, ಬಹಳ ಹೊತ್ತಿನವರೆಗೆ ಅಲ್ಲಿಯೇ ಇದ್ದು ಕಂದೀಲು ಎತ್ತಿ ಹಿಡಿದು ಆ ದಾರಿಕಾರರಿಗೆ ದಾರಿ ತೋರಿಸುತ್ತೇವೆ..... ಅವರು ಆ ಬೆಟ್ಟದ ಮಂಜಿನಲ್ಲಿ ಮರೆಯಾಗುವವರೆಗೆ.....''

ದಮಿಷ್ಕ ಮತ್ತು ಯರೋಶಲಮ್‌ದ ಕ್ರೈಸ್ತ ಶ್ರೀಮಂತ ತರುಣಿಯರು ತಮ್ಮ ದಾಸಿಯರು ಹಾಗೂ ಗುಲಾಮರೊಂದಿಗೆ ನಮ್ಮ ಚರ್ಚದಲ್ಲಿರುವ ಸೇಂಟ್ ಸೈಮನ್‌ನ ಸಮಾಧಿಯ ಮೇಲೆ, ಅಮೂಲ್ಯವಾದ ಚಾದರ ಹೊದಿಸಲು ಬರುತ್ತಾರೆ....[1] ನಾನು ಆಗ ಅವರ ವೈಭವಪೂರ್ಣ ಉಡುಪು, ಆಭರಣಗಳನ್ನು ಆಸಕ್ತಿಯಿಂದ ನೋಡುತ್ತೇನೆ....

ಒಂದು ದಿನ ಬೆಳಗ್ಗೆ ನಾನು ಮಾಳಿಗೆಯ ಮೇಲೆ ಪಾರಿವಾಳಗಳಿಗೆ ಕಾಳು ತಿನ್ನಿಸುತ್ತಿದ್ದೆ... ಆಗ ದೂರದಲ್ಲಿ ಪ್ರವಾಸಿಗರು ಕಾರವಾನ್‌ದ ಹಾಗೆ ಬರುತ್ತಿರುವುದು ಕಾಣಿಸಿತು.... ತುಂಬ ಮುಂದೆ ರಾಜಕುಮಾರಿ ಬಿಳಿಯ ಕುದುರೆಯ ಮೇಲೆ ಕುಳಿತಿದ್ದಳು... ತಲೆಯ ಮೇಲೆ ಸ್ವರ್ಣಖಚಿತ ಕಿರೀಟ.... ಬಲಗೈಯಲ್ಲಿ ಸೇಂಟ್ ಜಾರ್ಜನ ಧ್ವಜವಿತ್ತು.... ಸರಕಾರದ ಇಬ್ಬರು ಅರಬ್ ಅಧಿಕಾರಿಗಳು ಕುದುರೆಗಳ ಮೇಲೆ ಕುಳಿತು ಆಕೆಯ ರಕ್ಷಣೆ ಗೈಯುತ್ತ ಎಡ–ಬಲದಲ್ಲಿ ಬರುತ್ತಿದ್ದರು.... ಈಕೆ ಯಾವ ರಾಜ್ಯದ ರಾಜಕುಮಾರಿ ಇರಬಹುದೆಂದು ನಾನು ಅಚ್ಚರಿಯಿಂದ ಯೋಚಿಸ ತೊಡಗಿದೆ... ಆಕೆ ಗರ್ಜಿಸ್ತಾನದ ರಾಜಕುಮಾರಿ ಕಾತಂಕಾ ತನಾತನ್‌ಳಾಗಿದ್ದಳು.....

ಈ ಹೆಸರು ನಾನು ತೆಗೆದುಕೊಂಡ ತಕ್ಷಣ ಫಾದರ್ ಗ್ರ್ಯಾಗರಿ ಗಾಬರಿಗೊಂಡ.... ಹಾಗೂ ಜಲ್ದಿ ಜಲ್ದಿ ಸಿಗರೇಟ ಸೇದತೊಡಗಿದ... ನಾನು ಹೇಳುವುದನ್ನು ಮುಂದು ವರಿಸಿದೆ.....

---

1. ಸಂತರ ಸಮಾಧಿಯ ಮೇಲೆ ವಸ್ತ್ರ (ಚಾದರ) ಹೊದಿಸುವ ಧಾರ್ಮಿಕ ಪದ್ಧತಿಯನ್ನು ಮುಸಲ್ಮಾನರು ಕ್ರೈಸ್ತರಿಂದ ಕಲಿತರು.

''ಅವಳು ಅಷ್ಟು ದೂರದಿಂದ ಇಲ್ಲಿಗೆ, ಸೇಂಟ್ ಸೈಮನ್‌ನ ಸಮಾಧಿಯ ಮೇಲೆ ಚಾದರ ಹೊದಿಸಿ, ಪ್ರಾರ್ಥನೆ ಸಲ್ಲಿಸಲು ಬಂದಿದ್ದಳು..... ಅರಬ್ ಖಲೀಫಾನ ಅಧಿಕಾರಿಗಳು ಆಕೆಯನ್ನು ಸುರಕ್ಷಿತವಾಗಿ ಮಠದವರೆಗೂ ಗೌರವದೊಂದಿಗೆ ತಲುಪಿಸಿದರು...... ಆಕೆ ತುಂಬ ಸುಂದರಿಯಾಗಿದ್ದಳು.... ಚಂಚಲೆಯಾಗಿದ್ದಳು..... ಅಪರೂಪದ ರಾಜಕುಮಾರಿಯಾಗಿದ್ದಳು.... ಬಾಂಕೆಯ ಮುಸಲ್ಮಾನರು ಆಕೆಯನ್ನು ಗೇಟಿನ ವರೆಗೂ ಬಿಡಲು ಬಂದಿದ್ದರು.... ಅವರೊಂದಿಗೆ ಆಕೆ ತುಂಬ ಮಧುರವಾಗಿ ಮಾತನಾಡುತ್ತಿದ್ದಳು.... ನಾವು ಆಕೆಯ ಸ್ವಾಗತಕ್ಕಾಗಿ ನಿಂತವರು ನಿಂತು ನಿಂತು ದಣಿದವು.....''

''ನಾವು, ನಾಲ್ಕು ಜನ ಈ ಅಪರೂಪದ ಅತಿಥಿಯ ಆತಿಥ್ಯಕ್ಕಾಗಿ ನಿಯುಕ್ತಿಗೊಂಡೆವು... ರಾಜಕುಮಾರಿ ನಮ್ಮಲ್ಲಿ ಒಂದು ತಿಂಗಳ ಕಾಲ ಅತಿಥಿ ಯಾಗಿದ್ದಳು. ಮಠ ಮತ್ತು ಚರ್ಚಗೆ ಚಿನ್ನ ಮತ್ತು ವಜ್ರ—ವೈಢೂರ್ಯಗಳನ್ನು ಕಾಣಿಕೆಯಾಗಿ ನೀಡಿದಳು.... ಸೇಂಟ್‌ನ ಸಮಾಧಿಯ ಮೇಲೆ, ಚಿನ್ನ ಮತ್ತು ಬೆಳ್ಳಿಗಳಿಂದ ಬಿಡಿಸಿದ ಚಿತ್ತಾರಗಳಿಂದ ಕೂಡಿದ ಚಾದರ ಹೊದಿಸಿದಳು.... ಚಾದರದ ಅಂಚಿನ ತುಂಬ ಲತಾಬಳ್ಳಿ..... ಹೂಗಳನ್ನು ಬಿಡಿಸಲಾಗಿತ್ತು....''

''ಹೋಗುವಾಗ ರಾಜಕುಮಾರಿ ನಮ್ಮ ಮುಖ್ಯ ಸನ್ಯಾಸಿನಿಯಲ್ಲಿ ಒಂದು ಮನವಿ ಮಾಡಿಕೊಂಡಳು.... ತಮ್ಮ ರಾಜ್ಯದಲ್ಲಿ ಒಂದು ಹೊಸಮಠ ಮತ್ತು ಪ್ರಾರ್ಥನಾ ಮಂದಿರ ಕಟ್ಟಿಸಿರುವುದಾಗಿಯೂ, ಅವುಗಳನ್ನು ನೋಡಿಕೊಳ್ಳಲು ಕೆಲ ಅನುಭವಿ ಸಾಧಕರನ್ನು ತನ್ನೊಂದಿಗೆ ಕಳಿಸಬೇಕೆಂತಲೂ ಆಕೆ—ತನ್ನ ಮನವಿಯಲ್ಲಿ ಪ್ರಾರ್ಥಿಸಿ ಕೊಂಡಿದ್ದಳು..... ರಾಜಕುಮಾರಿಯ ಮನವಿಯನ್ನು ಮನ್ನಿಸಿದ ನಮ್ಮ ಹಿರಿಯ ಸನ್ಯಾಸಿನಿ, ನನಗೂ ಇನ್ನು ಮೂರು ಮಂದಿ ಹುಡುಗಿಯರಿಗೂ ರಾಜಕುಮಾರಿಯೊಂದಿಗೆ ಜಾರ್ಜಿಯಾಕ್ಕೆ ಹೋಗುವಂತೆ ಅಪ್ಪಣೆ ಮಾಡಿದಳು.... ನಾನು ಸಂತೋಷದೊಂದಿಗೆ ಹೋಗಲು ಸಿದ್ಧಳಾದೆ.... ಇಬ್ಬರು ದಾರಿಯಲ್ಲಿಯೇ ಸತ್ತು ಹೋದರು. ಅವರಿಬ್ಬರೂ ಈಜಿಪ್ತದವರಾಗಿದ್ದರು. ದಾರಿಯಲ್ಲಿ ಗುಡ್ಡಗಾಡಿನ ವಿಪರೀತ ಚಳಿಯನ್ನು ಅವರಿಗೆ ಸಹಿಸಲಾಗಲಿಲ್ಲ. ಮೂರನೆಯವಳು ಗ್ರೀಕ್‌ದವಳು. ಅವಳ ತಂದೆ ಅವಳನ್ನು ಒತ್ತಾಯಪೂರ್ವಕ ಮಠದಲ್ಲಿ ತುರಿಕಿ ಹೋಗಿದ್ದ...... ಅವಳು ತರ್ಬಜೂನದ ಹತ್ತಿರ ಹೋಗುತ್ತಿರುವಾಗ ಗುಂಪಿನಿಂದ ಅದು ಹೇಗೊ ಬೇರ್ಪಟ್ಟಳು... ಆದರೆ ಅವಳು ಅರಬ್ ಅಥವಾ ಬಾಜನತೀನಿ ವರ್ತಕನೊಂದಿಗೆ ಓಡಿ ಹೋಗಿರಬೇಕೆಂದು ಕೆಲವರು ಮಾತನಾಡಿಕೊಳ್ಳುತ್ತಿದ್ದರು.... ನಿಜ ಯಾವುದೆಂಬುದು ದೇವರಿಗೇ ಗೊತ್ತು....''

''ಅದೇ ರಾಜಕುಮಾರಿ ಈ ಬೆಟ್ಟದ ಮೇಲೆ ಈ ಆಶ್ರಮ ಕಟ್ಟಿಸಿದ್ದಳು.... ಎದುರಿಗಿರುವ ಚರ್ಚನ್ನು ಆ ಮೇಲೆ ಬಹಳ ಕಾಲದ ನಂತರ ಕಟ್ಟಿರಬೇಕು... ನಾನು ಸಾಯುವವರೆಗೂ ಇಲ್ಲಿಯೇ ಇದ್ದೆ. ಸಾಮಾನ್ಯವಾಗಿ ನನಗೆ ನನ್ನ ಮನೆ ಮಂದಿಯ ನೆನಪು ಬರುತ್ತದೆ ಮತ್ತು ಅವರ ಬಗೆಗಿನ ಚಿಂತೆ ನನ್ನನ್ನು ಕಾಡುತ್ತಿದೆ. ಬೈಜಾಂಟಿಯಮ್‌ದಿಂದ ಜಾರ್ಜಿಯಾ ವ್ಯಾಪಾರಿಗಳು, ಪಾದ್ರಿಗಳು ಬಹುತೇಕ

ಹೋಗುತ್ತ–ಬರುತ್ತ ಇರುತ್ತಾರೆ. ಅವರಿಂದ ಅಲ್ಲಿಯ ಸಮಾಚಾರ ಗೊತ್ತಾಗುತ್ತಲಿರುತ್ತದೆ. ನಿಯಮಾನುಸಾರ ನಾನು ನನ್ನ ತಾಯಿ–ತಂದೆಗಳೊಂದಿಗೆ ಪತ್ರ ವ್ಯವಹಾರ ಮಾಡುವ ಹಾಗಿಲ್ಲ..... ಏಕೆಂದರೆ ಈಗ ಅವರೆಲ್ಲ ನನಗೆ ಅಪರಿಚಿತರು... ಹೆರವರು.... ಈಗ ನನ್ನ ಸಂಬಂಧ ಕೇವಲ ಭಗವಂತನೊಂದಿಗೆ ಮಾತ್ರ.... ಬೈಜಾಂಟಿಯಮ್‌ದಿಂದ ಬರುವ ಪಾದ್ರಿಗಳು ಹೇಳುತ್ತಿರುತ್ತಾರೆ.... ಕುಸ್ತುಂತಿಯನ್ ದ್ವಿತೀಯನನ್ನು ಅವನ ಮಗ ಥ್ಯೊಡೋಸಿಸ್ ಕೊಲೆ ಮಾಡಿದ.... ಮತ್ತೆ ಅವನ ಮಗ ಕುಸ್ತುಂತಿಯನ್ ಯೋಗೊನೆಟಸ್ ತನ್ನ ಸೋದರರಾದ ಹರ್ಕಲ್ ಮತ್ತು ಟಾಯಿಬೇರಿಯಸ್‌ರ ಮೂಗನ್ನೇ ಚೂರಿಯಿಂದ ಕೊಯ್ದು ಹಾಕಿದ.... ಮತ್ತು ಅಸಂಖ್ಯಾತ ಪಾದ್ರಿಗಳನ್ನು ಶೂಲಕ್ಕೇರಿಸಲಾಯಿತು... ಮತ್ತೋರ್ವ ಪ್ರವಾಸಿ.... ನಾನು ಯಾರೆಂಬುದು ಆತನಿಗೆ ಗೊತ್ತಿರಲಿಲ್ಲ..... ಮಾತುಮಾತಿನಲ್ಲಿ ಹಿಂದಿನ ಗೃಹ ಯುದ್ಧದ ಮಾರಣ ಹೋಮದಲ್ಲಿ ಮಂತ್ರಿ ಸ್ಟೀಫನ್ ಹೋನೋರಿಯಸ್ ಮತ್ತು ಆತನ ಮೂವರು ಗಂಡು ಮಕ್ಕಳು ಸತ್ತು ಹೋದುದನ್ನು ಪ್ರಸ್ತಾಪಿಸಿದ.... ಲೇಡಿ ಆಯಿರೀನಾ ಮಾರಿಯಾ ಬಹಳ ಹಿಂದೆಯೇ ಸತ್ತು ಹೋಗಿದ್ದಳು.

ಅಂದಿನ ರಾತ್ರಿ ನಾನು ನನ್ನ ಕೋಣೆಯಲ್ಲಿ ರಾತ್ರಿಯಿಡೀ ಬಿಕ್ಕಿಬಿಕ್ಕಿ ಅತ್ತೆ.... ಕಣ್ಣೀರು ಧಾರಾಕಾರವಾಗಿ ಹರಿದವು.... ಮಂಜುಗಡ್ಡೆಯ ನೀರಿನಿಂದ ಕಣ್ಣು ತೊಳೆದುಕೊಂಡು ಬೆಳಗಿನ ಪ್ರಾರ್ಥನೆಯಲ್ಲಿ ಪಾಲ್ಗೊಂಡೆ..... ಆ ನಂತರ ನಾನು ತೋಟದಲ್ಲಿಯ ಗಿಡ–ಗಂಟಿಗಳಿಂದ, ಎಲೆ–ಹೂಗಳಿಂದ, ಪಶು ಪಕ್ಷಿಗಳಿಂದ, ಚಿಟ್ಟೆಗಳಿಂದ–ಎಲ್ಲರಿಂದಲೂ ನನ್ನ ಮನಸ್ಸನ್ನು ಬೇರೆಡೆ ತಿರುಗಿಸಿಕೊಂಡೆ. ಇವೆಲ್ಲ ಸೃಷ್ಟಿಯ ಪ್ರತೀಕ.... ಇವು ನಮ್ಮ ಯಾತನೆ, ದುಃಖ ದುಮ್ಮಾನಗಳನ್ನು ಪರಿಹರಿಸು ತ್ತಿದ್ದವು..... ಇವು ಹರ್ಷದ ದ್ಯೋತಕವಾಗಿದ್ದವು.... ಕೇವಲ ದುಃಖ, ಯಾತನೆ ನನ್ನ ಪಾಲಿನದಾಗಿತ್ತು... ಇವು ನನಗೆ ಸಂಪೂರ್ಣವಾಗಿ ಸಿಕ್ಕವು....

ನಾನು ಗಂಟೆಗಟ್ಟಲೆ ನನ್ನ ಕೋಣೆಯಲ್ಲಿ ಬಿದ್ದುಕೊಂಡಿರುತ್ತೇನೆ.... ನಿರಂತರ ಉಪವಾಸ ಮಾಡುತ್ತೇನೆ... ಹೊದ್ದುಕೊಂಡು ತಲೆಯ ಮೇಲೆ ಬೂದಿ ಹಾಕಿಕೊಂಡು ನಾನು, ಹಿಂದೆ ಮಾಡಿದ, ಮಾಡಲಾರದ ದುಷ್ಕರ್ಮಗಳಿಗಾಗಿ ದೇವರಲ್ಲಿ ಕ್ಷಮೆ ಯಾಚಿಸುತ್ತೇನೆ.... ಆದರೆ ಫಾದರ್ ಗ್ರ್ಯಾಗರಿ ನಾವು, ಗ್ರೀಕರಲ್ಲಿ ಕೆಥಾರ್ಸಿಸ್‌ದ ಕಲ್ಪನೆ ಏನಿದೆಯಲ್ಲ..... ಅದು ಅತ್ಯಂತ ಅರ್ಥವಿಲ್ಲದ್ದಾಗಿದೆ. ಕೆಥಾರ್ಸಿಸ್ ಬೇರೆ ಇನ್ನೇನೂ ಅಲ್ಲ, ಅದು ನಿರಂತರವಾಗಿರುವ ಯಾತನೆಯಾಗಿದೆ. ಕ್ರೈಸ್ತ ಪರಮಾತ್ಮ ಶಿಲುಬೆಯ ಮೇಲೆ ಇದ್ದು ಸಹಿಸಿದ ಯಾತನೆ ವಾಸ್ತವಿಕ ಯಾತನೆಯಾಗಿದೆ. ಒಂದರ್ಥದಲ್ಲಿ ಅದೇ ಮೂಲಭೂತ ಯಾತನೆ....

''ಈಗ ನನ್ನಲ್ಲಿರುವ ಸಹನಶೀಲತೆ, ಸಂಯಮ, ಕ್ಷಮಾಶೀಲತೆ, ನಯ–ವಿನಯಗಳ ಚರ್ಚೆ ಸಮಗ್ರ ಕಫ್‌ಕಾಜದ ಬೆಟ್ಟ–ಗುಡ್ಡಗಳಲ್ಲಿ ದೂರ ದೂರದ ಪ್ರದೇಶದವರೆಗೂ ಹಬ್ಬಿದೆ. ಜನ ನನ್ನಲ್ಲಿಗೆ ಜಾತ್ರೋಪಾದಿಯಲ್ಲಿ ಈಗ ಬರತೊಡಗಿದ್ದಾರೆ, ತಮ್ಮ ದುಃಖಕ್ಕೆ ಜಡ್ಡು ಜಾಪತ್ತಿಗೆ, ನನ್ನಲ್ಲಿ ಪರಿಹಾರ ಕಂಡುಕೊಳ್ಳಲು ಬಯಸುತ್ತಿದ್ದಾರೆ....

ಆಕಸ್ಮಿಕವಾಗಿಯೇ ಅನ್ನಿ ಅಥವಾ ಭಗವಂತನ ಕರುಣೆಯಿಂದಲೋ ಅನ್ನಿ, ಬಹಳಷ್ಟು ರೋಗಿಗಳ ಆರೋಗ್ಯಕ್ಕಾಗಿ ನಾನು ಪ್ರಾರ್ಥನೆ ಸಲ್ಲಿಸಿದೆ....ಅವರೆಲ್ಲ ಗುಣಮುಖ ರಾದರು.... ಅಂಗವಿಕಲರು, ಮುದುಕರು ಡೋಲಿಯಲ್ಲಿ ಕುಳಿತು ನನ್ನಲ್ಲಿಗೆ ಬರ ತೊಡಗಿದರು.... ನಂತರ ಭಯಂಕರ ಸಾಂಕ್ರಾಮಿಕ ರೋಗಿ ಬಂದ... ನಾನು ಅವನ ರೋಗ ಕಳೆಯಲು.... ಹಗಲು ರಾತ್ರಿಯೊಂದು ಮಾಡಿದೆ.... ರೋಗಿಯೇನೋ ಗುಣವಾದ.... ನಾನು ಆ ರೋಗಕ್ಕೆ ತುತ್ತಾದೆ... ಕೊನೆಗೆ ಸಾವನ್ನಪ್ಪಿದೆ..... ಈಗ ನನಗೆ ಆ ರೋಗ ಯಾವುದೆಂಬುದರ ನೆನಪು ಬರುತ್ತಿಲ್ಲ.. ಸಾಯುವ ಕಾಲಕ್ಕೆ ನಾನು ನಲವತ್ತೈದು ವರ್ಷದವಳಿದ್ದೆ... ನನ್ನ ಹೆಣವಿದ್ದ ಪೆಟ್ಟಿಗೆಯನ್ನು ಪದ್ಧತಿಗೆ ಅನುಸಾರವಾಗಿ ಅದೇ ಮಠದ ನೆಲಮಾಳಿಗೆಯಲ್ಲಿ ಇರಿಸಲಾಯಿತು.....''

''ತುಂಬ ಚೆಲುವೆಯಾಗಿದ್ದಿಯೇನು ?''

''ತುಂಬ ಅಂದರೆ ತುಂಬ...''

''ನಾನು ಕೂಡ....''

''ಓ ! ದೇವರೇ..ನನ್ನನ್ನು ಕ್ಷಮಿಸು... ನನ್ನ ಮನಸ್ಸಿನಲ್ಲಿ ಒಂದು ಯೋಚನೆ ಹೊಳೆಯಿತು.....ಆಶೆ ಮೂಡಿತು.... ಒಂದು ವೇಳೆ... ಇವನು ಜೀವಂತವಿದ್ದಾಗ ಫಾದರ್ ಆಗದಿದ್ದಾಗ.... ಗ್ರ್ಯಾಂಡ್ ಡ್ಯೂಕ್ ಆಫ್ ತಬ್ಲಿಸಿಯ ಮಗನಿದ್ದಾಗ.... ಮತ್ತೆ ನಾನು..ಬೈಜಾಂಟಿಯಮ್‌ದ ರಾಜದೂತನ ಚೆಲುವೆಯಾದ ಮಗಳಾಗಿದ್ದಾಗ ನಮ್ಮ ಭೇಟಿಯಾಗಿದ್ದರೆ... ಆದರೆ ನಿನ್ನ ರಹಸ್ಯ ನಿನಗೇ ಗೊತ್ತು... ನಾನು ಫಾದರ್‌ನಿಗೆ ನನ್ನ ಕಥೆಯ ಕೊನೆಯ ಬಗ್ಗೆ ಸೂಚನೆ ನೀಡಿದೆ...''

ನಾನು ಸತ್ತ ನಂತರ ಯಾತ್ರಿಕರು ದರ್ಶನಕ್ಕಾಗಿ ಬರತೊಡಗಿದರು. ಕೆಲ ಪವಾಡಗಳು, ಚಮತ್ಕಾರಗಳು ಪ್ರಚಲಿತಗೊಂಡವು.... ಶತಮಾನಗಳು ಉರುಳುತ್ತ ಹೋದವು... 1873ರಲ್ಲಿ ಯಾವುದೋ ಒಂದು ಪವಿತ್ರಾತ್ಮ ಹೊಂದಿದ ಸನ್ಯಾಸಿ ಅಥವಾ ಸನ್ಯಾಸಿನಿಯೊಬ್ಬರನ್ನು ಸೇಂಟ್ ಎಂದು ಆರಿಸಬೇಕಾಗಿತ್ತು.... ಹೀಗೆ ಆರಿಸಲು ಕೆಲವು ನಿಬಂಧನೆಗಳಿದ್ದವು.... ಪವಾಡಗಳನ್ನು ಎಸಗಿರಬೇಕು, ಚಮತ್ಕಾರಗಳಾಗಿರ ಬೇಕು... ಪ್ರಮಾಣಿತ ಜೀವನ ಚರಿತ್ರೆ...ವಗೈರಾ ವಗೈರಾ... ಒಂದು ವೇಳೆ ಇವೆಲ್ಲವನ್ನು ನನ್ನ ಜೀವನ ಚರಿತ್ರೆ ಪೂರ್ಣಗೊಳಿಸಿದಲ್ಲಿ ನನ್ನನ್ನು ಸೇಂಟ್ ಪದವಿಗೆ ಏರಿಸಬಹುದು.... ಇದರ ಬಗ್ಗೆ ಹಲವು ವರ್ಷಗಳವರೆಗೆ ಸಂಶೋಧನೆ ನಡೆಯಿತು..... ನಿಯಮಕ್ಕೆ ಅನುಸಾರವಾಗಿ ನನ್ನ ಕೇಸನ್ನು ಮಾಸ್ಕೋದ ಎಲ್ಲರಿಗಿಂತ ಹಿರಿಯ ಬಿಶಪ್ ಅವರಲ್ಲಿಗೆ ಕಳಿಸಲಾಯಿತು..... ಕೊನೆಯಲ್ಲಿ ನವ್ಹೆಂಬರ ಇಪ್ಪತ್ತೈದು ಒಂದು ಸಾವಿರದ ಒಂಬೈನೂರ ಇಪ್ಪತ್ತೊಂದನೆಯ ಇಸ್ವಿಯಂದು ನನ್ನನ್ನು ಸೇಂಟ್ ಫ್ಲೋರಾ ಸಾಬೀನಾ ಎಂದು ಘೋಷಿಸಲಾಗುವುದೆಂದು ನಿರ್ಣಯಿಸಲಾಯಿತು... ಅಂದು ನನ್ನ ಮೆರವಣಿಗೆ ಮಾಡುವ ಸಿದ್ಧತೆ ನಡೆದಿತ್ತು... ಆದರೆ ಆ ತಾರೀಖಿಗಿಂತ ಕೆಲವೇ ದಿನ ಪೂರ್ವದಲ್ಲಿ ಈ ಚರ್ಚ ಮತ್ತು ಮಠ ಮುಚ್ಚಲ್ಪಟ್ಟವು... ಹೀಗಾಗಿ ನಾನು ಅಧಿಕೃತವಾಗಿ ಸೇಂಟ್ ಫ್ಲೋರಾ ಅಲ್ಲ.. ಆದರೂ ನಾನು ಹೌದು.... ಫಾದರ್ ಈಗ ನೀನು ಹೇಳು... ನೀನೇಕೆ

ಪ್ರಪಂಚದ ವ್ಯಾಮೋಹ ತ್ಯಜಿಸಿದೆ.... ಈ ಜಗತ್ತು ಕೇವಲ ಪುರುಷರಿಗಾಗಿ ನಿರ್ಮಾಣ ವಾಗಿದೆ.... ಹೀಗಿರುವಾಗ ಅವರೇಕೆ ಸಂಸಾರ ಪರಿತ್ಯಾಗ ಮಾಡುತ್ತಾರೆ....? ಏನು, ಅದೇ ಹಳೆ ರಾಗ... ಹಳೆ ಕಥೆ.... ಪ್ರೇಯಸಿಯ ವಂಚನೆ.... ಅಪ್ರಾಮಾಣಿಕತೆ.... ?''

ಅವನು ಸುಮ್ಮನಿದ್ದ....

''ಓ ! ದೇವರೇ, ನಾನು ಅತ್ಯಂತ ವಿನಯದಿಂದ ಈ ಮಾತನ್ನು ಒಪ್ಪಿಕೊಳ್ಳುತ್ತೇನೆ... ಹೆಣ್ಣಿನ ಸ್ವಭಾವ ಹದಿಮೂರುವರೆ ನೂರು ವರ್ಷ ಸಾವಿನ ನಿದ್ರೆ ನಿದ್ರಿಸಿದ ಬಳಿಕವೂ ಬದಲಾಗುವುದಿಲ್ಲ.... ನಾನು ತುಂಬಾ ಆಸಕ್ತಿಯಿಂದ ಕೆದರಿ ಕೇಳಿದೆ– ''ಫಾದರ್ ಗ್ರ್ಯಾಗರಿ.... ರಾಜಕುಮಾರಿ ಕಾತಂಕಾ ತನಾತನಳೇ ನಿನ್ನ ವಂಚನೆ ಗೊಳಿಸಿದ ಪ್ರೇಮಿಕಾಳಿದ್ದಳೇನು ?.... ಏಕೆಂದರೆ ದೇವರ ದಯೆ ಪಡೆದ ಆಕೆ, ತುಂಬಾ ಉದಾರಿಯಾದ ಪ್ರೇಮಲ ಸ್ವಭಾವದ ಹೆಣ್ಣೆಂದು ಪ್ರಸಿದ್ಧಿ ಪಡೆದಳು.... ಹಾಗಾದರೆ ಅವಳಿಂದಾಗಿ ನೀನು ನಿನ್ನ ಮನೆ ಮಾರು ಹಾಳುಮಾಡಿಕೊಂಡೆಯಾ ?...''

ಫಾದರ್ ತುಂಬ ಕಟುವಾಗಿ ಉತ್ತರಿಸಿದ–''ಲೇಡಿ ಫ್ಲೋರಾ, ಹುಗಿದ ಹೆಣವನ್ನೇಕೆ ಕೀಳುತ್ತಿರುವೆ ?''

''ಹಾಹಾಹಾ....'' ಎನ್ನುತ್ತ ಅವನ ಸೆನ್ಸ್ ಆಫ್ ಹ್ಯೂಮರ್ ಮೆಚ್ಚಿಕೊಂಡೆ.... ಬ್ಲ್ಯಾಕ್ ಆಫ್ ಹ್ಯುಮರ್‌ಗೆ ಅಲ್ಲ....ಅವನು ಮತ್ತೆ ಲಗುಬಗೆಯಿಂದ ಇನ್ನೊಂದು ಸಿಗರೇಟ ಹೊತ್ತಿಸಿದ....

ನಾನು ಮತ್ತೆ ಹೇಳಿದೆ– ''ಫಾದರ್...ಹೆಚ್ಚು ತಂಬಾಕು ಸೇವನೆ ಪುಪ್ಪಸಗಳಿಗೆ ಹಾನಿಯುಂಟುಮಾಡುತ್ತದೆ....'' ಎಂದು. ಆ ಕೂಡಲೇ ವಿಚಾರ ಹೊಳೆಯಿತು.... ಇದು ಕೂಡ ಬ್ಲ್ಯಾಕ್ ಹ್ಯುಮರ್ ಎಂದು....

''ಆ ನಿನ್ನ ಅತ್ಯಂತ ಭಗವದ್‌ಭಕ್ತಳಾದ ಕಾತಂಕಾ ಚಾರ್ಜಿಯಾ ಅರಬ್‌ರ ವಶಕ್ಕೆ ಬಂದ ತಕ್ಷಣ ತಿಫ್ಲಿಸ್‌ದ ಓರ್ವ ಅರಬ್ ಜನರಲ್‌ನೊಂದಿಗೆ ಮದುವೆ ಮಾಡಿಕೊಂಡಳು...'' ಎಂದು ಫಾದರ್ ತುಂಬ ಶುಷ್ಕವಾಗಿ ಹೇಳಿದ...

''ಅರೆ....'' ಎನ್ನುತ್ತ ನಾನು ಸ್ತಂಭೀಭೂತಳಾದೆ...

''ಇದು ನೀನು ಸತ್ತ ನಂತರ ನಡೆದ ಘಟನೆಯಾದುದರಿಂದ ನಿನಗೆ ಅಚ್ಚರಿ ಯಾಗುವುದು ಸಹಜವೇ. ನಾನು ಗ್ರ್ಯಾಂಡ್ ಡ್ಯೂಕ್‌ನ ಮಗ ನಿಜ, ಆದರೆ ಅರಬ್‌ರ ಆಡಳಿತ ಬಂದ ನಂತರ ನನ್ನ ಪ್ರಾಮುಖ್ಯತೆ ಎಲ್ಲಿ ? ನಾನಂತೂ ನನ್ನ ಜಾಗೀರದ ವಿಷಯದಲ್ಲೂ ಆಸಕ್ತಿ ಹೊಂದಿದವನಾಗಿರಲಿಲ್ಲ. ಎಲ್ಲ ಸಮಯವನ್ನು ತಫಲಸ್‌ದ ಚರ್ಚದಲ್ಲಿ ಬರವಣಿಗೆಯ ಕೋಣೆಯಲ್ಲಿ ಕಳೆಯುತ್ತಿದ್ದೆ.... ರಾಜಕುಮಾರಿ ಕಾತಂಕಾ ಗಾಳಿ ಎತ್ತ ಬೀಸುತ್ತಲಿದೆಂಬುದನ್ನು ಅರಿತವಳಾಗಿದ್ದಳು... ಈಗ ಕಾಲ ಅರಬ್ ರೊಂದಿಗಿತ್ತು. ನಾನು ರಾಜನೀತಿಯಿಂದ ಬಹುದೂರ... ಆದರೆ ಕಾತಂಕಾ ರಾಜ ನೀತಿಯ ಎಲ್ಲ ಗುಟ್ಟು, ಯುಕ್ತಿ ಬಲ್ಲವಳಾಗಿದ್ದಳು.. ನನಗೆ ಮೊದ ಮೊದಲು ತುಂಬಾ ದುಃಖವಾಯಿತು... ಮಾನಸಿಕ ಹಾಗೂ ಭಾವನಾತ್ಮಕವಾಗಿ ತುಂಬ ಯಾತನೆ ಪಟ್ಟೆ...

ಆಮೇಲೆ ನಾನು ಯೋಚಿಸಿದೆ..... ಓ ! ಮಿಸ್ಟರ್ ಗ್ರ್ಯಾಗರಿ, ಹೆಣ್ಣಿಗಾಗಿ ಅತ್ತು ಕರೆಯ ಬೇಕಾಗಿಲ್ಲ.... ಅವಳು ಇದಕ್ಕೆಲ್ಲ ಯೋಗ್ಯಳಲ್ಲ.... ಇದರಿಂದ ಕೇವಲ ಸಮಯ ಹಾಳಾ ಗುತ್ತದೆ... ಏನನ್ನೂ ಸಾಧಿಸಲಾಗುವುದಿಲ್ಲ... ಇನ್ನು ಸುಂದರ ತರುಣಿಯರ ವಿಷಯ... ಅಂಥವರ ಕೊರತೆ ಎಲ್ಲಿದೆ ? ಅಂಥ ಚೆಲುವೆಯರು ಎಲ್ಲಿ ಬೇಕಾದರೂ ಸಿಗುತ್ತಾರೆ.... ಅಲಭ್ಯ ವಸ್ತುವೇನು ಅದು... ಅದಕ್ಕಾಗಿ ಅಳುತ್ತ ಕೂಡುವುದೆಂದರೇನು ?.. ಎಂಬ ವಿಚಾರದ ನಂತರ ನಾನು ಅಧ್ಯಯನದಲ್ಲಿ ನನ್ನನ್ನು ನಾನು ತೊಡಗಿಸಿಕೊಂಡೆ.... ಆದರೆ ತಿಬ್ಲಿಸಿಯ ಚರ್ಚದ ಬರವಣಿಗೆಯ ಕೋಣೆಯಲ್ಲಿ ಸದಾಕಾಲ ಸಂಶೋಧನಾ ಕಾರ್ಯದಲ್ಲಿ ತೊಡಗಿರಬೇಕಾದರೆ ಅಲ್ಲಿಯ ಧಾರ್ಮಿಕ ಕ್ರಿಯೆಯಲ್ಲಿ ಒಂದಾಗ ಬೇಕಾದುದು ಅನಿವಾರ್ಯವಾಯಿತು.

ನಾನು ಹಿಂದೆ ಮುಂದೆ ಯಾವುದನ್ನೂ ಯೋಚಿಸದೆ ಅಲ್ಲಿಯ ಧಾರ್ಮಿಕ ಓಲಗದಲ್ಲಿ ಒಂದಾಗಿ ಬಿಟ್ಟೆ... ಕೆಲ ತಿಂಗಳ ನಂತರ ಕರ್ತಾಜನಕ್ಕೆ ಹೊರಟು ಹೋದೆ... ಅಲ್ಲಿ ವಿಶೇಷವಾಗಿ ಸೇಂಟ್ ಆಗಸ್ತೇನ್ ಓದಿದ ಸ್ಕೂಲಿನಲ್ಲಿ ಕೆಲಸ ಮಾಡತೊಡಗಿದೆ.... ಅಲ್ಲಿಂದ ರೋಮಕ್ಕೆ ಹೋದೆ... ಅಥೆನ್ಸ್‌ಗೆ ಹೋದೆ... ನಿನ್ನ ಮಾತೃಭೂಮಿ ಕುಸ್ತುಂತುನಿಯಾಕ್ಕೆ ಹೋದೆ... ಇಲ್ಲ... ನನ್ನೀ ಪ್ರವಾಸದಲ್ಲಿ ನಿನ್ನ ಥ್ಯೊಡೋರಕ್ ಗೆಲಸಿಸ್ ನನಗೆ ಎಲ್ಲಿಯೂ ಸಿಕ್ಕಲಿಲ್ಲ.... ಎಲ್ಲಿಯಾದರೂ ಸತ್ತು ಹೋಗಿರಬೇಕು....."

"ದೇವರು ಹಾಗೆ ಮಾಡದಿರಲಿ" ಎಂದೆ. ಫಾದರ್ ನಗತೊಡಗಿದ.. ನಗುತ್ತಲೇ ಹೇಳಿದ– "ಮತ್ತೆ ಕಪ್ಪುಸಮುದ್ರದ ಹಾದಿಯಿಂದ ಹೊರಟು ಗಿರ್ಜಿಸ್ತಾನಕ್ಕೆ ಮರಳಿದೆ... ಇಲ್ಲ, ನಾನೆಂದೂ ರಾಜಕುಮಾರಿ ಕಾತಂಕಾಳ ಕಾನ್ವೆಂಟ್‌ಗೆ ಬರಲಿಲ್ಲ... ಅಲ್ಲಿ, ಎದುರಿಗೆ ನೀಲಿವರ್ಣದ ಪರ್ವತಾವಳಿ ನೋಡುತ್ತಿರುವೆಯಲ್ಲ... ಅದರ ಓರೆಯಲ್ಲಿಯೇ ಒಂದು ಆಶ್ರಮವಿತ್ತು... ಆಕ್ರಮಣಕಾರರ ಹಾವಳಿಯಿಂದಾಗಿ ಕೆಲ ಸಾಧಕರು ಬೆಟ್ಟ ಕೊರೆದು ಗುಹೆ ನಿರ್ಮಿಸಿಕೊಂಡು ಅದರಲ್ಲಿರುತ್ತ ತಮ್ಮ ರಕ್ಷಣೆ ಮಾಡಿಕೊಳ್ಳುತ್ತಿದ್ದರು. ಬಹಳಷ್ಟು ಯುವಕರು ಅಡಿಗೆ ಮನೆಯಲ್ಲಿ ವಾಸಿಸುತ್ತಿದ್ದರು... ನಾನು ಒಂದು ಪ್ರತ್ಯೇಕ ಶಿಖರದ ಮೇಲೆ ಒಂದು ಗುಹೆಯಲ್ಲಿ ಆಶ್ರಯ ಪಡೆದಿದ್ದೆ... ಎದುರಿಗೆ ಕಲ್ಲಿನ ಗೋಡೆಯ ಮೇಲೆ ನಾನಾ ರೀತಿಯ ಬಣ್ಣ ಬಣ್ಣದ ಹೂಗಳನ್ನು, ಎಲೆ ಬಳ್ಳಿಗಳನ್ನು ಶೃಂಗರಿಸಿದೆ... ಪೂಜೆಗಾಗಿ ನಾವು ಕಣಿವೆಯಲ್ಲಿದ್ದ ದೊಡ್ಡ ಚರ್ಚಗೆ ಹೋಗುತ್ತಿದ್ದೆವು. ಊಟವನ್ನು ಎಲ್ಲರೂ ಸೇರಿ ಮಠದ ಹಾಲ್‌ನಲ್ಲಿ ಮಾಡುತ್ತಿದ್ದೆವು... ನಮ್ಮಲ್ಲಿ ಬಹಳಷ್ಟು ಜನ ಬುದ್ಧಿವಂತರಿದ್ದರು... ಸ್ಕಾಲರ್ಸ್ ಇದ್ದರು... ರಾತ್ರಿಯಲ್ಲಿ ಬಹುತೇಕ ಬೌದ್ಧಿಕ ಚರ್ಚೆಗಳು ನಡೆಯುತ್ತಿದ್ದವು... ಯಾವನಾದರೂ ಮಧ್ಯ ಏಶಿಯಾ ದಿಂದ ನಮ್ಮತ್ತ ಬಂದರೆ ಅವನೊಂದಿಗೆ ಝೂಯ್ ಝೂಯ್ ಎಂದು ಸಂಬೋಧಿಸು ತ್ತೇವೆ. ಅವನು– "ತಾಯಿ ಮೇರಿ ಏಸುಕ್ರಿಸ್ತನ ತಾಯಿ, ದೇವರ ತಾಯಿ ಅಲ್ಲ" ಎನ್ನುತ್ತಾನೆ. ಅದಕ್ಕೆ ನಾವು– "ಇದಕ್ಕೆ ನಿನ್ನಲ್ಲಿ ಸಾಕ್ಷಿ ಏನಿದೆ ?" ಎಂದಾಗ ಅವನು– "ನಿಮ್ಮಲ್ಲಿ ಸಾಕ್ಷಿ ಏನಿದೆ ?" ಎಂದು ಪ್ರಶ್ನಿಸುತ್ತಾನೆ. ಯಾವನೋ ಸೀರಿಯನ್ ಪಾದ್ರಿ ಬರುತ್ತಾನೆ..... ಅವನೊಂದಿಗೂ ವಾದವಿವಾದ ನಡೆಯುತ್ತಿತ್ತು. ಅವನು– "ಏಸುವಿನ

ಪ್ರಕೃತಿಯ ಏಕತ್ವ ಒಪ್ಪಿಕೊಳ್ಳಿ..... ಅದರಲ್ಲಿಯೇ ಒಳಿತಿದೆ....'' ಎಂದರೆ ಅದಕ್ಕೆ ನಾವು– ''ಎಂದೂ ಸಾಧ್ಯವಿಲ್ಲ....'' ಎನ್ನುತ್ತಿದ್ದೆವು. ಈ ಜಗಳ, ವಾದಗಳಿಂದ ಬೇಸತ್ತ ಅದೆಷ್ಟೋ ಸಾಧಕರು, ಪಾದ್ರಿಗಳು ತಿಫ್ಲಿಸ್‌ಗೆ ಹೋಗಿ ಇಸ್ಲಾಂ ಧರ್ಮ ಸ್ವೀಕರಿಸಿದರು.''

ಒಟ್ಟಿನಲ್ಲಿ ತುಂಬ ಸೊಗಸಾಗಿ ಸಮಯ ಕಳೆಯುತ್ತಿತ್ತು. ಏಸುವಿನ ಜನ್ಮದಿನದ ಸಂತೋಷಕ್ಕಿಂತ ಎರಡು ದಿನ ಮೊದಲು ನಡೆದ ಘಟನೆ ಹೇಳಬೇಕು. ನಾನು ಚುಮುಚುಮು ಬೆಳಗಿನಲ್ಲಿ, ಅಡಿಗೆಗಾಗಿ ಕಟ್ಟಿಗೆ ಕಡಿದುಕೊಂಡು ಬರಲು ಅಡವಿಗೆ ಹೋದೆ. ಇಡೀ ಅಡವಿ ಬರ್ಫದಿಂದ ಮುಚ್ಚಿಹೋಗಿತ್ತು. ಕಣಿವೆಯಲ್ಲಿಯ ಚರ್ಚ ಗಳಲ್ಲಿ ಬಾರಿಸುವ ಗಂಟೆಗಳಿಂದ ತುಂಬ ಮಧುರವಾದ ಧ್ವನಿ ಇಡೀ ವಾತಾವರಣ ವನ್ನು ಮಧುರಗೊಳಿಸಿತ್ತು. ಅಳಿಲು, ಮೊಲ ಮುಂತಾದ ಮುಗ್ಧ ಪ್ರಾಣಿಗಳು ನನ್ನ ಸುತ್ತಲೂ ಓಡಾಡುತ್ತಿದ್ದವು. ಸೇಂಟ್ ಗ್ರೆಗರಿಯ ಒಂದು ಪ್ರಾರ್ಥನಾ ಪದ್ಯ ಗುನುಗುನಿಸುತ್ತ ನಾನು ಜೋರಾಗಿ ಕೊಡ್ಲಿಯಿಂದ ಒಂದು ಮರ ಕಡಿಯಲು ಆರಂಭಿಸಿದೆ. ಆ ಹೊಡೆತಕ್ಕೆ ಮರದ ಬಡ್ಡೆಯಲ್ಲಿ ಸೀಳಿದ ಒಂದು ತುಂಡು ಕಟ್ಟಿಗೆ ಬಂದು ನನ್ನ ಕಾಲಿಗೆ ಬಡಿಯಿತು. ನಾನು ಆ ಕೂಡಲೇ ಅಲ್ಲಿಯೇ ಇದ್ದ ಬರ್ಫನಿಂದ ಗಾಯ ತೊಳೆದೆ ಹಾಗೂ ಹಸಿರೆಲೆ ಹಿಂಡಿ ಅದನ್ನು ಗಾಯದ ಮೇಲಿಟ್ಟು ಪಟ್ಟಿ ಕಟ್ಟಿದೆ. ಅಡಿಗೆಗೆ ಬೇಕಾಗುವಷ್ಟು ಕಟ್ಟಿಗೆ ಮಾಡಿಕೊಂಡು ಆಶ್ರಮಕ್ಕೆ ಬಂದೆ. ದಿನದ ಕೆಲಸದಲ್ಲಿ ತಲ್ಲೀನನಾದೆ. ರಾತ್ರಿ ನನ್ನ ಕೋಣೆಗೆ ಹೋಗಿ ಮಲಗುವ ಪೂರ್ವದಲ್ಲಿ ನಿತ್ಯದಂತೆ ಮೇಣಬತ್ತಿ ಹಚ್ಚಿದೆ.... ಸೇಂಟ್ ಆಗಸ್ತೀನನ ಆತ್ಮ ಚರಿತ್ರೆ ಪಠಣ ಆರಂಭಿಸಿದೆ.... ಕೊಡಲಿಯಿಂದ ಆದ ಗಾಯ, ವಿಷ ದೇಹವನ್ನೆಲ್ಲ ಆವರಿಸಿ ನಾನು ಬೆಳಗ್ಗೆ ಸತ್ತುಹೋಗಿದ್ದೆ. ಆಗ ನನಗೆ ಐವತ್ನಾಲ್ಕು ವರ್ಷ. ಈ ಕೆಳಮನೆಯಲ್ಲಿ ನನ್ನನ್ನು ಯಾವಾಗ ಏಕೆ ತಂದು ಹಾಕಿದರೆಂಬುದು ನನಗೆ ಗೊತ್ತಿಲ್ಲ....

ಬಹುಶಃ ರಾಜಕುಮಾರಿ ಕಾತಂಕಾ ಇಲ್ಲಿಗೆ ಶವಪೆಟ್ಟಿಗೆ ತರಿಸಿಕೊಂಡಿರಬೇಕು.... ಎಂದು ನಾನು ಯೋಚಿಸಿದೆ.... ಆದರೆ ಹಾಗೆಂದು ಹೇಳದೆ ಸುಮ್ಮನಿದ್ದೆ.... ಕುಂಡದ ಅಗ್ನಿ ಆರಿ ಹೋಗಿತ್ತು..... ಚಳಿಗಾಳಿಯಿಂದ ನಮ್ಮ ಎಲುಬಿನ ಹಂದರಗಳು ಜೋಲಿ ಹೊಡೆಯಲಾರಂಭಿಸಿದ್ದವು..... ಫಾದರ್ ಗ್ರ್ಯಾಗರಿ ಹೇಳಿದ– ''ಬನ್ನಿ..... ಎಲ್ಲಿಯಾ ದರೂ ಹೋಗಿ ಬೆಚ್ಚಗಿನ ಬಟ್ಟೆ ಹುಡುಕೋಣ.... ದೇವರು ನಮ್ಮೊಂದಿಗಿ ದ್ದಾನೆ.....''

ಸನೋಬಕಾದ ಕಾಡಿನಿಂದ ಹೊರಟು ನಾವಿಬ್ಬರೂ ಬಂದು ಚರ್ಚ ತಲುಪಿದೆವು.... ಅದು ಒಂದು ತುಂಬ ಆಧುನಿಕ ವಾಸ್ತುವಾಗಿತ್ತು..... ಗಿರಜಿಸ್ತಾನದ ಮಹಾರಾಣಿ ಗೋರಾನದುಖ್ತ ಇದನ್ನು ಹನ್ನೊಂದನೆಯ ಶತಮಾನದಲ್ಲಿ ಕಟ್ಟಿಸಿ ದ್ದಳು.... ಇದು ಬಹುಶಃ ಒಂದು ''ಫಂಕ್ಷನಿಂಗ್ ಚರ್ಚ'' ಆಗಿರಬೇಕು.... ಏಕೆಂದರೆ ಒಳಗಡೆ ಸುಸಜ್ಜಿತ ಹದಿಮೂರು ಸ್ವರ್ಣ ಮೂರ್ತಿಗಳ ಎದುರಿನಲ್ಲಿ ಎತ್ತರದ ದೀಪ ಸ್ತಂಭಗಳಲ್ಲಿ ಮೇಣಬತ್ತಿಗಳು ಉರಿಯುತ್ತಿದ್ದವು.... ಪಾದ್ರಿಯ ಕೋಣೆಯ ಬಾಗಿಲು ತೆರೆದಿತ್ತು.... ನಾವು ಒಳಗೆ ಹೋದೆವು.... ಗ್ಯಾಲರಿಯಲ್ಲಿ ಒಂದು ಕಪಾಟು ಕಾಣಿಸಿತು. ಅದರಲ್ಲಿ ಪಾದ್ರಿಗಳ ಸಮ ವಸ್ತ್ರಗಳು ಜೋತು ಬಿದ್ದಿದ್ದವು. ಪಾದ್ರಿ ಬಹುಶಃ ತನ್ನ

ಮನೆಯಲ್ಲಿ ನಿದ್ರಿಸುತ್ತಿರಬೇಕು. ಫಾದರ ಗ್ರೆಗರಿ ಅಲ್ಮಾರಿಯಿಂದ ಬೆಚ್ಚಗಿನ ನಿಲುವಂಗಿ ಕಳವು ಮಾಡಿದ, ನಾವಿಬ್ಬರೂ ಅವನ್ನು ಆ ಕೂಡಲೇ ತೊಟ್ಟು ಕೊಂಡೆವು. ಆಗ ಜೀವದಲ್ಲಿ ಜೀವ ಬಂತು. ಅದೇ ಸಮಯಕ್ಕೆ ಅಲ್ಮಾರಿಯ ಹಿಂದೆ ಓರ್ವ ಮನುಷ್ಯನ ನೆರಳು ಕಾಣಿಸಿತು. ಚೆಕ್ ಕೋಟ ಧರಿಸಿದ್ದ, ಬ್ರೌನ್ ಪ್ಯಾಂಟ್ ಹಾಕಿದ್ದ, ತಲೆಯಲ್ಲಿ ಸುಕ್ಕು ಗಟ್ಟಿದ ದಟ್ಟ ಕೂದಲು, ದಪ್ಪ ಗಾಜಿನ ಕನ್ನಡಕ ಹಾಕಿ ಕೊಂಡಿದ್ದ. ಅವನು ಕೂಡ ಇಂಥದೇ ನಿಲುವಂಗಿ ಕಳವು ಮಾಡಲು ಹವಣಿಸುತ್ತಿದ್ದ..... ನಮ್ಮನ್ನು ನೋಡಿ ಆತ ಅಲ್ಮಾರಿಯ ಹಿಂದೆ ಅಡಗಿಕೊಂಡಿದ್ದ. ನಾವು ಕೂಡಲೇ ಹೊರಗೆ ಬಂದೆವು ಹಾಗೂ ಅವನ ಹೆದರಿಕೆಯಿಂದಾಗಿ ನಾವಿಬ್ಬರೂ ಓಡತೊಡಗಿದೆವು. ಜೋಲಿ ಹೊಡೆಯುತ್ತ ಬೆಟ್ಟ ಇಳಿಯ ತೊಡಗಿದೆವು. ಕೆಲ ನಿಮಿಷಗಳ ನಂತರ ಹೊರಳಿ ನೋಡಿದೆ. ಆ ಮನುಷ್ಯ ಕೂಡ ಓರ್ವ ಪಾದ್ರಿಯ ಸಾದಾ ಉಡುಪಿನಲ್ಲಿ ನಮ್ಮ ಹಿಂದೆ ಬರುತ್ತಿದ್ದ. ನಾವು ಜಲ್ದಿ ಜಲ್ದಿ ಡೇರೆಗಳತ್ತ ಹೊರಟೆವು.... ಅಲ್ಲಿಯ ಗುಂಪಿನಲ್ಲಿ ಸೇರಿ ಕಾಣದಂತಾಗಲು. ಆದರೆ ಅಲ್ಲಿಂದ ಹುಡುಗ ಹುಡುಗಿಯರು ತಮ್ಮ ತಮ್ಮ ಬ್ಯಾಗ ತೆಗೆದುಕೊಂಡು ಹಡಗದತ್ತ ಸಾಗುತ್ತಲಿದ್ದರು.....

ಓರ್ವ ಹುಡುಗ ಮತ್ತು ಓರ್ವ ಹುಡುಗಿ ಮಾತನಾಡುತ್ತ, ಮಾತಿನಲ್ಲಿಯೇ ಮಗ್ನರಾಗಿ ಜೊತೆ ಜೊತೆಯಲ್ಲಿ ಸಾಗಿದ್ದರು. ಅವರ ಬೆನ್ನಿಗೆ ಇಳಿಬಿಟ್ಟುಕೊಂಡಿದ್ದ ಬ್ಯಾಗಿನಲ್ಲಿ ಎರಡೆರಡು ಜೋಡಿ ಕೈಕುಬಸಗಳು ಜೋತಾಡುತ್ತಿದ್ದವು. ಫಾದರ್ ಗ್ರ್ಯಾಗರಿ ಕೂಡಲೇ ಕೈ ಚಳಕ ತೋರಿಸಿದ ಆ ನಂತರ ಆತ ಖಾಲಿಯಿದ್ದ ಒಂದು ಡೇರೆಯೊಳಗೆ ನುಗ್ಗಿದ ಹಾಗೂ ಅಲ್ಲಿಂದ ಎರಡು ಜೋಡಿ ಫುಲ್ ಬೂಟು ಮತ್ತು ಮಫಲರ್ ತೆಗೆದುಕೊಂಡು ಬಂದ. ಇನ್ನೊಂದು ಡೇರೆಯಿಂದ ಎರಡು ಕಪ್ಪು ಕನ್ನಡಕ ಹೊಡೆದು ಕೊಂಡು ಬಂದ. ಈಗ ನಾವಿಬ್ಬರೂ ಒಂದು ಗಿಡದ ಮರೆಯಲ್ಲಿ ಕುಳಿತು ಫುಲ್ ಬೂಟು ಹಾಕಿಕೊಂಡೆವು. ಚರ್ಮದ ಕೈ ಕುಬಸ ತೊಟ್ಟು ಕೊಂಡೆವು. ಗಾಗಲ್‌ಗಳಿಂದ ಕಣ್ಣು ಹಾಗೂ ಮಫ್ಲರದಿಂದ ಕುತ್ತಿಗೆ ಮುಚ್ಚಿಕೊಂಡೆವು.... ಇಪ್ಪತ್ತನೆಯ ಶತಮಾನದ ಎಪ್ಪತ್ತೈದನೆಯ ವರ್ಷವನ್ನು ಎದುರಿಸಲು ಟೊಂಕ ಕಟ್ಟಿ ಸಿದ್ಧವಾದೆವು. ಈಗ ನಮ್ಮನ್ನು ನೋಡಿ, ಎರಡು ಶವಗಳು ಹೊರಟಿವೆಯೆಂದು ಹೇಳಲು ಯಾರಿಗೂ ಸಾಧ್ಯವಿರಲಿಲ್ಲ. ನಮ್ಮ ಮುಖಗಳು ಮುಚ್ಚಿಕೊಂಡಿದ್ದವು. ಜೀವಂತ ಪಾದ್ರಿ, ಜೀವಂತ ವ್ಯಕ್ತಿಗಳಾಗಿ ತೋರುತ್ತಿದ್ದೆವು.

ಈಗಲೋ ಆಗಲೋ ಬೆಳಕು ಹರಿಯುವುದರಲಿತ್ತು.... ನದಿಯ ತಟದಲ್ಲಿ ಆಳವಾದ ಮಂಜು ಮುಸುಕಿತ್ತು. ಹಡಗ ಹೊರಡುವ ಭುಂಗಾ ಕೂಗಿಕೊಂಡಿತು. ಹುಡುಗ, ಹುಡುಗಿಯರ ಸಮೂಹ ಹಾಡು ಹಾಡುತ್ತ ವಾದ್ಯಬಾರಿಸುತ್ತ ಪಾವಟಿಗೆ ಏರತೊಡಗಿದರು. ನೂರಾರು ಜನ ವಿದ್ಯಾರ್ಥಿಗಳವರು. ನಾವು ಕೂಡ ಆ ಸಮೂಹದಲ್ಲಿ ಸೇರಿಕೊಂಡೆವು ಹಾಗೂ ಹಡಗ ಏರಿದೆವು.... ಮಂಜು ಮುಸುಕಿದ್ದರಿಂದ ಹಾಗೂ ಆ ನೂರಾರು ವಿದ್ಯಾರ್ಥಿಗಳ ಸಮೂಹದಲ್ಲಿ ನಮ್ಮನ್ನು ಯಾರೂ ಗಮನಿಸಲಿಲ್ಲ..... ಹಡಗದಲ್ಲಿ ಹೋದ ಮೇಲೆ ತಿರುಗಿ ನೋಡುತ್ತೇನೆ ಆ ಅಪರಿಚಿತ

ವ್ಯಕ್ತಿ ನಮ್ಮ ಹಿಂದೆಯೇ ಇದ್ದಾನೆ.... ಅವನು ನಮ್ಮೊಂದಿಗೇ ಇದ್ದಾನೆ.... ನಾವು ಆ ಕೂಡಲೇ ಬಹು ಎಚ್ಚರಿಕೆಯಿಂದ ಒಂದು ಕತ್ತಲೆ ಆವರಿಸಿದ ಮೂಲೆಯಲ್ಲಿ ಹೋಗಿ ಅಡಗಿಕೊಂಡೆವು. ಅವನೂ ನಮ್ಮ ಹತ್ತಿರವೇ ಬಂದು ಕುಳಿತ. ಹಡಗ ಲಂಗರ್ ತೆಗೆದು ದಕ್ಷಿಣದತ್ತ ಚಲಿಸಲಾರಂಭಿಸಿತು.

ನಾವಿಬ್ಬರೂ ಹಸಿವೆ, ನೀರಡಿಕೆ ಹಾಗೂ ನಿದ್ರೆಗಳ ಬಗ್ಗೆ ಯೋಚಿಸಲೇ ಇಲ್ಲ. ಆದರೆ ಮೂರನೆಯವನ ಮೇಲೆ ಇವುಗಳ ಪರಿಣಾಮವೇನಾಗಿರಬೇಕೆಂಬುದು ನಮಗೆ ಅಂದಾಜ ಮಾಡಲು ಸಹ ಸಾಧ್ಯವಾಗಲಿಲ್ಲ. ಆದರವನು ಮೌನವಾಗಿಯೇ ಇದ್ದ. ಎರಡನೆಯ ರಾತ್ರಿ ಹಡಗ ಬಾತೋಮಿಯಲ್ಲಿ ಲಂಗರ್ ಹಾಕಿತು. ಹಾಡುತ್ತ ಬಾರಿಸುತ್ತ ಸಂತೋಷದಲ್ಲಿದ್ದ, ಆರೋಗ್ಯವಂತ, ಉಲ್ಲಾಸದ ತರುಣ, ತರುಣಿಯರ ಗುಂಪಿನೊಂದಿಗೆ ನಾವು ಮೂವರೂ ಹಡಗದಿಂದ ಹೊರಗೆ ತಟದ ಮೇಲೆ ಬಂದೆವು. ಜಲ್ದಿ ಜಲ್ದಿ ಒಂದೆಡೆಗೆ ನಡೆಯ ತೊಡಗಿದೆವು. ನಾವು ಎತ್ತ ಎಲ್ಲಿಗೆ ಹೋಗುತ್ತಿದ್ದೇವೆ ಎಂಬುದು ನಮಗೇ ಗೊತ್ತಿರಲಿಲ್ಲ. ನಮಗೀಗ ಕೇವಲ ಓಡುವುದೊಂದೇ ಗೊತ್ತಿತ್ತು.... ಗುರಿ, ಗಮ್ಯ ಯಾವೂ ಇರಲಿಲ್ಲ. ವರ್ಷಗಟ್ಟಲೆಯ ಎಡ್‌ವೆಂಚರದ ಆಶೆಯನ್ನು ನಿನ್ನಿಂದಾಗಿ ಕೈಕೊಳ್ಳಲಾಗಿತ್ತು..... ನಡೆಯುತ್ತ ನಡೆಯುತ್ತ ನಾವು ಒಂದೆಡೆ ತಲುಪಿದೆವು..... ಅಲ್ಲಿ ಬಹಳಷ್ಟು ನಾವು (ಬೋಟ)ಗಳು ನಿಂತಿದ್ದವು. ಸೂರ್ಯೋದಯವಾಗಲು ಇನ್ನೂ ತಡವಿತ್ತು..... ತಟ ನಿರ್ಜನವಾಗಿತ್ತು. ಫಾದರ್ ಗ್ರ್ಯಾಗರಿ ಒಂದು ಮೋಟರ ಬೋಟಿನ ಹಗ್ಗ ಬಿಚ್ಚಿದ ಹಾಗೂ ನಿನ್ನ ಹೆಸರು ಹೇಳುತ್ತ ಅದರಲ್ಲಿ ಹಾರಿದ ಮತ್ತು ನನ್ನ ಕೈ ಹಿಡಿದು ನನ್ನನ್ನೂ ಅದರೊಳಕ್ಕೆ ಎಳೆದುಕೊಂಡ. ಆಗ ತಲೆಯೆತ್ತಿ ನೋಡುತ್ತೇನೆ. ಆ ಮೂರನೆಯ ವ್ಯಕ್ತಿ ತಟದ ಮೇಲಿದ್ದಾನೆ. ಓ ! ದೇವರೇ.... ಕೇಳಿದ್ದೆ.... ಸಾವು ಜೀವನದ ಬೆಂಬತ್ತಿ ಬರುತ್ತದೆಂದು !..... ಆದರಿಲ್ಲಿ ಅದರ ತದ್ವಿರುದ್ಧ..... ಅವನು ಕೈ ಅಲ್ಲಾಡಿಸುತ್ತ ಜೋರು ಜೋರಾಗಿ ಕೂಗಿ ಹೇಳಿದ– ''ನನ್ನನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗಿ..... ನನ್ನನ್ನೂ.....'' ಅವನು ಇದೇ ಮೊದಲ ಸಲ ಮಾತನಾಡಿದ್ದ..... ಫಾದರ್, ಅವನಿಗೆ ಸನ್ನೆ ಮಾಡಿ ಬೋಟಿನಲ್ಲಿ ಬರುವಂತೆ ಹೇಳಿದ.... ಅವನು ಬಂದ ನಂತರ ಇಂಜಿನ್ ಸ್ಟಾರ್ಟ ಮಾಡಿದ.... ಏಳನೆಯ ಶತಮಾನದ ಕುರಾ ನದಿಯಲ್ಲಿ ತಾವು ಮೋಟರ ಬೋಟದಿಂದಲೇ ತಿಪ್ಲಿಸ್‌ಗೆ ಬಂದು–ಹೋಗಿ ಮಾಡುತ್ತಿದ್ದೀರಿ.....

ಆ ಮನುಷ್ಯ, ಅಪರಿಚಿತ ಬಂದು ನಮ್ಮ ಜೊತೆಯಲ್ಲಿಯೇ ಕುಳಿತ..... ಫಾದರ್ ಗ್ರ್ಯಾಗರಿ ಒಮ್ಮೆಲೇ ಪ್ರೊಫೆಶನಲ್ ಧ್ವನಿಯಲ್ಲಿ ಕೇಳಿದ– ''ಪ್ರಿಯ ಮಗನೇ, ನಿನಗಾವ ತೊಂದ್ರೆಯಿದೆ.... ನೀನು ಮಹಾರಾಣಿ ಗೋರಾಂದುಖ್ತದ ಚರ್ಚದಿಂದ ಹಿಡಿದು ಇಲ್ಲಿಯವರೆಗೆ ನಮ್ಮ ಬೆನ್ನು ಏಕೆ ಹತ್ತಿರುವೆ ?....'' ಎನ್ನುತ್ತ ನನ್ನತ್ತ ಹೊರಳಿ ''ಇದು ಜೆಟ್ ಬೋಟ ಆಗಿದೆ....'' ಎನ್ನುತ್ತ ಮತ್ತೆ ಆ ಅಪರಿಚಿತನತ್ತ ಹೊರಳಿ– ''ಹಾಂ, ಪ್ರಿಯ ಮಗನೇ, ನಿನಗಾವ ಕಷ್ಟವಿದೆ ?'' ಎಂದು ಕೇಳಿದ.

ಅವನು ತನ್ನ ಬಾಯಿ ಮೇಲೆ ಕೈಯಿರಿಸಿ ಮೆಲ್ಲಗೆ ಹೇಳಿದ– ''ಫಾದರ್.... ನಾನೊಬ್ಬ ಡಿಸಿಡೆಂಟ್ ಇಂಟಲೆಕ್ಚುವಲ್ ಇದ್ದೇನೆ.... ವೆಸ್ಟನ್ನು ಡಿಫೆಕ್ಟ್‌ಗೊಳಿಸುತ್ತಿದ್ದೇನೆ..... ನನಗೆ ಸಹಾಯಮಾಡಿ.....''

''ವೆಸ್ಟ್..... ?'' ಎನ್ನುತ್ತ ಫಾದರ್ ಕೂಡಲೇ ಬೋಟಿನ ದಿಕ್ಕನ್ನು ಬದಲಿಸಿ ಪಶ್ಚಿಮದತ್ತ ಹೊರಳಿಸಿದ ಹಾಗೂ ''ಬಲ್ಗಾರಿಯಾದ ಯಾವ ಹಡಗುತಾಣಕ್ಕೆ ಹೋಗಬೇಕೆನ್ನುತ್ತಿ ?'' ಎಂದು ಅಪರಿಚಿತನನ್ನು ಕೇಳಿದ. ಆ ಕ್ಷಣದಲ್ಲಿ ಫಾದರ್ ಗ್ರೆಗರಿಯ ಹಾಗೂ ಬಿಲಿಯಾನಿಯ ತಲೆಯಿಂದ ಸಮಕಾಲೀನ ಘಟನೆಗಳು ಮತ್ತು ಸಾಮಾನ್ಯ ತಿಳಿವಳಿಕೆಗಳು ಬಹುಶಃ ಆ ಸಮಯದ ಮಟ್ಟಿಗೆ ಮಾಯವಾಗಿದ್ದವು, ಅಥವಾ ಅವನ ತಲೆ ಆ ಕಾಲದಲ್ಲಿ ಬೇರೆ ಇನ್ನೆಲ್ಲಿಯಾದರೂ ಇರಬೇಕು..... ಒಟ್ಟಿನಲ್ಲಿ ಆ ಮನುಷ್ಯ ಗಾಬರಿಯಾಗಿ ಹೇಳಿದ– ''ಫಾದರ್, ಬಹುಶಃ ತಾವು ನಲವತ್ತೈದನೆಯ ಇಸವಿಯಿಂದ ತಮ್ಮ ಆಶ್ರಮದಿಂದ ಹೊರಗೇ ಬಂದಿಲ್ಲವೆಂದು ತೋರುತ್ತದೆ.....''

''ನಲವತ್ತೈದರಲ್ಲಿ ನಾನು ತಿಫ್ಲಿಸಿಯಲ್ಲಿಯೇ ಇದ್ದೆ.....'' ಎಂದು ಫಾದರ್ ಹೇಳಿದ..... ಆದರೆ ಸುದೈವದಿಂದ ಮೋಟರದ ಸಪ್ಪಳದಲ್ಲಿ ಆ ಮನುಷ್ಯ ಈ ಮಾತು ಕೇಳಿಸಿ ಕೊಳ್ಳಲಿಲ್ಲ.... ಅವನು ಹೇಳುತ್ತಲೇ ಇದ್ದ– ''ಫಾದರ್.... ವೆಸ್ಟ್ ಈಗ ಬರ್ಲಿನ್ ಗೋಡೆಯ ಆಚೆ ಕಡೆಯಿಂದ ಆರಂಭವಾಗುತ್ತದೆ....''

ಓ ! ದೇವರೆ, ಭಾವುಕ, ಬುದ್ಧಿಮಂದಳಾದ ನಾನು..... ಹೇಳಿದೆ–

''ಚೀನದ ಗೋಡೆ ಬಗ್ಗೆ ನಾನು ಕೂಡ ಕೇಳಿದ್ದೇನೆ..... ಸದ್ ಸಿಕಂದರಿ ಮತ್ತು ಬರ್ಬಂದ ನಮ್ಮ ಕೊಹಿಸ್ತಾನ ಕಫ್‌ಕಾಜಿಯಲ್ಲಿವೆ.... ಈ ಬರ್ಲಿನ್ ಗೋಡೆ ಎಲ್ಲಿದೆ....?''

ಫಾದರ್, ನನಗೆ ಸುಮ್ಮನಿರುವಂತೆ ಸನ್ನೆ ಮಾಡಿದ.... ಆ ಕ್ಷಣ ಫಾದರ್ ಗ್ರ್ಯಾಗರಿಯ ಸಮಸ್ತ''ಸಮಕಾಲೀನ ಚೇತನ'' ಮರಳಿ ಬಂದಿತ್ತು, ಅವನು ಮೋಟರ ಬೋಟಿನ ದಿಕ್ಕನ್ನು ಬದಲಿಸಿ ತುರ್ಕಿಯತ್ತ ಮುಂದುವರಿದ.... ಬೋಟ ವಿಶಾಲವಾದ ಸಮುದ್ರದಲ್ಲಿ ಜೋರಾಗಿ, ಗಾಳಿಯೊಂದಿಗೆ ಮಾತಾಡುತ್ತ ಭರಾಟೆಯಿಂದ ಓಡುತ್ತಲಿತ್ತು.... ಫಾದರ್, ಆ ಡಿಸಿಡೆಂಟ್ ಇಂಟ್‌ಲೆಕ್ಚುವಲ್‌ಗೆ ಹೇಳಿದ– ''ಪ್ರೀತಿಯ ಮಗನೇ, ದೇವರನ್ನು ಸ್ಮರಿಸು.... ಯೂನುಸ ಪೈಗಂಬರರನ್ನು ಕಾಪಾಡಿದ ದೇವರನ್ನು ಸ್ಮರಿಸು..... ನಮ್ಮ ರಕ್ಷಕನೂ, ಸಹಾಯಕನೂ ಆತನೇ ಆಗಿದ್ದಾನೆ.... ಮತ್ತು ಸಮುದ್ರಗಳ ತಾರೆಯಾಗಿದ್ದಾನೆ.... ತಾಯಿ ಮರಿಯಮ್‌ಳು ಮಾರ್ಗದರ್ಶನ ಮಾಡಲಿದ್ದಾಳೆ.....''

''ಪರಮಾತ್ಮನು ನಮ್ಮನ್ನು ರಕ್ಷಿಸಲಿ.....'' ಎನ್ನುತ್ತ ನಾನು ಹೇಳಿದೆ.... ''ಪ್ರಿಯ ಮಗನೇ, ದೇವರನ್ನು, ಹಡಗುಗಳಿಗೆ, ಯಾತ್ರಿಕರಿಗೆ ದಾರಿ ತೋರುವಾತನನ್ನು ನೆನೆ..... ನೀನು ದೇವದೂತರ, ಸಂತರ ಮತ್ತು ಧರ್ಮಕ್ಕಾಗಿ ಬಲಿ ಹೋದವರ ಚರಿತ್ರೆಗಳನ್ನು ಕಟ್ಟು ನಿಟ್ಟಾಗಿ ಪಠಣ ಮಾಡುತ್ತಿರುವೆಯೆಂದು ನಾನು ಆಶಿಸಿ ದ್ದೇನೆ....'' ಎಂದಾಗ–

''ನಾನು ಕೇವಲ ಮೆಲಾರ್‌ಮೆ, ಕಾಫ್ಕಾ ಮತ್ತು ಬೊದಲಿಯರ್ ಅವರನ್ನು ಅಧ್ಯಯನ ಮಾಡಿದ್ದೇನೆ.....'' ಎಂದವನು ಹೇಳಿದ, ಓ ! ದೇವರೇ, ನಾನು ಈ ಮುಂಚೆ ಈ ಸಂತರ ಹೆಸರನ್ನು ಕೇಳಿರಲಿಲ್ಲವೆಂಬುದನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತೇನೆ......

ಓ ! ಜಗದ್ ರಕ್ಷಕನೆ..... ಇಲ್ಲಿಂದ ಮುಂದಿನ ಎಲ್ಲ ಘಟನೆಗಳನ್ನು ನೀನು ಬಲ್ಲವನಾಗಿರುವೆ.... ನಾವು ಹೇಗೆ ಯಾವ ಯಾವ ಎಡ್‌ವಂಚರ್‌ಗಳನ್ನು ಎದುರಿಸುತ್ತ, ಕೊನೆಯಲ್ಲಿ ವೀಯಾನಾ ತಲುಪಿದೆವು ಎಂಬುದು..... ಅಲ್ಲಿ ನಮಗೆ ಯಾವ ರೀತಿಯ ಆತಿಥ್ಯ, ಸ್ವಾಗತ ನೀಡಲಾಯಿತು..... ಡಿಸಿಡೆಂಟ್ ಇಂಟಲೆಕ್ಚುವಲ್ ಪ್ರೆಸ್ ಕಾನ್‌ಫ್ರೆನ್ಸ್ ಯಾವ ರೀತಿ ನಡೆಸಿದ.... ಟಿ.ವಿ. ಮತ್ತು ಪತ್ರಿಕಾ ಸಂದರ್ಶನ, ಪುಸ್ತಕಗಳ ಕಂಟ್ರಾಕ್ಟ್, ಔತಣಗಳು, ನಾನು ಮತ್ತು ಫಾದರ್ ಗ್ರ್ಯಾಗರಿ ಒಟ್ಟಿಗಿರುವುದು..... ಆದರೆ ವೀಯಾನಾ ತಲುಪಿದ ತಕ್ಷಣ ಫಾದರ್, ಡಿಸಿಡೆಂಟ್ ಇಂಟಲೆಕ್ಚುವಲ್‌ಗೆ ಹೀಗೆಂದು ಹೇಳಿದ– ''ನಾನು ಮತ್ತು ಮದರ್ ಫ್ಲೋರಾ ಇಬ್ಬರೂ ಗಿರ್ಜಿಸ್ತಾನದ ಜಾರ್ಜಿಯನ್ ಚರ್ಚದ ಅತ್ಯಂತ ಪ್ರಾಚೀನವಾದ ಆರ್ಡರ್‌ದೊಂದಿಗೆ ಸಂಬಂಧ ಹೊಂದಿದ್ದೇವೆ..... ಅದರ ಸದಸ್ಯರು ಸಾಯುವವರೆಗೂ ಸಂಪೂರ್ಣವಾಗಿ ಮೌನ ಆಚರಿಸುವ ಪಣತೊಟ್ಟಿರುತ್ತಾರೆ.... ಈ ಕಾರಣದಿಂದ ನಮ್ಮಿಬ್ಬರಿಗೂ ಸಂದರ್ಶನದಿಂದ ದೂರವಿಡಬೇಕು..... ದಿನನಿತ್ಯದ ಅವಶ್ಯಕತೆಗಳ ಬಗ್ಗೆ ನಾವಿಬ್ಬರೂ ಒಂದು ಹಾಳೆಯಲ್ಲಿ ಕೆಲ ಶಬ್ದಗಳನ್ನು ಬರೆಯುತ್ತಿರುತ್ತೇವೆ... ಇದಲ್ಲದೆ ನಾವು ಫೋಟೋ ತೆಗೆಯಿಸಿಕೊಳ್ಳುವುದಿಲ್ಲ..... ಇದು ಆತ್ಮ ಪ್ರಶಂಸೆ, ಅಭಿಮಾನದ, ಅಹಂಕಾರದ ಪ್ರದರ್ಶನವೆಂದು ನಾವು ಭಾವಿಸಿದ್ದೇವೆ.... ಇಂಟಲೆಕ್ಚುವಲ್ ಈ ಸಂದೇಶವನ್ನು ಪತ್ರಿಕಾಕರ್ತರಿಗೆ ತಲುಪಿಸಿದ..... ಈ ಸಂದೇಶದಿಂದ ಒಂದು ರೀತಿಯ ಕೋಲಾಹಲವೇ ಉಂಟಾಯಿತು.... ಈಗ ವರ್ಲ್ಡ್ ಪ್ರೆಸ್‌ದಲ್ಲಿಯೂ ಸುದ್ದಿ ಪ್ರಕಟವಾದವು.... ''ಫಾದರ್ ಗ್ರ್ಯಾಗರಿ ಮತ್ತು ಮದರ್ ಫ್ಲೋರಾ ಶಾಶ್ವತವಾಗಿ ಮೌನಧಾರಣ ಮಾಡುವ ಪ್ರತಿಜ್ಞೆ ಗೈದಿದ್ದಾರೆ....'' ಇದಾದ ನಂತರ ಪ್ಯಾರಿಸ್‌ದಲ್ಲಿ ಓರ್ವ ಪತ್ರಕರ್ತ ಒತ್ತಾಯ ಮಾಡಿದ– ''ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಒಂದು ಹಾಳೆಯಲ್ಲಿ ಬರೆದು ಕೊಡಿ'' ಎಂದು. ಆದರೆ ಫಾದರ್ ಉತ್ತರ ನೀಡುತ್ತ ಹೀಗೆ ಬರೆದ–

''ನಾನು ಕೆಲಕಾರಣಗಳಿಂದಾಗಿ ಏನನ್ನೂ ಹೇಳಲಿಚ್ಛಿಸುವುದಿಲ್ಲ''..... ಇದಾದ ನಂತರ ''ಫಾದರ್ ಗ್ರ್ಯಾಗರಿಯ ಹೇಳಿಕೆ–ಕೆಲಕಾರಣಗಳಿಂದಾಗಿ ಏನನ್ನು ಹೇಳಲೂ ಇಚ್ಛಿಸುವುದಿಲ್ಲ.....'' ಎಂದು ಪತ್ರಿಕಾಕರ್ತರು ಬರೆದರು.....ಪ್ಯಾರಿಸ್‌ದಿಂದ ನಮ್ಮನ್ನು ಲಂಡನ್‌ಗೆ ಕರೆದೊಯ್ಯಲಾಯಿತು. ಅಲ್ಲಿಯೂ ಇದೇ ಕೋಲಾಹಲ ನಡೆಯಿತು... ಈಗ ನಮ್ಮ ಮಾಮೂಲ ಕಾರ್ಯಕ್ರಮವೆಂದರೆ ಇಂಟಲೆಕ್ಚುವಲ್ ಮೀಡಿಯಾಗಳ ಪ್ರತಿನಿಧಿಗಳ ಜೊತೆ ಇರುವುದು, ಫಾದರ್ ಗ್ರ್ಯಾಗರಿ ಗ್ರಂಥಾಲಯದಲ್ಲಿ ಕಾಲ ಕಳೆಯುವುದು, ನಾನು ವಿಂಡೋಷಾಪಿಂಗ್ ಮಾಡುತ್ತ ತಿರುಗುತ್ತಿರುವುದು..... ನಮ್ಮನ್ನು ಅತ್ಯಂತ ಶ್ರೇಷ್ಠ ಹೋಟಲ್‌ಗಳಲ್ಲಿ ಇರಿಸಲಾಗಿತ್ತು... ಪ್ರೆಸ್ಸಿನವರು ನಮ್ಮ ''ಆಶೆಗಳನ್ನು

ಗೌರವಿಸಿ'' ನನ್ನ ಮತ್ತು ಫಾದರ್‌ನನ್ನು ಸಂಪೂರ್ಣ ಸ್ವತಂತ್ರವಾಗಿರಲು ಬಿಟ್ಟುಬಿಟ್ಟಿದ್ದರು..... ನಮ್ಮ ಅತಿಥೇಯರು ಕೂಡ ಮಾರನೆಯ ದಿನದ ಪ್ರೋಗ್ರಾಮುಗಳ ಬಗ್ಗೆ ಏನೆಲ್ಲ ತಿಳಿಸಬೇಕೊ ಅದನ್ನೆಲ್ಲ ಡಿಸಿಡೆಂಟ್ ಇಂಟಲೆಕ್ಚುವಲ್‌ಗೆ ತಿಳಿಸುತ್ತಿದ್ದರು....

ಒಂದು ತಿಂಗಳ ನಂತರ, ಓ ! ದೇವರೇ, ನಿನಗೆ ಚೆನ್ನಾಗಿ ಗೊತ್ತಿರುವಂತೆ ನಾವು ಮೂವರೂ ಆಮಂತ್ರಿತರಾಗಿ ಅಮೇರಿಕಾಕ್ಕೆ ತೆರಳಿದೆವು. ಕಾರ್ಯಕ್ರಮದ ಪ್ರಕಾರ ನಾವು ಮೂವರೂ ಸ್ಥಾಯಿ ರೂಪದಲ್ಲಿ ಅಲ್ಲಿ ವಾಸ ಮಾಡಲಿದ್ದೆವು. ಇಂಟಲೆಕ್ಚುವಲ್ ಈಗ ತುಂಬ ವ್ಯಸ್ತನಾಗಿದ್ದ..... ಪುಸ್ತಕ ಮತ್ತು ಧಾರಾವಾಹಿ ಲೇಖನಗಳ ಬಗ್ಗೆ ಅತ್ಯಧಿಕ ರಾಯಲ್ಟಿ ಮುಂಗಡ ವಸೂಲ ಮಾಡಿದ್ದ ಹಾಗೂ ಮಜಾ ಮಾಡುತ್ತಲಿದ್ದ.... ನಮ್ಮನ್ನು ನ್ಯೂಯಾರ್ಕ್ ಹಿಲ್ಟನ್‌ದಲ್ಲಿ ಇಳಿಸಲಾಗಿತ್ತು..... ಇಲ್ಲಿಯೂ ಕೂಡ ನನಗೆ ಹಾಗೂ ಫಾದರ್‌ಗೆ ಅವೇ ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂತು......

ಇಂಥವೇ ಸಮಸ್ಯೆಗಳನ್ನು ನಮಗೆ ಪಶ್ಚಿಮ ಯುರೋಪ ಮತ್ತು ಇಂಗ್ಲಂಡದ ಹೋಟಲ್‌ಗಳಲ್ಲಿ ಎದುರಿಸಬೇಕಾಗಿ ಬಂದಿತ್ತು.... ಅಲ್ಲದೆ ನಮಗೆ ತುಂಬ ತೊಂದರೆಯೂ ಆಗಿತ್ತು.... ದೇವರೇ, ನಿನಗೆ ಗೊತ್ತಿದೆ... ನಮಗಿಬ್ಬರಿಗೂ ಹಸಿವೆ, ನೀರಡಿಕೆ, ನಿದ್ರೆ, ಬಾತರೂಮಗೆ ಹೋಗುವ ಅವಶ್ಯಕತೆ ಇಲ್ಲವೆಂಬುದು.... ಹೀಗಾಗಿ ನಾವು ನಮ್ಮ ರೂಮಿಗೆ ಬ್ರೆಕ್‌ಫಾಸ್ಟ್ ತರಿಸುತ್ತಿದ್ದಿಲ್ಲ..... ಊಟ ಮಾಡಲು ಕೆಳಗೆ ಡೈನಿಂಗ್ ಹಾಲ್‌ಗೆ ಹೋಗುತ್ತಿರಲಿಲ್ಲ.... ರೂಮ ಸರ್ವೀಸ್‌ಗೆ ಇದ್ದ ಹುಡುಗನನ್ನು ಫೋನ್ ಮಾಡಿ ಯಾವುದಕ್ಕೂ ಕರೆಯುತ್ತಿರಲಿಲ್ಲ..... ಆದರೆ ಎಲ್ಲದಕ್ಕಿಂತ ದೊಡ್ಡ ಸಮಸ್ಯೆ ಬಾತರೂಮಿನದಾಗಿತ್ತು....ಕಮೋಡದ ಹತ್ತಿರ ಕಟ್ಟಿದ ಕಾಗದ ಸುರಳಿ ಇದ್ದಂತೆಯೇ ಇರುತ್ತಿತ್ತು.... ಟಾವೆಲ್, ಸಾಬುನ್, ವಾಷಬೇಸನ್ ಎಲ್ಲವೂ ನೀಟಾಗಿ ಹಾಗೆಯೇ ಇರುತ್ತಿದ್ದವು.... ಯಾವನ್ನೂ ಉಪಯೋಗಿಸುತ್ತಿದ್ದಿಲ್ಲ.... ಬೆಳಗ್ಗೆ 'ಮೇಡ್' ರೂಮ್ ಸ್ವಚ್ಛ ಗೊಳಿಸಲು ಬಂದಾಗ ಎಲ್ಲವೂ ಹಾಗೆಯೇ ಇರುತ್ತಿದ್ದುದನ್ನು ಕಂಡು ಆಶ್ಚರ್ಯಪಡುತ್ತಿದ್ದಳು..... ಈ ವಿಷಯದಲ್ಲಿ ಫಾದರ್‌ನೊಂದಿಗೆ ಮಾತನಾಡಬೇಕೆಂದರೆ ನಾಚಿಕೆಯಾಗುತ್ತಿತ್ತು.... ಕೊನೆಗೊಂದು ದಿನ ನಾನು ಫಾದರ್‌ಗೆ ಹೇಳಿದೆ–

''ಹೆಣ್ಣಿಗೆ ಬುದ್ಧಿ ಕಡಿಮೆಯೆಂಬುದು ನಿಜ. ಇದೆಲ್ಲ ಸಮಸ್ಯೆಯಲ್ಲ, ಅತ್ಯಂತ ಸರಳವಾಗಿದೆ.... ನಾನು ಈ ಕಾಗದದ ಸುರಳಿಯನ್ನು ಆಚೆ ಬೀಸಾಕುತ್ತೇನೆ... ವಾಷಬೇಸನ್‌ದ ಹತ್ತಿರ ಅತ್ತ–ಇತ್ತ ನೀರು ಸಿಂಪಡಿಸುತ್ತೇನೆ.... ಕೆಲ ಹನಿಗಳನ್ನು ಸಾಬೂನಿನ ಮೇಲೆಯೂ ಹಾಕುತ್ತೇನೆ.... ಇದು ಪ್ರಾಬ್ಲಮ್ಮೇ ಅಲ್ಲ..... ಊಟ ಉಪಚಾರ. ನಾವು ವಿಯೆನ್ನಾದಲ್ಲಿಯೇ ನಮ್ಮ ಅತಿಥೇಯನಿಗೆ ನಾವು ನಿರಂತರ ಉಪವಾಸ ಮಾಡುತ್ತೇವೆ– ಎಂದು ಹೇಳಿಯಾಗಿತ್ತು. ರಾತ್ರಿಯಲ್ಲಿ ಕೇವಲ ರೊಟ್ಟಿ, ಉಳ್ಳಿಗಡ್ಡಿ ಪನೀರ ಹಾಗೂ ನೀರಿನಿಂದ ಉಪವಾಸ ಬಿಡುತ್ತೇವೆ.... ಸೊಗಸಾದ ಭಾಂಡೆಯಲ್ಲಿ ರಾತ್ರಿಗಾಗಿ ಇವೆಲ್ಲ ಇರಿಸಿ ಮೇಲೆ ನ್ಯಾಪಕಿನ್ ಹೊದಿಸಿ ನಮ್ಮ ರೂಮಿಗೆ ಕಳಿಸುತ್ತಿದ್ದರು....

ಇವುಗಳನ್ನು ನಾವು ಕಾಗದದ ಬ್ಯಾಗಿನಲ್ಲಿ ಹಾಕಿ ಬೆಳಗ್ಗೆ ಹೊರಗೇ ಒಯ್ದು ಹಾದಿಯ ಪಕ್ಕದಲ್ಲಿರುವ ಡಸ್ಟ್‌ಬಿನ್‌ದಲ್ಲಿ ಒಗೆದು ಬರುತ್ತಿದ್ದೆವು. ಆದರೆ ಹಿಲ್ಟನ್‌ದಲ್ಲಿ ವಾಸವಾಗಿ ನಾಲ್ಕನೆಯ ದಿನದಂದು ಫಾದರ್ ನನಗೆ ಹೇಳಿದ– ''ನಮ್ಮ ಅತಿಥೇಯರು ನಮ್ಮನ್ನು, ಅನಾಸ್ಕಾದ ಗ್ರೀಕ್ ಅರ್ಥೋಡಾಕ್ಸ್ ಆಶ್ರಮಗಳಿಗೆ ಕಳಿಸುವ ವ್ಯವಸ್ಥೆ ಮಾಡಿದ್ದಾರೆ.... ನೀನು ಕೆಳಗೆ ಬಾ..... ನಿನ್ನೊಂದಿಗೆ ವಿಚಾರ ವಿನಿಮಯ ಮಾಡುತ್ತೇನೆ....''

ನಾನು ಹೆದರಿಕೊಂಡೇ ಕೆಳಗೆ ಹೋದೆ..... ಫಾದರ್ ಹೇಳಿದ– ''ನಾನು ಈಗ ತಾನೇ ಕಮಿಟಿಯ ಸೆಕ್ರೆಟರಿಯೊಂದಿಗೆ ಮಾತಾಡಿದ್ದೇನೆ ಹಾಗೂ ಹೇಳಿದ್ದೇನೆ.... ನಾವು ಮೊದಲು ನಮ್ಮ ಜಾರ್ಜಿಯನ್ ಸಂಬಂಧಿಗಳನ್ನು ಕಾಣಲು ಫಿಲಾಡಲ್ಫಿಯಾಕ್ಕೆ ಹೋಗುತ್ತೇವೆ..... ನಂತರ ಕೆಲಕಾಲ ನ್ಯೂಯಾರ್ಕದಲ್ಲಿಯೇ ಕೆಲ ಪ್ರಿಯ ಮಿತ್ರ ರಲ್ಲಿರೋಣ.... ಏಕೆಂದರೆ ಇಲ್ಲಿಯ ಲಾಯಬ್ರರಿಗಳಲ್ಲಿ ಒಂದಿಷ್ಟು ಅಧ್ಯಯನ ನಡೆಸಬೇಕೆಂದಿದ್ದೇನೆ... ಅವನು ನನಗೆ ಈ ಕಾಲದಲ್ಲಿ ಖರ್ಚಿಗಾಗಿ ಬಹಳ ದೊಡ್ಡ ಮೊತ್ತ ನೀಡಿದ್ದಾನೆ.... ನಾಳೆ ಬೆಳಗ್ಗೆ ಇಲ್ಲಿಂದ ಚೆಕ್ ಔಟ್ ಆಗಿ ಹೊರಡೋಣ.... ಮಾರನೆಯ ದಿನ ನಾವು ಡಿಸಿಡೆಂಟ್ ಇಂಟಲೆಕ್ಚುವಲ್ ಹಾಗೂ ನಮ್ಮ ಆತಿಥೇಯ ಇಬ್ಬರಿಗೂ ಖುದಾ ಹಾಫೀಜ ಹೇಳಿ ಹಿಲ್ಟನ್ ತೊರೆದೆವು.... ಫಾದರ್ ಒಂದು ಸಾಮಾನ್ಯ ಬೋರ್ಡಿಂಗ್ ಹೌಸ್‌ನಲ್ಲಿ ಎರಡು ಕೋಣೆ ಬಾಡಿಗೆಗೆ ಪಡೆದ. ಹಣದ ತೊಂದರೆ ಇರಲಿಲ್ಲ.... ಫಾದರ್ ಸೈನ್ಸ್ ಮತ್ತು ಟೆಕ್ನಾಲಾಜಿ ಮತ್ತು ಜಾಗತಿಕ ರಾಜನೀತಿಗಳ ಬಗ್ಗೆ ಹೊಸದಾಗಿ ಬಂದಿರುವ ಪುಸ್ತಕಗಳನ್ನು ಕೊಂಡ.... ನಾನು ಫ್ಯಾಶನ್ ಮೆಗಜೀನ.... ಫಾದರ್ ಗ್ರಂಥಾಲಯದಲ್ಲಿ ಕಾಲ ಕಳೆಯುತ್ತಾನೆ.... ನಾನು ವಿಂಡೋ ಷಾಪಿಂಗ್ ಮಾಡುತ್ತೇನೆ.... ಒಂದು ದಿನ ನಾನು ಒಂದು ಬುಕ್‌ಶಾಪ್‌ದಲ್ಲಿ ಫಾದರ್ 'ಪ್ಲೇಬಾಯ್' ಪುಸ್ತಕದ ಅಧ್ಯಯನ, ಗಂಭೀರವಾಗಿ ನಡೆಸಿರುವುದನ್ನು ನೋಡಿದೆ.... ನನ್ನನ್ನು ಕಂಡು ಗಾಬರಿಯಾದ.... ಗಾಬರಿಯಾಗುತ್ತ ಹೇಳಿದ– ''ಈ ಪತ್ರಿಕೆಯಲ್ಲಿ ಇಂಟರವ್ಹಿವ್ ತುಂಬ ಚೆನ್ನಾಗಿ ಪ್ರಿಂಟಾಗಿರುತ್ತವೆ.... ನಾನು ಸಾಲಬೇಲೊ ಬಗ್ಗೆ ಒಂದು ಲೇಖನ ಓದುತ್ತಿದ್ದೆ....''

ಫಾದರ್ ಪುಸ್ತಕಾಲಯದಿಂದ ಕೆಲ ಪುಸ್ತಕ ಕಳವು ಮಾಡಿಕೊಂಡೂ ತರುತ್ತಿದ್ದ.... ಸಿಗರೇಟಿನ ಚಟ ತುಂಬ ಆಗಿತ್ತು.... ತನ್ನ ರೂಮಿನಲ್ಲಿ ಕುಳಿತು ಒಂದೇ ಸವನೇ ಸಿಗರೇಟ ಸೇದುತ್ತಿದ್ದ.... ಪಬ್ಲಿಕ್‌ದಲ್ಲಿ ಸಿಗರೇಟ ಸೇದಲು ಸಾಧ್ಯವಿರಲಿಲ್ಲ.... ಅದಕ್ಕಾಗಿ ಮುಖವಾಡ ತೆಗೆಯಬೇಕಾಗುತ್ತಿತ್ತು. ವರ್ಷದ ಸೌಲಭ್ಯ ತೀವ್ರಗತಿಯಲ್ಲಿ ಮುಗಿಯುತ್ತ ಬಂದಿತ್ತು.... ಚಳಿಗಾಲ ಆಗಲೇ ಆರಂಭವಾಗಿತ್ತು.... ಎಲ್ಲೆಡೆ ಗಿಡಗಳಿಂದ ಒಣಗಿದ ಎಲೆಗಳು ಉದುರ ತೊಡಗಿದ್ದವು..... ಒಂದು ಸುಂದರವಾದ ಡ್ರೆಸ್ ಖರೀದಿಸಿ, ನನ್ನ ಕೋಣೆಯಲ್ಲಿ ಉಟ್ಟು ಕೊಳ್ಳಬೇಕೆಂದು ತುಂಬ ಬಯಸಿದ್ದೆ.... ಫಾದರ್ ಪಕ್ಕಾ ಮೇಲ್ ಶೋವನಿಸ್ಟ್‌ನಾಗಿದ್ದ.... ನನ್ನೀ ಆಶೆಯನ್ನು ಉಪೇಕ್ಷೆಯಿಂದ ತಳ್ಳಿ ಹಾಕಿದ..... ಅದೂ ಅಲ್ಲದೆ ನನ್ನ ಪಾಲಿನ ಡಾಲರ್‌ಗಳನ್ನು ಕೂಡ ತನ್ನ ಪುಸ್ತಕಗಳಿಗಾಗಿ ಖರ್ಚು ಮಾಡಿದ.... ಹೆಚ್ಚಾಗಿ ಸಿನೇಮಾ ಹಾಗೂ ನಾಟಕಗಳನ್ನು ನೋಡಿದ.... ನಿನ್ನ

ಕೋಣೆಯಲ್ಲಿ ಟಿ.ವಿ. ಇದೆ..... ಅದನ್ನು ನೋಡು ಹಾಗೂ ಪ್ರಾರ್ಥನೆ.... ಧ್ಯಾನ ಮಾಡು..... ಎಂದು ನನಗೆ ಹೇಳುತ್ತಿದ್ದ......

ಅಯ್ಯೋ ದೇವರೇ..... ನಾವು ನಿಶ್ಚಿತಗೊಂಡಿರುವ ಸಮಯದೊಳಗಾಗಿ ಜಾರ್ಜಿಯಾದ ಈ ನೆಲಮಾಳಿಗೆಗೆ ತಲುಪದಿದ್ದರೆ ಏನು ಮಾಡಬೇಕೆಂದು ನಿನ್ನ ಮರಗುಳಿ ದೇವದೂತನನ್ನು ಕೇಳಿದ್ದೆ. ಆ ವಿಷಯ ನಿನಗೆ ತಿಳಿಸಲು ಮರೆತು ಬಿಟ್ಟೆ. ಹೀಗೆ ಕೇಳಿದಾಗ ಆತ ಹೋಗುತ್ತ ಹೋಗುತ್ತ ಹೀಗೆ ಹೇಳಿದ್ದ–ನೀವು ಎಲ್ಲಿಯೇ ಇರ್ರಿ ಇದ್ದಲ್ಲಿಂದ ಸಮೀಪದ ಯಾವುದಾದರೂ ಸ್ಮಶಾನಕ್ಕೆ ಹೋಗಿರಿ.... ಅಲ್ಲಿರುವ ಖಾಲಿ ಸಮಾಧಿಯಲ್ಲಿ ಬಿದ್ದು ಕೊಳ್ಳಿ..... ವರ್ಷ ಮುಗಿಯುತ್ತ ಬಂದಿತ್ತು.... ಓ ! ದೇವರೇ, ನಿನ್ನೀ ವಿಶಾಲವಾದ, ಇಷ್ಟೊಂದು ಆಶ್ಚರ್ಯಕರವಾದ, ಉತ್ಸಾಹಪೂರ್ಣವಾದ, ಮನೋಹರವಾದ, ಆಕರ್ಷಕವಾದ, ಇಷ್ಟೊಂದು ಪ್ರಗತಿಪರ ಜಗತ್ತಿನಲ್ಲಿ ನಮಗೆ ಇನ್ನೂ ಏನನ್ನೂ ಕಾಣಲಾಗಲಿಲ್ಲ..... ನೋಡಲಾಗಲಿಲ್ಲ..... ಫಾದರ್, ಸ್ಮಶಾನ ಹುಡುಕುವ ಕೆಲಸವನ್ನೂ ನನ್ನ ಮೇಲೆಯೇ ಬಿಟ್ಟಿದ್ದ.... ಸ್ವತಃ ತಿರುಗಾಡಲು ಹೋಗುತ್ತಿದ್ದ..... ನಾನು ಸ್ಮಶಾನ ಹುಡುಕುತ್ತ ತಿರುಗುತ್ತಿದ್ದೆ..... ಎಲ್ಲಿಯಾದರೂ ಖಾಲಿ ಎರಡು ಸಮಾಧಿ ಕಣ್ಣಿಗೆ ಬಿದ್ದರೆ ಸಾಕು..... ಅವುಗಳನ್ನು ಗುರುತಿಟ್ಟುಕೊಳ್ಳ ಬೇಕೆಂದು.....

ಮರಳಲು ಈಗ ಕೇವಲ ಕೆಲವೇ ದಿನಗಳು ಬಾಕಿ ಉಳಿದಿದ್ದವು.... ಹಣ ಕೂಡ ಮುಗಿಯುವ ಹಂತದಲ್ಲಿತ್ತು..... ಅತಿಥೇಯರಿಗೆ ಫೋನ್ ಮಾಡಿ ಇನ್ನಿಷ್ಟು ಅವರಿಂದ ಡಾಲರ್ ತರಿಸಿಕೊಳ್ಳಲು ಫಾದರ್ ಸಿದ್ಧನಿರಲಿಲ್ಲ... ಕೇಳಿದ್ದರೆ– ''ನೀವಿನ್ನೂ ಇಲ್ಲಿಯೇ ಏಕಿದ್ದೀರಿ ? ಏನು ಮಾಡುತ್ತಿದ್ದೀರಿ ? ಅಲಾಸ್ಕಾ ಆಶ್ರಮಕ್ಕೆ ಏಕೆ ಹೋಗಿಲ್ಲ....'' ಎಂದು ಕೇಳುತ್ತಿದ್ದರು. ಉಳಿದಿರುವ ಡಾಲರ್‌ಗಳಲ್ಲಿ (ನನ್ನ ಪಾಲಿನವು) ನನ್ನ ಮೊದಲ ಮತ್ತು ಕೊನೆಯ ಆಶೆಯಾಗಿದ್ದ–ಒಂದು ಗೌನ್ ಖರೀದಿಸಬೇಕೆಂದು ಆಶಿಸಿದ್ದೆ. ಆದರೆ ಫಾದರ್, ಆ ಹಣದಿಂದ ಅರಬ್ ಆಯಿಲ್‌ದ ಅರ್ಥ ವ್ಯವಸ್ಥೆ ಬಗ್ಗೆ ಇನ್ನೊಂದು ಯೂರೋಪಿಯನ್ ಕಾಮನ್ ಮಾರ್ಕೆಟ್ ಬಗ್ಗೆ ಹೀಗೆ ಎರಡು ಪುಸ್ತಕ ತೆಗೆದು ಕೊಂಡಿದ್ದ.... ನಾನು ಅತ್ತು ಬಿಟ್ಟೆ.....

ಆಗ ಫಾದರ್ ಹೇಳಿದ– ''ಸಮಯ ಬಹಳ ಕಡಿಮೆ ಉಳಿದಿದೆ.... ಹಗಲು–ರಾತ್ರಿ ಇವುಗಳನ್ನು ಓದುತ್ತೇನೆ....'' ಮತ್ತೆ ನನ್ನನ್ನು ಪುಸಲಾಯಿಸಲು ಹೇಳಿದ– ''ನಾವು ಭೂಗತರಾಗುವುದರಿಂದ ಇಡೀ ಜಗತ್ತಿನಲ್ಲಿ ಏನೆಂಥ ಕೋಲಾಹಲ ಉಂಟಾಗ ಬಹುದು..... ಎಂಬುದರ ಬಗ್ಗೆ ಕೊಂಚ ಯೋಚಿಸು.... (ನಾನು 'ಅಂಡರಗ್ರೌಂಡ್' ಶಬ್ದಕ್ಕೆ ತುಂಬ ಮೆಚ್ಚಿಕೆ ವ್ಯಕ್ತಪಡಿಸಿದೆ.) ಅಮೇರಿಕನ್ ಮತ್ತು ರಶಿಯಾದೇಶದ ಇಬ್ಬರೂ ನಾವು ಡಬಲ್ ಏಜೆಂಟ್ ಇರಬೇಕೆಂದು ತಿಳಿಯುತ್ತಾರೆ.... ಪಾಪ ಡಿಸಿಡೆಂಟ್ ಇಂಟಲೆಕ್ಚುವಲ್‌ನ ಮೇಲೆ ಯಾವ ಆಪತ್ತು ಬರುತ್ತದೆಯೋ ಏನೋ.... ಆದರೆ ಈಗಿನ ಸ್ಥಿತಿ ಹೇಗಿದೆಯೆಂದರೆ ಆ ಬಡಪಾಯಿಗೆ ನಾವು ಯಾವ ಸಹಾಯವನ್ನೂ ಮಾಡಲಾರೆವು. ಬಾ, ಕೊಂಚ ತಿರುಗಾಡಿಕೊಂಡು ಬರೋಣ.....''

ನಾವು ತಿರುಗಾಡಿಕೊಂಡು ಬರಲು ಹೊರಟೆವು. ಒಂದು ವೈಭವದ ಅಂಗಡಿಯಲ್ಲಿ ಹೊಸ ಹೊಸ ರಚನೆಗಳ ಪ್ರದರ್ಶನ ನಡೆದಿತ್ತು..... ನಾನು ಫಾದರ್‌ನನ್ನು ಅಂಗಡಿಯಲ್ಲಿ ಎಳೆದುಕೊಂಡು ಹೋದೆ..... ಫ್ಯಾಶನ್ ಷೋ ಆರಂಭವಾಗಿತ್ತು..... ಆ ಅಂಗಡಿಯ ಮಾಲಿಕ ಯಾವನೋ ಕೆಥೋಲಿಕ್ ಇದ್ದ. ನಮ್ಮ ಕಪ್ಪು ಉಡುಪು ನೋಡಿ ಯಾರೂ ಏನೂ ಅನ್ನಲಿಲ್ಲ.... ನಾವು ಹೋಗಿ ಹಿಂದಿನ ಸಾಲಿನಲ್ಲಿ ಕುಳಿತೆವು..... ನಾನು ವಸ್ತ್ರಗಳನ್ನು, ಫಾದರ್ ಗ್ರ್ಯಾಗರಿ ಮಾಡಲ್ ಹುಡುಗಿಯರನ್ನು ನೋಡುತ್ತಲಿದ್ದೆವು..... ಒಮ್ಮೆಲೇ ನಾನು ಆಶ್ಚರ್ಯಚಕಿತಳಾದೆ.... ಓರ್ವ ಮಾಡಲ್ ಹುಡುಗಿ ಕೆಂಪು ಕಲರಿನ ಗೌನ್ ತೊಟ್ಟವಳು ನನ್ನೆದುರಿನಿಂದಲೇ ಸಾಗಿ ಹೋದಳು.... ಅದರ ದಂಡೆಗೆ, ಮುತ್ತು ಹಚ್ಚಿದ್ದರು.... ಕೆಲಮಟ್ಟಿಗೆ ಅದೇ ರೀತಿಯ ಬೈಜಾಂಟಿಯಮ್ ಗೌನ್, ನಾನು ಅಂದಿನ ರಾತ್ರಿ ಸೀರಿಯಾದ ಆಶ್ರಮದ ಹಾಲ್‌ನಲ್ಲಿ ಶಾಶ್ವತವಾಗಿ ಕಳೆದು ಸನ್ಯಾಸಿನಿಯ ಒರಟು ಒರಟಾದ ಬಟ್ಟೆ ತೊಟ್ಟುಕೊಂಡಿದ್ದೆ... ನಾನು ಕಣ್ಣ ಕಣ್ಣು ಬಿಡುತ್ತ ಅದನ್ನು ನೋಡುತ್ತಲಿದ್ದೆ..... ಅತ್ಯಂತ ಬೆಲೆಯುಳ್ಳ ಉಡುಗೆಯಾಗಿತ್ತು ಅದು.....

ಫಾದರ್ ಸುಮ್ಮನೆ ಕೇಳಿದ– ''ಲೇಡಿ ಫ್ಲೋರಾ ಸಾಬೀನಾ, ನಾನು ಯಾವುದನ್ನು ಯೋಚಿಸುತ್ತಿರುವೆನೋ, ನೀನೂ ಅದನ್ನೇ ಯೋಚಿಸುತ್ತಿದ್ದಿಯಾ ?'' ಅದಕ್ಕೆ ನಾನು– ''ಹಾಂ !... ಫಾದರ್ ಗ್ರ್ಯಾಗರಿ.....'' ಫಾದರ್ ಸುಮ್ಮನಿದ್ದ.... ಕೆಲ ಸಮಯದ ನಂತರ ಅವನು ಹೇಳಿದ– ''ನೀನೀಗ ಮನೆಗೆ ಹೊರಟು ಹೋಗು..... ನಾನು ರಾತ್ರಿಗೆ ಬರುತ್ತೇನೆ.....'' ನಾನು ಫಾದರ್ ಹೇಳಿದಂತೆ ಮಾಡಿದೆ....

ರಾತ್ರಿಯ ಎರಡು ಗಂಟೆಗೆ ಫಾದರ್ ಬೋರ್ಡಿಂಗ್ ಹೌಸ್ ತಲುಪಿದ.... ಅವನ ಕೋಣೆ ನನ್ನ ಕೋಣೆಯ ಪಕ್ಕದಲ್ಲಿಯೇ ಇತ್ತು.... ನಾನು ಕದ ತೆಗೆಯುವ ಸಪ್ಪಳ ಕೇಳಿದೆ..... ಅವನು ಬಾಗಿಲ ಬಡಿದ..... ನಾನು ಬಾಗಿಲು ತೆರೆದೆ.... ಅವನು ತನ್ನ ಬ್ಯಾಗ್‌ದೊಳಗಿಂದ ಒಂದು ಪ್ಯಾಕೆಟ್ ತೆಗೆದು ನನ್ನ ಕೈಗೆ ಕೊಟ್ಟ, ಹಾಗೂ ಶಾಂತನಾಗಿ ಹೇಳಿದ– ''ತುಂಬ ಗದ್ದಲವಿತ್ತು, ಆ ಗದ್ದಲದಲ್ಲಿಯೇ ಹಿಂದಿನ ಕೋಣೆ ಹೊಕ್ಕೆ.... ಈ ಗೌನ್ ಎದುರಿಗೇನೇ ಹ್ಯಾಂಗರದಲ್ಲಿತ್ತು..... ದೇವರು ನಮ್ಮೊಂದಿಗಿದ್ದಾನೆ....'' ಅವನು ತನ್ನ ಕೋಣೆಗೆ ಹೋಗಿ ಆಯಿಲ್ ಕ್ರಾಯಿಸಿಸ್ ಬಗ್ಗೆ ತಂದಿದ್ದ ಪುಸ್ತಕ ಓದುವುದರಲ್ಲಿ ಮಗ್ನನಾದ..... ನಾನು ಗೌನ್ ಹಾಕಿಕೊಂಡೆ.... ಅದರಲ್ಲಿ ಇದ್ದ ಪ್ಯಾಡಿಂಗ್‌ಗಿಂತ ನನಗೆ ಇನ್ನೂ ಹೆಚ್ಚು ಅವಶ್ಯವಿತ್ತು....

ಮಾರನೆಯ ದಿನ ನಾನು ಪೇಟೆಯಿಂದ ಅವಶ್ಯಕ ಸಾಮಾನು ಖರೀದಿಸಿ ತಂದೆ.... ಮತ್ತೆ ಎರಡು ದಿನ ಕೋಣೆಯಲ್ಲಿ ಕುಳಿತು ಇಡೀ ಗೌನ್ ಹತ್ತಿಯ ದಪ್ಪಗಿನ ಒಳ ಬಟ್ಟೆಯಿಂದ ಹೊಲಿದೆ.... ಈಗ ಒಂದು ಎಲುಬಿನ ಹಂದರ ಇದನ್ನು ಹಾಕಿಕೊಂಡಿದೆಯೆಂದು ಯಾರಿಗೂ ಹೇಳಲು ಸಾಧ್ಯವಿರಲಿಲ್ಲ.... ಅಷ್ಟು ಕರಾರುವಾಕ್ಕಾಗಿ 'ಫಿಟ್' ಆಗಿತ್ತು.... ಮಧ್ಯಾಹ್ನ ಫಾದರ್ ನನ್ನ ಕೋಣೆಯಲ್ಲಿ ಬಂದ..... ಈ ಉಡುಪಿನಲ್ಲಿ ಕಂಡು ಸೀಟಿ ಹೊಡೆದ..... ನಾವು ಪಾರ್ಕ್‌ನಲ್ಲಿ ಹೋಗಿ ನಮಗೆ ಬೇಕಾದ ಬೆಂಚ್ ಮೇಲ ಕುಳಿತೆವು.... ಫಾದರ್ ಅದೇಕೊ ತುಂಬ ಚಿಂತಿತನಾಗಿ ನನ್ನನ್ನು ನೋಡುತ್ತಲಿದ್ದ.... ಕೆಲಕಾಲದ ನಂತರ ಅವನು ತನ್ನ ಕಪ್ಪು ನಿಲುವಂಗಿಯ

ಜೇಬಿನಿಂದ ಒಂದು ಪುಸ್ತಕ ಹೊರ ತೆಗೆದ.... ಹಾಗೂ ಮೆಲ್ಲನೆ ಹೇಳಿದ– ''ನಾನಿಂದು ಲಾಯಬ್ರರಿಯಿಂದ ಆಯರ್‌ಲೆಂಡ್‌ದ ಮಹಾಕವಿ ಡಬ್ಲ್ಯು.ಬಿ. ಯೇಟ್ಸ್‌ನ ಪುಸ್ತಕ ಕದ್ದು ಕೊಂಡು ಬಂದಿರುವೆ.....''. ನಮ್ಮ ಸುತ್ತಲೂ ಶಾಹಬಲ್ಲೂತದ ಕೆಂಪು ತರಗೆಲೆಗಳ ಮಳೆ ಸುರಿಯುತ್ತಲಿತ್ತು.... ಇನ್ನೇನು ಸೂರ್ಯ ಮುಳುಗಲಿದ್ದ.... ಕತ್ತಲೆ ಆವರಿಸ ತೊಡಗಿತ್ತು..... ಫಾದರ್ ಗ್ರ್ಯಾಗರಿ ಬೆಲಿಯಾನಿ ಹೇಳಿದ– ''ಈ ಕವಿತೆಯ ತಲೆಬರೆಹ ಇಂತಿದೆ– ''Sailing to Byzantium'' ಕೇಳು ಹಾಗಾದರೆ ಕವಿತೆ....'' ಎಂದ.

ಫಾದರ್ ಗಂಭೀರ ಸ್ವರದಲ್ಲಿ ಮೆಲ್ಲ ಮೆಲ್ಲಗೆ ಓದತೊಡಗಿದ....

''ಅದು ಮುದುಕರಿಗಾಗಿ ಇರುವ ದೇಶವಲ್ಲ
ತೋಟಗಳಲಿಹ ಪಕ್ಷಿಗಳು ಸಾಯುತ್ತಲಿವೆ.
ತರುಣರ ಹರ್ಷ ನಾಶವಾಗುತ್ತಲಿದೆ
ಕೆಲವು ಹಾಡುವಲ್ಲಿ ಮಗ್ನವಾಗಿವೆ
ತೆರೆತೆರೆಗಳಲ್ಲಿ ಚಂದದ ಮೀನುಗಳು
ತೇಲುತಿವೆ, ಪಕ್ಷಿ, ಪಶು, ಮನುಷ್ಯ,
ಮೀನು ಎಲ್ಲ ಜೀವಿಗಳು
ಫಲ ಬಿಡುವ ಸಮಯದಲ್ಲಿ
ಜೀವನದ ಸಮಾರಂಭದಲ್ಲಿ ಮುಳುಗಿವೆ !
ಜೀವನದ ಮನೋಹರತೆಯಲ್ಲಿ ತಮ್ಮನ್ನು
ತಾವು ಕಳೆದುಕೊಂಡಿವೆ......
ನಾವು ಹಳೆಯ ನೆನಪುಗಳು
ಮರೆತು ಬಿಡುತ್ತೇವೆ....
ಬುದ್ಧಿಯ ಶಾಶ್ವತ ಚಮತ್ಕಾರ
ಅದೊಂದು ಅದ್ಭುತ ಅಮೋಘ ![1]

ಓರ್ವ ಮುದುಕನಿದ್ದಾನೆ
ತುಚ್ಛ ಮತ್ತು ನಿಕೃಷ್ಟ
ಬಡಿಗೆಯ ಮೇಲೆ ಜೋತುಬಿಟ್ಟಿರುವ
ಹರಿದ ಕೋಟಿನ ಹಾಗೆ
ನಶ್ವರ ಪೋಷಾಕಿನ
ಬಳಲಿದ ಪ್ರತಿಯೊಂದು ಜೀವಕ್ಕಾಗಿ
ಒಂದು ವೇಳೆ ಆತ್ಮ ಉಲ್ಲಾಸದಿಂದ ಹಾಡದಿದ್ದರೆ
ಬುದ್ಧಿ ಜೀವಿಗಳಿಂದ, ರಸಿಕರಾದವರಿಂದ
ಏನನ್ನೂ ಪಡೆಯಲಾರದಂಥ, ತನ್ನ ಶ್ರೇಷ್ಠತೆಯ ಗೌರವಿಸದಂಥ

1. ಮನುಷ್ಯ ಶಾಶ್ವತವಾದ ಕಲೆಯಲ್ಲಿ ಮಗ್ನನಾದಲ್ಲಿ ಅವನು ಜೀವನದಿಂದ ವಿಮುಖನಾಗಬೇಕಾಗುತ್ತದೆ. ಕಲೆ ಮತ್ತು ಜೀವನದ Dichotomy ಯೇಟ್ಸ್‌ನ ದೃಷ್ಟಿಯಲ್ಲಿ ವಿಶೇಷ ಸಮಸ್ಯೆಯಾಗಿದೆ.

ಯಾವ ಪರಂಪರೆಯೂ
ಕಾವ್ಯ ಹಾಗೂ ಹಾಡುಗಳಿಗೆ ಇಲ್ಲ !
ನೈಪುಣ್ಯತೆ ಪಡೆದಿರುವ ಗುಣಗ್ರಾಹಿಗಳಿಂದ
ಏನನ್ನೂ ಪಡೆಯದಿದ್ದರೆ
ಸ್ವತಃ ತನ್ನ ಮಹಾನತೆಯ ಗೌರವ ಗೈಯದಿದ್ದರೆ
ಸಮುದ್ರ– ಸಮುದ್ರಗಳ ದಾಟುತ್ತ
ಬೈಜಾಂಟಿಯಮ್‌ದ ಶಾಶ್ವತ ಕಲೆಯ
ಭಿತ್ತಿ ಚಿತ್ರಗಳ ಬಂಗಾರವರ್ಣದ
ಪವಿತ್ರ ಜ್ವಾಲೆಗಳಲಿರುವ
ವಿದ್ವಾಂಸರೆ, ಪಾವನ ಅಗ್ನಿಯಿಂದ
ಕೊಂಚ ಹೊರ ಬನ್ನಿರಿ.....
ಕಾಲ ಮತ್ತು ಇತಿಹಾಸದ
ಚಕ್ರದಲ್ಲಿ ನೃತ್ಯ ಗೈಯಿರಿ !
ನೀನು ನನ್ನ ಆತ್ಮದ ಪುರಾತನ
ಗೀತಗಾರನಾಗು !
ಊದಿ ಹಾಕು ಈ ಹೃದಯ
ಬೂದಿ ಮಾಡು ಇದನು !
ಆಶೆಗಳ ಬಾಹುಳ್ಯದಿಂದ ದಣಿದಿರುವ
ಒಂದು ಕೊನೆಗಾಣುತ್ತಿರುವ
ಪಶುವಿನೊಂದಿಗೆ ಬಂಧಿಸಲ್ಪಟ್ಟಿದೆಯೋ
ಅದು ಸ್ವತಃ ತನ್ನ ಪರಿಸ್ಥಿತಿಯಿಂದ
ಅಪರಿಚಿತವಾಗಿದೆ !
ಶಾಶ್ವತದ ಶಿಲ್ಪದ
ಆಲಿಂಗನದಲ್ಲಿ ನನ್ನನ್ನೇಕೆ
ತಗೆದುಕೊಳ್ಳುತ್ತಿಲ್ಲ !
ನಾನೊಮ್ಮೆ ನಿಸರ್ಗದಿಂದ ಆಚೆ
ಹೊರಟು ಹೋಗುತ್ತೇನೆ.
ಮತ್ತೆಂದೂ ಅದರಿಂದ ನನ್ನ
ಆಕೃತಿ ಪಡೆಯುವುದಿಲ್ಲ
ಆದರೆ, ಗ್ರೀಕದ ಯಾವನೋ
ಅಕ್ಕಸಾಲಿಗ ಸ್ವರ್ಣದಿಂದ
ಮಾಡಿದ್ದರೆ ಅಂಥದನ್ನು
ತೂಕಡಿಸುತ್ತಿರುವ ಚಕ್ರವರ್ತಿಯ
ಜಾಗೃತಗೊಳಿಸುವಂಥದನ್ನು

ಅಥವಾ ಯಾವುದಾದರೂ ಸ್ವರ್ಣಮಯ ಗಿಡದ ಮೇಲೆ
ಕುಳಿತುಕೊಳ್ಳುತ್ತೇನೆ.
ಬೈಜಾಂಟಿಯಮ್‌ದ ಆಳುವವರಿಗಾಗಿ
ರಾಜಕುಮಾರಿಯರಿಗಾಗಿ
ನಾನು ಹಾಡು ಹಾಡುತ್ತೇನೆ.
ಭೂತದ ಬಗ್ಗೆ ನಾನು ಹಾಡಲೇ
ಈಗ ಸರಿಯುತ್ತಲಿದೆ ಕಾಲ
ಅಥವಾ ಆಗುವುದು ಇನ್ನೂ ಉಳಿದಿದೆಯೋ !

ನಾನು ಒಳಗೊಳಗೆ ತತ್ತರಿಸುತ್ತಿದ್ದೆ.... ಫಾದರ್ ಪುಸ್ತಕ ಮುಚ್ಚಿ ನಿಟ್ಟುಸಿರು ಬಿಡುತ್ತ ಹೇಳಿದ– ''ಕೊನೆಯ ಸಲ ಡೌನ್–ಟೌನ್ ನೋಡಿಕೊಂಡು ಬರೋಣ, ನಡೆ....'' ನಾವಿಬ್ಬರೂ ಪಾರ್ಕ್‌ದಿಂದ ಹೊರಹೊರಟೆವು. ಟ್ಯಾಕ್ಸಿಯಿಂದ ಪಟ್ಟಣ ತಲುಪಿದೆವು.... ದಾರಿಯಲ್ಲಿ ಒಂದು ವೈಭವಶಾಲಿ ಹೋಟಲೊಂದರ ಮೇಲೆ ''ಇಸ್ರಾಯಿಲ್ ಫಂಡ್‌ಗಾಗಿ ಮಾಸ್ಕ್‌ಬಾಲ್'' ಎಂದು ಬರೆಯಲಾಗಿತ್ತು.... ಫಾದರ್ ನನ್ನತ್ತ ನೋಡಿದ. ನಾನು ಅವನತ್ತ.... ನಾವು ಒಂದು ಡಿಪಾರ್ಟಮೆಂಟಲ್ ಸ್ಟೋರಿನ ಹತ್ತಿರ ಟ್ಯಾಕ್ಸಿಯಿಂದ ಇಳಿದೆವು.... ಪಾರ್ಕ್‌ನಿಂದ ಹೊರಡುವಾಗ ನಾನು ನನ್ನ ಕಪ್ಪು ನಿಲುವಂಗಿಯನ್ನು ಗೌನ್ ಮೇಲೆ ಹಾಕಿಕೊಂಡು ಬಂದಿದ್ದೆ.... ಪದ್ಧತಿಯಂತೆ ಕಪ್ಪು ಕನ್ನಡಕ, ಮುಖವಾಡದಲ್ಲಿ ಮುಖ ಮುಚ್ಚಿಕೊಂಡು ನಾವು ಅಂಗಡಿಯಲ್ಲಿ ಹೋಗಿ ಎರಡು ಮಾಸ್ಕ್ ಕೊಂಡುಕೊಂಡೆವು..... ಜೊತೆಗೆ ಬಂಗಾರ ವರ್ಣದ ವಿಗ್.... ಗಂಡಸರ ಮತ್ತು ಹೆಂಗಸರ ಕ್ಲೋಕ್‌ರೂಮಿನೊಳಗೆ ಹೋಗಿ ನಾವಿಬ್ಬರೂ ಸಿದ್ಧರಾದೆವು.....

ಫಾದರ್ ಅಂಗಡಿಯಿಂದ ಹೊರ ಹೊರಡುತ್ತಿರುವಂತೆ ತನಗಾಗಿ ಒಂದು ಬೆಲೆ ಬಾಳುವ ಸ್ಕಾರ್ಫ್ ಖರೀದಿಸತೊಡಗಿದ..... ಆಗ ನಾನು ಫಾದರ್‌ಗೆ ಮತ್ತೆ ನೆನಪಿಸಿದೆ.... ''ನಮಗೆ ದೊರಕಿರುವ ಅವಕಾಶದ ಕೊನೆಯ ದಿನ ಅಷ್ಟೇ ಅಲ್ಲ ಕೊನೆಯ ಸಾಯಂಕಾಲ, ಸರಿಯಾಗಿ ಹನ್ನೊಂದುವರೆ ಗಂಟೆಗೆ ನಮಗೆ ''ಅಂಡರ್ ಗ್ರೌಂಡ್'' ಸೇರಬೇಕಾಗಿದೆ..... ನಾನು ಪತ್ತೆಮಾಡಿರುವ ಸ್ಮಶಾನ ನಾವು ಇಳಿದು ಕೊಂಡಿರುವ ಸ್ಥಳದಿಂದ ಬಹಳ ದೂರವಿದೆ. ಎಲ್ಲ ಹಣ ಖರ್ಚು ಮಾಡಬೇಡ. ಸ್ಮಶಾನಕ್ಕೆ ಹೋಗಲು ಮತ್ತೆ ಟ್ಯಾಕ್ಸಿ ಮಾಡಬೇಕಾದೀತು.....'' ಆದರೂ ಅವನು ದುಬಾರಿಯ ಸಿಗರೇಟ್ ಪ್ಯಾಕೆಟ್ ಖರೀದಿಸಿದ. ನಾವು ಓಡುತ್ತ ಓಡುತ್ತ ಹಾಲ್ ತಲುಪಿದೆವು.... ಪ್ರವೇಶಕ್ಕೆ ಟಿಕೆಟ್ ಇಡಲಾಗಿತ್ತು.... ನಾವು ಬಹಳ ಕಡಿಮೆ ದರದ ಎರಡು ಟಿಕೆಟ್ ಕೊಂಡೆವು.... ಮುಖ್ಯ ದ್ವಾರದಲ್ಲಿ ಫುಟ್‌ಮೆನ್ ಹೆಸರು ಅನೌನ್ಸ್ ಮಾಡುತ್ತಲಿದ್ದ.

ಫಾದರ್ (ಕಪ್ಪು ನಿಲುವಂಗಿ ಮತ್ತು ಮಾಸ್ಕ್ ಹಾಕಿಕೊಂಡಿದ್ದ) ಗಂಭೀರತೆ ಯಿಂದ ಹೇಳಿದ– ''ಪ್ರಿನ್ಸಿಸ್ ಕಾತಂಕಾ ತನಾತನ್ ಆಫ್ ಜಾರ್ಜಿಯಾ, ಗ್ರ್ಯಾಂಡ್ ಡ್ಯೂಕ್ ಮತ್ತು ಬಿಲಿಯಾನಿ ಆಫ್ ತಿಬ್ಲಿಸಿ.''

ಹೋಟಲಿನ ದ್ವಾರಪಾಲಕ ನಮ್ಮನ್ನು ಕ್ರಾಂತಿಯ ನಂತರ ಬಂದಿರುವ ಬಿಳಿಯ ರಶಿಯನ್‌ರೆಂದು ತಿಳಿದ. ಒಳಗೆ ಹೋಗಿ ನಾವು ಗೋಡೆಯ ಪಕ್ಕದಲ್ಲಿದ್ದ ಒಂದು ಸೋಫಾದ ಮೇಲೆ ಕುಳಿತೆವು..... ಬಹು ದೊಡ್ಡ ರಂಗುರಂಗಿನ ಶ್ರೀಮಂತ ಜನರಿದ್ದರು.... ಆರ್ಕೆಸ್ಟ್ರಾ 'ಬ್ಲ್ಯೂಡ್ಯೆನೂಬ' ಬಾರಿಸಲಾಗುತ್ತಿತ್ತು.... ಕೆಲ ನಿಮಿಷಗಳ ನಂತರ ಫಾದರ್ ಸಿಗರೇಟ ಸೇದಲೆಂದು ಬಾತರೂಮ್‌ಗೆ ಹೋದ. ನಾನಲ್ಲಿ ಸುಮ್ಮನೇ ಕುಳಿತು ಯೋಚಿಸುತ್ತಿದ್ದೆ. ಇನ್ನು ಕೇವಲ ಎರಡು ಗಂಟೆಗಳ ನಂತರ ಕೊನೆಯವರೆಗೂ ಗೋರಿಯ ಏಕಾಂತ ಮತ್ತು ತುಂಬಿದ ಕತ್ತಲು.... ಆಗ ನನಗೆ ಒಮ್ಮೆಲೇ– ಥೋಡೋರಕ್ ಗೆಲಾಸಿಸ್– ಅವೇ ಗುಂಗುರು ಗುಂಗುರು ಕೂದಲಿನ, ಎತ್ತರದ ನಿಲುವಿನ ವ್ಯಕ್ತಿ ಗ್ರಿಕ್ ಮೂಗಿನ ಅವನು ರೋಮನ್ ಸೇನೇಟರ್ ಮಾರು ವೇಷದಲ್ಲಿ ಓರ್ವ ಸ್ಪೇನೀ ಡ್ಯಾನ್ಸರ್‌ಳೊಂದಿಗೆ ಡಾನ್ಸ್ ಮಾಡುತ್ತಿರುವಂತೆ– ತೋರಿತು.

ನನ್ನ ಕಣ್ಣುಗಳ ಮೇಲೆಯೇ ನನಗೆ ನಂಬಿಕೆಯಾಗಲಿಲ್ಲ ಇದು ಹೇಗೆ ಸಾಧ್ಯ ? ಏನು, ಇದು ಕೂಡ ಒಂದು ಚಮತ್ಕಾರವೇ.... ? ಓ ! ದೇವರೇ.... ನಾನಂತೂ ಸಂಪೂರ್ಣ ಹುಚ್ಚಳಂತಾದೆ.... ಅವನು ಡ್ಯಾನ್ಸ್ ಮಾಡುತ್ತ ಅದೆಷ್ಟೋ ಸಲ ನನ್ನ ಹತ್ತಿರದಿಂದಲೇ ಹೋದ.... ಆಗ ಬಹುಶಃ ಅವನು ನನ್ನತ್ತ ಆಕರ್ಷಿತನಾಗಿರಬೇಕು.... ಡ್ಯಾನ್ಸ್ ಮುಗಿದ ನಂತರ ಸ್ವತಃ ನನ್ನ ಹತ್ತಿರ ಬಂದು ತನ್ನೊಂದಿಗೆ ಡ್ಯಾನ್ಸ್ ಮಾಡಲು ವಿನಂತಿಸಿಕೊಂಡ.... ನಾನು ಗಾಬರಿಯಾಗಿ ಹೇಳಿದೆ– ''ನನ್ನ ಕಾಲಲ್ಲಿ ಗಾಯವಾಗಿದೆ ಥೋಡೋರಕ್....''

ಅವನು ಕೇವಲ ಕಣ್ಣಿನ ಮೇಲೆ ಕಪ್ಪು ಮಾಸ್ಕ್ ಹಾಕಿಕೊಂಡಿದ್ದ.... ಅದನ್ನು ತೆಗೆದ.... ಅವನು ಇನ್ನಾರೋ ಬೇರೆಯಾಗಿದ್ದ.... ನನ್ನ ಥೋಡೋರಕ್‌ನ ಹೋಲಿಕೆ ಕೆಲಮಟ್ಟಿಗೆ ಅವಶ್ಯವಿತ್ತು ಅವನಲ್ಲಿ.... ಆದರೆ ಅವನು ಥೋಡೋರಕ್ ಆಗಿರಲಿಲ್ಲ.... ಇನ್ನಾವನೋ ಆಗಿದ್ದ..... ಅದು ಹೇಗೆ ಸಾಧ್ಯ ಥ್ಯೋಡೋರಕ್ ಆಗಿರಲು.... ಆದರೂ ನನಗೆ ಸಮಾಧಾನವಾಗಲಿಲ್ಲ..... ಮೂರ್ಖಳ ಹಾಗೆ ಕೇಳಿಯೇ ಬಿಟ್ಟೆ– ''ಕ್ಷಮಿಸಿ.... ನಿಮ್ಮ ಹೆಸರು ಥ್ಯೋಡೋರಕ್ ಗೆಲಾಸಿಸ್ ಅಲ್ಲ ತಾನೆ....?'' ಅದಕ್ಕವನು– ''ಅಲ್ಲ.... ನಾನು ರಿಚರ್ಡಕೋಹನ್.... ಕೋಲಂಬಿಯಾದಲ್ಲಿ ಓದುತ್ತಿದ್ದೇನೆ....'' ಮತ್ತೆ ನಾಲ್ಕಾರು ಮಾತು ಮಾತಾಡಿ ಹೊರಟು ಹೋದ..... ಕೆಲನಿಮಿಷಗಳ ನಂತರ ಫಾದರ್ ಸಿಗರೇಟ ಸೇದಿ ಮರಳಿದ.... ಸೋಫಾದ ಮೇಲೆ ಕೂಡುತ್ತಲೇ ಗೋಡೆಯ ಮೇಲಿದ್ದ ಕ್ಲಾಕ್ ಮೇಲೆ ದೃಷ್ಟಿ ಹಾಯಿಸಿ ಹೇಳಿದ– ''ಲೇಡಿ ಫ್ಲೋರಾ..... ನಾವಿನ್ನು ಹೊರಡ ಬೇಕು..... ಹತ್ತು ಗಂಟೆ ಆಗಿ ಹೋಗಿದೆ.... ನಡಿ.... ಜಲ್ದಿ.... ಏಳು....''

ಆಗ ನನಗೆ ಇದ್ದಕ್ಕಿದ್ದ ಹಾಗೆ ಭಯಾನಕ ವಿಚಾರಗಳು ನನ್ನ ತಲೆಯಲ್ಲಿ ಹೊಳೆದವು..... ನಾನು ತುಂಬ ಎತ್ತರದ ದನಿಯಲ್ಲಿ ಇಂಗ್ಲೀಷನಲ್ಲಿ ಹೇಳಿದೆ..... ನಾವಿಬ್ಬರೂ ಲಂಡನ್ನಿಗೆ ತಲುಪಿದಾಗಿನಿಂದ ಹಾಗೂ ಅಲ್ಲಿಂದ ಅಮೇರಿಕಾದವರೆಗೂ ನಾವು ನಿರಂತರ ಪರಸ್ಪರರಲ್ಲಿ ಇಂಗ್ಲಿಷನ್ನೇ ಬಳಸುತ್ತಿದ್ದೆವು.... ಫಾದರ್‌ನ ಒತ್ತಾಯ ವಿತ್ತು.... ಈ ರೀತಿ ಮಾಡುವುದರಿಂದ ಒಂದು ಹೊಸ ಭಾಷೆ ಮಾತನಾಡುವ ಪ್ರ್ಯಾಕ್ಟಿಸ್ ಆಗುತ್ತದೆ.... ಎಂದು.... ನಾನು ಮುನಿಸುಗೊಂಡು ಹೇಳುತ್ತಿದ್ದೆ–

''ಫಾದರ್..... ಕೇವಲ ಇನ್ನು ಕೆಲವು ತಿಂಗಳು ಮಾತ್ರ ಈ ಜಗತ್ತಿನಲ್ಲಿರಬೇಕಾಗಿದೆ.... ನಾನೇಕೆ ತಲೆಗೆ ಬಿಸಿ ಉಂಟು ಮಾಡಿಕೊಳ್ಳಲಿ.....'' ಅದಕ್ಕವನು ಹೇಳಿದ್ದ– ''ಲೇಡಿ ಫ್ಲೋರಾ..... ಮನುಷ್ಯ ಬಹಳ ಬಹಳ ಅಂದರ.... ಅರವತ್ತು..... ಎಪ್ಪತ್ತು.... ವರ್ಷ ಈ ಜಗತ್ತಿನಲ್ಲಿ ಬದುಕಿರುತ್ತಾನೆ.... ಕೆಲವು ಸಲ ಅದಕ್ಕಿಂತ ತುಂಬ ಕಡಿಮೆ..... ಹೀಗಿದ್ದರೂ ಕೂಡ ಅವನ ವಯಸ್ಸಿನ ಅವಧಿ ಬಹಳ ಸಂಕ್ಷಿಪ್ತವಾಗಿದೆ.. ಅವನು ಜೀವನದ ಅರ್ಧ ಭಾಗ ಓದಿನಲ್ಲಿ ಕಳೆಯುತ್ತಾನೆ.... ತಲೆ ಖರ್ಚು ಮಾಡುತ್ತಾನೆ.... ಪರಿಶ್ರಮ ಪಡುತ್ತಾನೆ. ತನ್ನಲ್ಲ ವಿದ್ಯೆ, ಜ್ಞಾನ, ಅನುಭವಗಳೊಂದಿಗೆ ಒಂದು ದಿನ ಇದ್ದಕ್ಕಿದ್ದಂತೆ 'ಪಟ್' ಎಂದು ಸತ್ತು ಹೋಗುತ್ತಾನೆ....ಈಗ ಒಬ್ಬ ಮನುಷ್ಯನಿಗೆ ಹತ್ತು ವರ್ಷ ಬದುಕಬೇಕಾಗಿದೆ ಅಥವಾ ಒಂದು ವರ್ಷ ಬದುಕಬೇಕಾಗಿದೆ ಎಂಬ ಮಾತುಗಳಲ್ಲಿ ಯಾವ ಅರ್ಥವೂ ಇಲ್ಲ.... ಎಲ್ಲ ಒಂದೇ ಆಗಿದೆ.....''

(ದೇವರೇ.... ಫಾದರ್ ತುಂಬ ವ್ಯರ್ಥ ಮಾತುಗಾರ......) ಅಂತೂ ನಾವು ಯಾವಾಗಲೂ ಪಿಸುಮಾತಿನಲ್ಲಿ ಮಾತಾಡುತ್ತಿದ್ದೆವು.... ಆದರೆ ಈಗ ಕ್ಲಾರ್ಕ್ ನೋಡು ತ್ತಲೇ ಗಾಬರಿಯಿಂದ ಎತ್ತರದ ದನಿಯಲ್ಲಿ ಇಂಗ್ಲೀಷನಲ್ಲಿ ಮಾತಾಡಿದ–''ನಮಗೆ ತಿಳಿಸಿದ ಸಮಯ ಗ್ರೀನವಿಚ್ ಸಮಯವಾಗಿತ್ತೇನು.... ? ರಶಿಯಾ ಮತ್ತು ಇಲ್ಲಿಯ ಸಮಯದಲ್ಲಿ ಏನಿಲ್ಲವೆಂದರೂ ಹದಿನೆಂಟು ತಾಸುಗಳ ವ್ಯತ್ಯಾಸ ಇರಬೇಕಲ್ಲ.... ಮತ್ತೆ ಅವನು ಹಳೆಯ ರಶಿಯಾದ ಕ್ಯಾಲೆಂಡರ್‌ದ ಪ್ರಕಾರ ಸೆಪ್ಟೆಂಬರ್ ಇಪ್ಪತ್ಮೂರು ಎಂದು ಹೇಳಿದ್ದ..... ''ಇದನ್ನು ಕೇಳಿದ ಫಾದರ್ ಗ್ರ್ಯಾಗರಿ ಕೂಡ ಗಾಬರಿಯಿಂದ ಹೇಳಿದ– ''ಅರೆ..... ಹೌದಲ್ಲ..... ಈಗ ಏನು ಮಾಡುವುದು ?.....''

''ಈಗ....ಇದಾಗಲಿದೆ.....'' ಎನ್ನುತ್ತ ಓರ್ವ ಪೋಲಿಸ್ ಆಫೀಸರ್ ತನ್ನ ಕೈ ಮುಂದೆ ಮಾಡಿದ. ನಾವಿಬ್ಬರೂ ಹೌಹಾರಿ ಸೋಫಾದಿಂದ ಎದ್ದು ನಿಂತೆವು. ನಮ್ಮ ಸುತ್ತ ಅಲ್ಲಿ ಡಾನ್ಸ್ ಮಾಡುತ್ತಿದ್ದವರೆಲ್ಲರೂ ಮುಕ್ಕರಿದರು. ಪೋಲಿಸ ಆಫೀಸರ್ ನೊಂದಿಗೆ ಇಬ್ಬರು ಪೋಲಿಸರೂ ಇದ್ದರು. ಅವನು ಫಾದರ್‌ಗೆ ತುಂಬ ದರ್ಪದ ಮಾತಿನಲ್ಲಿ ಹೇಳಿದ– ''ಡಿಪಾರ್ಟಮೆಂಟ್‌ಲ್ ಸ್ಟೋರ್ಸ್‌ದಿಂದ ನಿನ್ನೀ ಗರ್ಲ ಫ್ರೆಂಡ್ ತೊಟ್ಟಿರುವ ಗೌನ್ ನೀನು ಕಳವು ಮಾಡಿಕೊಂಡು ಬಂದೆ..... ಅಂದಿನ ರಾತ್ರಿಯಿಂದ ಪೋಲಿಸರು ನಿನ್ನನ್ನು ಹುಡುಕುವಲ್ಲಿ ವ್ಯಸ್ತರಾಗಿದ್ದಾರೆ.... ಈ ಗೌನ್ ಜೆಕ್‌ಲೀನ ಓನಾಸಿಸ್‌ಳ ಬೇಡಿಕೆಯ ಮೇರೆಗೆ ವಿಶೇಷವಾಗಿ ಆಕೆಗಾಗಿ ಸಿದ್ಧಗೊಳಿಸಲಾಗಿತ್ತು.... ಅದೂ ಅಲ್ಲದೆ ಬೇರೆ ಬೇರೆ ಲಾಯಬ್ರರಿಗಳಿಂದ ನಮಗೆ ಸುದ್ದಿ, ದೂರು ಬಂದಿವೆ. ಅಲ್ಲೆಲ್ಲ ಓರ್ವ ವ್ಯಕ್ತಿ ಮಾರುವೇಷದಲ್ಲಿ ಬಂದು ಅಮೂಲ್ಯವಾದ, ಈಗೆಲ್ಲಿಯೂ ಸಿಗಲಾರದಂಥ ಪುಸ್ತಕಗಳನ್ನು ಕಳವು ಮಾಡುತ್ತಲಿದ್ದಾನೆ–ಎಂದು..... ಆದರೆ ಈ ಬೆಲೆಬಾಳುವ ಗೌನ್..... ನಮ್ಮೊಂದಿಗೆ ನೀವಿಬ್ಬರೂ ಈಗ ಪೋಲಿಸ ಸ್ಟೇಷನ್‌ಗೆ ನಡೆಯಿರಿ.....''

ಆಗ ಫಾದರ್ ಗ್ರ್ಯಾಗರಿ ಪೆಲಿಯಾನಿ ನನ್ನತ್ತ ನೋಡಿದರು.... ನಾನು ಅವರತ್ತ.... ನಾವಿಬ್ಬರೂ ಮೊದಲು ನಮ್ಮ ಗ್ಲೋಜ ತೆಗೆದು ಹಾಕಿದೆವು..... ನಂತರ ಕಪ್ಪು ಕನ್ನಡಕ..... ಹಾಗೂ ನಮ್ಮ ನಮ್ಮ ಮುಖವಾಡ......

# ಬೆಳಕಿನ ವೇಗ

ಡಾಕ್ಟರ್ ಮಿಸ್ ಪದ್ಮಾ ಮೇರಿ ಅಬ್ರಾಹಮ್ ಕುರಿಯನ್–ವಯಸ್ಸು 29 ವರ್ಷ, ಶಿಕ್ಷಣ : ಎಂ.ಎಸ್‌ಸಿ. (ಮದ್ರಾಸ್), ಪಿಎಚ್.ಡಿ (ಕೊಲಂಬಿಯಾ) ಎತ್ತರ : ಐದು ಫೂಟ್ ಎರಡು ಇಂಚ್, ಬಣ್ಣ : ಕಪ್ಪು, ಕಣ್ಣು : ಕಪ್ಪು, ಕೂದಲು : ಕಪ್ಪು , ಗುರುತು : ಎಡಗಡೆ ಕಿವಿ ಮತ್ತು ಕಣ್ಣಿನ ನಡುವೆ ಕಂದು ಬಣ್ಣದ ಒಂದು ಬಕ್ಕೆ, ಜನ್ಮಭೂಮಿ : ಕೋಚಿನ (ಕೇರಳ ಪ್ರಾಂತ), ಮಾತೃಭಾಷೆ : ಮಲಯಾಲಂ, ಧರ್ಮ : ಸೀರಿಯನ್ ಚರ್ಚ ಆಫ್ ಮಲಬಾರ, ಸ್ವಂತದ ಆಸ್ತಿ: ಏನೂ ಇಲ್ಲ, ಉದ್ಯೋಗ : ಸರಕಾರಿ ನೌಕರಿ. ಅಮೇರಿಕಾದಿಂದ ಬಂದ ನಂತರ ಡಾಕ್ಟರ್ ಕುರಿಯನ್ ಎರಡು ವರ್ಷಗಳಿಂದ ದಕ್ಷಿಣ ಭಾರತದ ಒಂದು ಸ್ಪೇಸ್ ರಿಸರ್ಚ ಸೆಂಟರ್‌ದಲ್ಲಿ ಕೆಲಸ ಮಾಡುತ್ತಿದ್ದಳು. ಆಕೆಗೆ ಸರಕಾರಿ ಕಾಲೊನಿಯಲ್ಲಿ ಒಂದು ಸಣ್ಣ ಬಂಗಲೆ ಸಿಕ್ಕಿತ್ತು. ಅದರಲ್ಲಿ ಆಕೆ ತನ್ನ ಇಬ್ಬರು ತಮ್ಮಂದಿರೊಂದಿಗೆ ವಾಸಿಸುತ್ತಿದ್ದಳು. ಇಬ್ಬರೂ ತಮ್ಮಂದಿರು ಕಾಲೇಜಿನಲ್ಲಿ ಓದುತ್ತಿದ್ದರು. ತಾಯಿ–ತಂದೆ (ನಿವೃತ್ತ ಸ್ಕೂಲ ಟೀಚರ್) ಕೋಚಿನದಲ್ಲಿರುತ್ತಿದ್ದರು. ಪದ್ಮಾ ಮೇರಿ ಓರ್ವ ಪರಿಶ್ರಮಿ, ಸದ್ದು ಗದ್ದಲವಿಲ್ಲದೆ ದುಡಿಯುವ ತರುಣಿಯಾಗಿದ್ದಳು, ಆಕೆ ತುಂಬ ಪ್ರಾಮಾಣಿಕತನದಿಂದ ತನ್ನ ಕರ್ತವ್ಯ ನಿಭಾಯಿಸುತ್ತಿದ್ದಳು.

ತಿಂಗಳಲ್ಲಿ ಒಂದೋ ಎರಡೋ ಸಿನೆಮಾ ನೋಡುತ್ತಿದ್ದಳು. ಪುರಸತ್ತಿದ್ದಾಗ ಗೆಳೆಯರಿಗೆ ಕೋಚಿನ ಅಡಿಗೆ ಮಾಡಿ ಉಣಿಸುವುದು ಆಕೆಯ ಹವ್ಯಾಸವಾಗಿತ್ತು. ಒಂದು ಸೆಕೆಂಡ್ ಹ್ಯಾಂಡ್ ಕಾರ ಖರೀದಿಸಲೋಸುಗ ಹಣ ಕೂಡಿಸುತ್ತಿದ್ದಳು. ಈಗ ಸೈಕಲ್ ಮೇಲೆ ಆಫೀಸಿಗೆ ಹೋಗಿ ಬರುತ್ತಿದ್ದಳು. ಒಂದು ಅತ್ಯಂತ ಸಾಮಾನ್ಯ ರೀತಿಯ, ಮುಗ್ಧ ದಕ್ಷಿಣ ಭಾರತದ ಹುಡುಗಿ–ಈ ಪದ್ಮಾ.

ಎಪ್ರಿಲ್ 1966ರ ಒಂದು ಸೊಗಸಾದ ಮಧ್ಯಾಹ್ನ ಲೆಬೊರೆಟರಿಯಲ್ಲಿ ಕೆಲಸ ಮಾಡುತ್ತ ಪದ್ಮಾ ಗಡಿಯಾರ ನೋಡಿಕೊಂಡಳು, ಬೆಳಗ್ಗೆ ಆಕೆ ಬಹಳ ಜಲ್ದಿ ಟಿಫಿನ್ ಮಾಡದೇ ಬಂದಿದ್ದಳು. ಈಗ ಆಕೆಗೆ ಬಹಳ ಹಸಿವೆ ಆಗುತ್ತಲಿತ್ತು. ಸಮಯ ಒಂದು ಗಂಟೆ ಆಗಲಿತ್ತು. ಕೆಲ ನಿಮಿಷಗಳ ನಂತರ ಆಕೆ ಬ್ಯಾಗ್ ತೆಗೆದುಕೊಂಡು ಹೊರಗೆ ಬಂದಳು. ಸೈಕಲ್‌ಮೇಲೆ ಕುಳಿತು ತನ್ನ ಕಾಟೇಜ ಕಡೆ ಹೊರಟಳು.

ದಾರಿಯಲ್ಲಿ ಒಂದು ಸಣ್ಣ ಹಳ್ಳ ಮತ್ತು ಸೇತುವೆಯಿತ್ತು. ಬೇರೆಡೆ ಹಚ್ಚ ಹಸಿರಾದ ನಿಬಿಡ ವಿಪಿನ. ತುಂಬ ನಿರ್ಜನವಾದ ದಾರಿಯಾಗಿತ್ತು. ಅದೂ ಮಟ ಮಟ ಮಧ್ಯಾಹ್ನ, ಆಗ. ಸೇತುವೆಯ ಮೇಲಿಂದ ಹೋಗುತ್ತಿರುವ ಕಾಲಕ್ಕೆ ಅವಳ ದೃಷ್ಟಿ ಹುಲ್ಲಿನ ಮೈದಾನದ ಮೇಲೆ ಬಿತ್ತು. ಅವಳಿಗೆ ತುಂಬ ಅಚ್ಚರಿಯಾಯಿತು. ಒಂದು ಸಣ್ಣ ರಾಕೆಟ್

ಹುಲ್ಲಿನ ಮೇಲೆ ನಿಂತು ವಿಚಿತ್ರವಾದ ಬೆಳಕಿನಲ್ಲಿ ಹೊಳೆಯುತ್ತಿತ್ತು. ಆಕೆ ಸೈಕಲ್ ಮೇಲಿಂದ ಕೆಳಗಿಳಿದು ಆ ಹುಲ್ಲಿನೊಳಗಿಂದ ಹಾದು ಅದರ ಸಮೀಪ ತಲುಪಿದಳು. ಅದರ ಸುತ್ತ ತೀಕ್ಷ್ಣವಾಗಿ ನೋಡಿದಳು. ಒಂದು ಬಾಗಿಲು, ಒಳಗಡೆ ಇಬ್ಬರು ಕೂಡಲು ಎರಡು ಸೀಟು. ಬಾಗಿಲದ ಮೇಲೆ ಆಕೆ ಕೈಯಿಟ್ಟ ಕೂಡಲೇ ಅದು ತನ್ನಷ್ಟಕ್ಕೆ ತಾನೇ ತೆರೆದುಕೊಂಡಿತು.

ಡಾಕ್ಟರ್ ಕುರಿಯನ್ ಸ್ವತಃ ಸ್ಪೇಸ್ ರಿಸರ್ಚದಲ್ಲಿ ತೊಡಗಿರುವವಳು. ತುಂಬ ಖುಷಿಯಿಂದ ಅವಳು ರಾಕೆಟದೊಳಗೆ ಕಾಲಿಟ್ಟಳು. ಬಾಗಿಲು ಕೂಡಲೇ ಮುಚ್ಚಿ ಕೊಂಡಿತು. ಕಾಕ್‌ಪಿಟ್‌ದಲ್ಲಿ ಕುಳಿತು ಅಲ್ಲಿದ್ದ ಎಲ್ಲ ಮಿಷನರಿ ಪಾರ್ಟ್ಸಗಳನ್ನು ಪರೀಕ್ಷಿಸಿದಳು. ಆದರೆ ಒಂದೂ ತಿಳಿಯಲಿಲ್ಲ. ಪುಷ್‌ಬಟನ್, ಸ್ವಿಚ್ ಮತ್ತು ಲೈಟಡೈಲ್, ಅವುಗಳ ಮೇಲೆ ಶತಮಾನಗಳ ಧೂಳು ಕೂತಿತ್ತು. ಕೆಂಪು ಬಣ್ಣದ ಮುಳ್ಳು 1966ರ ಮೇಲೆ ಸ್ಥಾಯಿಯಾಗಿ ನಿಂತಿತ್ತು.

ಈಗ ಡಾಕ್ಟರ್ ಹೊರಗೆ ಬರಬೇಕೆಂದು ಸೀಟ ಮೇಲಿಂದ ಕೆಳಗಿಳಿಯ ತೊಡಗಿದಳು. ಆಕೆಯ ಮೊಣಕೈ ಕ್ರಿ. ಪೂ. 1315ರ ಪುಷ್ ಬಟನ್‌ಗೆ ತಗಲಿತು. ಬೆಳ್ಳಂ ಬೆಳಕು ಪ್ರಜ್ವಲಿಸಿತು. ಕ್ಷಣ ಕ್ಷಣದಲ್ಲಿ ರಾಕೆಟ್ ಆಕೆಗೂ ಅರಿವಾಗದಂತೆ ಎಲ್ಲಿಂದ ಎಲ್ಲಿಗೋ ಹೊರಟು ಹೋಯಿತು. ಡಾಕ್ಟರ್ ಕರೀನಳು ತುಂಬ ಗಾಬರಿ ಯಾದಳು. ಕೈಕಾಲು ನಡುಗಲಾರಂಭಿಸಿದವು. ತಲೆಗೆ ಚಕ್ರ ಬರತೊಡಗಿತು. ಕಣ್ಣು ಮುಚ್ಚಿಕೊಂಡಳು. ಕಣ್ಣು ತೆರೆದಾಗ ಸುತ್ತಲೂ ಬೆಳಕು. ಆಕಾಶದ ಕೆಳಗೆ ನೀಲ ಸಮುದ್ರ, ನದಿ, ಬೆಟ್ಟ-ಗುಡ್ಡ, ಬಯಲು ಪ್ರದೇಶ, ಮರುಳುಗಾಡು.... ಆಗ ಆಕೆ ಕೊಂಚ ಸಮಾಧಾನದ ಉಸಿರು ತೆಗೆದುಕೊಂಡಳು. ಎಲ್ಲಿಯ ಸೈನ್ಸ್‌ಫಿಕ್ಷನ್.... ಅದೇ ನಮಗೆ ಗೊತ್ತಿರುವ ಹಳೆಯ, ಗೊತ್ತಿರುವ ಜಗತ್ತು. ದೇವರ ಕರುಣೆ.... ರಾಕೆಟ್ ಭೂಮಿಯ ಮೇಲೆ ಸುರಕ್ಷಿತ ಇಳಿದಿತ್ತು. ಕೆಂಪು ಮುಳ್ಳು ಕ್ರಿ. ಪೂ. 1315 ರ ಮೇಲೆ ನಿಂತಿತ್ತು. ಬಾಗಿಲು ತನ್ನಷ್ಟಕ್ಕೆ ತಾನು ತೆರೆದುಕೊಂಡಿತು. ಪದ್ಮಾ ಮೇರಿ ಹೊರಗೆ ಬಂದಳು. ಎದುರಿಗೇನೇ ಒಂದು ದೊಡ್ಡದಾದ ಸರೋವರದ ದಂಡೆಯಲ್ಲಿ ಓರ್ವ ಚಿಕ್ಕ ಕುರಿಗಾಹಿ, ಬಂಡೆಯ ಮೇಲೆ ಕುಳಿತು ಕೊಳಲು ಬಾರಿಸುತ್ತಿದ್ದ. ಖರ್ಜೂರ ಮರದ ಕೆಳಗೆ ಆಡು ಕುರಿಗಳು ಮೆಯ್ಯುತ್ತಿದ್ದವು. ಕ್ಷಿತಿಜದ ತುಂಬ ಮೋಡಗಳ ಚಿತ್ತಾರ,....ಓ ! ಇದಂತು ಇಜಿಪ್ತ... ಗುಡ್ ಓಲ್ಡ್ ಇಜಿಪ್ತ...

ಎರಡು ವರ್ಷಗಳ ಹಿಂದೆ ನ್ಯೂಯಾರ್ಕ್‌ದಿಂದ ಮುಂಬೈಗೆ ಬರುವಾಗ ಇದೇ ಇಜಿಪ್ತದ ಮೇಲಿಂದ ಹೋಗಿದ್ದಳು. ಮೋಡ ಬೆಟ್ಟಗಳ.... ಸಾಕಷ್ಟು ಫೋಟೊ ತೆಗೆದಿದ್ದಳು.... ದನಗಾಹಿ...ಇದೇ ನಖಲಿಸ್ತಾನ್....ಇದೇ ಫಲಾಹೀನ್.... ಕ್ರಿ.ಪೂ. ಈ 1315, ಎಲ್ಲಿಂದ ಬಂತು. 1966 ಇತ್ತು, ಟೈಂ ಮಿಷನ್ ಇಲ್ಲ, ಯಾವುದೂ ಇಲ್ಲ. ನಡಿ, ಅತ್ಯಂತ ಹೊಸ ನಮೂನೆಯ ಆಧುನಿಕ ರಾಕೆಟ್, ಇದನ್ನು ಯಾರೋ ವಿಜಿಟಿಂಗ್ ಅಮೇರಿಕನ್ ಅಥವಾ ರಶಿಯಾದ ಸೈಂಟಿಸ್ಟ್ ನಮ್ಮಲ್ಲಿಗೆ ತಂದಿರಬೇಕು...

ಒಮ್ಮೆಲೇ ಮತ್ತೆ ಬೇರೊಂದು ತೊಂದರೆ, ಈ ಸ್ಥಳ ಸುಯೇಜ ಕಾಲುವೆಯ

ಹತ್ತಿರವೇ ಇರಲು ಸಾಧ್ಯವಿದೆ. ಈ ಸ್ಥಿತಿಯಲ್ಲಿ ನಾನು ಇಲ್ಲಿ ತಿರುಗಾಡುತ್ತಿರು ವಂತೆಯೇ ನನ್ನನ್ನು ಅರೆಸ್ಟ್ ಮಾಡಿದರೆ.....ಮತ್ತಿಷ್ಟು ತೊಂದರೆ, ಹಿಂದೂಸ್ಥಾನವೇನೋ ಇಜಿಪ್ತದ ಬೇಕಾದಷ್ಟು ಮಿತ್ರದೇಶವಿರಬಹುದು. ಆದರೆ ನನ್ನಲ್ಲಿ ಪಾಸಪೋರ್ಟು ಇಲ್ಲ. ವೀಸಾನೂ ಇಲ್ಲ. ಈಗ ಕೂಡಲೇ ಕೈರೋದಲ್ಲಿರುವ ಇಂಡಿಯನ್ ಎಂಬೆಸಿ ತಲುಪ ಬೇಕು.

ಅಲ್ಲಿಯ ಸುತ್ತ ಮುತ್ತಲಿರುವ ಫಲಾಹೀನ್ ಮತ್ತು ದನಗಾಹಿಗಳು ಪಾಶ್ಚಿಮಾತ್ಯ ಪ್ರವಾಸಿಗಳು ಇಲ್ಲಿಗೆ ನಿರಂತರ ಬರುವುದರಿಂದ ಕೆಲ ಮಟ್ಟಿಗೆ ಇಂಗ್ಲೀಷ ಬಲ್ಲವ ರಾಗಿದ್ದರು. ಅಂತೆಯೇ ಪದ್ಮಾ ಮೇರಿ ಆ ದನಗಾಹಿಗೆ ಹೇಳಿದಳು ''ಕೈರೊ...ಬಸ್... ಟ್ಯಾಕ್ಸಿ...ಅಟೊಮೊಬೈಲ್...''

ಹುಡುಗ ತಲೆ ಅಲ್ಲಾಡಿಸಿದ. ದೂರದಲ್ಲಿ ಓರ್ವ ರೈತ ಕತ್ತೆಯ ಮೇಲೆ ಕುಳಿತು ಹೊರಟಿದ್ದ. ಅವನನ್ನು ಕೂಗಿ ಕರೆದ. ಅವನು ಧೂಳು ಹಾರಿಸುತ್ತ ಸಮೀಪ ಬಂದ. ಕುರಿಗಾಹಿ ಅವನಿಗೆ ಏನೋ ಹೇಳಿದ...

ಆಗ ಪದ್ಮಾಮೇರಿಗೆ ಅಚ್ಚರಿಯಾಯಿತು. ಆ ದನಗಾಹಿ ಮತ್ತು ರೈತ ಮಾತಾಡುತ್ತಿದ್ದುದು ಅರಬ್ಬಿಯಾಗಿರಲಿಲ್ಲ. (ಕೋಲಂಬಿಯ ಯುನಿವ್ಹರ್‌ಸಿಟಿಯಲ್ಲಿದ್ದ ಲೆಬನಾನಿ ವಿದ್ಯಾರ್ಥಿಗಳಿಂದ ಆಕೆ ಸಾಕಷ್ಟು ಅರಬ್ಬಿ ಕೇಳಿದ್ದಳು.) ಇಲ್ಲಿ ಈ ಅಪರಿಚಿತ ಭಾಷೆ. ಇದು ಯಾವುದೋ ಆಫ್ರಿಕೆಯ ಭಾಷೆಯಾಗಿರಬೇಕೆಂದು ಆಕೆ ಊಹಿಸಿ ದಳು.... ''ಖಾಹಿರಾ'' ಆಕೆ ವಿಚಾರಿಸಿದಳು. ''ಇಲ್ಲಿಂದ ಎಷ್ಟು ದೂರವಿದೆ ?''

ಇಜಿಪ್ತದ ಆ ಇಬ್ಬರೂ ಆಕೆಯನ್ನು ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದರು.

ರೈತ ಒಂದೆಡೆಗೆ ಸನ್ನೆ ಮಾಡಿದ. ಅವಳು ಹಾರಿ ಕತ್ತೆಯ ಮೇಲೆ ಕುಳಿತಳು. ಹಸಿವೆಯಿಂದಾಗಿ ಅವಳ ಸ್ಥಿತಿ ತುಂಬ ಚಿಂತಾಜನಕವಾಗಿತ್ತು. ನಗರ ಸೇರಿದ ಕೂಡಲೇ ಎಲ್ಲಕ್ಕಿಂತ ಮೊದಲು ಏನನ್ನಾದರೂ ಕೊಂಚ ತಿನ್ನಬೇಕು... ಆದರೆ ಫಾರೆನ್ ಎಕ್ಸ್‌ಚೆಂಜ್ ಎಲ್ಲಿಂದ ತರುವುದು... ಇಷ್ಟರಲ್ಲಿ ನಾಲ್ಕೈದು ಮಂದಿ ಕುರಿಗಾಹಿಗಳು ರಾಕೆಟ್ ಸುತ್ತ ಜಮಾಯಿಸಿದ್ದರು...ಅವರೆಲ್ಲ ಅಚ್ಚರಿಯಲ್ಲಿ ಮುಳುಗಿದ್ದರು. ಅವರನ್ನು ನೋಡಿ ಉಳಿದವರು ತಲೆ ಮರೆಯಿಸಿಕೊಂಡರು.

ಅವರಲ್ಲೊಬ್ಬ ನೆಲದ ಮೇಲೆ ಬಿದ್ದುಕೊಂಡೇ ಘೋಷಣೆ ಕೂಗಿದ– ''ಮರಹಬಾ...ದೇವಿ ಹಾಷೂರ'' ಉಳಿದವರು ಅದನ್ನು ಕೋರಸ್ಸಾಗಿ ಹಾಡಿದರು– ''ಆಕಾಶದ ರಥದಲ್ಲಿ ಬಂದಿರುವ ಮದರ ಹೋರಸ್ ನಮ್ಮ ಮೇಲೆ ಕರುಣೆ ದೋರು...''

ಪದ್ಮಾ ಮೇರಿ ಕೆಲ ಕ್ಷಣ ಸುಮ್ಮನಿದ್ದಳು. ಅನಂತರ ಅತ್ಯಂತ ಗರ್ವದಿಂದ ಹೇಳಿದಳು. ''ಓ ! ನನ್ನ ಚಿಣ್ಣರೆ, ನಾನು ದೇವಿ ಹಾಷೂರಳ ದಾಸಿಯಾಗಿದ್ದೇನೆ. ಒಂದು ವಿಶೇಷ ಕೆಲಸಕ್ಕಾಗಿ ದೇವಿ ನನ್ನನ್ನು ಭೂಮಿಗೆ ಕಳಿಸಿದ್ದಾಳೆ. ಯಾರಿಗೂ ನನ್ನ ಬಗ್ಗೆ ಏನನ್ನೂ ಹೇಳಕೂಡದು... ಇಲ್ಲದಿದ್ದರೆ ದೇವಿ ಮುನಿಸಿಗೊಂಡು ತೊಂದರೆ

ಕೊಡುತ್ತಾಳೆ...ನನ್ನ ಆಕಾಶದ ರಥದ ಬಗ್ಗೆ ಕಾಳಜಿ ವಹಿಸಿ...ಯಾರೂ ಇದನ್ನು ಮುಟ್ಟಬಾರದು, ಖಬರ್‌ದಾರ, ಅದಕ್ಕೆ ಕೈ ಕೂಡ ಹಚ್ಚಬಾರದು.''

ಮಮ್ಮಫಸ್ ದೊಡ್ಡದಾದ, ತುಂಬ ವೈಭವದ ಪಟ್ಟಣವಾಗಿತ್ತು. ಮಮ್ಮಫಸ್ ಹೇಗಿರಬೇಕಿತ್ತೊ ಹಾಗಿತ್ತು. ಕತ್ತೆಯವ ಹಾಷೂರ ದೇವತೆಯ ದಾಸಿಯ ಭಯದಿಂದ ಥರಥರ ನಡುಗುತ್ತಲಿದ್ದ. ಆಕೆಯನ್ನು ಒಂದು ಚೌಕದಲ್ಲಿಳಿಸಿ ಗದ್ದಲದಲ್ಲಿ ಮಾಯವಾದ. ಪದ್ಮಾ ಸುತ್ತಲೂ ನೋಡಿದಳು. ಎಲ್ಲಿಯೂ ರೆಸ್ಟೊರೆಂಟ್ ಕಾಣಲಿಲ್ಲ. ಇಲ್ಲಿ ಬಹುಶಃ ರೆಸ್ಟೊರೆಂಟ್ ಇರುತ್ತಿರಲಿಲ್ಲ... ಎಂದು ಆಕೆ ಭಾವಿಸಿದಳು... ಆಕೆ ಒಂದು ದೊಡ್ಡ ಅಂಗಡಿಯ ಮುಂದೆ ನಿಂತಿದ್ದಳು. ಒಳಗೆ ಅಲ್ಮಾರಿಗಳಲ್ಲಿ ದೊಡ್ಡ ದೊಡ್ಡ ಗಂಟುಗಳಿದ್ದವು. ಓರ್ವ ತರುಣ, ಸುಂದರ, ಬಂಗಾರ ವರ್ಣದ ಲುಂಗಿ, ಅದರ ಮೇಲೆ ಕಪ್ಪು ಕಲೆಗಳಿದ್ದವು.... ಮಲ್ ಮಲ್ ಬಟ್ಟೆ ಕೊರಳ ಸುತ್ತ ಸುತ್ತಿದ್ದ, ಗುಂಗುರು ಗೂದಲು, ಹಣೆಯ ಮೇಲೆ ಕೂದಲುಗಳ ಜಾಲರಿ, ಅಂಗಡಿಯವನೊಂದಿಗೆ ಮಾತಾನಾಡುತ್ತ ನಿಂತಿದ್ದ. ಇಬ್ಬರು ಗುಲಾಮರು ಅವನ ಹಿಂದೆ ಪೀಪಾಸ್‌ದ ಬಂಡಲ್ ಹೊತ್ತು ನಿಂತಿದ್ದರು.

ಈಗ ಇಲ್ಲಿಂದ ಸೈನ್ಸ್ ಫಿಕ್ಷನ್‌ದಲ್ಲಿ ರೊಮಾನ್ಸ್ ಆರಂಭವಾಗಬೇಕು. ಆದರೆ ಆಗುವುದಿಲ್ಲ.. ಪದ್ಮಾ ಹಸಿವೆಯಿಂದ ಚಿಂತಿತಳಾಗಿದ್ದಳು. ರೆಸ್ಟೊರೆಂಟನ್ನು ಹುಡುಕುತ್ತ ಕೊಂಚ ಮುಂದೆ ಹೋದಾಗ ಒಂದು ಮುಚ್ಚಿದ ಅಂಗಡಿ (ಅದರ ಮೇಲೆ ಬಾಡಿಗೆಗೆ ಕೊಡುವುದಿದೆ– ಎಂದು ಬರೆಯಲಾಗಿತ್ತು)ಯ ಕಟ್ಟೆಯ ಮೇಲೆ ಓರ್ವ ಮುಪ್ಪಾನ ಮುದುಕ, ನಡುಗುತ್ತ ಗೂಡಿಸಿಕೊಂಡು ಕೂತಿದ್ದುದು ಕಾಣಿಸಿತು. ತಲೆಯ ಮೇಲೆ ದುಂಡನ್ನ ಟೊಪ್ಪಿಗೆ ಹಾಕಿಕೊಂಡಿದ್ದ. ಪ್ರಸ್ತುತಕಾಲದ ಫಿಲ್ಮಗಳಲ್ಲಿಯ ಹಾಗೆ ಡ್ರೆಸ್ ಮಾಡಿದ ಪುರಾತನ ಇಜಿಪ್ತಿಯನ್‌ರ ನಡುವೆ ಒಂದು ಮನುಷ್ಯಾಕೃತಿಯ ವ್ಯಕ್ತಿತ್ವ, ಅದೇ ಹೊತ್ತಿಗೆ ಓರ್ವ ಗಟ್ಟಿಮುಟ್ಟಾದ, ಎತ್ತರದ ಸುಂದರ ಇಜಿಪ್ತಿಯನ್, ಚಾಬುಕ ಮತ್ತು ಉದ್ದವಾದ ಕಾಗದ ಅಲ್ಲಾಡಿಸುತ್ತ ಬಜಾರದ ಜನ ಜಂಗುಳಿಯಿಂದ ಕಾಣಿಸಿಕೊಂಡ. ಕಾಗದವನ್ನು ಒಬ್ಬನ ಕೈಯಲ್ಲಿರಿಸಿ ಮುಂದಕ್ಕೆ ಹೊರಟು ಹೋದ. ವೃದ್ಧ ಹೃದಯದ್ರಾವಕ ದನಿಯಲ್ಲಿ ಕೂಗಿದ–

''ಮೆಖಾಯಿಲ್...ಬಿನ್ ಹನ್ನಾನ್...''

ಉದ್ದ ಹಾಗೂ ತೆಳ್ಳಗಿನ ಮೂಗು, ಕಪ್ಪು ಕಣ್ಣುಗಳ, ಸುಂದರ ಮುಖದ ಓರ್ವ ತರುಣ ಆ ಕಡೆಯ ಓಣಿಯಿಂದ ಪ್ರತ್ಯಕ್ಷನಾದ– ''ಒಬ್ಬನೇ ಆದ ಅಲ್ಲಾನ ಧಿಕ್ಕಾರವಿರಲಿ ಈ ಕೆಟ್ಟ ಕಾಲದ ಮೇಲೆ''

''ಓ ! ನನ್ನ ಪ್ರೀತಿಯವನೆ, ತಲೆಯ ಮೇಲೆ ಬೂದಿ ಹಾಕಿಕೊ, ನಿನ್ನ ಹೆಸರೂ ಈ ಲಿಸ್ಟಿನಲ್ಲಿ ಬಂದಿದೆ...''

ಮೆಖಾಯಿಲ್‌ನ ಬಣ್ಣ ಕಂಗೆಟ್ಟಿತು...ಅವನು ಮೆಲ್ಲಗೆ ಹೇಳಿದ– ''ರಬ್ ಜದಾ ಉಲ್ ಜಲಾಲ, ಬಹುಶಃ ದೇವಿಯ ಹೃದಯದಲ್ಲಿ ಒಳ್ಳೆಯದನ್ನು ಹಾಕಲಿ...ಓ, ರಬ್

ಜದಾ ಉಲ್ ಜಲಾಲ ನನ್ನ ಬೆಳಕು ಮತ್ತು ನನ್ನ ಮುಕ್ತಿ, ಆತನೇ ಅಸ್ರಾಫೇಲಶಾಹ ಷಗಾರ ಮತ್ತು ಆರಿಫ್ಪೋಖಷಾಹ ಏಲಾಜಾರನ ಪ್ರತಿಜ್ಞೆಯಲ್ಲಿ ಸ್ವಾಮಿಯ ಧರ್ಮವನ್ನು ಕಾಪಾಡಿದ...

''ಶ್ರೀಮಂತ ಶೋಷ....?''

ಹಿರಿಯ ಮುದುಕ ಮಾತಾಡುತ್ತ ಕೇಳಿದ– ''ಓ ! ದೇವರೆ, ನಾನು ಅವನನ್ನು ನೋಡುತ್ತಿದ್ದೇನೆ...ಅವನು ಕಾಗದ ಖರೀದಿಸಲು ಬಂದಿದ್ದಾನೆ...ನಾನು ಅವನೊಂದಿಗೆ ಮಾತಾಡುತ್ತೇನೆ....ಅವನು ನನ್ನ ಕ್ಲಾಸಫೆಲೋ ಆಗಿದ್ದ...ಅವನು ನನಗೆ ಸಹಾಯ ಮಾಡಬಹುದು.

ಮೆಖಾಯಿಲ್, ತುಂಬ ಪ್ರಾಚೀನವಾದ ಇಬ್ರಾನಿ ಭಾಷೆಯಲ್ಲಿ ಮಾತಾಡುತ್ತಿದ್ದ...ಅವನು ಈ ಶಬ್ದ ಉಪಯೋಗಿಸಿರಲಿಲ್ಲ. ಆದರೆ ನಾನು ಅತ್ಯಂತ ಪ್ರಾಚೀನ ಖಿಬ್ತಿ ಮತ್ತು ಇಬ್ರಾನಿ ಎರಡೂ ಭಾಷೆ ನನಗೆ ಗೊತ್ತಿಲ್ಲ...(ಸತ್ಯ ಏನೆಂದರೆ ಡಾಕ್ಟರ್ ಕರೀನ್ ಈ ಹೊತ್ತಿಗೆ ಇಬ್ರಾನಿಯನ್ನು ಕೂಡ ತುಂಬ ಚೆನ್ನಾಗಿ ತಿಳಿದುಕೊಳ್ಳಲಾರಂಭಿಸಿದ್ದಳು). ಮೆಖಾಯಿಲ್ ಮುಗಿಬಿದ್ದು ಸ್ಟೇಷನರಿ ಅಂಗಡಿಯಲ್ಲಿ ಹೋದ. ಪದ್ಮಾ ದಾರಿಯ ಬದಿಯಲ್ಲಿ ನಿಂತು ಈ ಇಡೀ ದೃಶ್ಯ ನೋಡುತ್ತಿದ್ದಳು. ಸುಂದರ ತರುಣ, ಇಬ್ರಾನಿಗೆ ಕೇಳಿದ–

''ಹೇಳು, ಮೆಖಾಯಿಲ್, ಈಗೀಗ ಎಲ್ಲಿರುತ್ತಿರುವೆ ?''

''ಕಸ್ಟಮ್ಸ್‌ದಲ್ಲಿ ಕೆಲಸ ಮಾಡುತ್ತಿದ್ದೇನೆ..''

''ತುಂಬ ಒಳ್ಳೇದು....ತುಂಬ ಒಳ್ಳೇದು.... ಆಗಾಗ ಭೇಟಿಯಾಗುತ್ತಿರು'' ಎಂದ ಸುಂದರ ತರುಣ ಅವನ ತಲೆಯ ಮೇಲೆ ಕೈಯಾಡಿಸಿದ, ಅವನ ಹೆಗಲ ಮೇಲೆ ಕೈಯಿಂದ ಚಪ್ಪರಿಸಿದ....

''ಶೋಷ, ನಿನ್ನೊಂದಿಗೆ ಒಂದು ಅವಶ್ಯಕವಾದ ಮಾತನಾಡಬೇಕು.'' ಇಬ್ರಾನಿ ಹುಡುಗ ಹಿಂಜರಿಯುತ್ತ ಹೇಳಿದ. ಪಿಸುಮಾತಿನಲ್ಲಿ ಏನನ್ನೋ ಹೇಳಿದ. ಶ್ರೀಮಂತ ಶೋಷ ಮಾತು ಕೇಳುತ್ತಿದ್ದಂತೆಯೇ ಹೇಳಿದ–

''ಚಿಂತಿಸಬೇಡ.....ನಾನು ಆನರೇಬಲ್ ಮಿನಿಸ್ಟರ್ ಜೊತೆ ಮಾತಾಡುವೆ''.

ಆಗಲೇ ಈ ಇಬ್ಬರು ತರುಣರ ದೃಷ್ಟಿ ಆ ಅಪರಿಚಿತ ತರುಣಿಯತ್ತ ಹೋಯಿತು...ಇಬ್ಬರೂ ಒಮ್ಮೆಲೇ ಪಾವಟಿಗೆಗಳಿಂದ ಕೆಳಗಿಳಿದರು. ಶ್ರೀಮಂತ ಶೋಷಾ ತನ್ನ ಮೊಣಕೈಯಿಂದ ಮೆಖಾಯಿಲ್‌ನನ್ನು ಹಿಂದಕ್ಕೆ ಸರಿಸಿದ...ಶೋಷ ಮತ್ತು ಮೆಖಾಯಿಲ್‌ನ ಸಂಬಂಧ ಒಡೆಯ ಮತ್ತು ಆಳಿನ ಸಂಬಂಧವಾಗಿತ್ತು. ಈಗ ಶ್ರೀಮಂತ ಶೋಷ ಡಾಕ್ಟರ್ ಕರಿನ್‌ಳತ್ತ ಬರುತ್ತಲಿದ್ದ.

ಪದ್ಮಾ ಬಹಳ ತೀವ್ರಗತಿಯಲ್ಲಿ ಯೋಚಿಸತೊಡಗಿದಳು....ಈ ಜನರಿಗೆ ಇಂಡಿಯನ್ ಡಾನ್ಸರ್ ಇದ್ದೇನೆ, ಫಾರೆನ್ ಟೂರ ಮೇಲೆ ಹೊರಟಿರುವೆನೆಂದು

ಹೇಳಿದಲ್ಲಿ, ಯಾರಿಗೆ ಗೊತ್ತು ನನ್ನನ್ನು ತೆಗೆದುಕೊಂಡು ಹೋಗಿ ಬಜಾರದಲ್ಲಿ ಮಾರಿ ಬಂದರೆ.... "ಓ ! ದೇವಿ ಹಾಷೂರಳ ದಾಸಿ"ಯ ಮಾತು ಸರಿ...ಆದರೆ ಯಾವುದಾದರೂ ಗುಡಿಯಲ್ಲಿ ಪ್ರತಿಷ್ಠಾಪಿಸಿ, ಲೋಬಾನ ಹಾಕಿದರೆ ಐದೋ ಹತ್ತು ನಿಮಿಷದಲ್ಲಿ ಉಸಿರುಗಟ್ಟಿ ಸತ್ತು ಹೋಗುತ್ತೇನೆ. ಇದ್ದ ನಿಜ ಸ್ಥಿತಿ ಹೇಳಿದರೆ ಅವರಿಗೆ ತಿಳಿಯುವುದಿಲ್ಲ. ಅವರಿಗೇಕೆ, ನನ್ನ ಈಗಿನ ಸ್ಥಿತಿ ನನಗೇ ತಿಳಿಯುತ್ತಿಲ್ಲ....

ಶ್ರೀಮಂತ ಶೋಷ ಅವಳೆದುರಿಗೆ ನಿಂತಿದ್ದ. "ಪ, ಹುಡುಗಿ ನೀನು ಯಾರು ?" ಅವನು ಕೊಂಚ ಜಬರಿಸುವ ಹಾಗೆಯೇ ಕೇಳಿದ– "ನಮ್ಮ ಮಾತುಗಳನ್ನು ಅಷ್ಟೊಂದು ಆಸಕ್ತಿಯಿಂದ ಏಕೆ ಕೇಳುತ್ತಿದ್ದೆ ?...ಯಾವ ದೇಶದ ಗುಪ್ತಚಾರಳು ? ಏಲಾಮ, ಅಓರಿಯಾ ? ಅರಾರ್‌ತೋ, ಎಲ್ಲಿಯವಳು ನೀನು...?"

ಪದ್ಮಾ ಮೂರ್ಖರ ಹಾಗೆ ಜೋರಾಗಿ ತಲೆ ಅಲ್ಲಾಡಿಸಿದಳು ಹಾಗೂ ಹೆದರಿಕೆಯಿಂದ ನಡುಗಿ ಹೋದಳು. ಶೋಷ ಅವಳ ನೈಲಾನ್ ಸೀರೆ ಮತ್ತು ಅಮೇರಿಕನ್ ಬ್ಯಾಗ್‌ನ್ನು ತೀಕ್ಷ್ಣವಾಗಿ ನೋಡಿದ. ಪದ್ಮಾ ಹೆದರಿಕೆಯಿಂದಲೇ ಹೇಳಿದಳು– "ಹುಜೂರ ರಾಜಕುಮಾರ, ದೇವರ ಕರುಣೆಯಿರಲಿ...ಈ ದಾಸಿ ಹಸಿವೆಯಿಂದ ಬಳಲುತ್ತಿದ್ದಾಳೆ... ಜೀವದಲ್ಲಿ ಜೀವವಿಲ್ಲ...ಮೊದಲು ಊಟ ಮಾಡಿಸಿ... ದಾಸಿ ಇದ್ದ ಸ್ಥಿತಿಯನ್ನು ಸಾದರಪಡಿಸುತ್ತಾಳೆ.."

"ನನ್ನೊಂದಿಗೆ ನಡೆ...." ಎಂದು ಶ್ರೀಮಂತ ಆರ್ಡರ್ ಮಾಡಿದ. ಅವಳು ಅವನ ಹಿಂದೆ ಹಿಂದೆ ಹೊರಟಳು...ಮೂಲೆಯಲ್ಲಿ ರಥ ಸ್ಟ್ಯಾಂಡ್ ಇತ್ತು ಅಥವಾ ರಥ ಪಾರ್ಕ್ ಅನ್ನಿ...ಶ್ರೀಮಂತ ಪದ್ಮಾಳನ್ನು ತನ್ನ ಬದಿಯಲ್ಲಿಯೇ ರಥದಲ್ಲಿ ಕೂಡಿಸಿಕೊಂಡು ಹೊರಟ.

ಅವರು ಬಜಾರದಿಂದ ಹೊರಟು ಹೆಲಿಯೋ ಪೋಲಸ್ ನಗರದ ಒಂದು ಫ್ಯಾಶನೇಬಲ್ ಓಣಿ ತಲುಪಿದರು. ರಸ್ತೆಯ ಎರಡೂ ಬದಿಯಲ್ಲಿ ವೈಭವಪೂರ್ಣ ದೊಡ್ಡ ದೊಡ್ಡ ಬಂಗ್ಲೆಗಳಿದ್ದವು. ಅಲ್ಲಲ್ಲಿ ಕಸಕಡ್ಡಿ ಇತ್ತು, ಮಕ್ಕಳು ಆಡುತ್ತಿದ್ದವು... ಒಂದು ಬಹು ಅಂತಸ್ತಿನ ಮಹಲಿನ ಮುಂದೆ ಹೋಗಿ ರಥ ನಿಂತಿತು. ಅವರಿಳಿದು ಪಡಸಾಲೆಗೆ ಬಂದರು. ಓರ್ವ ಕಪ್ಪು ಗುಲಾಮ ಕೆಂಪು ಬಣ್ಣದ ಮುಂಬಾಗಿಲು ತೆರೆದ. ಅವರು ಹಾಲ್‌ದಲ್ಲಿ ಬಂದರು.

ಚಂದ್ರಕಾಂತ ಶಿಲೆಯ ಹಾಸಿನಿಂದ ನೆಲ ಹೊಳೆಯುತ್ತಿತ್ತು. ಮಧ್ಯದಲ್ಲಿ ಒಂದು ಕಾರಂಜಿ. ರೇಶ್ಮೆ ಬಟ್ಟೆಯಲ್ಲಿ ಪೀಪಾಯರಸ್‌ದ ಸುರುಳಿಗಳನ್ನು ಅಲ್ಮಾರಿಗಳಲ್ಲಿ ಇರಿಸಲಾಗಿತ್ತು. ಗೋಡೆಗಳಿಗೆ ಆನಿಸಿ ಸಾಲಾಗಿ ಕುರ್ಚಿಗಳನ್ನಿರಿಸಲಾಗಿತ್ತು. ಈ ಎಲ್ಲ ಫರ್ನಿಚರಗಳನ್ನು ಬ್ರಿಟಿಷ್ ಮ್ಯುಜಿಯಂದಿಂದ ತಂದು ಇಲ್ಲಿರಿಸಲಾಗಿತ್ತು.

ಶೋಷ ಊಟ ತರಲು ಆಜ್ಞೆ ಮಾಡಿದ. ಕಾರಂಜಿಯ ಸಮೀಪ ಇರಿಸಿದ ಚರ್ಮದ ಹೊದಿಕೆಯಿರುವ ಕುರ್ಚಿಯ ಮೇಲೆ ಕುಳಿತ. ಸ್ಯಾಂಡಲ್ ಕಳಚಿದ ಮತ್ತು ಪ್ರಶ್ನಾರ್ಥಕ ದೃಷ್ಟಿಯಿಂದ ಡಾಕ್ಟರ್ ಮೇರಿ ಕರಿನ್‌ಳನ್ನು ನೋಡತೊಡಗಿದ.

ಪದ್ಮಾ ಮೇರಿ ಎದುರಿಗಿನ ಕುರ್ಚಿಯಲ್ಲಿ ಕುಳಿತು ಗಂಟಲು ಸರಿಪಡಿಸಿಕೊಂಡಳು.

''ಹುಜೂರ....ನಾನು...ನಾನು ಇಂಡಿಯಾದಿಂದ ಬಂದಿದ್ದೇನೆ.''

''.....?''

''ಡಾನ್ಸ್ ಮಾಡುತ್ತೇನೆ...'' ಎನ್ನುತ್ತ ಎದ್ದು ನಿಂತು ಮೋಹಿನಿ ಆಟ್ಟಂದ ಕೆಲ ಮುದ್ರೆಗಳನ್ನು ಮಾಡಿ ತೋರಿಸಿದಳು. ಶೋಷ ಇದರಿಂದ ಎಳ್ಳಷ್ಟೂ ಪ್ರಭಾವಿತನಾಗಲಿಲ್ಲ. ಆಕೆ ಮತ್ತೆ ಕುರ್ಚಿಯ ಮೇಲೆ ಕುಳಿತಳು. ''ನಾನು ಬಂದ ಹಾಯಿದೋಣಿ....'' ಆಕೆ ಬಹಳ ವಿಚಾರ ಮಾಡಿ ಹೇಳಲಾರಂಭಿಸಿದಳು– ''ನಾನು ಹಾಯಿ ದೋಣಿಯಲ್ಲಿ ಬರುತ್ತಿದ್ದೆ. ಅದು ಸುಯೇಜ ಕಾಲುವೆಯಲ್ಲಿ ಹಾಳಾಗಿ ಹೋಯಿತು. ನಾನೊಂದು ಹಲಗೆಯ ಆಸರೆ....''

''ಸುಯೇಜ ಕೆನಲ್...'' ಶೋಷ ಆ ಕೂಡಲೇ ಈ ಹೆಸರನ್ನು ಮರುನುಡಿದ... ಮತ್ತು ಅದರ ವಿಸ್ತಾರ ವ್ಯಾಖ್ಯೆದ ಬಗ್ಗೆ ಉತ್ಸುಕನಾಗಿದ್ದ. ಈಗ ಆಕೆ ತುಂಬ ಗಲಿಬಿಲಿಗೊಂಡಳು. ಶೋಷ ಸಿಡಿಮಿಡಿಗೊಂಡು ಕೇಳಿದ– ''ಆ ಇಬ್ರಾನಿ ಹುಡುಗನನ್ನು ಬಲ್ಲೆಯೇನು ?''

''ಗೌರವಾನ್ವಿತರೆ, ರಬ್ಬಾ ಹಾಶೂರ ಮತ್ತು ಆತನ ಮಗನಾಣೆ.... ನಾನಿಲ್ಲಿ ಯಾರನ್ನೂ ಬಲ್ಲವಳಲ್ಲ.... ಹುಜೂರ...''–ಪವಿತ್ರಳಾದ ತಾಯಿ ಮತ್ತು ಆಕೆಯ ಮಗನ ಆಣೆಯಿಂದ ಅವನಿಗೆ ಆ ಕೂಡಲೇ ವಿಶ್ವಾಸ ಮೂಡಿತು. ''ಸರಿ, ನನಗೆ ಹುಜೂರ...ಹೂಜುರ ಎಂದು ಕರೆಯಬೇಡ...ನಡೆ, ಊಟ ಮಾಡು'' ಎಂದು ಹೇಳುತ್ತ ಅವನು ಪದ್ಮಾಳನ್ನು ಊಟದ ಮನೆಗೆ ಕರೆದೊಯ್ದ. ಆಳುಗಳು ಅಡುಗೆ ತಂದು ಮೇಜಿನ ಮೇಲೆ ಇರಿಸಲಾರಂಭಿಸಿದರು. ಪದ್ಮಾ ಬೆಳಗಿನ ಹತ್ತು ಗಂಟೆಗೆ ಬೆಂಗಳೂರಿನ ಲೆಬೊರೇಟರಿಯ ಕ್ಯಾಂಟಿನ್‌ದಲ್ಲಿ ಡಾಕ್ಟರ್ ರಾಮನಾಥನ್ ಮತ್ತು ಡಾಕ್ಟರ್ ರಫೀಕ ಫತಅಲಿಯೊಂದಿಗೆ ವಿಚಾರ ವಿನಿಮಯ ಮಾಡುತ್ತ ಕೇವಲ ಒಂದು ಕಪ್ ಕಾಫಿ ಕುಡಿದಿದ್ದಳು. ಈಗ ಸಾಯಂಕಾಲದ ನಾಲ್ಕೂವರೆ ಗಂಟೆಯಾಗಲಿತ್ತು. ಆಕೆ ಶೋಷನ ಕಣ್ಣಿಗೆ ಬೀಳದಂತೆ ರಿಸ್ಟ್‌ವಾಚ್ ಬಿಚ್ಚಿದಳು ಹಾಗೂ ಬ್ಯಾಗ್‌ನಲ್ಲಿ ಇಟ್ಟಳು, ಊಟ ಮಾಡುವುದರ ಕಡೆ ಲಕ್ಷ್ಯ ಹಾಕಿದಳು. ಊಟ ತುಂಬ ಉತ್ಕೃಷ್ಟವಾಗಿತ್ತು.

ಸೂರ್ಯ ನೈಲ ನದಿಯಲ್ಲಿ ಮುಳುಗಲಿದ್ದ, ಮರುಳುಗಾಡಿನ ಈ ದೇಶದಲ್ಲಿ ಹವೆ ಒಣದಾಗುತ್ತಲಿತ್ತು. ಅವಳು ತನ್ನ ವಿಶಿಷ್ಟ ಅತಿಥೇಯನೊಂದಿಗೆ ಉದ್ದವಾದ ಪಡಸಾಲೆಯಲ್ಲಿ ಅಡ್ಡಾಡುತ್ತಲಿದ್ದಳು. ಇಲ್ಲಿಯವರೆಗೂ ಆಕೆಗೆ ಈ ಎಲ್ಲ ಮಾತುಗಳು ಗೊತ್ತಾಗಿದ್ದವು–ಶೋಷನ ನಿಜವಾದ ಹೆಸರು ಅಸ್ತಾಲೀಸ, ಶೋಷ, ಸರಕಾರ ಅವನಿಗೆ ನೀಡಿದ ಪದವಿಯಾಗಿತ್ತು. ಇದೇ ಪದವಿ ಅವನ ತಂದೆಗೂ ಇತ್ತು.

ಮಿಸ್ಟರ್ ಶೋಷ ಸೀನಿಯರ್ ಫರಊನನ ಚೀಫ ಸೆಕ್ರೆಟರಿಯಿಂದ ಮತ್ತು ವಂಶ ಪಾರಂಪರ್ಯವಾಗಿ ಆಗರ್ಭ ಶ್ರೀಮಂತನಾಗಿದ್ದ. ಶೋಷ ಜೂನಿಯರ್ ಕೂಡ ಬರೆಯುತ್ತಿದ್ದ. ದರ್ಬಾರಿ ಒಳ ಸಂಚಿನಿಂದ ದೂರವಿರುತ್ತಿದ್ದ. ನಗರದ ಲೇಖಕ

ರೊಂದಿಗೆ ಒಳ್ಳೆಯ ಸಂಬಂಧವಿರಿಸಿಕೊಂಡಿದ್ದ. ತನ್ನ ದೇಶದ ಬಹಳಷ್ಟು ಹಳೆಯ ವಿಚಾರ ಮತ್ತು ನಿಯಮಗಳನ್ನು ಬಲ್ಲವನಾಗಿದ್ದ. ಆದರೆ ಈ ಮುದುಕ ಹೊಸ ಜನಾಂಗದವರ ಏನನ್ನೂ ನಡೆಯಗೊಡುತ್ತಿದ್ದಿಲ್ಲ. ಇದು ಪ್ರಾಚೀನ ಇಜಿಪ್ತದ ರಹಸ್ಯದ ಅಸಲಿ ರೂಪ. ಪದ್ಮಾ ನಿರಾಶೆಯಿಂದ ಯೋಚಿಸಿದಳು. ಲಾಯಬ್ರರಿಯಲ್ಲಿ ಕುಳಿತಿರುವ, ಲೇಖನ ಕಾರ್ಯಮಾಡುವ ವ್ಯಕ್ತಿ ಸಯಿಫಾ ಮುತೊಫೆನ್‌ದ ನಕಲು ಮಾಡುವಲ್ಲಿ ನಿರತನಾಗಿದ್ದ. ಅವನ ಜೊತೆಗಿದ್ದ ಒಬ್ಬನಿಗೆ ನೆಗಡಿ ಆಗಿತ್ತು. ಇನ್ನೊಬ್ಬ ನಿರಂತರ ತನ್ನ ತಲೆ ಕೆರಕೊಳ್ಳುತ್ತಿದ್ದ. ಇಬ್ಬರು ತರುಣ ನಕಲು ಮಾಡುವವರು ಪರಸ್ಪರ ಜಗಳ ಮಾಡುತ್ತಿದ್ದರು. ಅನೋತಿ ಎನ್ನುವ ಗುಲಾಮಳು ಚಂದ ಇರಲಿಲ್ಲ... ಅತ್ಯಂತ ಕುರೂಪಿ ಮತ್ತು ಮುಖದ ತುಂಬ ಮೈಲಿ ಬೇನೆಯಿಂದಾದ ಕಲೆಗಳು. ಸ್ವತಃ ಶೋಷ ಓರ್ವ ಸಾಮಾನ್ಯ ವ್ಯಕ್ತಿಯಾಗಿದ್ದ. ಕೋಟ ಪ್ಯಾಂಟಿನ ಬದಲಿಗೆ ಹಾಲಿವುಡ್ಡಿನ ಡ್ರೆಸ್ ಮಾಡಿಕೊಂಡಿದ್ದ.

ಫರಊನ ತನ್ನ ಸೈನ್ಯದ ನಿರೀಕ್ಷಣೆಗಾಗಿ ಅಶೂರಿಯಾದ ಗಡಿ ಪ್ರದೇಶಕ್ಕೆ ಹೋಗಿದ್ದ. ಅಶೂರಿಯಾದೊಂದಿಗೆ ಅದೆಷ್ಟೋ ವರ್ಷಗಳಿಂದ ಯುದ್ಧ ನಡೆದಿತ್ತು.

''ಜಗತ್ತಿನ ಮಹತ್ವದ ಅತ್ಯಂತ ಪ್ರಾಚೀನ ಸಂಸ್ಕೃತಿ''–ಶೋಷ ಅಡ್ಡಾಡುತ್ತ ತುಂಬ ಅಭಿಮಾನದಿಂದ ಹೇಳ ಹೊರಟಿದ್ದ– ''ಈ ಕದಾನಿಯಾ ಮತ್ತು ಅಶೂರಿಯಾದವರು ಕೂಡ ತಮ್ಮ ಬಗ್ಗೆ ಹೀಗೆಯೇ ಹೇಳಿಕೊಳ್ಳುತ್ತಾರೆ ಮತ್ತು ನಮ್ಮೊಂದಿಗೆ ಯುದ್ಧಕ್ಕೆ ಬರುತ್ತಾರೆ. ಆದರೆ ಎಲ್ಲರಿಗೂ ಗೊತ್ತಿದೆ, ನಮ್ಮ ಮತ್ತು ಅವರ ನಡುವೆ ಹೋಲಿಕೆಯೆಲ್ಲಿ? ನಾವು ಅವರಿಗಿಂತ ಎಲ್ಲ ರೀತಿಯಿಂದಲೂ ಶಕ್ತಿಶಾಲಿಗಳಾಗಿದ್ದೇವೆ.''

ಪದ್ಮಾ ತುಟಿಯಲ್ಲಿಯೇ ಮುಗುಳ್ನಕ್ಕಳು. ''ಆದರೆ ಒಂದು ಮಾತು ಅವಶ್ಯ'' ಎನ್ನುತ್ತ ಶೋಷ ಲಾಯಬ್ರರಿಯಲ್ಲಿ ಬರುತ್ತ ಮತ್ತೆ ಹೇಳಿದ– ''ಕಲ್ದಾನಿ ಮತ್ತು ಅಶೂರಿಯ ಜನ ತುಂಬ ವಿದ್ಯಾವಂತರು. ಈ ಗ್ರಂಥಗಳನ್ನು ನೋಡಿ, ಇಷ್ಟೊಂದು ನಯನಾಜೂಕಿನ ಬರವಣಿಗೆ'' ಎನ್ನುತ್ತ ಅವರ ಗ್ರಂಥಗಳ ರಾಶಿಯತ್ತ ಸನ್ನೆ ಮಾಡಿ ಮತ್ತೆ ಹೇಳಿದ– ''ಯುದ್ಧಕ್ಕಿಂತ ಪೂರ್ವದಲ್ಲಿ ಅವರ ಈ ಗ್ರಂಥ ರಾಶಿಯನ್ನು ನೂರಾರು ಒಂಟೆಗಳ ಮೇಲೆ ಹೇರಿಕೊಂಡು ನಮ್ಮಲ್ಲಿಗೆ ತರಲಾಗುತ್ತಿತ್ತು.'' ಅವನು ಬಾಗಿ ಅವುಗಳಲ್ಲಿಯ ಸೂಕ್ಷ್ಮ ಬರೆವಣಿಗೆಯಿಂದ ಶೋಭಿತವಾದ ಗ್ರಂಥವೊಂದನ್ನು ಎತ್ತಿಕೊಂಡ.

''ಓ ! ಇದನ್ನು ನಾನು ಬ್ರಿಟಿಷ್ ಮ್ಯುಜಿಯಂ...'' ಎನ್ನುತ್ತ ತನ್ನ ನಾಲಿಗೆ ಕಡಿದುಕೊಂಡಳು ಪದ್ಮಾ. ಮಾತು ಬದಲಿಸುತ್ತ ಮತ್ತೆ ಕೇಳಿದಳು–''ಶೋಷ, ಇಲ್ಲಿ ನೀನೊಬ್ಬನೇ ಇರುತ್ತಿಯಾ ?''

''ತಂದೆಯವರು ಬಾದಷಾಹರೊಂದಿಗೆ ಗಡಿ ಪ್ರದೇಶದಲ್ಲಿ ಸೈನ್ಯದ ನಿರೀಕ್ಷಣೆಗೆ ಹೋಗಿದ್ದಾರೆ. ತಾಯಿ ಮತ್ತು ಸೋದರಿಯರು ಮಹಾರಾಣಿಯೊಂದಿಗೆ ಆರೋಗ್ಯ ಧಾಮಕ್ಕೆ ಹೋಗಿದ್ದಾರೆ. ನನಗೂ ಹೋಗಬೇಕಾಗಿತ್ತು. ಮಹಾರಾಣಿಯವರು ಅಲ್ಲಿ

ಜಲಮಹಲ್‌ದ ಗೋಡೆಗಳನ್ನು ಕಟ್ಟಲು ಆಜ್ಞೆ ಕೊಟ್ಟಿದ್ದಾರೆ. ಆದರೆ ನಾನು ಎಲ್ಲಿಯವರೆಗೆ ''ಸಯೀಫಾ ಮುತೊಫೆಯೀನ್''[1] ದ ಹೊಸ ಆವೃತ್ತಿ ಪೂರ್ಣಗೊಳಿಸುವುದಿಲ್ಲವೋ, ಅಲ್ಲಿಯವರೆಗೂ ಎಲ್ಲಿಯೂ ಹೋಗಲಾರೆ.''

''ಒಂದು ಮಾತು ಹೇಳು ಶೋಷ. ಸಾವಿನ ಬಗ್ಗೆ ಇಷ್ಟೊಂದು ರೀತಿಯಲ್ಲಿ ಆಸಕ್ತಿ ವಹಿಸುವುದೇಕೆ ?'' ಎಂದು ಪದ್ಮಾ ವಿಚಾರಿಸಿದಳು.

''ಹಾಗಾದರೆ ಯಾವುದರ ಬಗ್ಗೆ ಆಸಕ್ತಿಯಿರಬೇಕು ? ಈ ನಶ್ವರ ಜೀವನದ ಬಗ್ಗೆ ?'' ಎಂದು ಶೋಷ ಪ್ರಶ್ನೆ ಮಾಡಿದ. ಅವಳು ಅವನೊಂದಿಗೆ ಅಲ್ಮಾರಿಗಳ ಮುಂದಿನಿಂದ ಮುಂದೆ ಮುಂದೆ ಸಾಗುತ್ತಿದ್ದಳು. (ಈಗ ಆಕೆ ಆ ಗ್ರಂಥಗಳನ್ನು ಓದಬಲ್ಲವಳಾಗಿದ್ದಳು.) ಆಕೆ ಬೇರೆ ಬೇರೆ ಗ್ರಂಥಗಳ ಮೇಲೆ, ವಿಷಯಗಳ ಮೇಲೆ ಕಣ್ಣು ಹಾಯಿಸಿದಳು. ಧರ್ಮ, ಸಂಸ್ಕೃತಿ, ಕಾನೂನು, ಶಿಕ್ಷಣ, ಕಾವ್ಯ, ಹಸ್ತಪ್ರತಿ ಸಿದ್ಧಪಡಿಸುವಿಕೆ, ಪ್ರವಾಸ ಕಥನ, ನಾವೆಲ್, ಇಂತೀಫ (ಕಾಲ 2600 ಕ್ರಿ. ಪೂ.) ಬರೆದ ರೋಮಾನ್...

''ಸಾವಲ್ಲದೆ ಇನ್ನೂ ಆಸಕ್ತಿಯುಳ್ಳವುಗಳಿವೆ.''–ಶೋಷ ಮುಗುಳ್ನಗುತ್ತ ಹೇಳಿದ– ''ಈ ಎಲ್ಲ ಹಸ್ತಪ್ರತಿ ಗ್ರಂಥಗಳ ಮರು ಪ್ರತಿ ಮಾಡಿಸಿ ಥೇನೀಜ ಕಾಲೇಜಿನ ಹಾಗೂ ಇನ್ನುಳಿದ ಲಾಯಬ್ರರಿಗಳಿಗೆ ಕಳಿಸಲಾಗುತ್ತದೆ.''

''ನನಗೆ ಗೊತ್ತಿರಲಿಲ್ಲ ನೀವೆಲ್ಲ ಇಷ್ಟೊಂದು ವಿದ್ಯಾವಂತರಾಗಿದ್ದೀರೆಂದು....ನನ್ನ ಅಂಬೋಣವೇನೆಂದರೆ.... ತಾಹೋತೇಪ[2] ಏನನ್ನು ಹೇಳುತ್ತಾನೆ.... ನಿಮ್ಮ ತಾಹೋತೇಪ...''

''ಅವನು ಹೇಳುತ್ತಾನೆ'' ಎನ್ನುತ್ತ ಶೋಷ ಒಂದು ರೇಶ್ಮೆ ಬಟ್ಟೆಯಲ್ಲಿ ಸುತ್ತಿದ ಪುಸ್ತಕ ತೆಗೆದುಕೊಂಡು ಓದಲಾರಂಭಿಸಿದ–

''ಮನುಷ್ಯರಲ್ಲಿ ಭಯ ಮತ್ತು ಕ್ರೌರ್ಯ ಹಬ್ಬಿಸಬೇಡಿ. ಹಾಗೆ ಮಾಡಿದವನಿಗೆ ದೇವರು ಶಿಕ್ಷೆ ನೀಡುತ್ತಾನೆ. ಯಾವನು ಇಡೀ ಶಕ್ತಿ ಮತ್ತು ಎಲ್ಲದರ ಮಾಲಿಕ ತಾನೆಂದು ಹೇಳಿಕೊಳ್ಳುತ್ತಾನೋ ಹೆಚ್ಚಾಗಿ ಅವನೇ ಅಪಾಯಕ್ಕೆ ಈಡಾಗುತ್ತಾನೆ, ತೊಂದರೆಗೀಡಾಗಿ ಬಳಲುತ್ತಾನೆ. ಯಾವಾಗಲೂ ಭಗವಂತನಲ್ಲಿ ನಂಬಿಗೆಯಿರಲಿ. ಶಾಂತವಾಗಿರು. ಕೊಡುವವನು ಪರಮಾತ್ಮನಿದ್ದಾನೆ. ಸೇವಕನಾದ ಮನುಷ್ಯ ತಾನೇ ಎಲ್ಲ ಸಂಪಾದಿಸುತ್ತಿದ್ದೇನೆಂದು ತಿಳಿಯದಿರಲಿ. ಜೋಕೆ, ಮಾತುಗಳಿಂದ ಎಂದೂ ದಂಗೆ ಹಬ್ಬಿಸದಿರು....''

---

1. ಇದು ಜಗತ್ತಿನ ಅತ್ಯಂತ ಪ್ರಾಚೀನ ಗ್ರಂಥ. ಸುಮಾರು ಆರು ಸಾವಿರ ವರ್ಷಗಳ ಪೂರ್ವದಲ್ಲಿ ಇಜಿಪ್ತದಲ್ಲಿ ಇದನ್ನು ಬರೆಯಲಾಗಿತ್ತು ಇದರಲ್ಲಿಯ ಒಂದೊಂದು ಗೀತದ ಪುಟವನ್ನು ಹೆಣಗಳೊಂದಿಗೆ ಹುಗಿಯಲಾಗುತ್ತಿತ್ತು

2. ತಾಹೋತೇಪ : ಕಾಲ : 3550 ಕ್ರಿ. ಪೂ. ಮುಮಫಸ್‌ದಲ್ಲಿ ಜನ್ಮತಾಳಿದ.

ಆಕೆ ಮತ್ತೆ ಅಡ್ಡಾಡುತ್ತ ಸಯೀಫಾ ಮುತುಫೇನ್‌ದ ಹಸ್ತಪ್ರತಿ ಮರುಪ್ರತಿ ಮಾಡುವವರತ್ತ ಬಂದಳು. ಅಲ್ಲಿ ಕುಳಿತು ನೋಡತೊಡಗಿದಳು. ಓರ್ವ ದಪ್ಪಗಿನ ನಕಲು ಮಾಡುವವ ಮೂಗು ಒರೆಸಿಕೊಳ್ಳುತ್ತ ಒಂದು ಚಿತ್ರರೂಪೀ ಶಬ್ದದ ಸುತ್ತ ಏನನ್ನೋ ಬಿಡಿಸಿದ.

''ಇದೊಂದು ಬಾದಷಾಹನ ಹೆಸರು'' ಎಂದ ಅವನು ಒಂದು ಛತ್ರಿಯ ಚಿತ್ರ ಬಿಡಿಸಿದ. ಉತ್ತರ ಇಜಿಪ್ತದ ಕಿರೀಟ ಕೆಂಪದು. ದಕ್ಷಿಣದ್ದು ಬಿಳಿಯದು ಮತ್ತು ಫರಊನ ಸೂರ್ಯದೇವತೆ ಎಂದು ನಕಲು ಮಾಡುವವ ಅವಳಿಗೆ ತಿಳಿಸಿ ಹೇಳಿದ. ಸೂರ್ಯನಿಗಾಗಿ ನೀರುಗೋಳಿಯ ಚಿತ್ರ ಬಿಡಿಸಿ ಅದರ ಮಧ್ಯದಲ್ಲಿ ಒಂದು ಬಿಂದು ಇರಿಸಿದ ಹಾಗೂ ನೀರು ಕುಡಿಯಲೆಂದು ಎದ್ದ.

''ಸಯೀಫಾ ಮುತುಫೆನ್‌ದಲ್ಲಿ ನಲವತ್ತೆರಡು ಸಾಂಸ್ಕೃತಿಕ ಆಜ್ಞೆಗಳಿವೆ.'' ಎಂದು ಶೋಷ ಹೇಳಿದ. (ಏಸುಕ್ರಿಸ್ತ ಇಲ್ಲಿಂದ ಹೋಗಿ ಕೇವಲ ಹತ್ತು ಆಜ್ಞೆ ನೀಡಿದ... ಅದು ಅವನ ಕೃಪೆ.. ಪದ್ಮಾ....ಹೀಗೆಂದು ಯೋಚಿಸಿದಳು...)

''ಮತ್ತು ನಮ್ಮ ಇಪ್ಪತ್ತು ರಾಜ ಮನೆತನಗಳ ವಿಷಯಗಳೂ ಇವರಲ್ಲಿವೆ. ಕಳೆದ ಮೂರು ಸಾವಿರ ವರ್ಷಗಳವರೆಗೆ ಇಜಿಪ್ತದಲ್ಲಿ ಆಳರಸರಾಗಿದ್ದರು ಅವರೆಲ್ಲ..''

''ಸಾಹೇಬ''–ಎಂದು ಓರ್ವ ಲಿಪಿಕಾರ ಹೇಳುತ್ತ ''ನನಗೆ ಹೋಗಗೊಡಿ. ನನಗೆ ತುಂಬ ದೂರ ಹೋಗಬೇಕಾಗಿದೆ. ಹೆಂಡತಿಗೆ ಜಡ್ಡಾಗಿದೆ. ನಿನ್ನೆಯ ಹಣ ಸಿಗುತ್ತದೆಯೇ.... ?''

''ಎಷ್ಟು ಸಲ ತೆಗೆದುಕೊಳ್ಳುವೆ ? ಮುಂಗಡ ಕೂಡ ತೆಗೆದುಕೊಂಡಿರುವೆ.'' ಶೋಷ ಸಿಟ್ಟಿನಿಂದ ಹೇಳಿದ.

''ಸಾಹೇಬ, ನನಗೂ ಕೆಲ ಹಣ ಸಾಲವಾಗಿ ಕೊಡಿ. ನನ್ನ ಮಗ....'' ಎಂದು ಎರಡನೆಯವನೂ ಬೇಡಿಕೊಂಡ. ಆಹ !.... ಇದು ಪ್ರಾಚೀನ ಇಜಿಪ್ತದ ಸಂಸ್ಕೃತಿ... ಪದ್ಮಾ ಅಲ್ಲಿಂದ ಎದ್ದು ಛಜ್ಜಾದಲ್ಲಿ ಬಂದಳು. ಶೋಷ ನಕಲು ಮಾಡುವವರ ಸಮಸ್ಯೆ ಮುಗಿಸಿ ಹೊರಗೆ ಬಂದ. ಅವನ ಕೈಯಲ್ಲಿ ಒಂದು ಕಾಗದವಿತ್ತು. ನಿನ್ನ ಆಸಕ್ತಿಗಾಗಿ ಸಯಿಫಾ ಮತೂಫೇನ್‌ನ ಹಸ್ತಪ್ರತಿಯಿಂದ ಒಂದು ಪುಟ ತೆಗೆದು ತಂದಿದ್ದೇನೆ. ಅವನು, ಪದ್ಮಾಳನ್ನು ಸಿಟ್ಟಿಗೇಳಿಸಲು ಮುಗುಳ್ನಗೆಯೊಂದಿಗೆ ಹೇಳಿದ– ''ಅದರ ಶೀರ್ಷಿಕೆ ಹೀಗಿದೆ–ಒಂದು ಶವ ಜೀವಂತವಾಗಿ ಆತ್ಮದ ಅನ್ವೇಷಣೆಯಲ್ಲಿ ತಿರುಗಾಡುತ್ತದೆ.... ಕೇಳು....''

ಅವನು ಪಡಸಾಲೆಯಲ್ಲಿಯ ಕಿಟಕಿಗೆ ಆತು ಓದತೊಡಗಿದ–''ನಿನ್ನ ಮೇಲೆ ಪ್ರಕಾಶ ಉದಯವಾಗುತ್ತಲಿದೆ. ಆದರೆ ನಿನ್ನ....ನಗುತ್ತ ಹೊರಗೆ ಬಂದೆ. ನಿನ್ನ ಹಡಗು ಸಫೀನಾಕ್ಕೆ ಬಂದು ತಲುಪಿತು.... ಅಲ್ಲಿಯ ವಾಡೆಗಳಲ್ಲೆಲ್ಲ ಶಬ್ದದಿಂದ ಪ್ರತಿಧ್ವನಿಗೊಂಡಿತು.... ಕಾಲ ಉರುಳುತ್ತವೆ. ಸಮಯ ನಿನ್ನ ಕೆಳಗೆ ತನ್ನ ಬೂದಿ ಚೆಲ್ಲುತ್ತ ಹಾರಿಸುತ್ತಲಿರುತ್ತದೆ... ಲಕ್ಷಾಂತರ ವರ್ಷಗಳು ಕಳೆದು ಹೋಗಿವೆ... ಇನ್ನೂ ಲಕ್ಷಾಂತರ ಕಳೆಯಲಿವೆ.... ಅನೋತಿ ಊಟ ಬಡಿಸು...''

''ನೀನು ಊಟ ಬಹಳ ಜಲ್ದಿ ಮಾಡುತ್ತಿಯಾ ?''ಎಂದು ಪದ್ಮಾ ಕೇಳಿದಳು.

''ಹಾಂ ! ಇಲ್ಲದಿದ್ದರೆ ಸೊಳ್ಳೆ ಹಾಗೂ ದೀಪದ ಹುಳುಗಳು ತುಂಬ ತೊಂದರೆ ಕೊಡುತ್ತವೆ.''

''ನೀನು ಇಂದು ಸಂಜೆ ಏನು ಮಾಡಲಿರುವೆ ?''

''ಅನೋತಿ....'' ಶೋಷ ಮತ್ತೆ ದಾಸಿಯನ್ನು ಕರೆದು ಹೇಳಿದ– ''ಚಷ್ಮ ಹೋರಸ್ ಎಷ್ಟು ಗಂಟೆಗೆ ಆರಂಭವಾಗುತ್ತದೆಂಬುದನ್ನು ಹೋಗಿ ತಿಳಿದುಕೊಂಡು ಬಾ....''

''ಆರಂಭವಾಗಿದೆ....''ಅನೋತಿ, ಒಳಗಿನಿಂದಲೇ ಉತ್ತರ ನೀಡಿದಳು.

''ಹಾಗಾದರೆ ಈಗ ಊಟ ಬೇಡ, ನಡೆ ಹೋಗೋಣ'' ಎಂದು ಅವನು ಮನಸ್ಸಿಲ್ಲದ ಮನಸ್ಸಿನಿಂದ ಹೇಳಿ–''ನಿನಗೆ ಹೊರಗೆ ಅಡ್ಡಾಡಿಸಿಕೊಂಡು ಬರುತ್ತೇನೆ. ನಾನು ಈ ತಮಾಷಾ ಎಷ್ಟು ಬಾರಿ ನೋಡಿದ್ದೇನೆಂದರೆ, ಬೇಜಾರು ಬಂದು ಹೋಗಿದೆ...ನಡೆ...'' ಎಂದು ಮತ್ತೆ ಹೇಳಿದ.

ಅವರು ಛಜ್ಜಾದಿಂದ ಇಳಿದು ಮಬ್ಬುಗತ್ತಲಾಗಿದ್ದ ದಾರಿಯಲ್ಲಿ ಬಂದರು. ಕೆಲ ಜನ ಥೇಟರ ಕಡೆಗ ಹೊರಟಿದ್ದರು. ಹೆಲೊ ಪೋಲಸ್ ಬಹು ದೊಡ್ಡ, ವಿಶಾಲವಾದ ಪ್ರದೇಶವಾಗಿತ್ತು. ಅರ್ಧ ಮೈಲು ನಡೆದ ನಂತರ ದಾರಿಯಲ್ಲಿ ಒಂದು ಗೋರಿ ಕಾಣಿಸಿತು. ಅದರೊಳಗಿಂದ ಊದು ಬತ್ತಿ ಮತ್ತು ಲೋಬಾನದ ಹೊಗೆ ಮತ್ತು ವಾಸನೆ ಹೊರಗೆ ಬರುತ್ತಲಿತ್ತು.

''ಇಲ್ಲೇನು ನಡೆಯುತ್ತಲಿದೆ ?'' ಎಂದು ಪದ್ಮಾ ಕೇಳಿದಳು.

''ಯಾವುದೋ ಒಂದು ಮಹಾ ಆತ್ಮಕ್ಕೆ ಕಾಣಿಕೆ ಸಲ್ಲಿಸಲಾಗುತ್ತಲಿದೆ... ನೋಡ್ತಿಯೇನು ?'' ಎಂದ ಅವನು ಪದ್ಮಾಳ ಕೈ ಹಿಡಿದು ಗೋರಿಯಿದ್ದ ಸಂದಿಯಲ್ಲಿ ಕರೆದುಕೊಂಡು ಹೋದ. ''ಇಂದು ಯಾರ ರಾತ್ರಿಯಾಗಿದೆ ?'' ಎಂದು ಅವನು ಅಲ್ಲಿದ್ದ ಓರ್ವನಿಗೆ ಕೇಳಿದ.

''ಫರಊನ ನಫರ ಕಾರಅ'' ಎಂದು ಆ ಮನುಷ್ಯ ಉತ್ತರಿಸಿದ ಹಾಗೂ ಮಂತ್ರ ಪಠಿಸುವಲ್ಲಿ ನಿರತನಾದ ಶೋಷ ಮತ್ತು ಪದ್ಮಾ ಗೋಡೆಗೆ ಆತು ನಿಂತು ಕೊಂಡರು. ಒಳಗೆ ಗೋರಿಯ ನೆಲಮನೆಯಲ್ಲಿ ನಫರಕಾರಅ, ತೆರೆದ ಶವದ ಪಟ್ಟಿಗೆಯನ್ನು ಗೋಡೆಗೆ ಆತು ನಿಲ್ಲಿಸಲಾಗಿತ್ತು. ಮಲ್ಲು ಮಲ್ಲಿನ ಬಟ್ಟೆಯಲ್ಲಿರಿಸಿದ್ದ ಮಮಿ ಅತ್ಯಂತ ಜೀವಂತನಾಗಿ ತೋರುತ್ತಿತ್ತು. ಮೂಸೂಫ ಸತ್ತು ಬಹಳ ಕಾಲವಾಗಿಲ್ಲ. ಬಹುಶಃ ಒಂದು ಸಾವಿರ ವರ್ಷವಾಗಿರಬೇಕು, ಅಷ್ಟೇ. ಶೋಷ, ಪದ್ಮಾಳೊಂದಿಗೆ ಮಾತಾಡುತ್ತ ಹೇಳಿದ.

ಅರ್ಚಕನ ದನಿ ಪ್ರತಿಧ್ವನಿಸಿತು–''ಓ ! ಬಾದಷಾಹ, ನಫರಕಾರಅ ! ಚಷ್ಮ ಹೊರಸ್ ಸ್ವೀಕರಿಸು ಮತ್ತು ನಿನ್ನ ಬಾಯಿವರೆಗೂ ತೆಗೆದುಕೊಂಡು ಹೋಗು.'' ಎಂದು ಹೇಳಿ ಅವನು ರೊಟ್ಟಿ ಮತ್ತು ಸೆರೆಯ ಬಟ್ಟಲನ್ನು, ಬಂಗಾರದ ತಟ್ಟೆಯಲ್ಲಿರಿಸಿ ಮಮಿಯ ಎದುರಿಗೆ ಇರಿಸಿದ. ಮತ್ತೆ ಹೇಳಿದ–''ಓ ! ನಫರಕಾರಅ, ಜಗತ್ತು ಮತ್ತು

ಪ್ರಕಾಶ ಕಳೆದು ಹೋಗಿದೆಯೋ, ಏನೆಲ್ಲ ನಿನ್ನ ಕಡೆಯಿಂದ ಬಂದಿದೆಯೋ ಅದರ ಮೇಲೆ ಕಣ್ಣು ಹಾಯಿಸಿ, ಚಸ್ಮ ಹೊರಸ್‌ದ ಕರುಣೆಯಿಂದ ನಿನ್ನ ಬಾಯಿ ತೆರೆ. ಓ, ಬಾದಷಾಹ ನಫರಕಾರಲಿ....''

ಪೂಜಾರಿಗಳ ಈ ರೀತಿಯ ವರ್ತನೆಯಿಂದ ಉಸಿರು ಗಟ್ಟಿ ಹೋಗುತ್ತಲಿತ್ತು. ಶೋಷ ಹೊರಗೆ ಕರೆತಂದು ಕೇಳಿದ–''ಇನ್ನು ನಾಟಕವನ್ನೂ ನೋಡುವೆಯೇನು ?''

''ಅದರಲ್ಲಿಯೂ ಇದೇ ಚಸ್ಮ ಹೊರಸ್‌ದ ಕಥೆಯೇ ಇರಬೇಕು....?'' ಪದ್ಮಾ ಅಂಜುತ್ತ ಕೇಳಿದಳು.

''ಅಷ್ಟು ದೂರದಿಂದ ನಡೆದು ಬಂದಿರುವೆ ಎಂದಾಗ ಅದನ್ನಷ್ಟು ನೋಡು....''ಎಂದ.

ಶೋಷ ಮೌನವಾಗಿ ಮತ್ತೆ ಅವಳೊಂದಿಗೆ ರಸ್ತೆ ಕಡೆಗೆ ಬಂದ. ಪಾಪ, ನನಗೆ ಎಂಟರಟೇನ್ ಮಾಡಬೇಕೆಂದು ತಾನು ಎಷ್ಟೊಂದು ಬೋರ ಅನುಭವಿಸುತ್ತಿದ್ದಾನೆ. ಆದರೆ ಇಷ್ಟೊಂದು ಡಿಪ್ರೆಸಿಂಗ್ ಕತ್ತಲು ತುಂಬಿದ ಸಂಜೆಯನ್ನು ಯಾವ ರೀತಿ ಕಳೆಯಬೇಕು.... ಥೇಟರ್ ಅಲ್ಲಿಂದ ಬಹಳ ದೂರವಿರಲಿಲ್ಲ.[1] ಡ್ರಾಮಾ ಆರಂಭವಾಗಿ ಬಹಳ ಹೊತ್ತಾಗಿತ್ತು.

ಸ್ಟೇಜಿನ ಮೇಲೆ ಹೊರಸ್, ಶೋಷ, ಸೇತ ಅವಸಾಯರಸ್ ದೇವತೆಗಳು ಹಾಗೂ ಕೆಲ ಗೌಳಿಗಳ, ಕಟುಗರು ಮತ್ತು ಹುಡುಗರು ಇದ್ದರು. ಹೊರಸ್ ಹುಡುಗರಿಗೆ ಹೇಳಿದ–''ನನ್ನ ಜಗತ್ತನ್ನು ನನ್ನ ಕಣ್ಣೆದುರಿಗೆ ಸಮೃದ್ಧಗೊಳಿಸಿರಿ, ಸ್ಥಾಪನೆ ಮಾಡಿರಿ...'' ಆ ಕೂಡಲೇ ಪರದೆ ಕೆಳಗೆ ಬಿತ್ತು, ಎರಡನೆಯ ದೃಶ್ಯ ಆರಂಭ ವಾಯಿತು. ಕೆಂಪು ಮಣಿಯ ಮಾಲೆಯನ್ನು ಸ್ಟೇಜ ಮೇಲೆ ತರಲಾಯಿತು. ಹೊರಸ್ ಸೇತನಿಗೆ ಹೇಳಿದ– ''ನಾನು ನನ್ನ ಕಣ್ಣನ್ನು ಅತ್ತ ಮಾಡಿದ್ದೇನೆ, ಅವು ನಿನಗೆ ಜಪ ಮಾಲೆಯಾಗಿದ್ದವು. ನನ್ನ ಕಣ್ಣನ್ನು ಕೊಡು, ನಿನಗಾಗಿ ಅವು ಜಪಮಾಲೆಯ ಕೆಂಪು ಮಣಿಯ ಹಾಗೆ ಕೆಂಪಾಗಿದ್ದವು. ನಿನ್ನ ಬಾಯಲ್ಲಿ ಹೋಗಿ ಕೆಂಪು ರಕ್ತದ ಹಾಗೆ ಕೆಂಪಾಗಿದ್ದವು....'' ಪದ್ಮಾ ಶೋಷ ನೊಂದಿಗೆ ಮಾತಾಡುತ್ತ ಕೇಳಿದಳು–''ಏನು ನಡೆಯುತ್ತಲಿದೆ ?''

''ಹೊಳೆ ಹೊಳೆವ ಆಕಾಶದ ದೇವತೆ ಹೊರಸ್‌ನನ್ನು, ಬಿರುಗಾಳಿಯ ಸೇತ ಕುರುಡನನ್ನಾಗಿ ಮಾಡಿದ್ದ. ಈ ಬಿರುಗಾಳಿಯ ದೇವತೆ ಆ ಕಣ್ಣುಗಳನ್ನು ಹೊರಸ್‌ನಿಗೆ ಮರಳಿ ಕೊಡುತ್ತಿದ್ದಾನೆ. ಅಂದರೆ, ಬಿರುಗಾಳಿಯ ನಂತರ ಮತ್ತೆ ಹವಾಮಾನ ಸಾಮಾನ್ಯವಾಗುತ್ತದೆ, ಆಹ್ಲಾದಕರವಾಗುತ್ತದೆ....''

ಪದ್ಮಾ ಯೋಚಿಸಿದಳು– ಇಜಿಪ್ತದಲ್ಲಿ ಮರಳ ಬಿರುಗಾಳಿಯಿಂದ ಕುರುಡ ರಾಗುವ ರೋಗ ಎಷ್ಟೊಂದು ಪುರಾತನವಾಗಿದೆ. ಅದರ ಪರಿಣಾಮುಗಳು....

---

1. ಡ್ರಾಮಾ, ಫರಊನ ಸೆಸು ತರಸ್ ಪ್ರಥಮನ ಸಿಂಹಾಸನಾರೋಹಣದ ಸಮಾರಂಭದಂದು ಮೊದಲಿಗೆ ಇದನ್ನು ಸ್ಟೇಜು ಮಾಡಲಾಗಿತ್ತು. ಫ್ರಾನ್ಸ್‌ದ ಬಾಸ್ತಾನಶನಾಸುಗೆ ಅದರ ಸಾಮುಗ್ರಿ ರಾಸಶಮರಿಯಲ್ಲಿ ನಡೆದ ಉತ್ಖನನದಲ್ಲಿ ಸಿಕ್ಕಿತು.

''ಈ ನಾಟಕ ಇನ್ನೂ ಬಹಳ ಹೊತ್ತಿನವರೆಗೆ ಸಾಗುತ್ತದೆ. ಚಂದಿರ ಆಕಾಶ, ಭೂಮಿಯನ್ನೆಲ್ಲ ಬೆಳಗುತ್ತಿದ್ದಾನೆ. ಸೊಗಸಾದ ಬೆಳುದಿಂಗಳಿದೆ. ನೈಲ ನದಿಯತ್ತ ಹೋಗೋಣವೆ ?....'' ಎಂದು ಶೋಷ ಹೇಳಿದ.

''ನೀನು ತಪ್ಪು ಭಾವಿಸದಿದ್ದರೆ ಶೋಷ !....ನಾನು ಈಗ ಮನೆಗೆ ಹೋಗಿ ಮಲಗುತ್ತೇನೆ...ಬೆಳಿಗ್ಗೆ ಎಂಟು ಗಂಟೆಗೆ ಆಫೀಸ....''ಎಂದಳು.

''ತುಂಬ ಒಳ್ಳೇದು....'' ಎಂದು ಶೋಷ ಹೇಳಿದ. ಅವರು ಮನೆ ತಲುಪಿದರು. ಗುಲಾಮು, ಊಟದ ಟೇಬಲ್ಲಿನ ಹತ್ತಿರ ಅವರಿಗಾಗಿ ಕಾಯುತ್ತಿದ್ದ.... ಡಿನ್ನರದ ಸಮಯದಲ್ಲಿ ಪದ್ಮಾ ಅತಿಥೇಯನನ್ನು ಕೇಳಿದಳು– ''ಶೋಷ, ನನ್ನನ್ನು ನೀನು ಇಬ್ರಾನಿಗಳ ಗುಪ್ತಚಾರಳೆಂದೇಕೆ ತಿಳಿದೆ ? ಏನು, ಈ ಜನ ನಿಮಗೆ ಒಂದು ಸಮಸ್ಯೆಯಾಗಿದ್ದಾರೆಯೇ ?''

''ಹಾಂ !....'', ಶೋಷ ಮೊನದ ಮುಳ್ಳು ತೆಗೆಯುತ್ತ ಉತ್ತರಿಸಿದ. ಪಂಜಿನ ಬೆಳಕು ಅವನ ಸುಂದರ ಮುಖದ ಮೇಲೆ ತೇಲಾಡುತ್ತಿತ್ತು.

''ಆದರೆ ನಮ್ಮ ಹಿರಿಯರು, ಆಜ್ಞಾ ಮಾಡುವವರು ಈ ಸಮಸ್ಯೆಯನ್ನು, ಮಾನವೀಯ ತಳಹದಿಯ ಮೇಲೆ ಬಗೆಹರಿಸಲು, ಒಂದು ಉಪಾಯ ಹುಡುಕಿದ್ದಾರೆ. ಸಮಸ್ತ ಇಬ್ರಾನಿ ಗಂಡಸರ ಜೀವ ತೆಗೆದುಕೊಳ್ಳುವಂಥ, ಯಾವುದೇ ಪಾರಿಶ್ರಮಿಕ ಕೊಡದೆ ಅವರಿಂದ ದುಡಿಸಿಕೊಳ್ಳುವ ಉಪಾಯ.... ಇಲ್ಲಿರುವ ಧರ್ಮಶಾಲೆಗಳನ್ನು ನೀನು ನೋಡುತ್ತಿದ್ದೀಯಲ್ಲ, ಇವುಗಳಲ್ಲಿಯ ಬಹಳಷ್ಟನ್ನು ಅವರೇ ನಿರ್ಮಿಸಿದ್ದಾರೆ....ಈ ಬಡಪಾಯಿಗಳು ಲಕ್ಷಗಟ್ಟಲೆ ಮಣದ ಕಲ್ಲುಗಳನ್ನು ಮೈಲುಗಟ್ಟಲೆ ದೂರದಿಂದ ಹೊತ್ತು ತರುತ್ತಾರೆ ಹಾಗೂ ರಕ್ತ ಕಾರುತ್ತ ಸತ್ತು ಹೋಗುತ್ತಾರೆ. ಬಡಪಾಯಿ, ಮೊಖಾಯಿಲ್.... ನದಿ ತೀರದ ಮೇಲೆ ಕಸ್ಟಮ್ಸ್ ಕಚೇರಿಯಲ್ಲಿ ಮುನ್ಷಿ ಕೆಲಸ ಸಿಕ್ಕಿತ್ತು. ತಾನು ಪಾರಾಗಿ ಹೋಗಬಹುದೆಂದು ಯೋಚಿಸಿದ್ದ. ಆದರೆ ಅವನ ಹೆಸರೂ ಪಟ್ಟಿಯಲ್ಲಿ ಬಂದಿದೆ....''

''ನಿನ್ನಿಂದ ಏನೂ ಮಾಡಲು ಸಾಧ್ಯವಿಲ್ಲವೆ ?''

''ನಾನೊಬ್ಬನೇ....ಒಂದು ಇಡೀ ಸರಕಾರದ, ವ್ಯವಸ್ಥೆಯ ವಿರುದ್ಧ ಏನು ಮಾಡಬಲ್ಲೆ...?'' ಅವನು ನಿರಾಶೆಯ ಉತ್ತರ ನೀಡಿದ.

ಊಟವಾದ ನಂತರ ಶೋಷ ಅವಳನ್ನು ಅಂತಸ್ತಿನ ಒಂದು ದೊಡ್ಡ ಕೋಣೆಗೆ ಕರೆದುಕೊಂಡು ಹೋದ. ಅದರ ನೆಲ, ಹಳದಿ ಬಣ್ಣದ ಕಲ್ಲುಗಳಿಂದ ಶೋಭಿತವಾಗಿತ್ತು. ಮಧ್ಯದಲ್ಲಿ ಒಂದು ಕಪ್ಪು ಹಾಗೂ ಹೊಳೆವ ಕಟ್ಟಿಗೆಯ ಕಾಂಡ್ ಟೇಬಲ್, ಇನ್ನೊಂದೆಡೆ ಕರಕುಶಲದಿಂದ ಕೂಡಿದ ಸಂದೂಕುಗಳು, ಡ್ರೆಸಿಂಗ್ ಟೇಬಲ್‌ದ ಕನ್ನಡಿ ಎದುರಿಗೆ ದಂತದ ಬಾಚಣಿಗೆಗಳು, ಅದೇ ರೀತಿಯ ಕಾಡಿಗೆ ಡಬ್ಬಿಗಳು, ಶೃಂಗಾರದ ಇನ್ನುಳಿದ ಸಾಮಾನುಗಳು....

''ಇದು ನನ್ನ ತಂಗಿಯ ಕೋಣೆ'' ಎಂದು ಶೋಷ ಹೇಳುತ್ತ ಮತ್ತೆ–''ಇಲ್ಲಿ ನೀನು ನಿಶ್ಚಿಂತೆಯಿಂದ, ಸುಖವಾಗಿ ಮಲಗು. ನಿನಗೆ ಯಾವಾಗ ಏಳಬೇಕು ಅನ್ನಿಸುತ್ತದೆಯೋ

ಬೆಳಗ್ಗೆ ಆವಾಗ ಏಳಬಹುದು. ಅನೋತಿಗೆ ಕರೆ, ಆ ಗುಲಾಮಳು ತಿರುವಿನಲ್ಲಿ ಮಲಗಿರುತ್ತಾಳೆ....ಶುಭರಾತ್ರಿ....''

''ಶುಭರಾತ್ರಿ ಶೋಷ....'' ಎಂದಳು.

ಅವನು ತಲೆ ಬಾಗಿಸಿಕೊಂಡು ಅಲ್ಲಿಂದ ಸ್ಟೇರಕೇಸ್ ಕಡೆ ಹೊರಟು ಹೋದ.

ಪಲ್ಲಂಗದ ಮೇಲೆ ಮಲಗಿಕೊಂಡು ಬಹಳ ಹೊತ್ತಿನವರೆಗೆ ಹೊರಗೆ ನೋಡುತ್ತಲಿದ್ದಳು. ಕಿಟಕಿಯ ಕೆಳಗೇನೇ ವಿಶಾಲವಾದ ಸರೋವರ, ಅದರಲ್ಲಿ ಅಸಂಖ್ಯಾತ ಕಮಲಗಳು ಅರಳಿದ್ದವು....

ದೂರ ದೂರದವರೆಗೆ ಬೆಳದಿಂಗಳು ಹರಡಿತ್ತು.... ಅತ್ಯಂತ ಆಹ್ಲಾದಕರ ವಾತಾರವಣ, ಮನಸ್ಸನ್ನು ಮುದಗೊಳಿಸುವ ಹವೆ, ಸರೋವರದ ಕಮಲಗಳ ಮೇಲೆ ಹಾದು ಬರುವ ತಂಪು ಗಾಳಿ–ಎಲ್ಲ ಸೇರಿ ಇಡೀ ರಾತ್ರಿಯನ್ನು ಮನೋಹರ ಗೊಳಿಸಿತ್ತು...ಆಕೆ ಇಂಥದರಲ್ಲಿ ಒಂದು ಚುಟಕಿ ನಿದ್ರೆ ಮಾಡಿದ್ದಳು.... ಅಷ್ಟರಲ್ಲಿ ಸೊಳ್ಳೆಗಳ ರಾಗಾಲಾಪ ಎಚ್ಚರಿಸಿಬಿಟ್ಟವು....ಒಂದು ದೊಡ್ಡ ಸೊಳ್ಳೆ ಆಕೆಯ ಮೂಗಿನ ಮೇಲೆ ಕುಳಿತಿತ್ತು.... ಆಕೆ ಕೊಡವಿಕೊಂಡು ಎದ್ದು ಕುಳಿತಳು....ಹಾಗೂ ಕಿಟಕಿಯಿಂದ ಹೊರಗೆ ಹಣಿಕಿ ನೋಡತೊಡಗಿದಳು.... ಕೆಲವೇ ಹೊತ್ತಿನಲ್ಲಿ ಕೊಳಲ ಸ್ವರ ಮೌನವಾಗಿದ್ದ ವಾತಾವರಣದಲ್ಲಿ ಜೋರಾಗಿ ಕೇಳಿಸತೊಡಗಿತು.... ಆಕೆ ಕೆಳಗೆ ಬಾಗಿ ನೋಡಿದಳು.... ಅವನು ಶೋಷನಾಗಿದ್ದ.... ಸರೋವರದ ಪಾವಟಿಗೆಗಳ ಮೇಲೆ ಚಂದಿರನಿಗೆ ಎದುರಾಗಿ ಕುಳಿತು ಕೊಳಲು ಬಾರಿಸುತ್ತಿದ್ದ....

ಇವನೆಲ್ಲೊ ಬಡಪಾಯಿ, ಪ್ರೇಮದಲ್ಲಿ ಸಿಲುಕಿಕೊಂಡಿಲ್ಲ ತಾನೇ....ನಿಜವಾಗಿ ಪ್ರೇಮ ಪಾಶದಲ್ಲಿ ಸಿಲುಕಿಕೊಂಡಿದ್ದಾನೆ....ಅರ್ಧ ರಾತ್ರಿಯಲ್ಲಿ ಹೀಗೆ ಕುಳಿತು, ಮೂರ್ಖರ ಹಾಗೆ ಕೊಳಲು ನುಡಿಸುತ್ತಿದ್ದಾನೆ....ಈಗ ಇಲ್ಲಿಂದ ಬೆಳಗುವ ಮುಂಜಾನೆಯೇ ಓಡು....

ಹೆಲಿಯೋ ಪೊಲಸ್‌ದಿಂದ ಊರ ಹೊರಗೆ ಹೋಗುವ ದಾರಿ ಹೇಗೊ ನೆನಪಿದೆ. ಅಲ್ಲಿಂದ ಕುರಿ ಹಿಂಡುಗಳಿರುವ ಸ್ಥಳದವರೆಗೆ ಹೋಗಲು ಅರ್ಧ ಗಂಟೆ ಬೇಕು. ರೊಕೆಟ್‌ದಲ್ಲಿ ಕುಳಿತರೆ ಏಳು ಗಂಟೆ ಹೊತ್ತಿಗೆ ಮನೆ. ಈ ಲೆಕ್ಕ ಹಾಕಿ ಆಕೆ ಮತ್ತೆ ಮಲಗಿದಳು. ಕೆಲ ಹೊತ್ತು ಶೋಷನ ಕೊಳಲು ಕೇಳಿದಳು....ನಂತರ ಆಕೆಗೆ ಗಾಢವಾದ ನಿದ್ದೆ ಆವರಿಸಿತು....

ಒಂದು ಗಂಭೀರವಾದ ಧ್ವನಿ ಆಕೆಯನ್ನು ಬೆಳಗಿನ ಐದು ಗಂಟೆಗೇನೇ ಎಚ್ಚರಗೊಳಿಸಿತು.... ಆಕೆ ತೆಕ್ಕೆಯಿಂದ ತಲೆಯೆತ್ತಿ ಹೊರಗೆ ನೋಡಿದಳು.... ಸರೋವರದ ದಂಡೆಯಲ್ಲಿ ಓರ್ವ ಅಜಾನುಬಾಹು ವ್ಯಕ್ತಿ ಅಲ್ಲಾನನ್ನು ಕುರಿತು ಪ್ರಾರ್ಥನೆ ಸಲ್ಲಿಸುತ್ತಿದ್ದ....

ಆತೂನಿಗೆ ಜಯವಾಗಲಿ
ಈ ಪ್ರಪಂಚ ಸೃಷ್ಟಿಸಿದ
ಆತೂನಿಗೆ ಜಯವಾಗಲಿ

ಖರಪರನಿಗೆ
ಜಯವಾಗಲಿ
ಇಡೀ ಜೀವಗಳ ಹೃದಯದಲ್ಲಿರುವ
ತಾ....ಏನು
ಯೋಚಿಸುತ್ತಾನೋ ಅದು ಆಗುತ್ತಾನೆ....
ತನ್ನ ಕಲ್ಮೆ (ಸ್ತೋತ್ರ)ಯಿಂದ ಅವನು
ಈ ಪ್ರಪಂಚ ಸೃಷ್ಟಿಸಿದ....ಆತೂನಿಗೆ ಜಯವಾಗಲಿ
ಖರಪರನಿಗೆ ಜಯವಾಗಲಿ
ಅನ್ನದಾತಾ....
ಸಮಸ್ತ ಸೃಷ್ಟಿಯನ್ನು ತನ್ನ ಚೈತನ್ಯದಲ್ಲಿ ಮಿಯ್ಯಿಸಿದ್ದಾನೆ....
ಆತನ ಕರುಣೆಯಿಂದ ನೈಲ ನದಿ ಹರಿಯುತ್ತಿದೆ....
ಅವನೇ ರಹೀಮು....ಕರೀಮು....ಅಲ್ಲಾ....
ನದಿಯ ಮೀನು ಮತ್ತು ಆಕಾಶದ ಪಕ್ಷಿಗಳ ಜೀವಂತವಿಡುವಾತ,....
ಕ್ರಿಮಿ ಕೀಟಗಳ, ಸಕಲಚರಾಚರದ
ಸಂರಕ್ಷಕ....
ನನ್ನ ಮೇಲೆ ಹೊಳೆ ಹೊಳೆವ ನಕ್ಷತ್ರ....
ನಿನ್ನ ಹೊರತಾಗಿ ಅನ್ಯ ದೇವರಿಲ್ಲ....

ಭಗವಂತನ ಬೆಳಕು ಕ್ಷಿತಿಜದ ತುಂಬ ಹರಡತೊಡಗಿತು.... ಶೋಷನ ಪುರೋಹಿತ ಅಲ್ಲೊಂದು ಇಲ್ಲೊಂದು ಹೆಜ್ಜೆ ಇಡುತ್ತ ಜಲ್ದಿ ಜಲ್ದಿ ಮಂದಿರದತ್ತ ಹೊರಟು ಹೋದ....ಅದರ ಕಟ್ಟಡ ದೂರದಿಂದ ಅಸ್ಪಷ್ಟವಾಗಿ ಗೋಚರಿಸುತ್ತಲಿತ್ತು....ಪದ್ಮಾ ತಲೆದಿಂಬಿನ ಕೆಳಗಿನಿಂದ ಬ್ಯಾಗ್ ಹೊರ ತೆಗೆದಳು.... ನಿನ್ನೆಯಿಂದ ಅವಳು ಚಹಾ, ಕಾಫಿ ಏನೊಂದೂ ಕುಡಿದಿರಲಿಲ್ಲ....ಹೀಗಾಗಿ ತಲೆನೋವು ಬಾಧಿಸುತ್ತಲಿತ್ತು.... ಬೆಳಗ್ಗೆ ಈ ಜನ ಬ್ರೆಕ್‌ಫಾಸ್ಟ್ ಏನು ಮಾಡುತ್ತಾರೋ ಏನೋ.... ಅಚ್ಚರಿಯ ವಿಷಯ....ಚಹಾ ಕಂಡು ಹಿಡಿವ ಪೂರ್ವದಲ್ಲಿ ಈ ಜನ ಹೇಗೆ ಜೀವಿಸುತ್ತಿದ್ದರೋ ಏನೋ....ಇಲ್ಲೆ ನೋಡಿ....ಶೋಷ ಅದೆಷ್ಟು ಚೆನ್ನಾಗಿಯೇ ಜೀವಿಸುತ್ತಿದ್ದಾನೆ.... ಚಹಾ....ಕಾಫಿ....ಸಿಗರೇಟ....ಸಿನೇಮಾ....ಟೆಲಿಫೋನ್....ಟೆಲಿವಿಜನ್....ವಿಮಾನ.... ಕಂಪ್ಯೂಟರ.....ಅಡ್ವರಟೈಜಿಂಗ್,....ಪಬ್ಲಿಕ್‌ರಿಲೇಷನ್ಸ್....ಜರ್ನಲಿಜಮ್....ಪಾಪ....ಇದರ ಬಗ್ಗೆ ಅವನಿಗೆ ಏನೊಂದೂ ತಿಳಿಯದು.... ಅವಳು ಮತ್ತೆ ಕೆಳಗೆ ಬಾಗಿ ನೋಡಿದಳು.... ಶ್ರೀಮಾನ್ ಶೋಷ ಸರೋವರದಲ್ಲಿ ಮುಳುಗು ಹಾಕುತ್ತಲಿದ್ದ....ನೀರಿನ ಬಿಂಬ ಮಹಲಿನ ಗೋಡೆಗಳ ಮೇಲೆ ನರ್ತಿಸುತ್ತಲಿತ್ತು....

ಈಜಾಡುತ್ತ ಈಜಾಡುತ್ತ ಶೋಷ ತಲೆಯೆತ್ತಿ ಮೇಲೆ ಕಿಟಕಿಯತ್ತ ನೋಡಿದ....ಹಾಗೂ ಮುಗುಳ್ನಕ್ಕ....ಮತ್ತೆ ಪಾವಟಿಗೆಗಳ ಮೇಲೆ ಹೋಗಿ ಒಂದು ಕೆಂಪಗಿನ ಕಮಲ ಹರಿದುಕೊಳ್ಳುವಲ್ಲಿ ಮಗ್ನನಾದ....

ಓಡಿರಿ.... ಓಡಿರಿ....ಜೋರಾಗಿ ಓಡಿರಿ....

ಪದ್ಮಾ ಗಡಬಡಿಸಿ ಎದ್ದಳು....ಚಪ್ಪಲಿ ಹಾಕಿಕೊಳ್ಳಲು ಮಲಗುವ ಕೋಣೆಯ ಬಾಗಿಲು ತೆರೆದಳು ಹಾಗೂ ಹೊರಗೆ ಹೊರಟಳು. ಇಡೀ ಮಹಲು ಇನ್ನೂ ಮೌನದಲ್ಲಿತ್ತು, ಎಲ್ಲ ದಾಸಿಯರು, ಗುಲಾಮರು ಪಡಸಾಲೆಯಲ್ಲಿ ಗಾಢ ನಿದ್ರೆಯಲ್ಲಿ ಹೇಗೆ ಬೇಕೆಂದರೆ ಹಾಗೆ ಮಲಗಿದ್ದರು. ಆಕೆ ಮೆತ್ತಗೆ ಸ್ಟೇರಕೇಸ್ ಇಳಿದು ಕೆಳಗೆ ಬಂದಳು. ಅಲ್ಲಿಂದ ನಡೆದು ಮೇನ್ ರೋಡಿಗೆ ತಲುಪಿ ಓಡತೊಡಗಿದಳು. ಓಣಿಯ ಮನೆಗಳ ಬಾಗಿಲುಗಳು ಇನ್ನೂ ತೆರೆದಿರಲಿಲ್ಲ. ಅಲ್ಲೊಬ್ಬ ಇಲ್ಲೊಬ್ಬರು ಕಸಗುಡಿಸುವ ವರು, ಭಂಗಿಗಳು ಪುಟ್ಟಿಯೊಂದಿಗೆ ಆ ಮಬ್ಬುಗತ್ತಲಲ್ಲಿ ಹೋಗುತ್ತಿರುವುದು ಕಾಣಿಸುತ್ತಿತ್ತು. ಆಕೆ ತೇಗುತ್ತ ಉಸಿರ್ಗರೆಯುತ್ತ ಊರ ಹೊರವಲಯ ತಲುಪಿದ ನಂತರವೇ ದಮ್ ಆರಿಸಿಕೊಂಡಳು. ಆದರೆ ದೊಡ್ಡ ಬಾಗಿಲು ಹಾಕಲಾಗಿತ್ತು. ಕೆಲ ಪಹರೆದಾರರು ಗೋಡೆಯ ಮೇಲೆ ಅಡ್ಡಾಡುತ್ತಿದ್ದರು. ಗಸ್ತಿ ತಿರುಗುತ್ತಿದ್ದರು. ನಾಲ್ಕೈದು ಜನ ಕಾವಲುಗಾರರು ಮಹಾದ್ವಾರದ ಮುಂದೆ ಕಾವಲು ನಿಂತಿದ್ದರು. ಅವರಲ್ಲೊಬ್ಬ ಕೂಗಿದ– ''ಓ ! ಛೋಕರಿ....ಎತ್ತ ಹೊರಟಿರುವೆ....?''

''ನದಿಯ ಕಡೆ....'' ಆಕೆ ಗಾಬರಿಯಿಂದ ಉತ್ತರಿಸುತ್ತ ಮತ್ತೆ ಹೇಳಿದಳು– ''ಮೀನು ಹಿಡಿಯಲು....''

''ಮಛಲೀಕಿ ಬಚ್ಚಿ....ಮೀನದ ಮಗಳೇ....ಇಂದು ಮಹಾರಾಜರು ಮರಳಿ ಬರಲಿದ್ದಾರೆ....ಅವರು ಬರುವುದಕ್ಕಿಂತ ಮೊದಲು ಈ ಮಹಾದ್ವಾರದ ಬಾಗಿಲು ಗಳನ್ನು ತೆರೆಯಲಾಗುವುದಿಲ್ಲ.''

''ಯಾವ ಸಮಯಕ್ಕೆ ಬರುತ್ತಾರೆ....?''

''ಯಾರಿಗೆ ಗೊತ್ತು ಯಾವ ಸಮಯಕ್ಕೆ ಬರುತ್ತಾರೆಂಬುದು. ಕೇಳುವವಳು ನೀನು ಯಾರು ?''

ಅವಳು ನಿರಾಶಳಾಗಿ ಒಂದು ಬಂಡೆಯ ಮೇಲೆ ಕುಳಿತಳು. ಕಾಫಿಯ ಚಟದಿಂದಾಗಿ ತಲೆನೋವು ಇನ್ನೂ ಹೆಚ್ಚುತ್ತ ಹೋಯಿತು. ರಥದಲ್ಲಿ ಬರುತ್ತಿರಬೇಕು ದೊರೆ....ಮೆಲ್ಲನೆ....ಬದ್ಮಾಷ್ ಫರಊನನ ಮಗ....ದೇವರು ಅವನನ್ನು ನಾಶ ಮಾಡಲಿ....ಯಾವಾಗ ಬರುತ್ತಾನೋ ಏನೋ....ಈ ಹೊತ್ತಿಗೆ ಆಗಲೇ ಹೋಗಿ, ಅನೋತಿ ಶೋಷನಲ್ಲಿ ಹಿಂದೂಸ್ತಾನಿ ನೃತ್ಯಗಾತಿ ಮಾಯವಾಗಿದ್ದಾಳೆಂದು–ಸುದ್ದಿ ಮುಟ್ಟಿಸಿರಬೇಕು. ಪಾಪ, ಅವನು ಏನೆಂದು ಭಾವಿಸುತ್ತಾನೇನೋ.... ನಾನು ಹೀಗೆ ಮಾಡಬಾರದಿತ್ತು....ಯಾರಿಗೆ ಗೊತ್ತು....ಈಗ ಅವನಿಗೆ, ನಾನು ಅಶೂರಿ ಗುಪ್ತ ಚಾರಳಿರಬೇಕೆಂದು ಭರವಸೆ ಉಂಟಾಗಿರಬೇಕು....ಒಂದು ವೇಳೆ ಹಿಡಿಸಿದರೆ.... ಭಯಂಕರ ಜೇಲುವಾಸ....ಮತ್ತು....ಮತ್ತು....ಓ ! ಮದರ ಆಫ್‌ಗಾಡ.... ಹೋಲಿ....ಮೇರಿ ಮದರ್ ಆಫ್‌ಗಾಡ....ಎಷ್ಟೋ ವರ್ಷಗಳ ನಂತರ ಬಿಟ್ಟೂ ಬಿಡದೆ ಆಕೆ ಎಲ್ಲ ಪ್ರಾರ್ಥನೆಗಳನ್ನು ಜೋರು ಜೋರಾಗಿ ಮಾಡತೊಡಗಿದಳು....

ಓರ್ವ ಧಾಂಡಿಗ ಪಹರೇದಾರ ಥಾಲು, ಕತ್ತಿ ಹಿಡಿದು ಝಳಪಿಸುತ್ತ ಅವಳ ಹತ್ತಿರ ಬಂದು ಕೇಳಿದ– ''ಓ ! ಛೋಕರಿ.... ಏನು ನೀನು ಭಗವಂತನ ಮಂದಿರದ ದೇವದಾಸಿ ಏನು....?''

ಪದ್ಮಾ ನಿರುಪಾಯಳಾಗಿ, ಹೌದು ಎನ್ನುವಂತೆ ತಲೆ ಅಲ್ಲಾಡಿಸಿದಳು.

"ಏನು ಹೇಳುತ್ತಿಯಾ ಭಾಯಿ ಖೌಫು...." ಎಂದು ಎರಡನೆಯ ಕಾವಲುಗಾರ ಹೇಳುತ್ತ ಅವಳನ್ನು ತುಂಬ ತೀಕ್ಷ್ಣವಾಗಿ ನೋಡಿ ಹೇಳಿದ– "ಇವಳು....ಅವಳೇ.... ನಿನ್ನೆ ರಾತ್ರಿ ಓರ್ವ ಕುರಿಗಾಹಿ ಹೇಳುತ್ತಿದ್ದ...." ಇಬ್ಬರೂ ಕಾವಲುಗಾರರು ಅವಳ ಎದುರಿನಲ್ಲಿ ಬಿದ್ದರು.

ಅದೇ ಹೊತ್ತಿಗೆ ದೊಡ್ಡ ಬಾಗಿಲುಗಳ ಕಬ್ಬಿಣ ಸರಪಳಿಗಳ ಖಡ್.... ಖಡ್....ಸಪ್ಪಳವಾಯಿತು....ನಗಾರಿ, ಬಾಜಾಬಜಂತ್ರಿ, ಕಾಳಿ, ಕಂಕಾಳಿ, ರಣಹಲಿಗೆ, ಭೇರಿಗಳ ನಾದ ಭೋರ್ಗರೆದವು....ಬಿಲ್ಲುಧಾರಿಗಳಾದ ಸೈನಿಕರು ಮಾರ್ಚ ಮಾಡುತ್ತ ಕುದುರೆ ಸವಾರರು, ರಾಜ್ಯದ ಹಿರಿಯ ಅಧಿಕಾರಿಗಳು, ಸದಸ್ಯರು ಸವಾರರ ಹಿಂದೆ ಹಿಂದೆ ಬರತೊಡಗಿದ್ದರು....ಅತ್ಯಂತ ಎತ್ತರದ ಕಿರೀಟ ಹಾಗೂ ರಾಜ ಉಡುಪು ಧರಿಸಿದ ಫರಊನ್–ಉತ್ತರ ಮತ್ತು ದಕ್ಷಿಣದ ಈ ದೊರೆ ತನ್ನ ರಥದಲ್ಲಿ ಸೆಟೆದು ಕುಳಿತಿದ್ದ. ನೋಡಲಿಕ್ಕೆ ತುಂಬ ಮೂರ್ಖನ ಹಾಗೆ ತೋರುತ್ತಿದ್ದ. ಆ ವಿಪರೀತ ಗದ್ದಲದಲ್ಲಿ ಪದ್ಮಾ ನುಸುಳಿ ಓಡಿ ಹೋಗಬೇಕೆಂದು ಬಯಸಿದಳು. ಆದರೆ ಓರ್ವ ಕಾವಲಿದ್ದ ಸಿಪಾಯಿ ಚತುರತೆಯಿಂದ ಅವಳು ಓಡಿ ಹೋಗದಂತೆ ತಡೆದ....ತುಂಬ ಗಲಾಟೆ ಗದ್ದಲ....ಕೂಡಿದ ಜನ ಅವಳ ಸುತ್ತ ಸುತ್ತುವರಿದರು....ಆಕೆಗೆ ಉಸಿರು ಗಟ್ಟತೊಡಗಿತು....ಆಕೆಗೆ ಮೂರ್ಛೆ ಬಂತು....

ಡಾಕ್ಟರ್ ಪದ್ಮಾ ಮೇರಿ ಅಬ್ರಾಹಮ್ ಕರಿನ್‌ಳಿಗೆ ಎಚ್ಚರ ಬಂದಾಗ ಸಂಜೆ ಯಾಗಿತ್ತು....ಆಕೆ ಖಸರ ಐನ್ ಅಲ್ಮಷ್‌ನ ಪ್ರಾರ್ಥನಾ ಮಂದಿರದಲ್ಲಿ ಒಂದು ವಜ್ರ, ವೈಢೂರ್ಯದಿಂದ ಸುಶೋಭಿತವಾದ ಸಿಂಹಾಸನದ ಮೇಲೆ ಅರ್ಧಮರ್ಧ ಎಚ್ಚರ ದಲ್ಲಿದ್ದಳು.... ಅಲ್ಲಿ ನಾನಾ ರೀತಿಯ ಸುಗಂಧದ್ರವ್ಯಗಳ ಹೊಗೆ ಹಾಕಲಾಗಿತ್ತು.... ಜನ ಸಮೂಹ–"ಆಮೂನರೂ....ತಾ...."ದ ಯಾತನೆಯ ಲ್ಲಿತ್ತು....ತಾ[1] ಏನಾಗಲಿದೆ ಎಂಬುದು ಯಾರಿಗೂ ಏನೊಂದೂ ತಿಳಿದಿರಲಿಲ್ಲ.... ಓ ! ದೇವರೆ, ಯಾವ ಸಮಯದಲ್ಲಿ ನಿನ್ನ ನಿರ್ಣಯ ತಿಳಿಸಲಿರುವೆ....ಸರಾಪಸ್ ....ಸರಾಪಸ್.... ಆಯಿದಫೋ....ತಾ....ತಾ....

ಡಾ. ಕರಿನ್‌ಳ ತಲೆ ಸುತ್ತತೊಡಗಿತು. ಆಕೆ ಮತ್ತೆ ಸಿಂಹಾಸನದಲ್ಲಿ ಮುದುಡಿ ಕೊಂಡಳು. ಎದುರಿಗೆ ಫರಊನ ಒಂದು ಕುರ್ಚಿಯ ಮೇಲೆ ಕುಳಿತು ಅತ್ಯಂತ ಉತ್ಸುಕತೆಯಿಂದ ಅವಳನ್ನು ದಿಟ್ಟಿಸಿ ನೋಡುತ್ತಲಿದ್ದ. ಓರ್ವ ಕೋಮಲ ಸ್ವಭಾವದ ವ್ಯಕ್ತಿ ಶೋಷನ ತಂದೆಯಿರಬೇಕೆಂದೆನಿಸುತ್ತಿತ್ತು. ಕೈಯಲ್ಲಿಯ ಚೀಲ ಸಂಬಾಳಿಸಿ ಕೊಂಡು ಬಾದಷಾಹನ ಹತ್ತಿರವೇ ಇದ್ದ ಒಂದು ಸ್ಟೂಲಿನ ಮೇಲೆ ಕುಳಿತಿದ್ದ. ರಾಜ ಮನೆತನದ ಪುರೋಹಿತ ಮತ್ತು ದೇವದಾಸಿಯರು ಬಡಪಾಯಿ ಪದ್ಮಾಳನ್ನು ತೆಕ್ಕೆಯ ಆಸರೆಗೆ

1. ತಾ ಪ್ರಾಚೀನ ಇಜಿಪ್ತದ ವಂಶಜರು. ತಾ ವಂಶಜರಲ್ಲಿ ಎಂಟು ಅವತಾರಗಳ ಕಲ್ಪನೆ ಮಾಡಲಾಗುತ್ತದೆ.

ಕೂಡಿಸಿದರು. ಆಕೆ ಬಳಲಿದ ದನಿಯಲ್ಲಿ ಹೇಳಿದಳು. ''ಥ್ಯಾಂಕ್‌ಯು.... ಬ್ಲ್ಯಾಕ್ ಕಾಫಿ....ಪ್ಲೀಜ....ನೋಶುಗರ್....''

''ಏನು ಹೇಳುತ್ತಿದ್ದಾಳೆ....?'' ಎಂದು ಫರಊನ ಗಂಭೀರ ಧ್ವನಿಯಲ್ಲಿ ಹಿರಿಯ ಅಧಿಕಾರಿಯನ್ನು ಕೇಳಿದ. ಅವನು ತಲೆ ಅಲ್ಲಾಡಿಸುತ್ತ– ''ಲೋಕ ಪಾಲಕ ದೊರೆಯೇ....ಈ ಭಾಷೆ ನನಗೂ ತಿಳಿಯದು....''

ಇಜಿಪ್ತದ ಫರ್‌ಊನ ಕೈಕಟ್ಟಿಕೊಂಡು ತುಂಬ ಶಿಸ್ತಿನಿಂದ ಡಾಕ್ಟರ್ ಕರಿನ್‌ಳ ಎದುರಿಗೆ ನಿಂತುಕೊಂಡ ಮತ್ತು ಹೀಗೆ ಕೇಳಿದ– ''ಇದು ಇಜಿಪ್ತದ ಮಹಾಭಾಗ್ಯ ಅಶೂರಿಯಾದ ಯುದ್ಧದ ದಿನಗಳಲ್ಲಿ ದೇವರು ನಿಮ್ಮನ್ನು ಇಲ್ಲಿಗೆ ಕಳಿಸಿದ ಹಾಗೂ ನಮಗೆ ಗೆಲವಿನ ಸುಖ ನೀಡಿದ ದೊರೆ....ದೇವತೆಯ ಮಗ....ನಮ್ಮ ಕರ್ತವ್ಯ.... ಅತಿಥಿಗಳಿಗೆ ಆತಿಥ್ಯಗೈಯುವುದು....ನಾಳೆ ಸಾಯಂಕಾಲ ಐದು ಗಂಟೆಗೆ ನಿಮ್ಮೊಂದಿಗೆ ಮದುವೆ ಮಾಡಿಕೊಳ್ಳುವುದು....''

ಪದ್ಮಾ ಕಣ್ಣು ಇಷ್ಟಗಲಮಾಡಿ ಅವನನ್ನು ನೋಡಿದಳು....ಈತ ಪೀರ ಫರ್‌ತೊತ.... ಅದರ ಮಮಿಯನ್ನು ನಾನು ಬ್ರಿಟಿಷ್ ಮ್ಯುಜಿಯಂನಲ್ಲಿ ನೋಡಿದ್ದೆ.... ನಾನು ಅವನೊಂದಿಗೆ ಮದುವೆ ಮಾಡಿಕೊಳ್ಳುವೆ.... ನಾಳೆ... ಅವಳಿಗೆ ಮತ್ತೆ ಚಕ್ರ ಬಂದಿತು.... ಕಣ್ಣು ಮುಚ್ಚಿಕೊಂಡಳು.

''ದೊರೆಗಳು ಒಳಗೆ ಹೋದರು....'' ಮುಖ್ಯ ಅಧಿಕಾರಿ ಮೆಲ್ಲಗೆ ಹೇಳಿದ. ಕೋಣೆಯಲ್ಲಿ ಒಂದು ರೀತಿ ಭಯಾನಕ ಮೌನ ಆವರಿಸಿತ್ತು. ಅದೇ ಸಮಯದಲ್ಲಿ ಪದ್ಮಾಳಿಗೆ ಒಂದು ಆಲೋಚನೆ ಛಕ್ಕನೆ ಹೊಳೆಯಿತು. ಒಂದು ಅಸ್ಪಷ್ಟವಾದ ಆಸೆ....ಕೆಲಕ್ಷಣಗಳ ನಂತರ ಆಕೆ ಕಣ್ಣುತೆರೆದಳು....ಹಾಗೂ ದುರ್ಬಲವಾದ ದನಿಯಲ್ಲಿ ಹೇಳಿದಳು– ''ನಿರ್ಜನ ಸ್ಥಾನ....ನಿರ್ಜನ ಸ್ಥಾನ....ನಾನು ದೇವಿಯೊಂದಿಗೆ ಸಂಬಂಧ ಹೊಂದಬೇಕೆಂದಿದ್ದೇನೆ....''

ಫರ್‌ಊನ್, ಶೋಷನ ತಂದೆ, ಮುಖ್ಯ ಪೂಜಾರಿ ಮತ್ತು ಇನ್ನುಳಿದ ಜೊತೆಗಿದ್ದವರೆಲ್ಲ ಆ ಕೂಡಲೇ ಎದ್ದು ನಿಂತರು.

ಪದ್ಮಾ ಮತ್ತೊಂದು ಆಕಾಶವಾಣಿ ಹೇಳಿದಳು....

''ಮಗರುಅ ನೊಂದಿಗೆ ಮದುವೆ ನಡೆವ ಮುನ್ನ ಸಂಪೂರ್ಣ ಏಕಾಂತತೆ.... ಎಲ್ಲ ಬಾಗಿಲುಗಳನ್ನು ತೆರೆದಿಡಿ....ಪಹರೆದಾರರು ಯಾರೂ ಇರಕೂಡದು....''

''ತಮ್ಮ ಅಪ್ಪಣೆಯಂತೆ....'' ದೊಡ್ಡ ಅಧಿಕಾರಿ ತಲೆಬಾಗಿ ವಿನಂತಿಸಿಕೊಂಡ....

''ಯಾರೊಬ್ಬರೂ ಗಂಡು, ಹೆಣ್ಣು, ಪಕ್ಷಿ–ಗಿಕ್ಷಿ ನನಗೆ ತಮ್ಮ ಮುಖ.... ತೋರಿಸದಿರಲಿ....''

''ಅವೆಲ್ಲ ಮಾಯವಾದವು....''

ಪದ್ಮಾ ಬೆಳಗಿನಿಂದ ಏನೂ ತಿಂದಿರಲಿಲ್ಲ....ಕಾಣಿಕೆಯಲ್ಲಿ ಏನೆಲ್ಲ ಹಣ್ಣು–ಹಂಪಲು, ಸಿಹಿ ತಿನಿಸು ಇರಿಸಲಾಗಿತ್ತೋ ಅವುಗಳಲ್ಲಿ ಆಯ್ದು ಆಯ್ದು ಮೊದಲು ತಿಂದು

ಮುಗಿಸಿದಳು....ಮಂತ್ರ ಪಠಿಸಿದಳು.... ಶರಬತ್ ಗಟ....ಗಟ....ಕುಡಿದು ಹಾಕಿದಳು.... ಆಗ ಕೊಂಚ ಸುಧಾರಿಸಿಕೊಂಡಳು....ನಂತರ ಕಿಟಕಿಯಿಂದ ಹೊರಗೆ ನೋಡಿದಳು....ಸಂಜೆಯಾಗಿತ್ತು.... ಪಂಜುಗಳು ಉರಿಯುತ್ತಲಿದ್ದವು.... ವಾದ್ಯದವರು, ಸಂಬಂಧಿಗಳು....ಮಹಾ ಆತಿಥ್ಯ ನಡೆಯುವ ಸ್ಥಳದತ್ತ ಹೊರಟಿದ್ದರು.... ತುಂಬ ಗದ್ದಲವಿತ್ತು...ಬರು ಬರುತ್ತ ಮೌನ ಆವರಿಸಿತ್ತು...ರಾಜಮನೆತನದವರೆಲ್ಲರು, ದರ್ಬಾರಿಗಳು....ಇನ್ನುಳಿದವರು ರಂಗಮಹಲ್‌ದತ್ತ ಹೊರಟು ಹೋದರು.... ಕೆಲಹೊತ್ತಿನ ನಂತರ ಕಿಟಕಿಯ ಕೆಳಗೆ ಇಬ್ಬರು ಗುಲಾಮರು ಮಾತಾಡುತ್ತ ಹೊರಟಿದ್ದರು–

''ಹೊಸ ಮದುವೆಯ ಸಂತೋಷದಲ್ಲಿ ಸಮಾರಂಭ ನಡೆಸುತ್ತಿದ್ದಾನೆ....ನಾಳೆ ಆಗುತ್ತದೆ....ಮುದುಕ ತುಂಬ ಹುಚ್ಚನಾಗಿದ್ದಾನೆ....''.

ಪದ್ಮಾ ಕಿಟಕಿಯಿಂದ ದೂರ ಸರಿದಳು. ಅರ್ಧ ಗಂಟೆಯ ನಂತರ ಆಕೆ ಪ್ರಾರ್ಥನಾ ಸ್ಥಳದಿಂದ ಮೆಲ್ಲಗೆ, ಕಳ್ಳ ಹೆಜ್ಜೆ ಊರುತ್ತ ಹೊರಗೆ ಬಂದಳು. ನಿರ್ಜನವಾದ ಪಡಸಾಲೆಯ ಕೊನೆಯಲ್ಲಿ ಓರ್ವ ಕಾವಲುಗಾರ ಕೈಯಲ್ಲಿ ಪಂಜು ಹಿಡಿದು ಸುಮ್ಮನೆ ನಿಂತಿದ್ದ....ಅತ್ಯಂತ ಸಂತೋಷದಿಂದ ಪದ್ಮಾಳ ಕೈಕಾಲುಗಳಲ್ಲಿ ಅಪಾರ ಶಕ್ತಿ ಸಂಚಯವಾಯಿತು..... ಆಕೆ ಸನ್ನೆ ಮಾಡಿ ಆ ಗುಲಾಮನನ್ನು ತನ್ನತ್ತ ಕರೆದಳು. ಅವನು ಹಿಲಾಲನ್ನು ಗೋಡೆಯಲ್ಲಿದ್ದ ಬ್ರ್ಯಾಕೆಟ್ ದಲ್ಲಿರಿಸಿ ಅವಳ ಹತ್ತಿರ ಬಂದ–ಪದ್ಮಾ ಅವನ ಕಿವಿಯಲ್ಲಿ ಹೇಳಿದಳು– ''ಬಾಬಾ, ನಾನು ಭಗವಂತ ಹಾಶೂರನ ಆಕಾಶದ ವಿಶೇಷ ಸೇವಕಿ ಅಲ್ಲ.....'' ಮುದುಕ ಆಕೆಯನ್ನು ದಿಟ್ಟಿಸಿ ನೋಡಿದ. ಅವನೊಬ್ಬ ಅನುಭವಿ ಹಿರಿಯನಾಗಿದ್ದ..... ಮೌನವಾಗಿದ್ದ...... ಪದ್ಮಾ ಮತ್ತೆ ಹೇಳಿದಳು–''ನನ್ನ ಹೆಸರು ಮರಿಯಂ ಬಿನ್ನತ್ ಅಬ್ರಾಹಮ್...... ದೇವರಾದ ಅಬ್ರಾಹಿಮ್ ಆಣೆ..... ನನ್ನ ಹೆಸರು.....''

ಈ ಹುಡುಗಿ ಇಸ್ರೇಲ್‌ದವಳಾಗಿ ಕಾಣಿಸುತ್ತಿಲ್ಲ..... ಅದೂ ಅಲ್ಲದೆ ದೇವರ ಆಣೆ ಬೇರೆ..... ಮುದುಕನಿಗೆ ಭರವಸೆ ಆಯಿತು..... ಹುಡುಗಿ ಮತ್ತೆ ಹೇಳಿದಳು–

''ಬಾ...... ಬಾಬಾ..... ನಾನು ದೇವಿ ಹಾಶೂರ ಎಂದು ನಿಮಗೆ ಅನ್ನಿಸುತ್ತಲಿದೆಯೇ..... ?''

''ಅಯ್ಯಯ್ಯೋ....'' ಆ ಮುದುಕ ಕೂಡಲೇ ಆವೇಶದಿಂದ ಅಂದ.

'ನಾನು ಮರಿಯಮ್ ಬಿನತ್ ಅಬ್ರಾಹಿಮ್‌ಳಾಗಿದ್ದೇನೆಯೇ ?''

''ಅಯ್ಯೋ ದೇವರೇ.....''

''ನನ್ನನ್ನು ಹೇಗಾದರೂ ಮಾಡಿ ಅಬ್ರಾನಿಗಳ ಓಣಿಯವರೆಗೆ ತಲುಪಿಸಿ ಬಿಡಿ.... ಮೈಖಾಯಿಲ್ ಬಿನ್ ಹನ್ನಾನ್ ಮನೆಯವರೆಗೆ.....''

''ಮೈಖಾಯಿಲ್ ಬಿನ್ ಹನ್ನಾನ್ ತುಂಬ ಸಾಮಾನ್ಯವಾದ ಹೆಸರು..... ಇನ್ನೂ ಏನಾದರೂ ವಿಶೇಷ ವಿಳಾಸವಿದ್ದರೆ ಹೇಳು.....''

''ಅವನು ನದಿಯ ತೀರದಲ್ಲಿರುವ ಹಡಗು ತಂಗುದಾಣದ ಕಸ್ಟಮ್ಸ್‌ದಲ್ಲಿ ನೌಕರನಾಗಿದ್ದಾನೆ.... ಮತ್ತೆ... ಅಥವಾ ಆಗರ್ಭಶ್ರೀಮಂತ ಶೋಷನ ಹತ್ತಿರ ವಾದರೂ.....''

''ಆ ಶ್ರೀಮಂತ ಶೋಷ ಈ ಸಮಯದಲ್ಲಿ ರಾಜರ ಸಂತೋಷಕೂಟದಲ್ಲಿ ಫರ್‌ಊನರೊಂದಿಗೆ ಊಟ ಮಾಡುತ್ತಿದ್ದಾನೆ..... ನಿನಗೆ, ಆ ಮೂರ್ತಿಪೂಜಕ ತರುಣನೊಂದಿಗೆ ಏನು ಸಂಬಂಧ...... ಮರಿಯಮ್ ಬಿನ್ನತ್ ಅಬ್ರಾಹಿಮ್....?''

''ಏನೂ ಇಲ್ಲ.....'' ಪದ್ಮಾ ಮೇರಿ ಅಬ್ರಾಹಮ್ ಕರೀನ್ ಕೂಡಲೇ ಉತ್ತರಿಸಿದಳು.

''ನನ್ನೊಂದಿಗೆ ಬಾ......'' ಎಂದು ಹೇಳುತ್ತ ಅವನು ತನ್ನ ನಿಲುವಂಗಿಯನ್ನು ತೆಗೆದು ಆಕೆಗೆ ಹೊದಿಸಿದ..... ಹಿಲಾಲು ಆರಿಸಿದ..... ಅವಳನ್ನು ಕಳ್ಳದಾರಿಯಿಂದ ಹೊರಗೆ ಕರೆದುಕೊಂಡು ಹೋದ. ಕತ್ತಲೆಯ ಓಣಿಗಳಲ್ಲಿಂದ ಸಾಗುತ್ತ ಅವರು ಕೆಟ್ಟದಾದ ಓಣಿಯೊಂದನ್ನು ತಲುಪಿದರು.

ಆ ಮುದುಕ ಒಂದು ಹಾಳು ಬಿದ್ದ ಮನೆಯ ಬಾಗಿಲು ತಟ್ಟಿದ..... ಹಾಗೂ ಕೂಗಿದ.....

''ಸಲಾಮ್.... ಆಲೆಕುಮ್ ಯಾಖೂಬ ಬಿನ್ ಶಮೂನ್.....''

''ಸಲಾಮ್..... ಯಾರು ಬಂಧು..... ?''

''ಹಜ್ ಖಯೀಲ್ ಬಿನ್ ಜಕರಿಯಾ.....''

''ಒಳಗೆ ಬನ್ನಿ.....''

ಅವರಿಬ್ಬರೂ ಒಳಗೆ ಹೋದರು. ಅದು ಶುಕ್ರವಾರದ ರಾತ್ರಿಯಾಗಿತ್ತು, ಓರ್ವ ವಯಸ್ಸಾದ ಇಬ್ರಾನಿ, ಅವನ ಹೆಂಡತಿ ಮತ್ತು ಮಕ್ಕಳು ಜೈತೂನ (ಸದಾ ಹಸಿರಾಗಿರುವ ಗಿಡ)ದ ಎಣ್ಣೆ ದೀಪದ ಬೆಳಕಿನಲ್ಲಿ ಕುಳಿತು, ರಾಗ ಅದತೂನ್‌ದಲ್ಲಿ ಮೆಲ್ಲ ಮೆಲ್ಲಗೆ ಹಾಡಿಕೊಳ್ಳುತ್ತಿದ್ದರು.

ಪದ್ಮಾ ಮೇರಿ ನಿಲುವಂಗಿ ತೆಗೆದಳು.... ಖರ್ಜೂರದ ಚಾಪೆಯ ಮೇಲೆ ಕುಳಿತಳು.... ಹಿಂದಿನ ಕೋಣೆಯೊಳಗಿಂದ ಮೈಖಾಯಿಲ್ ಬಿನ್ ಹನ್ನಾನ್ ಬಂದ. ಹಜ್‌ಖಯೀಲ್ ಬಿನ್ ಜಕರಿಯಾ ಅವನ ಕಿವಿಯಲ್ಲಿ ಏನೋ ಹೇಳಿದ ಹಾಗೂ ಮೌನವಾಗಿಯೇ ಹೊರಗೆ ಹೊರಟು ಹೋದ.

ಕ್ರಿ. ಪೂ. 1315 ಆ ದಿನದ ರಾತ್ರಿ ಶುಕ್ರವಾರ (ತಿಂಗಳು ಮತ್ತು ತಾರೀಕು ನನಗೆ ನೆನಪಿಲ್ಲ.) ಮೇರಿ ಕರಿನ್ ಆ ಬಡಪಾಯಿಗಳ, ದುಃಖಿಗಳ ಕತೆ ಕೇಳಿದಳು... ಹಾಗೂ ತನ್ನ ಕತೆಯನ್ನೂ ಅವರಿಗೆ ಕೇಳಿಸಿದಳು.... ಈ ಜನ ಅವಳ ಕಳೆದ ಜೀವನದಲ್ಲಿದ್ದರು.... ಮತ್ತು ಆಕೆ ಆ ಜನರ ವರ್ತಮಾನವಾಗಿದ್ದಳು..... ಆದರೆ ಈ ಅಸಾಮಾನ್ಯ ಬುದ್ಧಿವಂತ ಮನುಷ್ಯ...... ಅವನು ಏನೆಲ್ಲ ಹೇಳಿದನೋ ಅದನ್ನೆಲ್ಲ

ಯಾವ ತೊಂದರೆಯಿಲ್ಲದೆ ಅರ್ಥೈಯಿಸಿಕೊಂಡ..... ವಿಶೇಷವಾಗಿ ತರುಣ ಮೈಖಾಯಿಲ್ ಬಿನ್ ಹನ್ನಾನ್, ಕೆದರಿ ಕೆದರಿ ಅವಳಿಗೆ ಪ್ರಶ್ನೆ ಮಾಡುತ್ತಿದ್ದ.

ಯಾಖೂಬ ಬಿನ್ ಶಮೂಮನ್ ಮೆಲ್ಲ ಮೆಲ್ಲಗೆ ಹೇಳತೊಡಗಿದ–''ನಮ್ಮ ಮುಖ್ಯ ಮೋರಶ್ ಅರಮಿಯಾಗಿದ್ದ.... ಅಬ್ರಾಹಿಮ್ ಪೈಗಂಬರ.... ಅವನು ಅಬ್ರಾಲೀಜದ ಅದರಾಚೆಯ ಕಲ್ಪಾನಿಯಾದ ಪಟ್ಟಣದ ಅರ್‌ದಲ್ಲಿರುತ್ತಿದ್ದ.... ಅವನು ತನ್ನ ಮನೆತನದವರನ್ನೆಲ್ಲ ಕರೆದುಕೊಂಡು ನದಿ ತಟದ ಮೈದಾನದಿಂದ ಹೊರಟ..... ಹಾಗೂ ಹುಲ್ಲುಗಾವಲನ್ನು ಹುಡುಕುತ್ತ ತಿರುಗಿದ.... ಕನಾನ್, ಇಜಿಪ್ತ ಮತ್ತೆ ಕನಾನ್.... ಯಾಖೂಬ–ಬಿನ್–ಅಸಖ್–ಬಿನ್ ಅಬ್ರಾಹಿಮ್‌ಗೆ ಹನ್ನೆರಡು ಜನ ಮಕ್ಕಳಾದವು.... ಮತ್ತು ಯುಸುಫ್–ಬಿನ್–ಯಾಖೂಬನಿಗೆ ಅವನ ಮಲ ಸೋದರರು.....''

''ನನಗೆ ಎಲ್ಲ ವಿಚಾರ ಗೊತ್ತಿದೆ......''

ಪದ್ಮಾ ನಡುವೆಯೇ ತಾಳ್ಮೆ ಕಳೆದುಕೊಂಡವಳಂತೆ ಹೇಳಿದಳು. ರಾತ್ರಿ ತೀವ್ರಗತಿಯಲ್ಲಿ ಸಾಗುತ್ತಲಿತ್ತು.... ಒಂದು ವೇಳೆ ಮೈಖಾಯಿಲ್ ಎಷ್ಟು ತೀವ್ರ ಸಾಧ್ಯವೋ ಅಷ್ಟು ತೀವ್ರ ತನ್ನನ್ನು ಯಾವುದೇ ರೀತಿಯಲ್ಲಿ ನದಿ ದಾರಿಯಿಂದ ರಾಕೆಟ್‌ವರೆಗೆ ತಲುಪಿಸಿದರೆ.....

''ಯೂಸುಫನಿಗೆ....'' ಪೀರ ಹೇಳುತ್ತಿದ್ದ..... ''ಅದೇ ಮುಮಫಸ್‌ದ ಬಜಾರದಲ್ಲಿ ಮಾರಲಾಯಿತು..... ಆದರೆ ಯೂಸುಫನೊಂದಿಗೆ ದೇವರಿದ್ದ.... ಮತ್ತು.....''

''ನನಗೆ ಗೊತ್ತಿದೆ......'' ಪದ್ಮಾ ಹೇಳಿದಳು..... ''ಜೋಜಫ್...... ನನ್ನ ವಿಚಾರ..... ಯೂಸುಫ್ ನಬಿಯನ್ನು ಮಿನಿಸ್ಟರ್ ಆಫ್ ಫುಡ್ ಆ್ಯಂಡ್ ಅಗ್ರಿಕಲ್ಚರ್ ಎಂದು ನೇಮಿಸಲಾಯಿತು..... ನನ್ನ ವಿಚಾರ... ಮತ್ತು ಅವನು ತನ್ನ ಮನೆಯವರನ್ನೆಲ್ಲ ಕನಾನ್‌ದಿಂದ ಕರೆಯಿಸಿಕೊಂಡ......''

''ಮತ್ತೆ ಇಸ್ರಾಯಿಲ್* ಮಿಸ್ರ (ಇಜಿಪ್ತ)ದಲ್ಲಿ ತುಂಬ ಸಮೃದ್ಧವಾಗಿ ಬೆಳೆಯಿತು.... ಹಾಗೂ ದೇಶ ಅವರಿಂದ ತುಂಬಿ ಹೋಯಿತು.... ಮತ್ತು ಹೊಸ ಬಾದಷಾಹ ಹೇಳಿದ–ಬನಿ ಇಸ್ರಾಯಿಲ್ ನಮಗಿಂತ ಹೆಚ್ಚು ಶಕ್ತಿಶಾಲಿಗಳು..... ಆಗಿದ್ದಾರೆ..... ಇದರಿಂದಾಗಿ ಆತ ಬನಿ ಇಸ್ರಾಯಿಲ್ ಮೇಲೆ ನಿಗರಾನಿ ನೇಮಿಸಿದ.... ಅವರನ್ನು ಅಮಾನುಷ ರೀತಿಯಲ್ಲಿ ದುಡಿಸಲಾರಂಭಿಸಿದರು... ಫರ್‌ಊನನಿಗಾಗಿ ಗುಂಬಜ...... ಅವರಿಂದ ನಿರ್ಮಾಣ ಮಾಡಿಸಿದರು.... ರಅಮಿಸ್ ಪಟ್ಟಣ ಕಟ್ಟಿಸಿದರು....'' ಎಂದು ಯಾಖಿಲ್–ಬಿನ್–ಶಮುಮೂನ್ ಹೇಳಿದ......

''ಮತ್ತು ಇಜಿಪ್ತದ ಬಾದಷಾಹ ಇಬ್ಬರು ಇಬ್ರಾನಿ ದಾಯಾಗಳಿಗೆ..... ಅವರ ಹೆಸರು ಶಫೀರಾ ಮತ್ತು ಪೋವಾ..... ಎಂದಿತ್ತು... ಅವರಿಗೆ ಹೇಳಿದ.... ''ಇಬ್ರಾನಿಗಳಲ್ಲಿ ಗಂಡು ಮಕ್ಕಳಾದರೆ ಅವುಗಳನ್ನು ಕೊಂದು ಬಿಡಿ.....'' ಮೇರಿಕರಿನ್

---

*. ಅಹದನಾಮಾ ಕದೀಮ : ಭಾಗ–2. ಅಧ್ಯಾಯ 15. 16. 1301.

ಪವಿತ್ರ ಎಂಜಿಲ್‌ದ ಮುಂದಿನ ಕತೆ ಮುಂದುವರಿಸಿದಳು.... ಅವಳ ಅತಿಥೇಯರು ಅಚ್ಚರಿಯಿಂದ ಅವಳನ್ನು ನೋಡಿದರು.....

''ನೀನು ಏನು ಹೇಳುತ್ತಿರುವೆ.... ಇದು ಯಾವಾಗ ನಡೆಯಿತು.... ?''

ಆಗ ಪದ್ಮಾ ಮೇರಿ ಯೋಚಿಸಿದಳು. ಅವರ ಮುಕ್ತಿಯ ಕಾಲ ದೂರವಿಲ್ಲವೆಂದು ಅವರಿಗೆ ಹೇಳಬೇಕೆಂದು ಬಯಸಿದಳು.... ಅವಳು ಕಿಟಕಿಯ ಹತ್ತಿರ ಹೋಗಿ ನೋಡಿದಳು.... ದೂರದಲ್ಲಿ.... ಖಸರ–ಐನ್–ಅಲ್‌ಷಮ್ಸ್‌ದಲ್ಲಿ.... ಬೆಳಕು ಕತ್ತಲ ಯಲ್ಲಿ ಹೊಳೆ ಹೊಳೆಯುತ್ತಲಿತ್ತು.... ಅವಳು ಹೇಳಿದಳು....

''ಮತ್ತೆ ದ್ವಿತೀಯ ಬಾದಷಾಹರ ಅಮುಸಿಸ್ ಇಬ್ರಾನಿಗಳಿಗೆ, ತಮ್ಮ ಎಲ್ಲ ನವಜಾತ ಗಂಡು ಮಕ್ಕಳನ್ನು ನದಿಯಲ್ಲಿ ಮುಳುಗಿಸಬೇಕೆಂದು ಆಜ್ಞಾಪಿಸಿದ......''

''ಏನು..... ನಮ್ಮ ಮೇಲೆ ಇನ್ನೂ ಕ್ರೌರ್ಯ, ದಬ್ಬಾಳಿಕೆ, ಬಲಾತ್ಕಾರ ನಡೆಯಲಿದೆಯೇ....?'' ಜೋಜಾ ಯಾಖೂಬ ಥರಗುಟ್ಟಿ ನಡುಗುತ್ತ ಕೇಳಿದ.....

''ಹಾಂ !.... ಆದರೆ ಓರ್ವ ಬಾಲಕ ಮೋಷೆ ಹೇಗೋ ಬಚಾವ ಆಗುತ್ತಾನೆ.... ಮತ್ತು ಅವನು ದ್ವಿತೀಯ ಅಮುಸಿಸ್ ಬಾದಷಾಹನ ಅರಮನೆಯಲ್ಲಿ ಪಾಲನೆ–ಪೋಷಣೆ ಹೊಂದುತ್ತಾನೆ. ಆತ ನಿಮ್ಮನ್ನು ಇಜಿಪ್ತದಿಂದ ಪಾರು ಮಾಡಿ ಕರದೊಯ್ಯು ತ್ತಾನೆ.....''

ಇಬ್ರಾನಿಗಳು ಪ್ರೀತಿಯಿಂದ ಅವಳನ್ನು ನೋಡಿದರು..... ''ಏ..... ಹುಡುಗಿ ನೀನು ಕಾಹಿನಾದವಳೇನು ? ಅದೃಶ್ಯವಾಗುವ ವಿದ್ಯೆಯನ್ನು ಬಲ್ಲೆಯಾ.....?''

''ಹಾಗೇ ತಿಳಿದುಕೊಳ್ಳಿ..... ಮತ್ತು ಕೇಳುತ್ತ ಹೋಗಿ..... ಇಲ್ಲಿಂದ ಹೊರಟ ನೀವು ಬನಿ ಇಸ್ರಾಯಿಲ್ ಕನಾನ್‌ದಲ್ಲಿ ಸಾಮ್ರಾಜ್ಯ ಸ್ಥಾಪಿಸುವಿರಿ.... ಮತ್ತೆ ಅಶೂರಿಯಾದ ಬಾದಷಾಹ ನಿಮ್ಮನ್ನು ಬಂಧಿಸಿ ಬಾಬಲ್‌ಗೆ ಕರೆದೊಯ್ಯುತ್ತಾನೆ.... ಮುಂದೆ ಈರಾನ್‌ದ ದೊರೆ ಸಾಯರಸ್ ನಿಮ್ಮನ್ನು ಬಂಧನದಿಂದ ಬಿಡುಗಡೆ ಗೊಳಿಸುತ್ತಾನೆ.... ಹಾಗೂ ಪೆಲಸ್ಟೈನ್‌ಕ್ಕೆ ಕಳಿಸುತ್ತಾನೆ.... ನಿಮ್ಮಲ್ಲಿ ದಾವೂದ ಬಾದಷಾಹನ ವಂಶದಲ್ಲಿ ಯೇಸು ಜನ್ಮ ತಾಳುತ್ತಾನೆ.....'' ಎನ್ನುತ್ತ ಪದ್ಮಾ ಯಾವುದೇ ಉದ್ದೇಶವಿಲ್ಲದೆ ಕ್ರಾಸ್‌ದ ಗುರುತು ಮಾಡಿದಳು.... ಇಬ್ರಾನಿಗಳು ಅವಳನ್ನು ಕಣ್ಣು ಪಿಳಿಕಿಸದೆ ನೋಡುತ್ತಿದ್ದರು.... ಅವಳು ಮತ್ತೆ ಹೇಳಿದಳು..... ''ರೋಮನ್‌ಗಳು ನಿಮ್ಮನ್ನು ಮಾತೃಭೂಮಿಯಿಂದ ಹೊರಹಾಕುತ್ತಾರೆ.... ಆಗ ನೀವೆಲ್ಲ ಇಡೀ ಪ್ರಪಂಚ ದಲ್ಲಿ ಆಶ್ರಯಹೀನರಾಗಿ ತಿರುಗುವಿರಿ.... ಮತ್ತೆ.... ಇಂದಿನ ರಾತ್ರಿಯಿಂದ ಪೂರ್ಣ ಸವಾಮೂರುಸಾವಿರವರ್ಷ ಯೇಸುವಿಗಿಂತ ಹತ್ತೊಂಬತ್ತುನೂರ ನಲವತ್ತೆಂಟು ವರ್ಷಗಳ ನಂತರ ನೀವು ಮತ್ತೆ ಅದೇ ಕನಾನ್‌ದಲ್ಲಿ ಹೊಸ ಸಾಮ್ರಾಜ್ಯ ಸ್ಥಾಪಿಸಲಿರುವಿರಿ..... ಬೇರೆ ಜಾತಿಯವರು ನಿಮ್ಮನ್ನು ಹೇಗೆ ಮಾತೃಭೂಮಿಯಿಂದ ಹೊರ ಹಾಕಿದ್ದರೊ ಹಾಗೇ ನೀವು ಅರಬರನ್ನು ಅವರ ಮಾತೃಭೂಮಿಯಿಂದ ಹೊರ ಹಾಕುವಿರಿ.....''

''ಅರಬರು ಯಾರು.....?'' ಮ್ಯಿಖಾಯಿಲ್ ವಿಚಾರಿಸಿದ.

ಪದ್ಮಾ ರೇಗಿದಳು..... ರೇಗುತ್ತಲೇ...... ತನ್ನ ಕಾಲದ ರಾಜಕೀಯವನ್ನು ಸಂಕ್ಷಿಪ್ತವಾಗಿ ಅವನಿಗೆ ತಿಳಿಸಿದಳು.... ಮೈಖಾಯಿಲ್, ಅವಳ ಮಾತುಗಳನ್ನು ತುಂಬ ಆಸಕ್ತಿಯಿಂದ ಕೇಳುತ್ತಿದ್ದ..... ಮತ್ತೆ ಅವನು ಆಕೆಯನ್ನು ಕೇಳಿದ–''ನಿಮ್ಮ ವಿಜ್ಞಾನ ಇಷ್ಟೊಂದು ಪ್ರಗತಿ ಹೊಂದಿದೆ.... ಬೆಳಕಿನ ವೇಗಕ್ಕಿಂತ ಹೆಚ್ಚು ವೇಗ ಚಲಿಸಿ ಇಂದಿನ ಕಾಲಗರ್ಭದಿಂದ ಹೊರಟು, ಅದಕ್ಕೂ ಹೊರಗಿರುವ ಕಳೆದ ಕಾಲದಲ್ಲಿ ಪ್ರವೇಶ ಮಾಡಿದೆ.... ಅದರ ಮುಂದೆ ಏನಾಗಲಿದೆ.....?''

ಪದ್ಮಾ ಗಡಿಯಾರ ನೋಡಿದಳು–''ನನಗೇನೂ ಗೊತ್ತಿಲ್ಲ ಮೈಖಾಯಿಲ್.... ಆದರೆ ನನ್ನನ್ನು ಈ ಕೂಡಲೇ ಪಟ್ಟಣದ ಹೊರಗೆ ತಲುಪಿಸು....'' ಎಂದಳು.... ರಾತ್ರಿ ಕಳೆದಿತ್ತು.... ನೈಲ ನದಿಯ ಮೇಲೆ ಬೆಳಕು ಹರಡುತ್ತಲಿತ್ತು.....

''ನಮ್ಮನ್ನು ನಿನ್ನ ಜೊತೆಗ ನಿನ್ನ ಕಾಲದೊಳಕ್ಕೆ ಕರೆದುಕೊಂಡು ಹೋಗು....'' ಎಂದು ಇಬ್ರಾನಿಗಳು ಅವಳಲ್ಲಿ ಬೇಡಿಕೊಂಡರು.....

''ಇಲ್ಲ....'' ಪದ್ಮಾ ಹೃದಯ ಗಟ್ಟಿ ಮಾಡಿಕೊಂಡು ಉತ್ತರಿಸಿದಳು..... ''ಇದು ಅಸಾಧ್ಯವಾದ ಮಾತು..... ನಾವು ನಮ್ಮ ನಮ್ಮ ಕಾಲಕ್ಕಿಂತ ಮುಂದೆಯಾಗಲಿ ಅಥವಾ ಹಿಂದಕ್ಕಾಗಲಿ ಹೋಗಲಿಕ್ಕಾಗುವುದಿಲ್ಲ..... ನಮ್ಮ ನಮ್ಮ ಕಾಲದ ಪರೀಕ್ಷೆಗಳನ್ನು ಸಹಿಸುವುದು ನಮ್ಮ ಭಾಗ್ಯ ಅದು..... ನಾವು ತಾರೀಕನ್ನು ಮುಂದೆ ಅಥವಾ ಹಿಂದಕ್ಕೆ ಸರಿಸಲಾಗುವುದಿಲ್ಲ..... ಒಂದು ವೇಳೆ.... ಅದನ್ನೆಲ್ಲ ಮಾಡಲು ಸಾಧ್ಯವಿದ್ದಿದ್ದರೆ.... ಏನೆಲ್ಲ ಆಗಬಾರದಿತ್ತೋ ಅದೆಲ್ಲ ಆಗುತ್ತಿರಲಿಲ್ಲ..... ನಾನು ಇಸ್ರಾಯಿಲ್‌ದ ನಬಿಯಾ ದೇವರಾದ ಹಾಗೆ ನಿಮಗೆ ಇದನ್ನೆಲ್ಲ ತಿಳಿಸುತ್ತಿದ್ದೇನೆ.... ದೇವರಾ ಕೆಲ ಶತಮಾನಗಳ ನಂತರ ನಿಮ್ಮಲ್ಲಿ ಹುಟ್ಟುತ್ತಾಳೆ.... ಆದರೆ ನಾನು ಯಾವ ಕಾಲದಿಂದ ಬಂದಿದ್ದೇನೆಯೋ.... ಅದು ವಿಜ್ಞಾನಿಗಳ ಕಾಲವಾಗಿದೆ.....''

ಇಬ್ರಾನಿ ಕಂಬಾ ಕಣ್ಣೀರು ಹಾಕುತ್ತಲಿದ್ದ..... ಕೇವಲ ಮೈಖಾಯಿಲ್ ಮಾತ್ರ ಮುಖ ಗಂಟು ಹಾಕಿ ಗೋಡೆಗೆ ಆತು ನಿಂತಿದ್ದ.... ಪದ್ಮಾ ಅವನನ್ನು ದುಃಖದಿಂದ ನೋಡಿದಳು....

ಬಾಗಿಲದ ಕೊಂಡಿಯ ಸಪ್ಪಳವಾಯಿತು. ಅವರೆಲ್ಲ ಸ್ತಬ್ಧರಾದರು.... ಯಾಖೂಬನ ಹೆಂಡತಿ ಪದ್ಮಾಳಿಗೆ ಒಂದು ಕಂಬಳಿ ಹೊಚ್ಚಿ ಮುಚ್ಚಿದಳು... ಮೈಖಾಯಿಲ್ ಬಾಗಿಲು ತೆರೆದ.... ಹೊಸ್ತಿಲದ ಹತ್ತಿರ ಆಗರ್ಭ ಶ್ರೀಮಂತ ಶೋಷ ನಿಂತಿದ್ದ.....

ಶೋಷ ಇಬ್ರಾನಿಗಳಿಗೆ ಹೇಳಿದ–

''ದೀಪಗಳನ್ನು ಆರಿಸಿಬಿಡಿ....'' ಮತ್ತೆ ಮೇರಿಯೊಂದಿಗೆ ಮಾತಾಡ ತೊಡಗಿದ– ''ನಾನು ರಾಜಾತಿಥ್ಯದಲ್ಲಿ ಭಾಗಿಯಾಗಿದ್ದೆ.....ನನ್ನೊಬ್ಬ ದಾಸ ಬಂದು ನನಗೆ, ನನ್ನ ಕಿವಿಯಲ್ಲಿ ಮೆಲ್ಲಗ ಹೇಳಿದ..... ಆಕಾಶದಿಂದ ಬಂದ ಕುಮಾರಿ ಮಾಯವಾಗಿದ್ದಾಳೆ.... ಓರ್ವ ಪಹರೆದಾರ, ಆಕೆ ಇಬ್ರಾನಿಗಳ ಓಣಿಯತ್ತ ಹೋಗುತ್ತಿರುವುದನ್ನು

ನೋಡಿದ್ದಾನೆ.... ನಾನಾಗ ನನ್ನ ದಾಸನಿಗೆ–ಯಾರಿಗೂ ಈ ಗುಟ್ಟು ಹೇಳಬೇಡ.... ಬಾಯಿ ಮುಚ್ಚಿಕೊಂಡಿರು..... ಎಂದು ಕಟ್ಟಪ್ಪಣೆ ಮಾಡಿದೆ... ಹಾಗೂ ಅಲ್ಲಿಂದ ನೇರವಾಗಿ ಇಲ್ಲಿಗೆ ಬಂದಿರುವೆ.... ನಿನ್ನೆ ಬೆಳಿಗ್ಗೆ ನನಗೆ ಏನನ್ನೂ ಹೇಳದೆ ಓಡಿಹೋದೆ..... ಫರಊನ್ ಸಹಿತ ಇಡೀ ದರ್ಬಾರ್ ಮತ್ತು ಸೈನ್ಯಾಧಿಕಾರಿ ಗಳು ನಶೆಯಲ್ಲಿ ಮುಳುಗಿದ್ದಾರೆ.... ಆದರೆ ನಿನ್ನನ್ನು ಹುಡುಕಿ ತೆಗೆಯಲು ಅವರಿಗೆ ಹೆಚ್ಚು ಕಾಲ ಬೇಕಾಗಲಿಕ್ಕಿಲ್ಲ.... ಅವರಿಗೆ ಒಂದು ವೇಳೆ ನೀನು ಅಶೋರಿ ಗುಪ್ತಚಾರ ಳೆಂದು ಸಂಶಯ ಬಂದರೆ ಕಲ್ಲಿಗೆ ನಿನ್ನನ್ನು ಕಟ್ಟಿ ನೈಲ ನದಿಯಲ್ಲಿ ಮುಳುಗಿಸಿ ಬಿಡುತ್ತಾರೆ.... ನಿನ್ನ ಬಗ್ಗೆ ಸತ್ಯವಾದುದನ್ನು ತಿಳಿಸು.... ಬಹುಶಃ ನಾನು ನಿನ್ನನ್ನು ಇಲ್ಲಿಂದ ಪಾರು ಮಾಡಬಹುದು......''

ಪದ್ಮಾ ಮತ್ತು ಇಬ್ರಾನಿಗಳು ನಿರುಪಾಯರಾಗಿ ಒಬ್ಬರನ್ನೊಬ್ಬರು ನೋಡಿದರು.... ಇಬ್ರಾನಿಗಳ ಬುದ್ಧಿ ತುಂಬ ಚುರುಕಾಗಿತ್ತು..... ಅವರು ಪದ್ಮಾಳ ಬಗ್ಗೆ ಅರಿತು ಕೊಂಡಿದ್ದರು.... ಆದರೆ ಬಡಪಾಯಿ ಶೋಷ.... ಅತೂನ, ಮತ್ತು ರುಅ ಮತ್ತು ಹಾಶೂರದ ಪೂಜಾರಿ.... ಸಯೀಫಾ ಮುತೋಫೇಯಿನ್ ಲಿಪಿಕಾರ.... ಸಾವಿನ ಪೂಜಾರಿ.... ಸೇವಕ.... ವರ್ತಮಾನದ ಬಗ್ಗೆ ಅವನಿಗೇ ಏನೊಂದೂ ತಿಳಿಯದು.... ಪದ್ಮಾ ಮೈಖಾಯಿಲ್‌ನತ್ತ ನೋಡಿದಳು... ಮೈಖಾಯಿಲ್ ಮೆಲ್ಲಗೆ ಹೇಳಿದ– ''ಹೇಳಿ ಬಿಡು.... ಬಹಳ ಅಂದರೆ..... ಇವನು..... ನಿನ್ನನ್ನು ಜಾದುಗಾರ್ತಿ ಯೆಂದು ಊಹಿಸಬಹುದು..... ಹೇಳದಿದ್ದರೆ ಇವನು ಕೂಡ ನಿನ್ನನ್ನು ಫರ್‌ಊನನಿಗೆ ಒಪ್ಪಿಸಿ ಬಿಡಬಹುದು.....''

ಪದ್ಮಾ ಕೆಲವೇ ಶಬ್ದಗಳಲ್ಲಿ ತನ್ನ ಬಗ್ಗೆ ಶೋಷನಿಗೆ ತಿಳಿಸಿದಳು.... ತುಂಬ ಅಚ್ಚರಿಯ ಸಂಗತಿ.... ಶೋಷ ಎಲ್ಲ ಅರಿತುಕೊಂಡ.... ಎರಡು ಮೂರು ನಿಮಿಷ ಮೌನವಾಗಿದ್ದ..... ಮತ್ತೆ ಹೇಳಿದ–''ನಡೆ..... ನಾನು ನಿನ್ನನ್ನು ನಿನ್ನ ಟೈಂ ಮಿಷನ್‌ವರೆಗೆ ತಲುಪಿಸುತ್ತೇನೆ.....''

ಇಬ್ರಾನಿಗಳಿಗೆ ಶುಭ ಕೋರಿ ಅವಳು ಮನೆಯಿಂದ ಹೊರ ಹೊರಟಳೋ ಅವರೆಲ್ಲ ಬಿಕ್ಕಿಬಿಕ್ಕಿ ಅಳುತ್ತಿದ್ದರು.... ಆ ಬಡಪಾಯಿ'ಗಳ ವಂಶದಲ್ಲಿ ಮೂಸಾ, ಈಸಾ ಮತ್ತು ಕಾರ್ಲಮಾರ್ಕ್ಸ್ ಮತ್ತು ಸಿಗ್ಮಂಡ್ ಫ್ರೈಯ್ಡ್ ಮತ್ತು ಐನ್‌ಸ್ಟೀನ್‌ನಂಥವರು ಜನ್ಮ ಪಡೆಯಲಿದ್ದರು. ಕ್ರಿ. ಪೂ. 1315ರಲ್ಲಿ...... ಅಂಥವರನ್ನು ಬಿಟ್ಟು ಆಕೆ ಶೋಷ ನೊಂದಿಗೆ ಹೊರಟು ಹೋದಳು.... ಅದಕ್ಕೆಂದೇ ಮನುಷ್ಯನಿಗೆ ಹಿಂದೆ, ಮುಂದೆ ನೋಡಲು ಸಲಹೆ ಕೊಡಲಾಗಿಲ್ಲ.... ಒಂದು ವೇಳೆ ಹಾಗೆ ಮಾಡಿದ್ದರೆ ಅವನು ಅತ್ತು ಅತ್ತು ಸತ್ತು ಹೋಗುತ್ತಿದ್ದ..... ಎಂದು ಪದ್ಮಾ ಯೋಚಿಸಿದಳು....

ಅವರಿಬ್ಬರೂ ಅಲ್ಲಿಂದ ನಖಲಿಸ್ತಾನ ತಲುಪಿದಾಗ ಆಗಲೇ ಸೂರ್ಯೋದಯ ವಾಗಿತ್ತು.... ರಾಕೆಟ್ ಖರ್ಜೂರ ಗಿಡದಡಿಯಲ್ಲಿ ನಿಂತು ಥಳ ಥಳ ಹೊಳೆಯು ತ್ತಿತ್ತು.... ಆಗ ಪದ್ಮಾಳ ಜೀವದಲ್ಲಿ ಜೀವ ಬಂತು.... ಆದರ ಅದೇ ಸಮಯದಲ್ಲಿ ಫಸೀಲ ಪಟ್ಟಣ ಕಡೆಯಿಂದ ಧೂಳಿನ ಮೋಡ ಆವರಿಸುತ್ತಿರುವುದು ಕಾಣಿಸಿತು.... ಫರ್ ಊನ್‌ನ ಜನ

ಆಕೆಯತ್ತ ಆಯುಧ ಸಮೇತ ಮುನ್ನುಗ್ಗಿ ಬರುತ್ತಿದ್ದರು. ಕೂಡಲೆ ಪದ್ಮಾ ರಾಕೆಟ್‌ದ ಪಾವಟಿಗೆ ಹತ್ತಿದಳು.... ಹಾಗೂ ಬಾಗಿಲು ತೆರೆದಳು.... ಶೋಷ ಕೆಳಗೆ ನಿಂತಿದ್ದ..... ಅವನು ಗಾಬರಿಯಿಂದ ಕೂಗಿಕೊಳ್ಳುತ್ತಿದ್ದ.... "ನನ್ನನ್ನೂ ನಿನ್ನ ಜೊತೆ ಕರೆದುಕೊಂಡು ಹೋಗು.... ಇಲ್ಲದಿದ್ದರೆ ಅವರು ನನ್ನನ್ನು ಕೊಲ್ಲುತ್ತಾರೆ.... ನೀನು ಪಾರಾಗಿ ಹೋಗಲು ನಾನು ಸಹಾಯ ಮಾಡಿರುವೆ..... ಅವರು ನನ್ನನ್ನು ಕೊಂದು ಹಾಕುತ್ತಾರೆ...." ಪದ್ಮಾ ಹುಚ್ಚಳಂತೆ ಅವನ ಕೈ ಹಿಡಿದು ರಾಕೆಟ ಒಳಗೆ ಎಳೆದುಕೊಂಡಳು.... ಕೂಡಲೇ ಬಾಗಿಲು ಮುಚ್ಚಿಕೊಂಡಿತು.... ಪದ್ಮಾ ಸನ್ 1966 ರ ಬಟನ್ ಒತ್ತಿದಳು....

ರಾಕೆಟ್ ಡಾಕ್ಟರ್ ಕುರಿಯನ್‌ಳ ಬಂಗ್ಲೆಯ ಲಾನ್ ಮೇಲೆ ಇಳಿಯಿತು.... ಅವರಿಬ್ಬರೂ ಹೊರಗೆ ಬಂದರು..... ಆಗ ಬೆಳಗಿನ ಏಳು ಗಂಟೆಯಾಗಿತ್ತು.... ಇನ್ನೂ ಸುತ್ತಲೂ ಮೌನ ಆವರಿಸಿತ್ತು..... ಪದ್ಮಾ ಜಲ್ದಿ ಜಲ್ದಿ ರಾಕೆಟ್‌ನ್ನು ಗ್ಯಾರೇಜನಲ್ಲಿ ಸೇರಿಸಿದಳು.... ಗಪ್ ಚುಪ್ ಹಸಿರ ಹಾಸಿನ ಮೇಲೆ ನಿಂತಿದ್ದ ಶೋಷ ದಂಗಾಗಿ ಆಚೆ–ಈಚೆ ನೋಡುತ್ತಲಿದ್ದ..... ಪಟ್ಟಿ ಪಟ್ಟಿ ಲುಂಗಿ..... ಇಳಿ ಬಿದ್ದ ಕೂದಲು.... ವಿಚಿತ್ರವಾಗಿ ತೋರುತ್ತಿತ್ತು ಅವನಿಗೆ.... ಪದ್ಮಾಳ ಹೃದಯ ಕರಗಿ ಹೋಯಿತು.... ಈ ಬಡಪಾಯಿ ಇಲ್ಲೇನು ಮಾಡಬೇಕು..... ಅವನನ್ನು ಜೊತೆಯಲ್ಲಿ ಕರೆದುಕೊಂಡು ಅವಳು ಬಂಗ್ಲೆಯಲ್ಲಿ ಹೋದಳು.... ಭಾಗ್ಯದಿಂದಾಗಿ ಇಬ್ಬರೂ ಸೋದರರು ಈಸ್ಟರ್‌ದ ರಜೆಯಲ್ಲಿ ಕೋಚೀನಕ್ಕೆ ಹೋಗಿದ್ದರು.... ಅಳು ಬೆಳಗ್ಗೆ ಹತ್ತು ಗಂಟೆಗೆ ಬರುತ್ತಿದ್ದ..... ಅವಳು ಶೋಷನನ್ನು ತನ್ನ ಸೋದರರ ಕೋಣೆಗೆ ಕರೆದೊಯ್ದಳು.... ಅವರ ವಾರ್ಡರೋಬ ತೆರೆದು ಅವನಿಗಾಗುವ ಬಟ್ಟೆ ಹುಡುಕಿದಳು.... "ನೀನು ಡ್ರೆಸ್ ಚೇಂಜ್ ಮಾಡು.... ನಾನು ಬ್ರೆಕ್‌ಫಾಸ್ಟ್ ಸಿದ್ಧಗೊಳಿಸುತ್ತೇನೆ....." ಎಂದು ಹೇಳಿದಳು.....

ಹೀಗೆ ಹೇಳಿದ ಆಕೆ ಡೈನಿಂಗ್ ರೂಮಿನಲ್ಲಿ ಹೋಗಿ ಫ್ರಿಜ್‌ದಿಂದ ಬೆಣ್ಣೆ ಮತ್ತು ತತ್ತಿಗಳನ್ನು ಹೊರ ತೆಗೆದಳು.... ಟೋಸ್ಟರ್‌ದ ಪ್ಲಗ್ ಹಚ್ಚಿದಳು. ಬೆಳಗಿನ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆ ಹೊಸ್ತಿಲದಲ್ಲಿ ಬಿದ್ದಿತ್ತು.... ಎತ್ತಿಕೊಂಡು ಅದರ ಹೆಡ್‌ಲೈನ್ಸ್ ಮೇಲೆ ಕಣ್ಣಾಡಿಸಿದಳು. ಎಲೆಕ್ಟ್ರಿಕ್ ಒಲೆಯ ಮೇಲೆ ತತ್ತಿ ಆಮ್ಲೇಟ್ ಮಾಡುವಲ್ಲಿ ಮಗ್ನಳಾದಳು.

"ಹಾಯ್.... ಗುಡ್‌ಮಾರ್ನಿಂಗ್...."–ಆಕೆ ಗಾಬರಿಯಿಂದ ತಲೆಯೆತ್ತಿ ನೋಡುತ್ತಾಳೆ.... ಬಾಗಿಲಲ್ಲಿ ಶೋಷ ನಿಂತಿದ್ದ..... ಡ್ರೆಸಿಂಗ್ ಗೌನ್‌ದಲ್ಲಿ.... ಬೆರಳುಗಳಲ್ಲಿ ಸಿಗರೇಟ ಉರಿಯುತ್ತಲಿತ್ತು.... ಅಮೇರಿಕನ್ ಸ್ಟೈಲ್‌ನಲ್ಲಿ– "ಬ್ರೇಕ್ ಫಾಸ್ಟ್ ರೆಡಿ.....?" ಎಂದು ಕೇಳುತ್ತ ಕುರ್ಚಿಯ ಮೇಲೆ ಕುಳಿತ..... ಮತ್ತು 'ಟೈಮ್ಸ್ ಆಫ್ ಇಂಡಿಯಾ'ದ ಓದಿನಲ್ಲಿ ಮುಳುಗಿ ಹೋದ......

ಯಾವ ರೀತಿ ಕ್ರಿ. ಪೂ. 1315 ರಲ್ಲಿ ತಲುಪಿದ ಕೂಡಲೇ ಡಾಕ್ಟರ್‌ಪದ್ಮಾ ಕುರಿಯನ್ ಅತ್ಯಂತ ಪ್ರಾಚೀನ ಖುತಬಿ ಮತ್ತು ಇಬ್ರಾನಿ ತಿಳಿಯಲು, ಓದಲು, ಮಾತನಾಡಲು ಆರಂಭಿಸಿದಳೋ ಹಾಗೆಯೇ ಆಗರ್ಭ ಶ್ರೀಮಂತ ಶೋಷ, ಸನ್

1966 ರಲ್ಲಿ ಪ್ರವೇಶ ಮಾಡಿದ ತಕ್ಷಣ ಇಂಗ್ಲೀಷ, ಮಲಯಾಳಂ ಮತ್ತು ಹಿಂದೂಸ್ತಾನಿ ಭಾಷೆಗಳನ್ನು ಬಲ್ಲವನಾಗಿ ಬಿಟ್ಟ.....

ಮುಂದಿನ ಕತೆಯನ್ನು ಸಂಕ್ಷಿಪ್ತಗೊಳಿಸುತ್ತೇನೆ.... ಪದ್ಮಾ ತನ್ನ ಏರಿಯಾದಲ್ಲಿ ಶೋಷನನ್ನು "ಇಜಿಪ್ತದ ಖುತಬಿ ಗೆಳೆಯ" ಎಂದು ಪರಿಚಯಿಸಿಕೊಟ್ಟಳು..... "ಕ್ಲಾಸಿಕಲ್ ಇಜಿಪ್ತ ಕಲೆಯ ಉಸ್ತಾದ..... ನಾನು ಆತನನ್ನು ಅಮೇರಿಕೆಯಲ್ಲಿ ಭೇಟಿಯಾಗಿದ್ದೆ...." ಎಂದು ಹೇಳಿದಳು. ಅಲ್‌ಸಯ್ಯದ ವಕ್ತೂರ ಶೋಷ ಟ್ರೆಡಿಷನಲ್ ಇಜಿಪ್ತ ಚಿತ್ರಗಳ ರಚನೆ ಆರಂಭಿಸಿದ..... ಅವೆಲ್ಲ ಆ ಕೂಡಲೇ ಮಾರಾಟವಾದವು.... ಮುಂಬೈಯಲ್ಲಿ ಆತ ಕಂಬಾಲಾ ಹಿಲ್‌ದ ಮೇಲೆ ಒಂದು ಫ್ಲ್ಯಾಟ ಬಾಡಿಗೆ ಹಿಡಿದ.... ತುಂಬ ಬಲ್ಲಿ ಆ ನಗರದ ಪ್ರಸಿದ್ಧ, ಪ್ರತಿಷ್ಠಿತ ವ್ಯಕ್ತಿಯಾದ..... ಯಾವ ಯಾವುದೋ ರೀತಿಯಿಂದ ಗಲ್ಫ್‌ದೇಶವೊಂದರ ಪಾಸಪೋರ್ಟ ಸಂಪಾದಿಸಿದ. ಪಶ್ಚಿಮ ಯುರೋಪ ಮತ್ತು ಅಮೇರಿಕಾಕ್ಕೆ ಅದೆಷ್ಟೋ ಸಲ ಹೋಗಿ ಬಂದ...... ಓರ್ವ ಸಭ್ಯಗೃಹಸ್ಥನಂತೆ ಹ್ಯಾಂಡ್‌ಸಮ್‌ನಾಗಿದ್ದ...... ಯಶಸ್ವೀ ಕಲಾವಿದನಾಗಿದ್ದ..... ಶ್ರೀಮಂತನಾಗಿದ್ದ..... ರೋಮ್ಯಾಂಟಿಕ್ ಆಗಿದ್ದ.... ಭಾಯಿ ಶೋಷ ವೈಭವದಿಂದ ಇರತೊಡಗಿದ್ದ......

ಪದ್ಮಾ ದಕ್ಷಿಣಭಾರತದ ಲೆಬೋರೆಟರಿಯಲ್ಲಿ ಮೊದಲಿನಂತೆಯೇ ಕೆಲಸ ಮಾಡುತ್ತಿದ್ದಳು.... ವರ್ಷಗಳ ಮೇಲೆ ವರ್ಷಗಳು ಕಳೆದು ಹೋದವು..... ಒಂದು ದಿನ ಅವಳ ತಾಯಿ ಕೇಳಿದಳು—"ನಿನ್ನ ಇಜಿಪ್ತಿಯನ್ ಗೆಳೆಯ ಮದುವೆ ಮಾಡಿಕೊಳ್ಳುವುದಿಲ್ಲವೇನು.....? ಮುಂಬೈಯಲ್ಲಿ ಯಾವಾಗಲೂ ಅವನು ಹುಡುಗಿಯರ ಮಧ್ಯದಲ್ಲಿರುತ್ತಾನೆಂದು ಕೇಳಿರುವೆ......" ಪದ್ಮಾ ಸುಮ್ಮನಿದ್ದಳು.... ಅವಳನ್ನು ಕಾಣಲು ಶೋಷನಿಗೆ ಪುರಸತ್ತೇ ಇರಲಿಲ್ಲ.... ಯಾವಾಗಾದರೊಮ್ಮೆ.... ವರ್ಷ ಎರಡು ವರ್ಷದಲ್ಲಿ ಅಕಸ್ಮಾತ್ತಾಗಿ ಸಿಗುತ್ತಾನೆ..... ಕ್ರಿಸ್‌ಮಸ್ ಹಾಗೂ ಹೊಸ ವರ್ಷದ ಆರಂಭಕ್ಕೆ ಶುಭಾಶಯ ಕಾರ್ಡ ಅವಶ್ಯ ಕಳಿಸುತ್ತಾನೆ.... ವಿಷಯ ನಿಜವಾಗಿ ಇದ್ದುದು ಇದು.... ಪದ್ಮಾ ಸೀದಾ ಸಾದಾ, ಸಾಮಾನ್ಯ ರೂಪದ ತರುಣಿಯಾಗಿದ್ದಳು. ಗಂಡಸು ಅವನು ಕ್ರಿ. ಪೂ. 1315ಕ್ಕೆ ಸಂಬಂಧಿಸಿದವನಾಗಿರಲಿ ಅಥವಾ 1973ಕ್ಕೆ ಸಂಬಂಧಿಸಿದವನಾಗಿರಲಿ..... ಅವನ ಬುದ್ಧಿ ಮಾತ್ರ ಅದೇ..... ಮೂರ್ಖತನ.......

ಇದು ಜೂನ್ ಸನ್ 1975 ರ ಘಟನೆ. ಪದ್ಮಾ ಎರಡು ವಾರದ ರಜೆ ಪಡೆದು ಮುಂಬೈಯಲ್ಲಿರುವ ತನ್ನ ಚಿಕ್ಕಮ್ಮನ ಮನೆಗೆ ಬಂದಿದ್ದಳು.... ಬಾಂದ್ರಾದಲ್ಲಿದ್ದಳು.... ಒಂದು ಸಂಜೆ ಶೋಷನ ಯೋಗ ಕ್ಷೇಮ ಕೇಳಲೆಂದು ಫೋನ್ ಮಾಡಿದಳು—"ನೀನು ಬಹಳಷ್ಟು ಕೆಲಸದಲ್ಲಿರದಿದ್ದರೆ, ನಮ್ಮೊಂದಿಗೇ ಊಟ ಮಾಡಲು ಇಲ್ಲಿಗೆ ಬಾ......"

"ನೀನೇ ಇಲ್ಲಿಗೆ ಬಂದು ಬಿಡು....."—ಶೋಷನ ಬೇಜಾರಿನ ದನಿ ಕೇಳಿಸಿತು.... ಮತ್ತೆ ಅವನು—"ನಾನು ಅಷ್ಟು ದೂರ ಬಾಂದ್ರಾಕ್ಕೆ ಎಲ್ಲಿ ಬರಲಿ....." ಎಂದ.

ಹುಚ್ಚುಚ್ಚಾರಕ್ಕೂ ಒಂದು ಮಿತಿ ಇರುತ್ತದೆ. ಪದ್ಮಾ ಹಾಗೆಂದು ಭಾವಿಸಿದಳು... ಆದರೂ ಆಕೆ ಶೋಷನ ಯೋಗಕ್ಷೇಮದ ಬಗ್ಗೆ ಕಾಳಜಿ ವಹಿಸುವುದು ತನ್ನ ಹೊಣೆಗಾರಿಕೆಯೆಂದು ತಿಳಿದಿದ್ದಳು.... ಟ್ಯಾಕ್ಸಿಯಲ್ಲಿ ಕಂಬಾಲಾ ಹಿಲ್, ಓಲಂಪಿಯಾ ಬಿಲ್ಡಿಂಗ್ ತಲುಪಿದಳು. ಅವನು ತನ್ನ ವೈಭವದ ಅಪಾರ್ಟಮೆಂಟಿನ ಡ್ರಾಯಿಂಗ್ ರೂಮಿನಲ್ಲಿ ಟಿಲಿವಿಜನ್‌ದ ಎದುರಿಗೆ ಕುಳಿತಿದ್ದ.....ಸ್ಕ್ರೀನಿನ ಮೇಲೆ ಇಜಿಪ್ತ ಮತ್ತು

ಇಸ್ರಾಯಿಲ್ ಬಗ್ಗೆ ಒಂದು ಸಂವಾದ ನಡೆದಿತ್ತು... ಪದ್ಮಾ ಒಳಗೆ ಬಂದು ಸೋಫಾದ ಮೇಲೆ ಕುಳಿತಳು..... ಶೋಷ ಅವಳತ್ತ ನೋಡಿದ.... ಮತ್ತೆ ಆ ಕೂಡಲೇ ಟೆಲಿವ್ಹಿಜನ್ ಬಂದ ಮಾಡಿದ..... ''ನಾನು ಇಜಿಪ್ತಕ್ಕೆ ಹೋಗಿ ಹೋರಾಡ ಬೇಕೆನ್ನುತ್ತೇನೆ....'' ಎಂದ.

ಅದಕ್ಕೆ ಪದ್ಮಾ–''ಹಾಗೆ ಈ ಯುದ್ಧ ಸಾಕಷ್ಟು ಹಳೆಯದಾಗಿದೆ....'' ಎಂದು ಮೆಲ್ಲಗೆ ಹೇಳಿದಳು.

''ರಮ್ಜಾನ್‌ವಾರ್.....''–ಶೋಷ ಜೋರಾಗಿ ಒದರಿಕೊಂಡ......

''ಓ.ಕೆ. ರಮ್ಜಾನ್‌ವಾರ್.....''

''ನಾನು ಮಿಲ್ಟ್ರಿಯಲ್ಲಿ ಸೇರಬೇಕೆಂದಿದ್ದೇನೆ......''

''ಅದಕ್ಕೆ ನಿನ್ನ ವಯಸ್ಸು ಈಗ ಮೀರಿದೆ.....''

''ಷಟಅಪ್.....'' ಎನ್ನುತ್ತ ಅವನು ಸ್ಕಾಚವ್ಹಿಸ್ಕಿಯನ್ನು ಗ್ಲಾಸಗೆ, ಎರಡನೆಯ ಸಲ ಸುರುವಿಕೊಂಡ......

''ಶೋಷ ನೀನು ಸರೆ ತುಂಬ ಕುಡಿಯಲಾರಂಭಿಸಿರುವೆ....'' ಎಂದಳು ಪದ್ಮಾ ಮೆಲ್ಲಗೆ.....

ಶೋಷ ಸಿಟ್ಟಿನಿಂದ ಉತ್ತರಿಸಿದ–

''ನನ್ನೊಂದಿಗೆ ನೀನು ಹೆಂಡತಿಯ ಹಾಗೆ ಮಾತನಾಡಬೇಡ.....''

''ಐ ಬೆಗ್ ಯುವರ ಪಾರಡನ್.....'' ಎಂದಳು.... ಈಗ ಪದ್ಮಾಗೆ ನಿಜವಾಗಿಯೂ ಸಿಟ್ಟು ಬಂದಿತು.....

''ಸಾರಿ..... ಪದ್ಮಾ.... ಐಯ್ಯಾಮ್ ಸಾರಿ.....'' ಎಂದು ಶೋಷ ಮೆಲ್ಲಗೆ ಹೇಳಿದ. ಅವನು ಈಗ ತುಂಬ ಚಿಂತಿತನಾಗಿರುವಂತೆ ಕಾಣಿಸಿದ......

''ಶೋಷ.... ಹನಿ.... ಏನು..... ವಿಷಯವಾದರೂ ಏನು.....?'' ಎಂದು ಪದ್ಮಾ ವಿಚಾರಿಸಿದಳು.....

''ಹೇಳಲೇ....?'' ಎಂದವನು ಕೊಂಚ ತಡೆದು ಮತ್ತೆ ಹೇಳಿದ–''ವಿಷಯ ವೇನೆಂದರೆ...... ಪದ್ಮಾ..... ನನಗೆ ನನ್ನ ಕಾಲದ ನೆನಪಾಗುತ್ತಲಿದೆ.... ನಾನು ನನ್ನ ಕಾಲಕ್ಕೆ ಮರಳಿ ಹೋಗಬೇಕೆನ್ನುತ್ತೇನೆ.......''

''ನಿನ್ನ ಕಾಲಕ್ಕೆ.....?'' ಪದ್ಮಾ ಆಶ್ಚರ್ಯದಿಂದ ಮತ್ತೆ ಮತ್ತೆ ಅದನ್ನೇ ಹೇಳಿದಳು.... ''ಈ ಕಾಲ ಬಿಟ್ಟು......?''

''ಈ ಕಾಲ.....? ಈ ಕಾಲಕ್ಕೆ ಅದಾವ ರೆಕ್ಕೆ ಮೂಡಿದೆ ಹೇಳು.....?'' ಎಂದೆನ್ನುತ್ತ ಮತ್ತೆ ಟೆಲಿವ್ಹಿಜನ್ ಹಚ್ಚಿದ.... ನ್ಯೂಜ ರೀಲದಲ್ಲಿ ಇಡೀ ಜಗತ್ತಿನ ಸುದ್ದಿ.... ಯುದ್ಧ, ಜಾತಿ, ಧರ್ಮಗಳ ಹೆಸರಿನಲ್ಲಿ ನಡೆದಿರುವ ದಂಗೆಗಳ ದೃಶ್ಯ ತೋರಿಸುತ್ತಲಿದ್ದರು....

''ಹೇಳು.... ನನಗಿಂತ ಸವಾ ಮೂರು ಸಾವಿರ ವರ್ಷಗಳ ನಂತರ ನೀನೆಷ್ಟು ಸುಖವಾಗಿರುವೆ.....? ನಾವು, ಬಿಸಿ ಇಸ್ರಾಯಿಲ್ ಮೇಲೆ ಅನ್ಯಾಯ ಹೊರಿಸುತ್ತಿ

ದ್ದೆವು.... ಮತ್ತು ಅಖೋರಿಯ ಅವರೊಂದಿಗ ಹೊಡೆದಾಡುತ್ತಿದ್ದೆವು..... ನೀವು ಎಲ್ಲರೊಂದಿಗೆ ಅಪಾರ ಪ್ರೇಮದೊಂದಿಗೆ ಇರುತ್ತಿದ್ದೀರಿ..... ನಿಮ್ಮ ಆಳುವ ಜನಾಂಗ ದೇವದೂತರು.... ನಾವು ಸಾವಿನಿಂದ ಹೆದರುತ್ತಿದ್ದೆವು..... ನೀವು ಸಾವಿನ ಭಯದಿಂದ ಮುಕ್ತರಾಗಿರುವಿರಿ..... ನೀವು ವೈಭವಪೂರ್ಣ ಗೋರಿ, ಸಮಾಧಿಗಳನ್ನು ನಿರ್ಮಿಸುವು ದಿಲ್ಲ.... ಹೆಣದ ಪೂಜಕರಲ್ಲ ನೀವು..... ಕಾವ್ಯ ಗಿವ್ಯ ಎಲ್ಲ ಬಿಟ್ಟು ಬಿಟ್ಟಿದ್ದೀರಿ.... ಶೋಕ ಗೀತ ರಚಿಸುವುದಿಲ್ಲ.....

ನಿಮ್ಮ ಧರ್ಮ, ತತ್ವಜ್ಞಾನ..... ಸಂಸ್ಕೃತಿ ಶ್ರೇಷ್ಠತೆ......'' ಎನ್ನುತ್ತ ವ್ಹಿಸ್ಕಿಯ ಗ್ಲಾಸನ್ನು ಮೇಜಿನ ಮೇಲೆ ಕುಕ್ಕರಿಸುತ್ತ ಜೋರಾಗಿ ನಕ್ಕ..... ''ನಿಮ್ಮ ದೇವಾನು ದೇವತೆಗಳು.... ದೃಷ್ಟಿಕೋನ.... ಆತ್ಮ ವಿದ್ಯೆ.... ಇದು..... ಅದು.... ಎಲ್ಲ ಅನ್‌ಸೈಂಟಿ ಫಿಕ್..... ನಿಮ್ಮ ಯುದ್ಧ..... ನಿಮ್ಮ ನ್ಯೂಕ್ಲಿಯರ್‌ಬಾಂಬ್ ಕೂಡ ಕೇವಲ ಮನುಷ್ಯನ ಸ್ನೇಹ..... ಹೌದಲ್ಲ.... ? ನಿಮ್ಮ ಬೆಳಕಿನ ವೇಗ ನಿಜವಾಗಲೂ ಅದ್ಭುತ ವೇಗ.....?''

''ನೀನು ಕೆಲಕಾಲ ನಿನ್ನನ್ನು ನೀನು out of time ಎಂದು ಭಾವಿಸುತ್ತಿರುವೆ.... ಕಾಳಜಿ ಬೇಡ..... ಬೇರೆ ಇನ್ನೇನೂ ಇಲ್ಲ.... ನಡೆ...... ಪಿಕ್ಚರ್‌ಗೆ ಹೋಗಿ ಬರೋಣ.....''

''ಓ ! ಡುಯು ಷಟ ಅಪ್.... ಆ್ಯಂಡ್ ಲಿವ್ ಮೀ ಅಲೋನ್......''

''ಓ.ಕೆ......'' ಎನ್ನುತ್ತ ಆಕೆ ಎದ್ದು ನಿಂತಳು.... ಹಾಗೂ ''ಗುಡ್ ನೈಟ್ ಶೋಷ.....'' ಎಂದು ಆಕೆ ಬಾಗಿಲದತ್ತ ಹೊರಟಳು....

''ಪದ್ಮಾ.....'' ಶೋಷ ಕೂಗಿದ.....

''ಪದ್ಮಾ..... ಐ ಯ್ಯಾಮ್ ಸಾರಿ.....''

''ಸರಿ..... ಶೋಷ.......''

''ಪದ್ಮಾ ಇಲ್ಲಿ ಬಾ..... ಕೂತುಕೊ..... ಕೇಳಿಲ್ಲಿ..... ವಿಷಯವೇನೆಂದರೆ..... ನನಗೆ ನನ್ನ ತಾಯಿ.... ತಂದೆ..... ತಂಗಿಯರು.... ಎಲ್ಲರ ನೆನಪು..... ಕಾಡುತ್ತ ಲಿದೆ..... ನಾನು ನನ್ನ ಮನೆಗೆ ಹೋಗ ಬಯಸುತ್ತೇನೆ. ನಿನ್ನ ಆ ರಾಕೆಟ್..... ಅದಿನ್ನೂ ನಿನ್ನ ಮೋಟರ ಗ್ಯಾರೇಜನಲ್ಲಿಯೇ ಇದೆ..... ಅಲ್ಲ..... ?''

''ಇದೆ.... ನಿಜ..... ನಾನು ಅದರ ಬಗ್ಗೆ ಯೋಚಿಸಲೂ ಬಯಸುವುದಿಲ್ಲ.... ಹೆದರಿಕೆಯಾಗುತ್ತದೆ......''

''ನನ್ನನ್ನು ಅದರಲ್ಲಿ ಕರೆದೊಯ್ದು ಮರಳಿ ಬಿಟ್ಟು ಬಾ..... ನಾನು ಬಹಳಷ್ಟು ವರ್ತಮಾನ ಯುಗವನ್ನು ಕಂಡೆ......''

''ನೀನು ತುಂಬ ಅಧಿಕ ಪ್ರಸಂಗಿತನ ಮಾಡುತ್ತಿರುವೆ..... ನಾವು ಅಂಥ ಕೆಟ್ಟವ ರೇನಲ್ಲ.... ಇದು ನಿನ್ನ ಸಾಮಯಿಕ ಮೂಡಾಗಿದೆ.... ಎಲ್ಲ ಸರಿಹೋಗುತ್ತದೆ.....''

''ಸಾಧ್ಯವಿರಬಹುದು.... ಆದರ ಸತ್ಯವೇನಂದರ ನಾನು ಹೋಮ್‌ಸಿಕ್ ಆಗಿದ್ದೇನೆ......''

''ಟೈಂ ಸಿಕ್.....'' ಪದ್ಮಾ ಸರಿಪಡಿಸುತ್ತ–''ಸರಿ.... ಹಾಗಾದರೆ ನಿನ್ನ ಮರ್ಜಿ.... ಆದರೆ ನೆನಪಿರಲಿ.... ಈ ರಾಕೇಟ್ ಬೆಳಕಿನ ವೇಗಕ್ಕಿಂತ ಹೆಚ್ಚು ವೇಗ ಕ್ರಮಿಸುತ್ತದೆ.... ಕೇವಲ ನಾಲ್ಕು ಸಲ ಮಾತ್ರ ಹೀಗೆ ಕ್ರಮಿಸಬಲ್ಲದು.... ನಿನ್ನನ್ನು ನಿನ್ನ ದೇಶಕ್ಕೆ ಬಿಟ್ಟು, ನಾನು ಮರಳಿದರೆ ಆಯಿತು.... ಅನಂತರ ನೀನು ಮತ್ತೆ ಇಲ್ಲಿಗೆ ಬರಲಾರೆ......''

''ನನಗೆ ಮಂಜೂರು.....'' ಎಂದು ಶೋಷ ಹೇಳಿದ....

ಸನ್ 1306 ರಲ್ಲಿ ಸರೋವರದ ತಟದಲ್ಲಿ ಕುರಿಗಾಹಿ ಮೊದಲಿನಂತೆಯೇ ಆಡು, ಕುರಿ ಮೇಯಿಸುತ್ತಿದ್ದ..... ಒಂಬತ್ತು ವರ್ಷಗಳಲ್ಲಿ ಅವನು ತರುಣನಾಗಿದ್ದ.... ಪದ್ಮಾ ಮತ್ತು ಶೋಷ, ರಾಕೇಟದ ಪಾವಟಿಗೆಗಳಿಂದ ಇಳಿಯುತ್ತಿರುವುದನ್ನು ನೋಡಿದ ಅವನು ಆ ಕೂಡಲೇ ಅಚ್ಚರಿಯಲ್ಲಿ ಮುಳುಗಿದ.... ಶೋಷ 1975ರಲ್ಲಿ ಹೊರಡುವ ಸಮಯದಲ್ಲಿ ತನ್ನ ಹಳೆಯ ಡ್ರೆಸ್ ಮತ್ತು ಆಭರಣಗಳನ್ನು ಹಾಕಿಕೊಂಡಿದ್ದ.... ಹೀಗಾಗಿ ಅವನು ಅದೇ ಹಳೆಯ ಶೋಷನಾಗಿ ತೋರುತ್ತಿದ್ದ..... ''ನಾನು ಪಟ್ಟಣಕ್ಕೆ ಬರುವುದಿಲ್ಲ.... ನಿಮ್ಮ ಬಾದಷಾಹ ಮತ್ತೆ ನನ್ನನ್ನು ಬಂಧಿಸಬಹುದು.....'' ಎಂದಳು ಪದ್ಮಾ.

''ದೊರೆ ಖುಸರ್ ಅಲ್‌ಶ್ಮಸ್‌ದಲ್ಲಿದ್ದಾರೆಯೋ..... ಅಥವಾ ಫೇನೀಜಕ್ಕೆ ಹೋಗಿದ್ದಾರೋ....'' ಎಂದು ಶೋಷ ಕುರಿಕಾಯುವ ತರುಣನನ್ನು ಕೇಳಿದ....

''ಹಿಂದಿನ ದೊರೆ ದೇವರಿಗೆ ಪ್ರಿಯರಾದರು....'' ಎನ್ನುತ್ತ ಅವನು ಕೈಸನ್ನೆಯಿಂದ ಒಂದು ಹೊಸ ಗೋರಿ ತೋರಿಸಿದ..... ಹಾಗೂ ಹೊಸ ದೊರೆ ಈ ದಿನಗಳಲ್ಲಿ ಫೇನೀಜ್‌ದಲ್ಲಿದ್ದಾರೆಂದು ತಿಳಿಸಿದ.....

''ಪದ್ಮಾ ನಡೆ.... ನಿನಗೆ ಫೇನೀಜ್ ತೋರಿಸಿಕೊಂಡು ಬರುವೆ..... ಹೊಸ ದೊರೆ ನಿಷ್ಕರುಣೆಯಾಗಿದ್ದಾನೆ.... ಆದರೆ ನನ್ನೊಂದಿಗೆ ಬಾಲ್ಯದಲ್ಲಿ ಆಟವಾಡಿದವನು..... ನಿನಗೇನೂ ಹಾನಿಮಾಡಲಾರ..... ಅವನು ತನ್ನ ರಾಣಿಯನ್ನು ಅಪಾರವಾಗಿ ಪ್ರೇಮಿಸುತ್ತಾನೆ..... ಎರಡನೇ ಮದುವೆ ಮಾಡಿಕೊಳ್ಳುವ ವಿಚಾರ ಅವನಿಗೆ ಹೊಳೆಯಲಿಕ್ಕಿಲ್ಲ.... ನಡೆ..... ನಾಳೆ ನಾಡದ್ದು ಮರಳಿ ಬಂದು ಬಿಡೋಣ.''

ಅವರು ಫೇನೀಜ್‌ಗೆ ಹೊರಟರು... ಶೋಷ ತನ್ನ ಕಾಲಕ್ಕೆ ಮತ್ತೆ ಮರಳಿ ತುಂಬ ಸಂತೋಷ ಹಾಗೂ ಸಂತೃಪ್ತಿಯಿಲ್ಲದ್ದಂತೆ ಕಾಣಿಸುತ್ತಿದ್ದ.... ನದಿಯ ಮೇಲಿಂದ ದೂರದಲ್ಲಿ ಅರಮನೆಗಳು ಕಾಣಿಸಿದವು....

''ಇದು ಆಸ್ಥಾನ ಡ್ಯಾಮುದಲ್ಲಿ ಮುಳುಗಿ ಹೋಗಿದೆ....'' ಶೋಷ ಪದ್ಮಾಳ ನೆನಪಿಗೆ ತಂದುಕೊಟ್ಟ.....

''ಬಹಳಷ್ಟನ್ನು ಉಳಿಸಿಕೊಳ್ಳಲಾಗಿದೆ ಕೂಡ.....'' ಎಂದು ಪದ್ಮಾ ಕೂಡಲೇ ಉತ್ತರಿಸಿದಳು.... ಎಲ್ಲಲ್ಲೋ ಹಾದು ಅವರು ಸಮರ್ ಪ್ಯಾಲೇಸ್ ತಲುಪಿದರು..... ಶೋಷನ ತಂದೆ, ತಾಯಿ.... ತಂಗಿಯರು.... ಮತ್ತು ರಾಜಮನೆತನದವರು ಎದುರಿನ ವಿಶಾಲವಾದ ಹಾಲ್‌ನಲ್ಲಿ ಕುರ್ಚಿಗಳ ಮೇಲೆ ಕುಳಿತು, ಸಂತೋಷದ ವಾರ್ತಾಲಾಪದಲ್ಲಿ ಮಗ್ನರಾಗಿದ್ದರು.... ಅದು ಬೇಸಗೆಯ ಕಾಲದ ಅಪರಾಹ್ನವಾಗಿತ್ತು.... ಬಿಸಿಲು

ನೈಲ ನದಿಯಲ್ಲಿ ಮುಳುಗುತ್ತಲಿತ್ತು.... ಶೋಷ ಅವರಿಗೆಲ್ಲ ಹೇಳಿದ.... ದೇವಿ ಹಾಶೂರಳ ಅಪ್ಪಣೆ ಇಲ್ಲ..... ನಾನು ಇಷ್ಟು ಕಾಲ ಆಕಾಶದ ಕುಮಾರಿಯೊಂದಿಗೆ ಎಲ್ಲಿ ಮಾಯವಾಗಿದ್ದೆ—ಎಂಬುದನ್ನು ಹೇಳಲು....

ನಾಲ್ಕನೆಯ ದಿನ ಅವರು ಅಲ್ಲಿಂದ ಹೊರಟರು.... ಶೋಷ ಅವಳನ್ನು ನಖಲಿಸ್ತಾನದವರೆಗೆ ತಲುಪಿಸಲು ಬಂದ.... ಸರೋವರದ ತಟದಲ್ಲಿ ಸುತ್ತಲೂ ನೋಡಿದರು.... ಪದ್ಮಾ ಗಾಬರಿಯಾದಳು..... ಖರ್ಜುರಮರಗಳ ಮಧ್ಯದಲ್ಲಿ ಇಳಿಸಿದ್ದ ರಾಕೇಟ್ ಕಾಣಿಸಲಿಲ್ಲ.... ಪದ್ಮಾಳ ಕಾಲುಗಳು ನಡುಗಲಾರಂಭಿಸಿದವು.... ಕಾಲ ಕೆಳಗಿನ ನೆಲ ಕುಸಿಯತೊಡಗಿತ್ತು.... ಅವಳು ಅಲ್ಲಿಯೇ ಮರಳಿನ ಮೇಲೆ ಕುಸಿದಳು.... ಶೋಷ ನಖಲಿಸ್ತಾನದ ಸುತ್ತ ಮುತ್ತ ನೋಡಿ ಬಂದ.... ಕುರಿಗಾಹಿ ಗಳನ್ನು ಕೂಗಿದ..... ಸಮತಟ್ಟ ಮರಭೂಮಿಯಲ್ಲಿ ರಾಕೇಟ್ ಎಲ್ಲಿಯೂ.... ದೂರ ದೂರದವರೆಗೂ ಕಂಡು ಬರಲಿಲ್ಲ..... ಶೋಷ ಪದ್ಮಾಳ ಹತ್ತಿರ ಬಂದ.... ಅವಳು ಮರಳಿನ ಮೇಲೆ ತಲೆಬಾಗಿಸಿಕೊಂಡು ಕುಳಿತಿದ್ದಳು.... ಶೋಷನ ದೃಷ್ಟಿ ಸಮೀಪ ದಲ್ಲಿದ್ದ ಒಂದು ಕಲ್ಲಿನ ಮೇಲೆ ಬಿತ್ತು.... ಅದರ ಕೆಳಗೆ ಪೈಪಾಯರ್ಸ್‌ದ ಒಂದು ಹಳದಿ ತುಂಡು ಬಿದ್ದಿತ್ತು..... ಶೋಷ ಅದನ್ನೆಳೆದುಕೊಂಡ.... ಓದಿದ..... ಹಾಗೂ ಪದ್ಮಾಗೆ ಕೊಟ್ಟ..... ಇಬ್ರಾನಿಯಲ್ಲಿ ಬರೆಯಲಾಗಿತ್ತು....

ಮರಿಯಮ್ ಬಿನ್ತ್ ಅಬ್ರಾಹಿಮ್ ಷಾಲುಮ್ ಆಲೆಖಿಮ್......

ನಿನ್ನೆ ಮಧ್ಯಾಹ್ನ ಫರ್‌ಊನ ಆಲಿಯಾನ ಗೋರಿಗಾಗಿ ಬಂಡೆಗಲ್ಲು ಹೊತ್ತು ಹೋಗುತ್ತಿರುವಾಗ ನನಗೆ ಚಾಬೂಕದಿಂದ ತುಂಬ ಹೊಡೆಯುತ್ತಿದ್ದರು.... ಆಗ ನಾನು ಜೀವಂತ ಉಳಿಯಲಾರೆ ಎನ್ನಿಸಿ ನೀರು ಕುಡಿಯಲೆಂದು ತೇಕುತ್ತ ತೇಕುತ್ತ..... ದೇಹ ಹೊಸೆಯುತ್ತ...... ಹೊಸೆಯುತ್ತ...... ಈ ಸರೋವರದ ಹತ್ತಿರ ಬಂದೆ..... ಇಲ್ಲಿ ನಿನ್ನ ರಾಕೇಟ ದೇವದೂತನ ಹಾಗೆ ಝಗಝಗಿಸುತ್ತಲಿರುವುದನ್ನು ಕಂಡೆ..... ಒಂಬತ್ತು ವರ್ಷಗಳ ಮುಂಚೆ ಆ ರಾತ್ರಿ ನೀನು ನನಗೆ ಏನೆಲ್ಲ ತಿಳಿಸಿದ್ದೆಯೋ ಎಲ್ಲವೂ ಸ್ಮರಣೆಯಲ್ಲಿತ್ತು.... ಸಮಾಧಿ ಕಟ್ಟಿಸಲಿರುವ ಇಜಿಪ್ತದ ಇಂಜಿನೀಯರರು ಮೂರು ನಾಲ್ಕುದಿನಗಳಿಂದ ಪರಸ್ಪರರಲ್ಲಿ ಮಾತಾಡುತ್ತಿದ್ದರು.... ಆಕಾಶದ ಕುಮಾರಿ ಆಗರ್ಭ ಶ್ರೀಮಂತ ಶೋಷನನ್ನು ಮರಳಿ ಕರೆತಂದಿದ್ದಾಳೆ.... ಹಾಗೂ ರಾಜನ ಬೇಸಿಗೆಯ ಅರಮನೆಗೆ ಹೋಗಿದ್ದಾಳೆ.... ಎಂದು.... ಇದರಿಂದಾಗಿ ನೀನು ಇನ್ನೂ ಕೆಲವು ಕಾಲ ಇಲ್ಲಿರಬಹು ದೆಂದು ಊಹಿಸಲು ಕಾರಣವಾಯಿತು..... ನೀನು ಆಗ ಇದನ್ನೂ ಹೇಳಿದ್ದೆ.... ಎರಡನೆಯ ದೊರೆಯ ಕಾಲದಲ್ಲಿ.... ಮೂಸಾ ಜನ್ಮ ತಾಳುತ್ತಾನೆ,.... ಯಾರಿಗೆ ಗೊತ್ತು.... ಈ ಸಮಯದಲ್ಲಿ..... ನಾನು ನಿನಗೆ ಈ ವಾಕ್ಯ ಬರೆಯುವ ಈ ಕಾಲದಲ್ಲಿ..... ಅವನು ನಮ್ಮ ಓಣಿಯ ಯಾವುದಾದರೂ ಒಂದು ಮನೆತನವಲ್ಲಿ ಜನ್ಮಪಡೆದಿದ್ದರೂ ಪಡೆದಿರಬಹುದು.....ಆದರೆ ಆತ ಬೆಳೆದು ದೊಡ್ಡವನಾಗಲು.... ಹಾಗೂ ನಮ್ಮ ಮುಕ್ತಿಗೆ, ಬಿಡುಗಡೆಗೆ ಇನ್ನೂ ಬಹಳ ಕಾಲ ಬೇಕು......ಯಾರಿಗೆ ಗೊತ್ತು ಯಾವಾಗ ಆದೀತು.... ಏನಾದೀತು.... ನಾನೀಗ ಪಟ್ಟಣಕ್ಕೆ ಮರಳಿದರೆ ಇಬ್ರಾನಿ

ಗುಲಾಮರ ಮೇಲ್ವಿಚಾರಕ.... ಅವನು ನನ್ನ ರಕ್ತ ಕುಡಿವ ಆಶೆಯಿರಿಸಿ ದ್ದಾನೆ.... ನನ್ನನ್ನು ಉಸುಗಿನಲ್ಲಿ ಜೀವಂತ ಹುಗಿದು ಬಿಡುತ್ತಾನೆ.... ಆದ್ದರಿಂದ, ಜೀವ ಅತ್ಯಂತ ಪ್ರಿಯವಾದುದು.... ಅದನ್ನು ಉಳಿಸಲು ನಿನ್ನ ರಾಕೇಟದಲ್ಲಿ ಕುಳಿತು ನಿನ್ನ ಕಾಲದಲ್ಲಿ ಪ್ರವಾಸ ಕೈಕೊಳ್ಳುತ್ತಿದ್ದೇನೆ.... ನಾನು ಎಲ್ಲಕ್ಕಿಂತ ಮೊದಲು ಅಮೇರಿಕಾಕ್ಕೆ... ನ್ಯೂಯಾರ್ಕಗೆ ಹೋಗುತ್ತೇನೆ..... ಅದರ ಬಗ್ಗೆ ನೀನು ನನಗೆ ಆ ರಾತ್ರಿ ತಿಳಿಸಿದ್ದೆ..... ನಂತರ ಇಸ್ರಾಯಿಲ್.... ಅಲ್ಲಿ ಸೆಟ್ಲ ಆದ ಕೂಡಲೇ ಎಳ್ಳಷ್ಟೂ ತಡಮಾಡದೇ.... ದೇವರಾಣೆಯಾಗಿ..... ಇಲ್ಲಿಗೆ ನಾನು ಬಂದು ನಿನ್ನನ್ನು ನಿನ್ನ ಕಾಲದೊಳಕ್ಕೆ ಕರೆ ದೊಯ್ಯುತ್ತೇನೆ.... ಇಂದಿನಿಂದ ಅದು ನನ್ನ ಕಾಲವೂ ಆಗಿದೆ....

ನಿನ್ನ ಸೋದರ

ಮೈಖಾಯಿಲ್ ಬಿನ್–ಹನ್ನಾನ್–ಬಿನ್‌ಯಾಖೂಬ

(ಇಂದಿನಿಂದ ಮೈಕಲ್–ಎಚ್–ಜೇಕಬ್ ಉರ್ಫ್ ಮೈಯಕ್.....)

ಕಾಗದ ಪದ್ಮಾಳ ಕೈಯಿಂದ ಜಾರಿ ಉಸುಗಿನ ಮೇಲೆ ಬಿತ್ತು..... ಅವಳ ಕಣ್ಣಕೆಳಗೆ ಗಾಢಾಂಧಕಾರ ಹಬ್ಬಿತು.... ಹಾಗೂ ಚಕ್ರ ಬಂದು ಬೀಳತೊಡಗಿದಳು.... ಶೋಷ ಕೂಡಲೇ ಅವಳನ್ನು ಸಂಬಾಳಿಸಿದ.....

''ಪದ್ಮಾ, ನಿನ್ನನ್ನು ಮರಳಿ ಕರೆದೊಯ್ಯಲು ಬರುವುದಾಗಿ ಅವನು ಬರೆದಿದ್ದಾನೆ..... ಗಾಬರಿಯಾಗಬೇಡ..... ನಾನು ಅವನನ್ನು ಬಾಲ್ಯಕಾಲದಿಂದಲೂ ಬಲ್ಲೆ..... ಅತ್ಯಂತ ಪ್ರಾಮಾಣಿಕ ತರುಣ.... ನೀನು ನೆನಪಿಸಿಕೋ.... ನಾನು ಕೂಡ ಪ್ರಾಣ ಉಳಿಸಿಕೊಳ್ಳಲೆಂದೇ ನಿನ್ನೊಂದಿಗೆ ಅಂದು ಓಡಿ ಬಂದಿದ್ದೆ..... ಅವನು ಅವಶ್ಯ ಮರಳಿ ಬರುತ್ತಾನೆ.....'' ಎಂದು ಶೋಷ ಸಮಾಧಾನ ಹೇಳಿದ......

''ಶೋಷ.....'' ಪದ್ಮಾ ಮೇರಿ, ಮೆಲ್ಲಗೆ ಹೇಳಿದಳು–''ಸನ್ 1975ರಲ್ಲಿ ನಾವು ಹೊರಡುವ ಕಾಲದಲ್ಲಿ ನಾನು ನಿನಗೆ ಹೇಳಿದ್ದೆ.... ಈ ರಾಕೆಟ್, ಬೆಳಕಿನ ವೇಗಕ್ಕಿಂತ ಹೆಚ್ಚು ವೇಗದಲ್ಲಿ, ಕೇವಲ ನಾಲ್ಕು ಸಲ ಮಾತ್ರ, ಹಾರಾಡಬಲ್ಲುದೆಂದು......''

# ಡಾಲನವಾಲಾ

ಪ್ರತಿ ಮೂರು ದಿವಸಕ್ಕೊಮ್ಮೆ ಅಪರಾಹ್ನ ತಗ್ಗಿದ ನಂತರ ಅತ್ಯಂತ ತೆಳ್ಳಗಿನ, ಮುಪ್ಪಿನ, ಅಲ್ಲಲ್ಲಿ ಹೊಲಸು ಮಿಂಚುವ ಕರಿಕೋಟು-ಪ್ಯಾಂಟ್ ಧರಿಸಿದ, ಕಪ್ಪಗಿನ ದುಂಡು ಟೊಪ್ಪಿಗೆ, ತೆಳ್ಳಗಿನ ಫ್ರೇಮಿನ ಚಾಳೀಸು ಹಾಕಿಕೊಂಡ ಓರ್ವ ವ್ಯಕ್ತಿ ಕೈಯಲ್ಲಿ ಕೋಲು ಹಿಡಿದು ಬರುತ್ತಾನೆ. ಬಂದವನೇ ಹೊರಗಿನ ಜಗಲಿ ಮೇಲೆ ಕೋಲಿನಿಂದ ಕಟ್ ಕಟ್ ಎಂದು ಬಾರಿಸುತ್ತಾನೆ. ಫಕೀರಾ ಹೊರಗೆ ಬಂದು ''ಮಗು ಬಾ ಇನ್ನು, ಸಾಯಿಮನ್ ಸಾಹೇಬರು ಬಂದಿದ್ದಾರೆ'' ಎಂದು ಬಾಜಿಯನ್ನು ಕರೆಯುತ್ತಾನೆ. ಮುದುಕ ಹೊರಗಿನಿಂದಲೇ ತೋಟದ ದಾರಿಯನ್ನು ಸುತ್ತಿ ಸಮೀಪದ ಪೋರ್ಟಿಕೊದೊಳಕ್ಕೆ ತಲುಪುತ್ತಾನೆ. ಒಂದು ಮೂಲೆಯಲ್ಲಿ ನಿಂತು ಕಿಸೆಯೊಳಗಿಂದ ಹೊಲಸಾದ ಕೈವಸ್ತ್ರ ತೆಗೆದು ಬಾಗಿ ಮತ್ತೆ ಮೆಲ್ಲಗೆ-''ರೇಶಮ್...ರೇಶಮ್...''ಎಂದು ಕರೆಯುತ್ತಾನೆ. ರೇಶಮ್ ಓಡುತ್ತ ಬರುತ್ತದೆ. ಬಾಜಿ ಅತ್ಯಂತ ಕಾಳಜಿಯಿಂದ ಸಿತಾರ ಹಿಡಿದುಕೊಂಡು ಅಲ್ಲಿಗೆ ಬರುತ್ತಾಳೆ. ದಿವಾನದ ಮೇಲೆ ಕುಳಿತು ಸಿತಾರಕ್ಕೆ ಹೊದಿಸಿದ್ದ ಬನಾರಸಿ ಹೊದಿಕೆಯನ್ನು ತೆಗೆಯುತ್ತಾಳೆ. ರಿಯಾಜ, ಅಭ್ಯಾಸ ಆರಂಭವಾಗುತ್ತದೆ.

ಮಳೆ ಬಂದು ನಿಂತ ನಂತರ ಇಡೀ ತೋಟ ಹಸಿಯಾದಾಗ ಅಲ್ಲಿಯ ಮಣ್ಣಿನಿಂದ ಹೊರಟ ಒಂದು ವಿಚಿತ್ರ ತಾಜಾತನ ಹಾಗೂ ಸುಗಂಧ ಇಡೀ ವಾತಾವರಣದಲ್ಲಿ ತುಂಬಿ ತುಳುಕುತ್ತದೆ. ಮುದುಕ ಪಾಠ ಮುಗಿಸಿ ಮರಳಿ ಹೋಗುವಾಗ ತೋಟದಲ್ಲಿ ಬಾದಾಮಿ ಸಿಕ್ಕುತ್ತದೆ. ಆತ ಅದನ್ನು ತೆಗೆದುಕೊಂಡು ಕಿಸೆಯಲ್ಲಿರಿಸಿಕೊಳ್ಳುತ್ತಾನೆ. ರೇಶಮ್ ಆತನ ಹಿಂದಿಂದೆ ಬರುತ್ತದೆ. ರೇಶಮ್ ಪಾತರಗಿತ್ತಿಗಳನ್ನು ಹಿಡಿಯಲು ಹೆಚ್ಚಾಗಿ ಗಿಡ ಗಂಟಿಗಳಲ್ಲಿ ಅಡಗಿಕೊಳ್ಳುತ್ತದೆ. ಇಲ್ಲವೇ ಯಾವುದಾದರೂ ಸಣ್ಣ ಪುಟ್ಟ ಗಿಡ ಹತ್ತುತ್ತದೆ. ಆಗ ಮುದುಕ ತಲೆಯೆತ್ತಿ ಒಂದು ಕ್ಷಣ ಅಲುಗಾಡುವ ಗಿಡದ ಟೊಂಗೆ ನೋಡುತ್ತಾನೆ. ಮತ್ತೆ ತಲೆ ಕೆಳಗೆ ಮಾಡಿಕೊಂಡು ಗೇಟಿನಿಂದ ಹೊರಗೆ ಹೊರಟು ಹೋಗುತ್ತಾನೆ. ಮತ್ತೆ ಮಾರನೇ ದಿನ ಅಪರಾಹ್ನ ಅದೇ ರೀತಿ ಜಗಲಿಯ ಮೇಲೆ ಕೋಲಿನಿಂದ ಕಟ್ ಕಟ್ ಬಡಿಯುವ ಸಪ್ಪಳ ಕೇಳಿಸುತ್ತದೆ...ಇದು ಬಹಳ ದಿನಗಳಿಂದ ಹೀಗೆಯೇ ಸಾಗಿ ಬಂದಿದೆ.

ಶ್ರೀಮತಿ ಜೋಗಮಾಯಾ ಚಟರ್ಜಿ ಕಲಕತ್ತೆಯಿಂದ ಬಂದು ಈ ಓಣಿಯಲ್ಲಿ ನೆಲಸಿದ ನಂತರ ಓಣಿಯ ಜನಕ್ಕೆ ತಮ್ಮ ಜೀವನದಲ್ಲಿ ಕಲೆ ಮತ್ತು ಸಂಸ್ಕೃತಿಯ ಕೊರತೆ ತುಂಬ ಇದೆಯೆಂದು ಅನ್ನಿಸತೊಡಗಿದೆ. ಸಂಗೀತದ ಮಟ್ಟಿಗೆ ಹೇಳುವುದಾದರೆ ಇಲ್ಲಿಯವರ ಮನೆಯ ಕೋಣೆಯೊಂದರಲ್ಲಿ ಗ್ರಾಮೊಫೋನ್ ಬಿಟ್ಟರೆ ಬೇರೆ ಇನ್ನೇನೂ ಇರಲಿಲ್ಲ. (ಇನ್ನೂ ರೇಡಿಯೋ ಅಷ್ಟು ಹೆಚ್ಚು ಪ್ರಚಲಿತವಾಗಿರಲಿಲ್ಲ. ಫ್ರಿಜ್ಜ್ ಸ್ಟೇಟಸ್ ಸಿಂಬಲ್ ಆಗಿರಲಿಲ್ಲ. ಟೇಪರೆಕಾರ್ಡರದ ಆವಿಷ್ಕಾರವೇ ಆಗಿರಲಿಲ್ಲ. ಸಾಮಾಜಿಕ

(ಪ್ರತಿಷ್ಠೆಯ )ಪ್ರತೀಕವಾಗಿ ಕೇವಲ ಬಂಗ್ಲೆ ಕಾರು ಮತ್ತು ಆಳುಗಳು ಎಂದೇ ತಿಳಿಯಲಾಗುತ್ತಿತ್ತು). ಆದರೆ ಶ್ರೀಮತಿ ಜೋಗ ಮಾಯಾ ಚಟರ್ಜಿಯ ಬಂಗ್ಲೆಯಲ್ಲಿ ಬೆಳಿಗ್ಗೆ–ಸಂಜೆ ಹಾರ್ಮೋನಿಯಮ್‌ದ ಧ್ವನಿ ಕೇಳತೊಡಗಿದಾಗ ಸರ್ವೇ ಆಫ್ ಇಂಡಿಯಾದ ಹಿರಿಯ ಅಧಿಕಾರಿಯ ಹೆಂಡತಿ ಶ್ರೀಮತಿ ಗೋಸ್ವಾಮಿ, ಅರಣ್ಯ ಇಲಾಖೆಯ ಉಚ್ಚ ಅಧಿಕಾರಿಯ ಹೆಂಡತಿ ಶ್ರೀಮತಿ ಫಾರೂಕಿಯೊಂದಿಗೆ ಮಾತಾಡುತ್ತ ಹೇಳಿದಳು–''ಸೋದರಿ, ನಾವೆಲ್ಲ ತುಂಬ ಹಿಂದುಳಿದವರಾಗಿ ಬಿಟ್ಟೆವು, ಈ ಬಂಗಾಲಿಗಳನ್ನು ನೋಡಿ, ಎಲ್ಲದರಲ್ಲೂ ಅವರು ಮುಂದೆ ಮುಂದೆ...''

''ಎಲ್ಲಿಯವರೆಗೆ ಬಂಗಾಲಿ ಹುಡುಗಿಯರು ಸಂಗೀತ ಕಲಿಯುವುದಿಲ್ಲವೋ ಅಲ್ಲಿಯವರೆಗೆ ಅವರ ಮದುವೆ ಕೂಡ ಆಗುವುದಿಲ್ಲವೆಂದು ನಾನು ಕೇಳಿದ್ದೇನೆ...'' ಎಂದು ಮಿಲ್ಟ್ರಿ ಆಕಾಡೆಮಿಯ ಉಚ್ಚ ಅಧಿಕಾರಿಯ ಹೆಂಡತಿ ಶ್ರೀಮತಿ ಜಸವಂತ ಸಿಂಗ್ ತನ್ನ ವಿಚಾರ ಹೇಳಿದಳು. ''ಆದರೆ ನಾವು ಮುಸಲ್ಮಾನರು. ನಮ್ಮಲ್ಲಿ ಹಾಡೋದು ಬಾರಿಸೋದು ಒಳ್ಳೆಯದಲ್ಲವೆಂದು ತಿಳಿಯಲಾಗುತ್ತದೆ. ಆದರೆ ಈಗಿನ ಕಾಲವೇ ಬೇರೆಯಾಗಿದೆ. ನಾನಂತೂ 'ಅವರಿಗೆ' ಹೇಳಿದ್ದೇನೆ, ನನ್ನ ಹಮೀದಾಗೆ ಹಾರಮೋನಿಯಮ್ ಅವಶ್ಯ ಕಲಿಸುವೆ'' ಎಂದು ಶ್ರೀಮತಿ ಫಾರೂಕಿ ಉತ್ತರಿಸಿದಳು.

ಈ ರೀತಿಯಾಗಿ ಮೆಲ್ಲ ಮೆಲ್ಲಗೆ ಡಾಲನವಾಲಾದಲ್ಲಿ ಕಲೆ ಮತ್ತು ಸಂಸ್ಕೃತಿಯ ಗಾಳಿ ಬೀಸತೊಡಗಿತು. ಡಾಕ್ಟರ್ ಸಿಂಹಾ ಅವರ ಮಗಳು ನೃತ್ಯ ಕಲಿಯತೊಡಗಿದಳು. ವಾರದಲ್ಲಿ ಮೂರು ದಿನ ಓರ್ವ ಡಾನ್ಸ್ ಮಾಸ್ಟರ್ ಅವರ ಮನೆಗೆ ಬರುತ್ತಿದ್ದ ಆಗಾಗ ಬೀಡಿ ಸೇದುತ್ತ ''ಥಕ ಥಕ ಥೈ ಧಿತ್ತೈ ತಾ ತೋಮ...'' ಎಂದು ನೃತ್ಯದ ಬೋಲ ಹೇಳುತ್ತ ತಬಲಾ ನುಡಿಸುತ್ತಿದ್ದ. ಉಷಾ ಸಿಂಹಾ ಬೋಲ್‌ಗೆ ತಕ್ಕಂತೆ ಕುಣಿಯುತ್ತ ಕುಣಿಯುತ್ತ ಕಾಲಿಗೆ ಕಟ್ಟಿದ ಗೆಜ್ಜೆಗಳಿಂದ ಕಾಲು ಗಾಯಗೊಳ್ಳುತ್ತಿದ್ದವು. ಪಕ್ಕದ ಮನೆಯ ಶ್ರೀಮಂತ ಯುವಕ ಸರದಾರ ಅಮರಜೀತ ಸಿಂಗ್ ವಾಯೊಲಿನ್ ನುಡಿಸಲು ಆರಂಭಿಸಿದ. ಸರದಾರ ಅಮರಜೀತ ಸಿಂಗ್‌ನ ತಂದೆ ಡಚ್ ಈಸ್ಟ್ ಇಂಡಿಯಾದ ಕೇಂದ್ರ ಬಟಾವಿಯಾದಲ್ಲಿ–ಈಗ ಅದು ಇಡೋನೇಶಿಯಾ ಗಣತಂತ್ರದ ರಾಜಧಾನಿ ಜಕಾರ್ತಾ ಎಂದು ಕರೆಯಲ್ಪಡುತ್ತದೆ–ವ್ಯಾಪಾರ ಮಾಡಿ ಸಾಕಷ್ಟು ಸಂಪತ್ತು ಸಂಪಾದಿಸಿದ್ದ. ಸರದಾರ ಅಮರಜೀತ ಸಿಂಗ್ ಓರ್ವ ರಸಿಕ ಶ್ರೀಮಂತನಾಗಿದ್ದ. ಅವನು ಗ್ರಾಮೋಫೋನ್‌ದ ರೆಕಾರ್ಡ್‌ದಲ್ಲಿ ಬಿಬ್ಬೊದ ಹಾಡನ್ನು ಅತ್ಯಂತ ತಲ್ಲೀನತೆಯಿಂದ ಕೇಳುತ್ತಿದ್ದ–

ಶಿಶಿರ ಬಂದು ಹೂದೋಟ ಹಾಳು ಮಾಡಬೇಕು
ನನ್ನ ಅರಳಿದ ಮೊಗ್ಗುಗಳ ಕೊಳ್ಳೆಹೊಡೆಯಬೇಕು

ಎಂದು ಮತ್ತೆ ಮತ್ತೆ ವಾಯೊಲಿನ್‌ದ ತಂತಿಗಳ ಮೇಲೆ ಕಿಟಕಿಯ ಹತ್ತಿರ ನಿಂತು ಗಜ ತಿಕ್ಕುತ್ತಿದ್ದ. ಓಣಿಯಲ್ಲಿ ಬರುತ್ತಿದ್ದ ವ್ಯಾಪಾರಿಗಳಿಂದ ಬಣ್ಣ ಬಣ್ಣದ ಬಟ್ಟೆಯನ್ನು ತನ್ನ ರುಮಾಲಿಗಾಗಿ ಕೊಳ್ಳುತ್ತಿದ್ದ. ಉತ್ಕೃಷ್ಟವಾದ ರುಮಾಲು ಸುತ್ತಿಕೊಂಡು ಹಾಗೂ ಗಡ್ಡ ತಿದ್ದಿ ತೀಡಿ ಅದಕ್ಕೊಂದು ಬಟ್ಟೆ ಕಟ್ಟಿಕೊಂಡು ಮಿಸೆಸ್ ನಾಜ ಮರ್ವಾ ರೀದ ಖಾನ್

ಸಾಹೇಬಳ ಭೆಟ್ಟಿಗಾಗಿ ಹೊರಟು ಹೋಗುತ್ತಾನೆ. ಹಾಗೂ ತನ್ನ ಪತ್ನಿ ಸರದಾರ್ನಿ ಬೀಬಿ ಚರನಜೀತ ಕೌರ್‌ಗೆ ವಾಯೊಲಿನ್ ಕಲಿಯಲು ಹೋಗುತ್ತೇನೆಂದು ಹೇಳುತ್ತಾನೆ. ಇದೇ ಕಾಲದಲ್ಲಿಯೇ ಬಾಜಿಗೆ ಸಿತಾರ ಕಲಿಯಬೇಕೆಂಬ ಇಚ್ಛೆ ಉಂಟಾಯಿತು.

ಆ ಚಳಿಗಾಲದಲ್ಲಿ ಬಹಳಷ್ಟು ಘಟನೆಗಳು ಘಟಿಸಿದವು. ಮೊಟ್ಟ ಮೊದಲಿಗೆ ರೇಶಮ್‌ಳ ಕಾಲಿಗೆ ಗಾಯವಾಯಿತು. ಮತ್ತೆ ಸಾವಿನಬಾವಿಯಲ್ಲಿ ಮೋಟರ ಸಾಯಿಕಲ್ ಹೊಡೆಯುವ ಮಿಸ್. ಜೊಹರಾ ಡರ್ಬಿ ಬಂದು ಪರೇಡ ಗ್ರೌಂಡ್‌ನಲ್ಲಿ ತನ್ನ ಟೆಂಟ್ ಊರಿದಳು. ಹಸೀನಾ ಡಾಯಿನಾ ಬೆಂಕೆಟ್, ಹಸೀನಾ–ಎ–ಲಂಡನ್ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಳು. ಡಾ. ಮಿಸ್ ಜುಬೈದಾ ಸಿದ್ದಿಕಿಗೆ ರಾತ್ರಿ ಎರಡು ಗಂಟೆಗೆ ಕತ್ತೆಯ ಹಾಗಿರುವ ನಾಯಿ ಕಾಣಿಸಿಕೊಂಡಿತು. ಮಿಸ್ಟರ್ ಪೀಟರ್ ರಾಬರ್ಟ್ ಸರದಾರ್ ಖಾನ್ ನಮ್ಮ ಬದುಕಿನಿಂದ ಮಾಯವಾದ. ನೀಗಸ್ ಆತ್ಮಹತ್ಯೆ ಮಾಡಿಕೊಂಡ, ಫಕೀರಾನ ಅತ್ತಿಗೆ ಗೌರೈಯಾ ಗುಬ್ಬಿ ಆದಳು.

ಇವೆಲ್ಲ ತುಂಬ ಮಹತ್ವಪೂರ್ಣ ಘಟನೆಗಳಾಗಿದ್ದವು. ಅಂತೆಯೇ ಇವುಗಳನ್ನೆಲ್ಲ ಕ್ರಮವಾಗಿ ವರ್ಣಿಸುತ್ತಿದ್ದೇನೆ.

ಅತ್ಯಂತ ಚೆಲುವೆ ಮತ್ತು ನನ್ನ ಪ್ರೀತಿಯ ರೆಹಾನಾ ಬಾಜೀ, ನನ್ನ ಚಿಕ್ಕಪ್ಪನ ಮಗಳು. ಇದೇ ವರ್ಷ ಬಿ. ಎ. ಪಾಸಾಗಿದ್ದಳು ಹಾಗೂ ಅಲಿಗಡದಿಂದ ಕೆಲ ತಿಂಗಳು ನಮ್ಮೊಂದಿಗೆ ಇರಲು ಬಂದಿದ್ದಳು. ಒಂದು ಸೊಗಸಾದ ಮುಂಜಾನೆ ಬಾಜೀ ಎದುರಿಗಿರುವ ಪೋರ್ಟಿಕೊದಲ್ಲಿ ನಿಂತು ಡಾ. ಹೂನರ ಪತ್ನಿಯೊಂದಿಗೆ ಮಾತುಕತೆಯಲ್ಲಿ ತಲ್ಲೀನಳಾಗಿದ್ದಳು. ಒಮ್ಮೆಲೆ ಮಳೆ ಆರಂಭವಾಗಿ ಆಲಿಕಲ್ಲಿನ ಸಪ್ಪಳವಾಯಿತು. ದುರ್ಬಲ ಹಾಗೂ ಕೃಶಕಾಯದ ಮುದುಕ ಅತ್ಯಂತ ಮೆದು ಹಾಗೂ ಕೋಮಲ ದನಿಯಲ್ಲಿ ''ಇಲ್ಲಿ ಯಾರೋ ಓರ್ವ ಲೇಡಿ ಸಿತಾರ ಕಲಿಯಲಿಚ್ಛಿಸುತ್ತಾರೆಂದು ಕೇಳಿರುವೆ?'' ಎಂದು ಕೇಳಿದ. ಬಾಜಿಗೆ ನೀಡಿದ ಉತ್ತರದಲ್ಲಿ ಆ ಮುದುಕ ತನಗೆ ತಿಂಗಳಿಗೆ ಐದು ರೂಪಾಯಿ ಫೀ ಕೊಡಬೇಕು ಎಂದು ಕೇಳಿದ. ವಾರದಲ್ಲಿ ಮೂರು ದಿನ ಬಂದು ಒಂದೊಂದು ತಾಸು ಕಲಿಸುವುದಾಗಿ ಹೇಳಿದ. ಆತ ಕರ್ಜನ್ ರೋಡಿನಲ್ಲಿರುವ ಪಾದ್ರಿ ಸ್ಕಾಟ್ ಅವರ ಖಾಲಿ ಬಂಗ್ಲೆಯ ಸರ್ವೆಂಟ್ಸ್ ಕ್ವಾರ್ಟರ್ಸ ದಲ್ಲಿರುತ್ತಾನೆ. ಆತನ ಪತ್ನಿ ಮಕ್ಕಳು ಸತ್ತಿದ್ದಾರೆ. ಆತನು ಈ ರೀತಿ ಪಾಠ ಮಾಡಿಯೇ ಹಲವು ವರ್ಷಗಳಿಂದ ಜೀವನ ಸಾಗಿಸುತ್ತಿದ್ದಾನೆ. ''ಆದರೆ ನಿದ್ರಿಸುತ್ತಿರುವ ಹಾಗೆ ತೋರುವ ಈ ನಗರದಲ್ಲಿ ಅದೆಷ್ಟು ಜನ ಸಿತಾರ ಕಲಿಯುವವರಿದ್ದಾರೆ?''

ಆತ ಅದೇ ಮೆದು ದನಿಯಲ್ಲಿ ಉತ್ತರಿಸಿದ–''ಆಗೊಮ್ಮೆ ಈಗೊಮ್ಮೆ ಒಬ್ಬಿಬ್ಬರು ಶಿಷ್ಯರು ಸಿಗುತ್ತಾರೆ'' (ಇದರ ಹೊರತಾಗಿ ಆತ ತನ್ನ ಬಗ್ಗೆ ಬೇರೆ ಏನನ್ನೂ ಹೇಳಲಿಲ್ಲ) ಆತ ಅತ್ಯಂತ ಸ್ವಾಭಿಮಾನಿ ವ್ಯಕ್ತಿಯಾಗಿ ತೋರುತ್ತಿದ್ದ. ಆತನ ಹೆಸರು ಸಾಯಿಮನ್ ಎಂದಿತ್ತು.

ಸೋಮವಾರ ಆತ ಪಾಠ ಹೇಳಲು ಬಂದ. ಬಾಜೀ ಮನೆಯ ಹಿಂದಿದ್ದ ಹುಲ್ಲಿನ ಹಾಸಿಗೆಯ ಮೇಲೆ ಬಿಸಿಲು ಕಾಯಿಸುತ್ತ ಕುಳಿತಿದ್ದಳು. ''ಮಿಸ್ಟರ್ ಸಾಯಿಮನ್‌ರನ್ನು ಇಲ್ಲಿಗೇ ಕಳಿಸು'' ಎಂದು ಆಕೆ ಫಕೀರಾಗೆ ಹೇಳಿದಳು. ಫಕೀರಾ ಸಾಯಿಮನ್‌ರನ್ನು ಒಳಗೆ ಕರೆದೊಯ್ದ. ಆ ದಿನ ತುಂಬ ಛಳಿಯಿತ್ತು. ನಾನು ನನ್ನ ಕೋಣೆಯಲ್ಲಿ ಯಾವು–ಯಾವುದೋ ಕೆಲಸದಲ್ಲಿದ್ದೆ. ನನ್ನ ಕೋಣೆಯ ಎದುರಿನಿಂದ ಹೋಗುವಾಗ ಕೊಂಚ ಹೆದರುತ್ತ ಅತ್ತಿತ್ತ ನೋಡಿದ. ಅಗ್ಗಿಷ್ಟಿಕೆಯಲ್ಲಿ ಬೆಂಕಿ ಉರಿಯುತ್ತಿತ್ತು. ಒಂದು ಕ್ಷಣ ಆತನ ಕಾಲುಗಳು ಅಗ್ಗಿಷ್ಟಿಕೆಯತ್ತ ಚಲಿಸಿದವು ಹಾಗೂ ಆತನ ಅಂಗೈಗಳು ಬೆಂಕಿಯತ್ತ ಚಾಚಿದವು. ಆದರೆ ಕೂಡಲೇ ಫಕೀರಾನ ಹಿಂದೆ ಹಿಂದೆ ಹೊರಟು ಹೋದ.

ರೇಶಮ್ (ಬೆಕ್ಕು) ಅವನೊಂದಿಗೆ ಬಹಳ ಜಲ್ದಿ ಸ್ನೇಹ ಬೆಳೆಸಿತು. ಇದೊಂದು ಅಚ್ಚರಿಯ ವಿಷಯವಾಗಿತ್ತು. ಏಕೆಂದರೆ ರೇಶಮ್ ತುಂಬ ಸೊಕ್ಕಿನದೂ, ಈರ್ಷೆಯುಳ್ಳದ್ದೂ ಆಗಿದ್ದಿತು. ತನಗಿರುವ ಶ್ಯಾಮ ವರ್ಣದ ಚೆಲುವಿನ ಬಗೆಗೆ ಅದಕ್ಕೆ ತುಂಬ ಅಭಿಮಾನವಿತ್ತು. ಹೀಗಾಗಿ ಅದು ತುಂಬ ಕಡಿಮೆ ಜನರನ್ನು ಮೆಚ್ಚಿಕೊಳ್ಳುತ್ತಿತ್ತು. ಹೆಚ್ಚಾಗಿ ಅದು ಸ್ಯಾಟಿನ ಬಟ್ಟೆಯ ಮೇಲೆ ರೇಶಿಮೆ ಜಾಲರಿಯ ಹೊದಿಕೆ ಹಾಕಿರುವ ಲೋಡಿಗೆ ಆತುಕೊಂಡು ವಿಶ್ರಮಿಸುತ್ತಿತ್ತು. ಊಟದ ಹೊತ್ತಿನಲ್ಲಿ ತುಂಬ ಚಾಣಾಕ್ಷತನದಿಂದ ಕಣ್ಣು ಮುಚ್ಚಿಕೊಂಡು ಮೇಜಿನ ಕೆಳಗೆ ಕುಳಿತುಕೊಳ್ಳುತ್ತಿತ್ತು.

ಬಾಜೀ, ಮುಖದ ಮೇಲೆ ಆಕರ್ಷಕ ಹಾಗೂ ಸಂತುಷ್ಟಪೂರ್ಣವಾದ ಮುಗುಳ್ನಗೆ ತಂದುಕೊಂಡು ತೋಟದಲ್ಲಿ ಕುಳಿತು, ಮುಜಫ್ಫುರ್ ಭಾಯಿಯ ಅತ್ಯಂತ ಮನಾಕರ್ಷಕ ಪತ್ರಗಳನ್ನು ಓದುತ್ತಲಿರುತ್ತಾಳೆ. ಈ ಪತ್ರಗಳು ಅವಳ ಹೆಸರಿಗೆ ಪ್ರತಿ ಐದನೆಯ, ಹತ್ತನೆಯ ದಿನಗಳಂದು ಮುಂಬಯಿಯಿಂದ ಬರುತ್ತವೆ. ಅಲ್ಲಿ ಮುಜಫ್ಫುರ್ ಭಾಯಿ ಇಂಜಿನಿಯರಿಂಗ್ ಓದುತ್ತಿದ್ದಾನೆ. ಬಾಜೀಯೊಂದಿಗೆ ಅವನ ಮದುವೆ ನಿಶ್ಚಯವಾಗಿತ್ತು. ಆಕೆ ತೋಟದಲ್ಲಿ ಕುಳಿತಷ್ಟು ಹೊತ್ತು ಗಫೂರ ಬೇಗಮ್ ಆಕೆಯ ಸಮೀಪದಲ್ಲಿ ಹುಲ್ಲಿನ ಮೇಲೆ ಕುಳಿತು, ಪಾನದಾನ ತೆರೆದು ಪಾನ ತಿನ್ನುತ್ತಲಿರುತ್ತಾಳೆ. ಬಾಜೀ ಒಳಗೆ ಹೋದಳೆಂದರೆ ಗಫೂರಬೇಗಮ್ ಸರ್ವೆಂಟ್ ಕ್ವಾರ್ಟರ್ಸ್‌ದತ್ತ ಹೋಗುತ್ತಾಳೆ. ಅಲ್ಲಿ ಫಕೀರಾನ ಅತ್ತಿಗೆಯೊಂದಿಗೆ ಮಾತಿಗಾರಂಭಿಸುತ್ತಾಳೆ. ಇಲ್ಲವೆ ನಮಾಜ ಮಾಡುವ ತನ್ನ ಚೌಕಿಯ ಮೇಲೆ ಬಂದು ಕೂಡುತ್ತಾಳೆ.

ಗಫೂರ ಬೇಗಮ್ ಬಾಜೀಯ ಅತ್ಯಂತ ನಿಷ್ಠಾವಂತ ಆಯಾ ಇದ್ದಳು. ಸಾಯಮನ್ ಬರುತ್ತಲೇ ರೇಶಮ್ ಮೆಲ್ಲಗೆ ಬಂದು ಕುರುಕುರು ಮಾಡಲಾರಂಭಿಸುತ್ತದೆ. ಆಗ ಅವನು ಕೂಡಲೇ ಕಿಸೆಯಿಂದ ತೆಗೆದು ಏನಾದರೂ ತಿನ್ನಲು ಹಾಕುತ್ತಾನೆ. ಸಾಯಂಕಾಲ ಫಕೀರಾ ಅವನಿಗಾಗಿ ಚಹಾದ ಟ್ರೇ ತೆಗೆದುಕೊಂಡು ಬಂದಾಗ ಅರ್ಧದಷ್ಟು ಚಹಾ ಬಸಿಯಲ್ಲಿ ಹಾಕಿ ನೆಲದ ಮೇಲಿಡುತ್ತಾನೆ. ಆಗ ರೇಶಮ್ ಕೂಡಲೇ ಅದನ್ನು ಕುಡಿದು ಬಿಡುತ್ತದೆ. ಆಗ ಫಕೀರಾ ಬಡಬಡಿಸುತ್ತಾನೆ– ''ನಮ್ಮ ಕೈಯಿಂದ ಈ ರಾಣೀ ಸಾಹಿಬಾ ಹಾಲು ಕುಡಿವಾಗಲೂ ನಖರಾ ಮಾಡುತ್ತದೆ.''

ಫಕೀರಾ ಓರ್ವ ನಗೆಮುಖದ ಗಢವಾಲಾದ ಯುವಕನಾಗಿದ್ದ. ಎರಡು ವರ್ಷಗಳ ಹಿಂದೆ ಹರಿದ ಬಟ್ಟೆ ತೊಟ್ಟ ಇವನು ಕಾಲುವೆಯ ದಂಡೆಯ ಮೇಲೆ ಕುಳಿತು ಉಣ್ಣೆಯ ಎಳೆಗಳಿಂದ ಕಾಲುಚೀಲ ಹೆಣೆಯುತ್ತಿದ್ದ. ಈ ಕೆಲಸ ಗುಡ್ಡಗಾಡು ಜನಾಂಗದಲ್ಲಿ ಸರ್ವೇ ಸಾಮಾನ್ಯ. ಸುಖಾನಂದ, ಅಡಿಗೆ ಮಾಡುವವ ಒಂದು ದಿನ ಅವನನ್ನು ಕೇಳಿದ–'' ''ಏನಲೇ, ನೌಕರಿ ಮಾಡ್ತೀಯ ಹೆಂಗ....?'' ಎಂದಾಗ ಅವನು ಜೋರಾಗಿ ನಕ್ಕು, ನಗುತ್ತಲೇ ಉತ್ತರ ಕೊಟ್ಟಿದ್ದ–''ತಿಂಗಳಿಂದ ಉಪವಾಸ ಸಾಯುತ್ತಲಿದ್ದೇನೆ, ನೌಕರಿ ಸಿಕ್ಕರೆ ಅದೇಕೆ ಮಾಡೋದಿಲ್ಲ ಹೇಳು...?'' ಆಗಿನಿಂದ ಅವನು ನಮ್ಮಲ್ಲಿ ಮೇಲಿನ ಕೆಲಸ ಮಾಡಿಕೊಂಡಿದ್ದಾನೆ. ಒಂದು ದಿನ ಅವನು ತನ್ನ ಇಬ್ಬರೂ ಅಣ್ಣಂದಿರು ಸತ್ತ ಬಗ್ಗೆ ಹೇಳಿದ ಹಾಗೂ ತನ್ನ ಅತ್ತಿಗೆಯನ್ನು ಕರೆತರಲು ಗಢವಾಲಕ್ಕೆ ಹೋಗುವುದಾಗಿ ತಿಳಿಸಿದ. ಕೆಲ ದಿನಗಳ ನಂತರ ಅವನ ಅತ್ತಿಗೆ ಜಲಧರಾ ಬಂದು ಸರ್ವೆಂಟ್ ಕ್ವಾರ್ಟರ್ಸ್‌ನಲ್ಲಿ ಇರತೊಡಗಿದಳು. ಜಲಧರಾ ಮಧ್ಯ ವಯಸ್ಸಿನ ಕೆಂಪಗಿನ ಹೆಣ್ಣು. ಅವಳ ಹಣೆ, ಗದ್ದ, ಮುಂಗೈಗಳು ನೀಲಿ ಬಣ್ಣದ ಹಚ್ಚೆಯಿಂದ ಸಿಂಗಾರಗೊಂಡಿದ್ದವು. ಆಕೆ ಮೂಗಿನಲ್ಲಿ ಮೂಗುಬಟ್ಟು ಹಾಗೂ ದೊಡ್ಡದಾದ ನತ್ತು, ಕಿವಿಗಳಲ್ಲಿ ಬೆಂಡೋಲೆ ಇಟ್ಟುಕೊಂಡಿದ್ದಳು. ಅವಳ ಕೊರಳಲ್ಲಿ ಸಾಮ್ರಾಜ್ಞಿ ವಿಕ್ಟೋರಿಯಾ ಮಹಾರಾಣಿಯ ಚಿತ್ರವಿರುವ ರೂಪಾಯಿಗಳ ಮಾಲೆಯೊಂದಿತ್ತು. ಈ ಮೂರೂ ಆಭೂಷಣಗಳು ಆಕೆಯ ಮೂವರು ಗಂಡಂದಿರ ಸಮ್ಮಿಲಿತ ಸಂಪತ್ತಿಯಾಗಿದ್ದವು. ಆಕೆಯ ಇಬ್ಬರೂ ಮೃತರಾದ ಗಂಡಂದಿರು ಸಾಯುವವರೆಗೂ ಯಾತ್ರಿಕರ ಸಾಮಾನುಗಳನ್ನು ಆ ಗುಡ್ಡಗಾಡಿನಲ್ಲಿ ಹೊರುವ ಕೆಲಸ ಮಾಡುವಾಗಲೇ ಇಬ್ಬರೂ ಗುಡ್ಡದಿಂದ ಬಿದ್ದು ಸತ್ತು ಹೋದರು. ಜಲಧರಾ ತುಂಬ ಮೃದು, ಮಧುರವಾಗಿ ಮಾತಾಡುತ್ತಾಳೆ ಹಾಗೂ ಇಡೀ ದಿನ ಸ್ವೆಟರ್ ಹೆಣೆಯುತ್ತಲಿರುತ್ತಾಳೆ. ಅವಳಿಗೆ ದಮ್ಮು ರೋಗವಿತ್ತು. ಫಕೀರಾ ಅವಳಿಗೆ ಚಿಕಿತ್ಸೆ ಮಾಡಿಸುವ ಚಿಂತೆಯಲ್ಲಿರುತ್ತಿದ್ದ ಹಾಗೂ ಆಕೆಯನ್ನು ಅಪಾರವಾಗಿ ಪ್ರೀತಿಸುತ್ತಿದ್ದ. ಜಲಧರಾ ಬಂದುದರಿಂದ ಇನ್ನುಳಿದ ನೌಕರರ ಹೆಂಡಂದಿರಲ್ಲಿ ಕಿವಿ ಕಚ್ಚಾಟ ನಡೆಯುತ್ತಿತ್ತು–''ಈ ಗುಡ್ಡಗಾಡಿನ ಜನರಲ್ಲಿ ಅದೆಂಥ ಪದ್ಧತಿಯೇನೋ, ಒಂದು ಹೆಣ್ಣಿಗೆ ಇಬ್ಬರು ಮೂವರು ಗಂಡಂದಿರು.'' ಜಲಧರಾಳ ಬಗ್ಗೆ ಮಧ್ಯಾಹ್ನದ ಊಟದ ಸಮಯದಲ್ಲಿ ಮಾತು ಹೊರಟಾಗ ಬಾಜೀ ಕೂಡಲೇ ದ್ರೌಪದಿಯ ಉದಾಹರಣೆ ಕೊಡುತ್ತ ಗುಡ್ಡಗಾಡಿನ ಜನಾಂಗದಲ್ಲಿ ಈ ಪದ್ಧತಿ ಮಹಾಭಾರತದ ಕಾಲದಿಂದಲೂ ನಡೆದು ಬಂದಿದೆ ಹಾಗೂ ದೇಶದ ಬಹಳಷ್ಟು ಕಡೆ ಸಾಮಾಜಿಕ ವಿಕಾಸ ಒಂದು ವಿಶಿಷ್ಟ ಹಂತ ತಲುಪಿ ಅಲ್ಲಿಗೇ ನಿಂತು ಹೋಗಿದೆ. ಗುಡ್ಡಗಾಡು ಪ್ರದೇಶ ಕೂಡ ಇದೇ ರೀತಿ ಹಿಂದುಳಿದ ಭಾಗಗಳಲ್ಲಿ ಒಂದಾಗಿದೆ. ಬಾಜೀ ಮುಂದುವರಿದು ಪೋಲಿ ಎಂಟ್ರಿ, ಉರ್ದುದಲ್ಲಿ ಚಂದಶೌಹರಿ (ಬಹುಪತಿ) ಎನ್ನುತ್ತಾರೆ ಎಂದು ಹೇಳುತ್ತ ಇದೆಲ್ಲ ಮಾತೃಕ ಪರಂಪರೆಯ ಪಳೆಯುಳಿಕೆ. ಯಾವಾಗ ಸಮಾಜದಲ್ಲಿ ಮಾತೃಕ ಪರಂಪರೆ ಪೈತೃಕ ಪರಂಪರೆಯತ್ತ ಹೋಗ ತೊಡಗಿತೋ ಆಗಿನಿಂದ ಮನುಷ್ಯ ಕೂಡ ಬಹು ಪತ್ನಿತ್ವದತ್ತ ಸಾಗಿದ ಮತ್ತು ಮಾತೃಕ ಪರಂಪರೆಯ ಸಾವಿರಾರು ವರ್ಷದ ಪೂರ್ವದಲ್ಲಿ ಮೂರು ನಾಲ್ಕು ಅಣ್ಣ ತಮ್ಮಂದಿರ ಬದಲಾಗಿ ಇಡೀ ಒಂದು ಜನಾಂಗದ ಗುಂಪು ಒಂದೇ

ಹೆಣ್ಣಿನೊಂದಿಗೆ ಸಂಬಂಧವಿರಿಸಿ ಕೊಂಡಿರುತ್ತಿತ್ತು. ಈ ವಿಷಯ ವೇದಗಳಲ್ಲಿ ಕಂಡು ಬರುತ್ತದೆ. ನಾನಂತೂ ಬಾಯಿ ತೆರೆದುಕೊಂಡು ಎಲ್ಲ ವಿಚಿತ್ರ ಸಂಗತಿಗಳನ್ನು ಕೇಳುತ್ತಲಿದ್ದೆ. ಬಾಜೀ ತುಂಬ ಓದಿದವಳಾಗಿದ್ದಳು. ಬಿ. ಎ. ದಲ್ಲಿ ಅವಳು ಪ್ರಥಮ ಶ್ರೇಣಿಯಲ್ಲಿ ಪಾಸಾಗಿದ್ದಳು. ಅಷ್ಟೇ ಅಲ್ಲ ಇಡೀ ಅಲಿಗಢ ವಿಶ್ವವಿದ್ಯಾಲಯಕ್ಕೇನೇ ಪ್ರಥಮ ಬಂದಿದ್ದಳು.

ಒಂದು ದಿನ ನಾನು ನನ್ನ ಸಣ್ಣ ಸೈಕಲ್ ಮೇಲೆ ನನ್ನ ಗೆಳತಿಯರ ಮನೆಗೆ ಹೊರಟಿದ್ದೆ. ರೇಶಮ್ ನನ್ನ ಹಿಂದೆ ಓಡಿ ಬರುತ್ತಲಿತ್ತು. ಅದು ದಾರಿಯಲ್ಲಿ ಬರುವ ಗಾಡಿಗಳ ಕೆಳಗೆ ಬಿದ್ದು ಸಾಯದಿರಲೆಂದು ನಾನು ಸೈಕಲನಿಂದ ಕೆಳಗಿಳಿದು ಅದಕ್ಕೆ ಸಾಕಷ್ಟು ಸಿಟ್ಟು ಮಾಡಿ ದಾರಿಯಲ್ಲಿಂದ ಅದನ್ನೆತ್ತಿಕೊಂಡೆ ಹಾಗೂ ಮನೆಯೊಳಗೆ ಅದನ್ನು ಒಗೆದು, ಸೈಕಲ್ ಪೆಡ್ಲ ಜೋರಾಗಿ ತುಳಿಯುತ್ತ ಹೊರಟು ಹೋದೆ.

ರೇಶಮ್ ಮನೆಯೊಳಗೆ ಬೀಳುವ ಬದಲು ಮುಳ್ಳು ತಂತಿ ಬೇಲಿಯಲ್ಲಿ ಬಿದ್ದು ಅದರ ತೊಡೆ ಗಾಯವಾಯಿತು. ಅದು ರಕ್ತಮಯವಾಯಿತು. ಅದು ನೋವಿನಿಂದಾಗಿ ಜೋರು ಜೋರಾಗಿ ಚೀರತೊಡಗಿತು. ತಂತಿಗೆ ಇಳಿ ಬಿದ್ದು ಚೀರುತ್ತ ನರಳತೊಡಗಿತು. ಬಹಳ ಹೊತ್ತಿನ ನಂತರ ಫಕೀರಾ ಅತ್ತ ಟೊಮೆಟೊ, ಮೆಣಸಿನಕಾಯಿ ಹರಿಯಲು ಬಂದಾಗ ಇದನ್ನು ಕಂಡು ಬಹಳ ಜಾಗರೂಕತೆಯಿಂದ ಮುಳ್ಳು ತಂತಿ ಬೇಲಿಯಿಂದ ಅದನ್ನು ತೆಗೆದು ಒಳಗೆ ಒಯ್ದ.

ನಾನು ನನ್ನ ಸಖಿಯರಾದ ಕಮಲಾ ಹಾಗೂ ಬಿಮಲಾರನ್ನು ಕಂಡು ಅವರ ಮನೆಯಿಂದ ಮರಳಿದಾಗ ಮನೆಮಂದಿಯ ಮುಖಗಳೆಲ್ಲ ಮೌನಗೊಂಡಿರುವುದನ್ನು ಕಂಡೆ. ''ರೇಶಮ್ ಸಾಯುತ್ತಲಿದೆ'' ಬಾಜೀ ಹೇಳುತ್ತ ಅವಳು ಕಣ್ಣೀರು ಹಾಕತೊಡಗಿದಳು. ಅಳುತ್ತಲೇ ಮತ್ತೆ–''ಅದು ಹೇಗೆ ಹೋಗಿ ಸಿಕ್ಕಿಕೊಂಡಿತೋ ಏನೋ ಅಡ್ನಾಡಿ, ಮುಳ್ಳುತಂತಿಯಲ್ಲಿ. ಗುಬ್ಬಿಗಳನ್ನು ಹಿಡಿಯುವ ಆಶೆಗೆ ಹೋಗಿ ಅಲ್ಲಿ ಸಿಕ್ಕಿಕೊಂಡಿರಬೇಕು. ಈಗ ಚೀರುತ್ತಲಿದೆ. ಈಗ ತಾನೇ ಡಾಕ್ಟರ್ ಬಂದು ಮುಲಾಮು ಹಚ್ಚಿ ಪಟ್ಟಿ ಹಾಕಿದ್ದಾರೆ'' ಎಂದಳು.

ಈ ಘಟನೆಯಿಂದಾಗಿ ನಾನಂತೂ ಥರಗುಟ್ಟಿ ನಡುಗಿ ಹೋದೆ. ರೇಶಮ್‌ನ ಈ ಅಸಹನೀಯ ಯಾತನೆಗೆ ನಾನೇ ಜವಾಬ್ದಾರಳಾಗಿದ್ದೆ. ಅದರ ಯಾತನೆ ಮತ್ತು ಕೆಟ್ಟ ಸ್ಥಿತಿ ಕಂಡು ನನ್ನ ಮನದಲ್ಲಿ ಅಪರಾಧಿ ಮನೋಭಾವ ಬೆಳೆಯತೊಡಗಿತು. ನಾನು ಮನೆಯ ಹಿತ್ತಲದಲ್ಲಿದ್ದ ಪೊದರಿನಲ್ಲಿ ಅಡಗಿಕೊಂಡೆ, ಯಾರಿಗೂ ಕಾಣಬಾರದೆಂದು. ಕೊಂಚ ದೂರದಲ್ಲಿ ಮುದುಕಿಯ ಹಾಗೆ ಕಾಣಿಸುವ ಮಿಸೆಸ್ ವಾರವರ್ಟನ್ ಮನೆಯಿಂದ ವಾಯರಲೆಸ್‌ದ ಖಿಟ್ ಖಿಟ್ ಸಪ್ಪಳ ಬರುತ್ತಲಿತ್ತು. ದೂರದಲ್ಲಿದ್ದ ಸರ್ವೆಂಟ್ ಕ್ವಾರ್ಟರ್ಸ್‌ದ ಎದುರಿಗೆ ಫಕೀರಾನ ಅತ್ತಿಗೆ ಹುಲ್ಲಿನ ಮೇಲೆ ಕುಳಿತು ಗಫೂರಾ ಬೇಗಮಳೊಂದಿಗೆ ಮಾತನಾಡುತ್ತಿದ್ದಳು. ಹಿಂದಿನ ಜಗಲಿಯ ಮೇಲೆ ಕುಳಿತು ಬಾಜೀ ಮುಜಫ್ಫುರಭಾಯಿಗೆ ಪತ್ರ ಬರೆಯುವಲ್ಲಿ ನಿರತಳಾಗಿದ್ದಳು. ಮನೆಯಲ್ಲಿ ಯಾವುದೇ ವಿಶೇಷ ಘಟನೆ ಘಟಿಸಿದರೆ ಸಾಕು. ಆಕೆ ಆ ಕೂಡಲೇ ಮುಜಫ್ಫುರಭಾಯಿಗೆ ದೀರ್ಘ

ಪತ್ರ ಬರೆಯುವ ರೂಢಿಯಿತ್ತು. ರೇಶಮ್ ತನ್ನ ಪಟ್ಟಿ ಸಹಿತ ಅವಳ ಹತ್ತಿರ ತನ್ನ ಪುಟ್ಟಿಯಲ್ಲಿ ಮಲಗಿತ್ತು. ಇಡೀ ಜಗತ್ತೇ ಶಾಂತವಾಗಿತ್ತು. ಆದರೆ ನಾನೊಬ್ಬಳೇ ಓಡಿ ಹೋದ ಅಪರಾಧಿಯ ಹಾಗೆ ಎತ್ತರವಾಗಿ ಬೆಳೆದ ಹುಲ್ಲಿನ ಪೊದರಿನಲ್ಲಿ ನಿಂತು ಮುಂದೇನು ಮಾಡಬೇಕೆಂದು ಯೋಚಿಸುತ್ತಿರುವೆ. ಕೊನೆಗೊಮ್ಮೆ ನಾನು ಮೆಲ್ಲ ಮೆಲ್ಲಗೆ ನನ್ನ ತಂದೆಯ ಕೋಣೆಯತ್ತ ಹೊರಟೆ ಹಾಗೂ ಕಿಟಕಿಯೊಳಗಿಂದ ಒಳಗೆ ಹಣಿಕಿಕ್ಕಿದ. ತಂದೆಯವರು ಆರಾಮು ಕುರ್ಚಿಯಲ್ಲಿ ಕುಳಿತು ಏನೋ ಓದುತ್ತಲಿದ್ದರು. ನಾನು ಒಳಗೆ ಹೋದೆ, ಕುರ್ಚಿಯ ಹಿಂದೆ ಹೋಗಿ ನಿಂತುಕೊಂಡೆ. ''ಏನು ಮಗು...?'' ನನ್ನ ಬಿಕ್ಕಳಿಕೆ ಕೇಳಿದ ತಂದೆಯವರು ಗಾಬರಿಯಿಂದ ಕೇಳಿದರು.

''ರೇಶಮ್...ರೇಶಮ್‌ನನ್ನು ಬೇಲಿಯಲ್ಲಿ ನಾವೇ ಒಗೆದಿದ್ದೆವು.'' ''ತಾವು ಒಗೆದಿದ್ದಿರಿ?'' ''ನಾವು...ಕಮಲಾ ಬಿಮಲಾರ ಮನೆಗೆ ಹೋಗುವ ಅವಸರ ದಲ್ಲಿದ್ದೆವು. ನಾವೆಷ್ಟು ಬೇಡವೆಂದರೂ ಅದು ನಮ್ಮ ಹಿಂದೆ ಹಿಂದೆ ಬರತೊಡಗಿತು. ನಾವು ಕೂಡಲೇ ಅದನ್ನು ಎತ್ತಿ ತೋಟದೊಳಕ್ಕೆ ಒಗೆದೆವು.'' ಇಷ್ಟು ಹೇಳಿದ ನಾನು ಜೋರಾಗಿ ಅಳತೊಡಗಿದೆ.

ಅತ್ತ ನಂತರ ಮನಸ್ಸು ಕೊಂಚ ಹಗುರಾಯಿತು ಮತ್ತು ಅಪರಾಧದ ಪ್ರಾಯಶ್ಚಿತ್ತವೂ ಆಯಿತು. ಆದರೆ ರೇಶಮ್ ಪಡುವ ಯಾತನೆ ಕಡಿಮೆ ಆಗಲಿಲ್ಲ. ಸಾಯಂಕಾಲ ಸಾಯಿಮನ್ ಸಿತಾರ ಕಲಿಸುವುದು ಮುಗಿದ ನಂತರವೂ ಕೊಂಚ ಹೊತ್ತು ಅವಳ ಜೊತೆ ಕುಳಿತು ಮಾತನಾಡುತ್ತಲಿದ್ದೆ.

ರೇಶಮ್‌ದ ಗಾಯಗಳಿಗೆ ದಿನ ಮುಲಾಮು ಹಚ್ಚಿ ಪಟ್ಟಿ ಹಾಕಲಾಗುತ್ತಿತ್ತು. ವಾರದಲ್ಲಿ ಒಂದು ದಿನ ಅದನ್ನು ದನದ ದವಾಖಾನೆಗೆ ಕಳಿಸಲಾಗುತ್ತಿತ್ತು. ಅದರ ತೊಡೆಯ ಮೇಲಿನ ರೇಶ್ಮೆಯ ಹಾಗಿದ್ದ ಕೂದಲುಗಳನ್ನು ಕತ್ತರಿಸಲಾಗಿತ್ತು. ಗಾಯದ ಉದ್ದವಾದ ಗೆರೆಗಳು ಕೆಂಪಗೆ ಕಾಣಿಸುತ್ತಿದ್ದವು. ಬಹಳ ದಿನಗಳ ನಂತರ ಅದರ ಗಾಯ ಮಾದವು. ಆದರೂ ಅದು ಕುಂಟುತ್ತ ನಡೆಯುತ್ತಿತ್ತು. ಒಂದು ತಿಂಗಳ ನಂತರ ಅದು ಮೆಲ್ಲಮೆಲ್ಲನೆ ಕುಂಟುತ್ತ ಸಾಯಿಮನ್‌ನನ್ನು ಗೇಟಿನವರೆಗೂ ಕಳಿಸಲು ಹೋಯಿತು. ಫಕೀರಾ ಪೇಟೆಯಿಂದ ಅದಕ್ಕೆ ತಿನ್ನಲು ತಂದಾಗ ಅದು ಕುಂಟುತ್ತಲೇ ಮೂಲೆಯಲ್ಲಿದ್ದ ತನ್ನ ಉಣ್ಣುವ ಬಟ್ಟಲವರೆಗೂ ಹೋಯಿತು.

ಒಂದು ದಿನ ಬೆಳಿಗ್ಗೆ ಮಿಸ್ಟರ್ ಜಾರ್ಜ್ ಬ್ರೈಕೆಟ್ ಬೇಲಿಯ ಹತ್ತಿರ ಕಾಣಿಸಿ ಕೊಂಡ. ಸಂಕೋಚದಿಂದಲೇ ನನ್ನನ್ನು ತನ್ನತ್ತ ಕರೆಯುತ್ತ ಕೇಳಿದ– ''ರೇಶಮ್‌ದ ಆರೋಗ್ಯ ಈಗ ಹೇಗಿದೆ? ನನಗೆ ಅದು ಗಾಯಗೊಂಡ ಬಗ್ಗೆ ಮಿಸ್ಟರ್ ಸಾಯಿಮನ್ ಹೇಳಿದ್ದರು.''

ಮಿಸ್ಟರ್ ಜಾರ್ಜ್ ಬ್ರೈಕೆಟ್ ಈ ಓಣಿಯಲ್ಲಿ ಮೊಟ್ಟ ಮೊದಲು ಮಾತನಾಡಿದ್ದು ಈಗ ಮಾತ್ರ. ರೇಶಮ್‌ದ ಆರೋಗ್ಯದ ಬಗ್ಗೆ ವಿಚಾರಿಸಿದ್ದಕ್ಕಾಗಿ ಅವರಿಗೆ ನಾನು ಕೃತಜ್ಞತೆ ಹೇಳಿದ. ಅವರು ತಮ್ಮ ಕೋಟಿನ ಹರಿದ ಕಿಸೆಗಳಲ್ಲಿ ಕೈ ತೂರಿಸಿ ಮುಂದಕ್ಕೆ ಹೊರಟು ಹೋದರು.

ಮಿಸ್ಟರ್ ಜಾರ್ಜ್ ಬ್ರೈಕೆಟ್ ಒಂದು ಆಂಗ್ಲೋ-ಇಂಡಿಯನ್ ಬಡ ಕುಟುಂಬದಿಂದ ಬಂದವ. ಆತನನ್ನು 'ಪಿಲಪಿಲೀ ಸಾಹೇಬ' ಎಂದು ಕರೆಯಲಾಗುತ್ತಿತ್ತು. ಅವನು ದಾರಿಯ ಬದಿಯಲ್ಲಿದ್ದ ಒಂದು ಮುರುಕು ಗುಡಿಸಲಿನಲ್ಲಿ ವಾಸವಾಗಿದ್ದ. ಬೆಳಿಗ್ಗೆ ತಾನೇ ಬಕೀಟು ತೆಗೆದುಕೊಂಡು ಸಾರ್ವಜನಿಕ ನಳದಿಂದ ನೀರು ತರಲು ಹೋಗುತ್ತಿದ್ದ. ಅವನಿಗೊಬ್ಬ ಮಗಳಿದ್ದಳು. ಅವಳ ಹೆಸರು ಡಯಾನಾ. ಆಕೆ ಪರೇಡ ಗ್ರೌಂಡದಲ್ಲಿದ್ದ ಒಂದು ಅಂಗ್ರೇಜಿ ಸಿನೆಮಾ ಥೇಟರಿನಲ್ಲಿ ಟಿಕೆಟ್ ಮಾರುತ್ತಿದ್ದಳು. ಹೆಚ್ಚಾಗಿ ಬಣ್ಣ ಬಣ್ಣದ ಉಡುಗೆಯಲ್ಲಿರುತ್ತಿದ್ದ ಆಕೆ ನಮ್ಮ ಮನೆಮುಂದಿನಿಂದ ಸೈಕಲ್ ಮೇಲೆ ಹೋಗುತ್ತಿದ್ದಳು. ಅವಳ ಹತ್ತಿರ ಕೇವಲ ನಾಲ್ಕು ಫ್ರಾಕ್ ಮಾತ್ರ ಇದ್ದವು. ಅವನ್ನೇ ತೊಳೆದು ಉಡುತ್ತಿದ್ದಳು. ಮಿಸೆಸ್ ಗೋಸ್ವಾಮಿ, ಮಿಸೆಸ್ ಫಾರೂಕೀ ಮತ್ತು ಮಿಸೆಸ್ ಜಸವಂತಸಿಂಹ ಹೀಗೆ ಹೇಳುತ್ತಿದ್ದರು-''ಸಿನೆಮಾ ಥೇಟರಿನ ನೌಕರಿಯಿಂದ ಅವಳಿಗೆ ಕೇವಲ ಇಪ್ಪತ್ತೈದು ರೂಪಾಯಿ ಸಿಗುತ್ತವೆ. ಆದರೆ ಅವಳ ಉಡುಪು ನೋಡಿ, ಏನೆಂಥ ಭರ್ಜರಿ. ಅವಳಿಗೆ ಕೆಂಪು ಜನ ಹಣ ನೀಡುತ್ತಾರೆ.'' ಹೀಗಿದ್ದಲ್ಲಿ (ಆದರೆ ಕೆಂಪು ಜನ ಆಕೆಗೆ ಹಣ ಕೊಡುವ ವಿಷಯ ನನಗೆ ಅರ್ಥವಾಗಲಿಲ್ಲ) ಅವಳ ಮುಪ್ಪಿನ ತಂದೆ ಪಬ್ಲಿಕ್ ನಲ್ಲಿಯಿಂದ ನೀರು ಏಕೆ ಹೊರುತ್ತಿದ್ದ ?

ನಿವೃತ್ತ ಹಾಗೂ ಸಂಪನ್ನ ಇಂಗ್ಲಿಷ್ ಜನಾಂಗ ವಾಸವಾಗಿರುವ ಬಡಾವಣೆ ಇದು. ಸುಂದರ ಹಾಗೂ ಆಕರ್ಷಕವಾದ ಬಂಗ್ಲೆಗಳಲ್ಲಿ ಈ ಜನ ಶಾಂತವಾದ ಜೀವನ ಸಾಗಿಸುತ್ತಾರೆ. ಸುರುಚಿಪೂರ್ಣ ರೀತಿಯಿಂದ ಶೃಂಗರಿಸಿದ ಅವರ ಕೋಣೆಗಳಲ್ಲಿ ಹಾಗೂ ಹಾಲ್‌ನಲ್ಲಿಯ ಟೇಬಲ್ ಮೇಲೆ ಲಂಡನ್ ಇಲಸ್ಟ್ರೇಶನ್ ನ್ಯೂಜ್ ಟೈಲರ್, ಕಂಟ್ರಿ ಲೈಫ್ ಮತ್ತು ಪಂಚ್ ಪತ್ರಿಕೆಗಳ ರಾಶಿಯೇ ಇರುತ್ತದೆ. ಟೈಮ್ಸ್ ಮತ್ತು ಡೇಲಿ ಟೆಲಿಗ್ರಾಫ್‌ದ ಬಂಡಲ್‌ಗಳು ಹಡಗುಗಳ ಮುಖಾಂತರ ಅವರ ಹೆಸರಿಗೆ ಬರುತ್ತವೆ. ಅವರ ಹೆಂಡಂದಿರು ಪ್ರತಿ ದಿನ ಮುಂಜಾನೆ ತಮ್ಮ ತಮ್ಮ ಮಾರ್ನಿಂಗ್ ರೂಮಿನಲ್ಲಿ ಕುಳಿತು ಅತ್ಯಂತ ತನ್ಮಯತೆಯಿಂದ ತಮ್ಮ ಮನೆಗಳಿಗೆ ಪತ್ರ ಬರೆಯುತ್ತಿದ್ದರು ಮತ್ತು ತಮ್ಮ 'ದುಂಡಗಿನ ಕೋಣೆ'ಯಲ್ಲಿ ತಮ್ಮ ತಮ್ಮ ಮಕ್ಕಳ ಫೋಟೋಗಳನ್ನು ಸಿಲ್ವರ್ ಫ್ರೇಮ್‌ಗಳಲ್ಲಿರಿಸುತ್ತಿದ್ದರು. ಅವರೆಲ್ಲ ಪೂರ್ವ ಆಫ್ರಿಕಾ ಮತ್ತು ದಕ್ಷಿಣ ಪೂರ್ವ ಏಶಿಯಾದಲ್ಲಿ ಇಂಗ್ಲೀಷ್ ಸಾಮ್ರಾಜ್ಯವನ್ನು ವಿಸ್ತರಿಸುವ ಕಾರ್ಯದಲ್ಲಿ ನಿರತರಾಗಿದ್ದರು. ಈ ಜನ ಹಲವಾರು ವರ್ಷಗಳಿಂದ ಈ ದೇಶದಲ್ಲಿ ವಾಸಿಸುತ್ತಲಿದ್ದಾರೆ. ಆದರೆ 'ಕೋಯಿ ಹಾಯ್' ಮತ್ತು 'ಅಬ್ದುಲ್ ಛೋಟಾ ಹಾಜರಿ ಮಾಂಗತಾ'ಕ್ಕಿಂತ ಹೆಚ್ಚಿನ ಶಬ್ದಗಳು ಅವರಿಗೆ ಗೊತ್ತಿಲ್ಲ. ಈ ಏಕಾಂತ ಪ್ರಿಯ ಇಂಗ್ಲೀಷರು ಇಡೀ ದಿನ ತೋಟಗಾರಿಕೆ ಅಥವಾ 'ಬರ್ಡ್ ವಾಚಿಂಗ್' ಅಥವಾ ಸ್ಟ್ಯಾಂಪ್ ಸಂಗ್ರಹದಲ್ಲಿ ನಿರತರಾಗಿರುತ್ತಾರೆ. ಇವರು ತುಂಬ ವಿಚಿತ್ರ ಜನರಾಗಿದ್ದರು. ಮಿಸ್ಟರ್ ಹಾರ್ಡ್ ಕಾಸಲ್ ತಿಬ್ಬತಿ ಭಾಷೆ ಮತ್ತು ಆ ಜನಾಂಗದ ರೀತಿ-ರಿವಾಜುಗಳ ವಿಶೇಷಜ್ಞರಾಗಿದ್ದರು. ಮಿಸ್ಟರ್ ಗ್ರೀನ್ ಆಸಾಮದ ಖಾಸಿ ಬುಡಕಟ್ಟು ಜನಾಂಗದ ವಿಶೇಷಜ್ಞರಾಗಿದ್ದರು. ಕರ್ನಲ್ ವೈಟ ಹೆಡ್ ಉತ್ತರ-ಪಶ್ಚಿಮ ಸೀಮೆಯಲ್ಲಿ ನಡೆದ ಯುದ್ಧದಲ್ಲಿ ತಮ್ಮದೊಂದು ಕಾಲು

ಕಳೆದುಕೊಂಡಿದ್ದರು. ಹೀಗಾಗಿ ಅವರು ಕಟ್ಟಿಗೆಯ ಕಾಲೊಂದರ ಸಹಾಯದಿಂದ ಅಡ್ಡಾಡುತ್ತಿದ್ದರು. ಆದರೂ ಪ್ರಸನ್ನಚಿತ್ತರಾಗಿರಲು ಸಂಪೂರ್ಣ ಕಾಳಜಿ ವಹಿಸುತ್ತಿದ್ದರು. ಮೇಜರ ಶೆಲ್ಟನ್ 'ಸ್ಟೇಟ್ಸ್‌ಮೆನ್'ದಲ್ಲಿ ಬೇಟೆಯ ಬಗೆಗೆ ಲೇಖನ ಬರೆಯುತ್ತಿದ್ದರು ಮತ್ತು ಮಿಸ್ಟರ್ ಮಾರ್ಚಮೆನ್ ಅವರಿಗೆ ಪಗಡೆಯಾಟ ಅಂದರೆ ಒಂದು ರೀತಿ ಹುಚ್ಚು. ಮಿಸ್ ಡ್ರಿಂಕ್‌ವಾಟರ್ ಮತ್ತು ಮಿಸೆಸ್ ವಾರಬ್ರೂಕ್ ಚಿತ್ರ ಗಳನ್ನು ಬಿಡಿಸುತ್ತಿದ್ದರು.

ಮಿಸೆಸ್ ವಾರಬ್ರೂಕ್ ಓರ್ವ ಬ್ರಿಗೇಡಿಯರನ ವಿಧವೆಯಾಗಿದ್ದಳು. ಆಕೆ ನಮ್ಮ ಮನೆಯ ಹಿಂಬದಿಯಲ್ಲಿರುತ್ತಿದ್ದಳು. ಆಕೆಯ ಜೀರ್ಣಳಾದ ಕುಮಾರಿ ಸೋದರಿಯೂ ಆಕೆಯ ಜೊತೆಗೇ ಇರುತ್ತಿದ್ದಳು. ಈ ಇಬ್ಬರು ಸೋದರಿಯರೂ ಉದ್ದ ಚುಂಚಿನ ಪಕ್ಷಿಯ ಮುಖದವರಾಗಿದ್ದರು. ಈ ಇಬ್ಬರೂ ತಮ್ಮ ದೊಡ್ಡದಾದ ಡ್ರಾಯಿಂಗ್ ರೂಮಿನ ಯಾವುದಾದರೊಂದು ಮೂಲೆಯಲ್ಲಿ ಕುಳಿತು ವಾಟರ್ ಕಲರದಿಂದ ಸಣ್ಣ ಪುಟ್ಟ ಚಿತ್ರಗಳನ್ನು ಬಿಡಿಸುತ್ತಿದ್ದರು. ಅವರ ಸುತ್ತ ಇರುವ, ಕಸೂತಿಯಿಂದ ಹೂ ಬಳ್ಳಿ ಬಿಡಿಸಿರುವ ಹೊದಿಕೆಗಳಿಂದ ಶೋಭಿಸುವ ಫರ್ನೀಚರಗಳಲ್ಲಿ ಅವರು ಒಮ್ಮೆಲೇ ಕಾಣಿಸುತ್ತಿರಲಿಲ್ಲ. ಅಷ್ಟೊಂದು ಕುಳ್ಳರಾಗಿದ್ದರು.

ಡಾಲನವಾಲಾದ ಒಂದು ಬಂಗ್ಲೆಯಲ್ಲಿ 'ಇಂಗ್ಲೀಷ್ ಸ್ಟೋರ್' ಒಂದಿತ್ತು. ಅದರ ಮಾಲಕ ಓರ್ವ ಪಾರ್ಸಿಯಾಗಿದ್ದ. ಓಣಿಯ ಎಲ್ಲ ಇಂಗ್ಲೀಷ್ ಹಾಗೂ ಸ್ಥಳೀಯ ಹೆಣ್ಣು ಮಕ್ಕಳು ಇಲ್ಲಿಯೇ ತಮಗೆ ಬೇಕಾದ ಸಾಮಾನು ಖರೀದಿಸುತ್ತಿದ್ದರು. ಇಲ್ಲಿ ಅವರು ಓಣಿಯಲ್ಲಿ ಹಬ್ಬಿದ ಸುದ್ದಿಗಳ (ಸ್ಕ್ಯಾಂಡಲ್)ನ್ನು ಇನ್ನುಳಿದ ಸಮಾಚಾರಗಳನ್ನು ಪರಸ್ಪರರಲ್ಲಿ ಹಂಚಿಕೊಳ್ಳುತ್ತಿದ್ದರು.

ಸಂತೃಪ್ತಿ ಪ್ರಸನ್ನತೆ ಹಾಗೂ ಸಂತೋಷದಿಂದ ಇರುವ ಈ ಇಂಗ್ಲೀಷರ ಓಣಿ ಯಲ್ಲಿ ಕಳಾಹೀನ ನೀಲಿಗಣ್ಣಿನ ಆಂಗ್ಲೋ ಇಂಡಿಯನ್ ಮಿಸ್ಟರ್ ಜಾರ್ಜ್ ಬೈಕೆಟ್ ಮಾತ್ರ ಓರ್ವ ದಟ್ಟ ದರಿದ್ರನಾಗಿದ್ದ. ಆತ ಓರ್ವ ಸ್ವಾಭಿಮಾನಿ, ಸಮ್ಮಾನನೀಯ ಆಂಗ್ಲೊ ಇಂಡಿಯನ್‌ನಾಗಿದ್ದ ಹಾಗೂ ತನ್ನನ್ನು ತಾನು ನೂರಕ್ಕೆ ನೂರು ಇಂಗ್ಲೀಷ ನೆಂದು ಭಾವಿಸಿಕೊಂಡಿದ್ದ. ಇಂಗ್ಲೆಂಡಗೆ 'ಹೋಮ' ಎಂದೇ ಕರೆಯುತ್ತಿದ್ದ. ಕೆಲ ವರ್ಷಗಳ ಮೊದಲು ಚಕ್ರವರ್ತಿ ಪಂಚಮ ಜಾರ್ಜ ಸತ್ತಾಗ ಕೋಲಾಗಢದಲ್ಲಿ 'ಸ್ಲೋಮಾರ್ಚ'ದಲ್ಲಿ ಬಹು ದೊಡ್ಡ ಪರೇಡ ನಡೆದಿತ್ತು, ಕೆಂಪು ಜನರ ಬ್ಯಾಂಡ್ ಚರಮಗೀತ ನುಡಿಸಿತ್ತು. ಆಗ ಜಾರ್ಜ್ ಬೈಕೆಟ್ ಕೂಡ ತೋಳಿಗೆ ಕಪ್ಪು ಶೋಕ ಪಟ್ಟಿ ಕಟ್ಟಿಕೊಂಡು ಕೋಲಾ ಗಢಕ್ಕೆ ಹೋಗಿದ್ದ ಹಾಗೂ ಇಂಗ್ಲೀಷರ ಮಧ್ಯ ಕುಳಿತಿದ್ದ, ಆತನ ಮಗಳು ಡಯಾನಾ ರೋಜಳು ತನ್ನ ಬಂಗಾರದ ಬಣ್ಣದ ಕೂದಲುಗಳುಳ್ಳ ತಲೆಗೆ ಕಪ್ಪು ಹ್ಯಾಟ್, ಸುಂದರ ಮುಖಕ್ಕೆ ಕಪ್ಪು ಜಾಲರಿ ಹಾಕಿಕೊಂಡಿದ್ದಳು. ಮಿಸ್ಟರ್ ಬೈಕೆಟ್ ಬಹಳ ದಿನಗಳವರೆಗೆ ಕಪ್ಪು ಶೋಕಪಟ್ಟಿ ತೋಳಿನಲ್ಲಿ ಕಟ್ಟಿಕೊಂಡೇ ಇದ್ದ.

ಆದರ ಮಕ್ಕಳು ತುಂಬ ನಿರ್ದಯಿಗಳಿರುತ್ತಾರೆ. ಡಾಲನವಾಲಾದ ಎಲ್ಲ ಭಾರತೀಯ ಮಕ್ಕಳು ಮಿಸ್ಟರ್ ಜಾರ್ಜ್ ಬೈಕಟ್‌ನನ್ನು ಪಿಲಿಪಿಲಿ ಸಾಹೇಬ ಎಂದು ಕರೆಯುತ್ತಿದ್ದರಲ್ಲದೆ ಕಮಲಾ ಮತ್ತು ಬಿಮಲಾರ ಅಣ್ಣ ಸ್ವರ್ಣ, ಹದಿನೈದು ವರ್ಷದ

ಹುಡುಗ ಡೂನ್ ಪಬ್ಲಿಕ್ ಸ್ಕೂಲಿನಲ್ಲಿ ಓದುತ್ತಿದ್ದವನು ಮಿಸ್ಟರ್ ಬೈಕೆಟ್‌ನ ಮಗಳು ಡಯಾನಾಳನ್ನು ಹಾರಿಸಿಕೊಂಡು ಹೋಗುವ ಯೋಜನೆಯೊಂದನ್ನು ಮಾಡಿದ್ದ. ಕಮಲಾ ಮತ್ತು ಬಿಮಲಾರ ತಂದೆ ಅತ್ಯಂತ ರಸಿಕ ವ್ಯಕ್ತಿಯಾಗಿದ್ದ. ಆತ ೧೯೨೦ರಲ್ಲಿ ಒಂದು ವಿಚಿತ್ರ ಇಂಗ್ಲೀಷ್ ರಿಕಾರ್ಡ್ ಇಂಗ್ಲಂಡದಿಂದ ಖರೀದಿಸಿದ್ದ. ಇದೊಂದು ಅತ್ಯಂತ ಕೀಳು ಅಭಿರುಚಿಯ, ಅಸಂಗತ ಗೀತವಾಗಿತ್ತು. ಈ ಗೀತದ ಆಂಗ್ಲೊ ಇಂಡಿಯನ್ ಉರ್ದು ಅನುವಾದವೂ ಮೂಲಗೀತದೊಂದಿಗೆ ಅದೇ ಧಾಟಿಯಲ್ಲಿ ಹಾಡಲಾಗಿತ್ತು. ಯಾವ ಚಂಚಲ ಮನಸ್ಸಿನ ಇಂಗ್ಲಿಷ್ ಕವಿ ಬರೆದಿದ್ದನೋ ಇದನ್ನು. ಈ ರಿಕಾರ್ಡ್ ಈ ಸ್ವರ್ಣನ ಅಧೀನದಲ್ಲಿತ್ತು. ತನ್ನ ಮನೆಯ ಮುಂದಿನಿಂದ ಡಯಾನಾ ಸೈಕಲ್ ಮೇಲೆ ಹೋಗುತ್ತಿರುವಾಗ ಸ್ವರ್ಣ ಗ್ರಾಮಾಫೋನ್‌ನಲ್ಲಿ ರಿಕಾರ್ಡ್ ಹಾಕಿ ಅದರ ಸ್ಪೀಕರ್‌ನ್ನು ಹೊರಗಡೆ ಮುಖ ಮಾಡಿ ಇರಿಸಿ, ತಾನು ಅಡಗಿಕೊಳ್ಳುತ್ತಿದ್ದ. ಆಗ ಹಾಡು ಜೋರಾಗಿ ಕೇಳಬರತೊಡಗುತ್ತದೆ...

ಒಂದೊಮ್ಮೆ ಓರ್ವ ವ್ಯಾಪಾರಿ ಲಂಡನ್ ನಗರದಲ್ಲಿದ್ದ
ಅವನಿಗೊಬ್ಬ ಮಗಳು, ಅವಳ ಹೆಸರು ಡಯಾನಾ
ಅವಳಿಗೆ ಹದಿನಾರು ವರ್ಷದ ಹರೆಯ
ಅವಳ ಹತ್ತಿರ ಬಹಳಷ್ಟು ಬಟ್ಟೆ, ಬೆಳ್ಳಿ–ಬಂಗಾರ
ಒಂದು ದಿನ ಡಯಾನಾ ತೋಟದಲ್ಲಿದ್ದಾಗ
ಅವಳಲ್ಲಿಗೆ ತಂದೆ ಬಂದ, ಹೇಳಿದ,
ಮಗಳೆ ಹೋಗು ಭರ್ಜರಿ ಡ್ರೆಸ್ ಮಾಡಿಕೊ,
ನಿನಗಾಗಿ ಓರ್ವ ಗಂಡನನ್ನು ತಂದಿರುವೆ.

ಓ ! ಓ ! ತಂದೆಯೇ, ಪ್ರೀತಿಯ ತಂದೆಯೆ,
ಮದುವೆ ಮಾಡಿಕೊಳ್ಳುವ ಇಚ್ಛೆ ಈಗಲೇ ನಾ ಮಾಡಲಾರೆ,
ಒಂದೆರಡು ವರ್ಷ ನನ್ನ ಒಬ್ಬಳನೆ ನೀ ಬಿಡುವುದಾದರೆ,
ಪ್ರತಿ ದಿನವೂ ಸಿರಿವಂತಿಕೆ ಹೆಚ್ಚಿಸುವೆ !

ಆಗ ತಂದೆ ಹೇಳಿದ, ನನ್ನ ಮುಗ್ಧ ಮಗಳೆ,
ಈ ತರುಣನ ಹೆಂಡತಿ ನೀನಾಗದೇ ಹೋದರೆ
ನಾನು ನಿಮ್ಮೆಲ್ಲರನು ಬಿಟ್ಟು ಬಿಡುವೆ ಭಯಾನಕ ದೈವಕೆ !
ಒಂದು ಒಡಕುಗಡಿಗೆ ಕೂಡ ನಿನಗೆ ಸಿಗಲಾರದು.

ಒಂದು ದಿನ ವಿಲ್ಕಿನ್ಸ್ ತೋಟದಲ್ಲಿ ವಾಯು ವಿಹಾರಕ್ಕೆಂದು ಹೋದಾಗ
ಮೂಲೆಯಲ್ಲಿ ಒಂದೆಡೆ ಅವನ ಪ್ರೀತಿಯ ಡಯಾನಾ ಸತ್ತು ಬಿದ್ದಿರುವುದು ಕಂಡ
ಅವಳ ಪಕ್ಕದಲಿ ಭಯಪೂರಿತ ಶೀಶೆ ಬಿದ್ದಿತ್ತು
ವಿಲ್ಕಿನ್ಸ್ ಮೂರ್ಛೆ ಹೋದ, ಆತನ ಕಣ್ಣುಗಳಲ್ಲಿ ಭಯ ಆವರಿಸಿತ್ತು

ಈ ರಿಕಾರ್ಡ್ ಜೋರಾಗಿ ಚೀರತೊಡಗಿದ ಕೂಡಲೇ ಡಯಾನಾ ಸೈಕಲ್ ಮೇಲಿಂದ ಅಷ್ಟೇ ಜೋರಾಗಿ ಹೊರಟು ಹೋಗುತ್ತಾಳೆ, ತನ್ನ ಬಂಗಾರವರ್ಣದ ತಲೆ ಗೂದಲನ್ನು ಜಾಡಿಸುತ್ತ...

ಈ ಚಳಿಗಾಲದಲ್ಲಿ ನಡೆದ ಎರಡನೆಯ ಮಹತ್ವದ ಘಟನೆ ಪರೇಡ ಗ್ರೌಂಡದಲ್ಲಿ ''ದಿ ಗ್ರೇಟ್ ಈಸ್ಟ್ ಇಂಡಿಯನ್ ಸರ್ಕಸ್ ಎಂಡ್ ಕಾರ್ನಿವಲ್'' ಬಂದುದು. ಇದರ ಪ್ರಚಾರವನ್ನು ಚಿಂಪಾಂಜಿ ಹಾಗೂ ಜೋಕರುಗಳ ದೀರ್ಘವಾದ ಮೆರವಣಿಗೆಯ ಮುಖಾಂತರ ಮಾಡಲಾಗಿತ್ತು. ಅವುಗಳ ಮೇಲೆ ಹೀಗೆ ಬರೆಯಲಾಗಿತ್ತು:

ಇಪ್ಪತ್ತನೆಯ ಶತಮಾನದ ಅತ್ಯಾಶ್ಚರ್ಯಜನಕ ತಮಾಷಾ ಇದು.
ಸಿಂಹ ಹೃದಯದ ಸುಂದರಿ ಮಿಸ್ ಜೋಹರಾ ಡರ್ಬಿ
ಸಾವಿನ ಬಾವಿಯಲ್ಲಿ ಇಂದು ರಾತ್ರಿ.

ಎಲ್ಲರಿಗಿಂತ ಮೊದಲು ಫಕೀರಾ ಸರ್ಕಸ್ ನೋಡಿ ಮರಳಿದ. ತನ್ನ ಅತ್ತಿಗೆಯನ್ನು ಆಟ ನೋಡಲು ಕರೆದುಕೊಂಡು ಹೋಗಿದ್ದ. ಬೆಳಗ್ಗೇನೇ ಸೂಚನೇ ನೀಡಿದ್ದ– ''ಬೇಗಂ ಸಾಹೇಬ, ಮಗಳೇ, ಬೀಬೀ ''ಡೆಥ್ ಆಫ್ ವೆಲ್‌ದಲ್ಲಿ ಹೀಂಗ ಫಟ್‌ಫಟಿ ವ್ಯಾಲ ನರ್ತಿಸ್ತಾಳ... ಏನ್ ಹೇಳ್ಲಿ...ಅವಳೇನು ಹೆಣ್ಣೋ ಸಿಂಹದ ಮರಿಯೋ... ಹೇಳುವುದೇ ಕಷ್ಟ. ಹರೇ ರಾಮ ಹರೇರಾಮ...''

ಮಾರನೆಯ ದಿನ ಸ್ಕೂಲಿನಲ್ಲಿ ಕಮಲಾ, ವಿಮಲಾ ''ಮಿಸ್ ಜೋಹರಾ ಡರ್ಬಿ ಅತ್ಯಂತ ಧೈರ್ಯಶಾಲಿ ಹಾಗೂ ಪರಾಕ್ರಮಿ ಸ್ತ್ರೀಯಾಗಿದ್ದಾಳೆ'' ಎಂದು ಹೇಳುತ್ತ ಅವರಿಬ್ಬರು ಆಕೆಯ ಶೌರ್ಯಯುಕ್ತ ಸಾಹಸಮಯ ಕಾರ್ಯಕ್ರಮಗಳನ್ನು ಬಾಯ್ತುಂಬ ಹೊಗಳಿದರು.

ನಾನಂತೂ ಸರ್ಕಸ್ ಅಂದರ ಮೊದಲಿನಿಂದಲೂ ಜೀವ ಕಳೆದುಕೊಳ್ಳುತ್ತಿದ್ದೆ. ಅಂತೆಯೇ ಜಲ್ದಿ ಜಲ್ದಿ ಭಾಬಿಯೊಂದಿಗೆ ಸರ್ಕಸ್‌ಗೆ ಹೋಗಲು ಸಿದ್ಧಳಾದೆ. ಪರೇಡ ಗ್ರೌಂಡ ತಲುಪಿದೆವು. ಅಲ್ಲಿ ಸರ್ಕಸ್ಸಿನ ಡೇರೆಯ ಹೊರಗೆ ಎತ್ತರದಲ್ಲಿ ಒಂದು ಸ್ಪೆಶಲ್ ಮೋಟರಿನ ಸಪ್ಪಳ ಕೇಳಿಬರುತ್ತಿತ್ತು. ಅದರ ಹತ್ತಿರದಲ್ಲಿಯೇ ಮಿಸ್ ಜೋಹರಾ ಡರ್ಬಿ ಕುರ್ಚಿಯ ಮೇಲೆ ಕುಳಿತಿದ್ದಳು. ಆಕೆ ಹಂಟರವಾಲಿ ಸಿನೆಮಾದಲ್ಲಿ ಮಿಸ್ ನಾದಿಯಾ ತೊಟ್ಟಂಥ ನೀಲಿಬಣ್ಣದ ತೊಡಿಗೆ ತೊಟ್ಟಿದ್ದಳು. ಮುಖದ ತುಂಬ ಬಹಳಷ್ಟು ಗುಲಾಬಿ ಪೌಡರ್ ಹಚ್ಚಿಕೊಂಡಿದ್ದಳು. ಅದು ಲೈಟಿನ ಪ್ರಖರ ಬೆಳಕಿನಲ್ಲಿ ನೀಲಿ ಬಣ್ಣಕ್ಕೆ ತಿರುಗಿತ್ತು. ತುಟಿಗಳಿಗೆ ಹಚ್ಚಿದ ಕೆಂಪು ಬಣ್ಣ ಹೊಳೆಯುತ್ತಿತ್ತು. ಆಕೆಯ ಹತ್ತಿರದಲ್ಲಿಯೇ ಓರ್ವ ಅತ್ಯಂತ ಭಯಂಕರ ಉದ್ದ ಮೀಸೆಯ ಆಕೆಯ ಹಾಗೆಯೇ ಉಡುಗೆ ತೊಟ್ಟ, ಕೊರಳಲ್ಲಿ ಒಂದು ಬಟ್ಟೆ ಸುತ್ತಿಕೊಂಡು ಕುಳಿತಿದ್ದ. ಮಿಸ್ ಜೋಹರಾ ಡರ್ಬಿಯ ಮುಖದಲ್ಲಿ ಉತ್ಸಾಹ, ಆವೇಶ ಉಕ್ಕುತ್ತಿತ್ತು. ಆಕೆ ತುಂಬ ನಿರ್ದಯಿಯಾಗಿ ಸಿಗರೇಟು ಸೇದುತ್ತಿದ್ದಳು.

ಅನಂತರ ಇಬ್ಬರೂ ಸಾವಿನ ಭಾವಿಯಲ್ಲಿ ಪ್ರವೇಶಿಸಿದರು. ಅದರ ಕೆಳಗೆ ಒಂದೆಡೆ ಮೋಟರ್ ಸೈಕಲ್ ಇರಿಸಿದ್ದರು. ಭಯಂಕರ ಮನುಷ್ಯ ಮೋಟರ ಸೈಕಲ್ ಹತ್ತಿದ ಮತ್ತು ಮಿಸ್ ಜೋಹರಾ ಡರ್ಬಿ ಎದುರಿನಲ್ಲಿ ಅವನ ಎರಡೂ ತೋಳುಗಳ ಮಧ್ಯದಲ್ಲಿ ಕುಳಿತಳು. ಅದೇ ಭಯಂಕರ ಮನುಷ್ಯ ಭಾವಿಯಲ್ಲಿ ಮೋಟರ ಸೈಕಲ್ ಚಕ್ರಾಕಾರವಾಗಿ ಹೊಡೆಯುತ್ತ ಇಳಿದ. ಮಿಸ್ ಜೋಹರಾ ಡರ್ಬಿ ಪ್ರೇಕ್ಷಕರ ಚಪ್ಪಾಳೆಗಳ ಮಧ್ಯದಲ್ಲಿ ಒಬ್ಬಳೇ ಮೋಟರ ಸೈಕಲ್ ಚಕ್ರಾಕಾರವಾಗಿ ಹೊಡೆಯುತ್ತ ಮೇಲೆ ಬಂದು ಎರಡೂ

ಕೈಗಳನ್ನು ಬಿಟ್ಟುಬಿಟ್ಟಳು. ಮೋಟರಸೈಕಲ್ಲಿನ ತೀವ್ರಗತಿಯಿಂದಾಗಿ ಸಾವಿನ ಭಾವಿ ಜೋರಾಗಿ ಅಲ್ಲಾಡಲಾರಂಭಿಸಿತು. ನಾನಂತೂ ಮಿಸ್ ಜೋಹರಾ ಡರ್ಬಿಯ ಈ ಆಶ್ಚರ್ಯಪೂರ್ಣ ವೀರತ್ವವನ್ನು, ಕಾರ್ಯವನ್ನು ಮಂತ್ರಮುಗ್ಧಳಾಗಿ ನೋಡುತ್ತಲಿದ್ದೆ. ಆಟದ ನಂತರ ಆಕೆ ಮತ್ತೆ ಅದೇ ರೀತಿ ಮೇಲೆ, ಅಟ್ಟದ ಮೇಲೆ ಹೋಗಿ ಕುಳಿತಳು. ಹಾಗೂ ಏನೂ ಆಗಿಲ್ಲವೆನ್ನುವ ಹಾಗೆ ಅತ್ಯಂತ ಸಹಜತೆಯಿಂದ ಸಿಗರೇಟ ಸೇದತೊಡಗಿದಳು.

ನಿಜವಾಗಿ ಹೇಳಬೇಕೆಂದರೆ ಜೋಹರಾ ಡರ್ಬಿ ಜಾಪಾನಿ ಛತ್ರಿ ಹಿಡಿದು ತಂತಿಯ ಮೇಲೆ ಚಲಿಸುವ ಹಾಗೂ ಸಿಂಹದ ಪಂಜರದಲ್ಲಿ ಹೋಗುವ ಮತ್ತು ಎತ್ತರದಲ್ಲಿರುವ ತಂತಿಗಳ ಮೇಲೆ ನಡೆಯುವ, ತೂಗುವ ಜೋಕಾಲಿಯಲ್ಲಿ ತೂರಾಡುವ ಹುಡುಗಿಯರಿಗಿಂತ ಹೆಚ್ಚು ಧೈರ್ಯಶಾಲಿ ಹಾಗೂ ಶೂರಳಾಗಿದ್ದಳು. ಕಳೆದವರ್ಷ ಅಲ್ಲಿ 'ಮಹಾನ್ ಅಖಿಲ ಭಾರತೀಯ ಕುಸ್ತಿ' ಬಂದಿತ್ತು. ಅದರಲ್ಲಿದ್ದ ಹಮೀದಾಬಾನು ಹೆಸರಾಂತ ಕುಸ್ತಿ ಪಟುವಾಗಿದ್ದಳು. ಆಕೆ ಯಾವ ಗಂಡಸು ತನ್ನನ್ನು ಕುಸ್ತಿಯಲ್ಲಿ ಸೋಲಿಸುವನೋ ಅವನನ್ನು ಮದುವೆಯಾಗುವುದಾಗಿ ಘೋಷಿಸಿದ್ದಳು. ಆದರೆ ಫಕೀರಾನ ಮಾತಿನಂತೆ ಯಾವ ತಾಯಿಯ ಮಗನೂ ಆ ಸಿಂಹಿಣಿಯ ಮರಿಯನ್ನು ಸೋಲಿಸಲಿಲ್ಲವಂತೆ. ಇದೇ ಕುಸ್ತಿ ಆಟದಲ್ಲಿ ಪ್ರೊಫೆಸರ್ ತಾರಾಬಾಯಿ ಕೂಡ ಅತ್ಯಂತ ಜಬರದಸ್ತ ಕುಸ್ತಿ ಆಡಿದ್ದಳು. ಈ ಇಬ್ಬರೂ ಸ್ತ್ರೀ ಪಹಲವಾನ್‌ರ ಚಿತ್ರಗಳು ಹ್ಯಾಂಡ್‌ಬಿಲ್ಲನಲ್ಲಿ ಪ್ರಿಂಟಾಗಿದ್ದವು. ಅದರಲ್ಲಿ ಅವರು ಚಡ್ಡಿ ಬನಿಯನ್ ಹಾಕಿಕೊಂಡಿದ್ದರು. ಬನಿಯನ್ ಮೇಲೆ ಹಲವಾರು ಮೆಡಲ್ ಹಾಕಿಕೊಂಡಿದ್ದರು. ಅತ್ಯಂತ ಭರ್ಜರಿಯಾಗಿ ಕುಳಿತು ಕ್ಯಾಮರಾದತ್ತ ನೋಡುತ್ತಲಿದ್ದರು.

ಈ ವ್ಯಕ್ತಿತ್ವವಾದರೂ ಎಂಥದು? ತಂತಿಯ ಮೇಲೆ ನಡೆಯುತ್ತಾರೆ. ಸಾವಿನ ಬಾವಿಯಲ್ಲಿ ಮೋಟರ ಸೈಕಲ್ ನಡೆಸುತ್ತಾರೆ. ಕುಸ್ತಿಕಣದಲ್ಲಿ ಕುಸ್ತಿ ಆಡುತ್ತಾರೆ. ನಾನು ಎಲ್ಲರನ್ನು ಕೇಳಿದೆ, ಇವರ ಬಗ್ಗೆ, ಇವರ ವ್ಯಕ್ತಿತ್ವದ ಬಗ್ಗೆ, ಆದರೆ ಯಾರೂ ಈ ಮಹಿಳೆಯರ ಬಗ್ಗೆ ಏನನ್ನೂ ಹೇಳಲಿಲ್ಲ.

'ದ ಗ್ರೇಟ್ ಈಸ್ಟ್ ಇಂಡಿಯಾ ಸರ್ಕಸ್' ತನ್ನ ಆಟವನ್ನು ತೋರಿಸುತ್ತಲಿತ್ತು. ಒಂದು ದಿನ ಫಕೀರಾ ಬಜಾರದಿಂದ ಸಾಮಾನು ತೆಗೆದುಕೊಂಡು ಬಂದವನು ಒಂದು ವಿಚಿತ್ರ ಹಾಗೂ ಆಶ್ಚರ್ಯಗೊಳಿಸುವಂಥ ಸುದ್ದಿ ಹೇಳಿದ. ಮಿಸ್ ಜೋಹರಾ ಡರ್ಬಿಯ ಪ್ರೇಮಿ ಮಾಸ್ಟರ್ ಗುಲಕಂದ ಮತ್ತು ಮಾಸ್ಟರ್ ಮಚ್ಛಂದರ ನಡುವೆ ಭಾರೀ ಹೊಡೆದಾಟವಾಯಿತು. ಚಾಕು, ಚೂರಿಗಳಿಂದ ಪರಸ್ಪರರು ಹೊಡೆದಾಡಿದರು. ಮಾಸ್ಟರ್ ಮಚ್ಛಂದರ ಮಿಸ್ ಜೋಹರಾ ಡರ್ಬಿಯನ್ನು ಗಾಯಗೊಳಿಸಿದ. ಇದರಿಂದಾಗಿ ಆಕೆ ಆಸ್ಪತ್ರೆ ಸೇರಲೇಬೇಕಾಯಿತು. ಇದಾದ .ಕೆಲದಿನಗಳ ನಂತರ ಫಕೀರಾ ಇದಕ್ಕಿಂತ ಭಯಾನಕ, ಕೋಲಾಹಲವೆಬ್ಬಿಸಬಹುದಾದಂಥ ಸುದ್ದಿಯನ್ನು ಸಾರ್ವಜನಿಕ ನಳದ ಹತ್ತಿರ ಕೇಳಿದ. ಪಿಲಿಪಿಲಿ ಸಾಹೇಬನ ಮಗಳೂ ಸರ್ಕಸ್ ಸೇರಿದಳೆಂಬ ಸುದ್ದಿ ಅದಾಗಿತ್ತು.

"ಡಯಾನಾ ಬ್ಯೆಕೆಟ್ ?" ಬಾಜಿ ಕೇಳಿದಳು.

"ಹಾಂ; ಮಗಳೇ ಪಿಲಿಪಿಲಿ ಅವರ ಬಡತನವನ್ನು ಅವರ ಮಗಳಿಗೆ ನೋಡ ಲಾಗಲಿಲ್ಲ. ಅದರೊಂದಿಗೆ ಜನರೂ ತೊಂದರೆ ಕೊಡುತ್ತಿದ್ದಾರೆ. ಓಡಿಯನ್ ಸಿನೆಮಾ ಥೇಟರದಲ್ಲಿ ಆಕೆಗೆ ಕೇವಲ ಇಪ್ಪತ್ತೈದು ರೂಪಾಯಿ ಮಾತ್ರ ಸಿಗುತ್ತಿತ್ತು. ಈಗ ಸರ್ಕಸ್ ನಲ್ಲಿ ಎಪ್ಪತ್ತೈದು ರೂಪಾಯಿ ಸಿಗುತ್ತದೆ...ನಿಜ ಮಗಳೇ ಅವರು ತುಂಬ ಬಡವ ರಾಗಿದ್ದರು."

"ಕೆಂಪು ಜನ ಅವರಿಗೆ ಹಣ ಕೊಡುತ್ತಿದ್ದರಲ್ಲ..." ನಾನು ಕೇಳಿದೆ.

ಗಫೂರ ಬೇಗಂ ನನ್ನನ್ನು ತೀಕ್ಷ್ಣವಾಗಿ ನೋಡುತ್ತ "ನಡಿಯಿರಿ, ಇಲ್ಲಿಂದ ಓಡಿ ಹೋಗಿ" ಎಂದು ಕೂಗಿಕೊಂಡಳು. ಹೀಗಾಗಿ ನಾನು ಓಡಿಹೋದೆ. ಹೊರಗೆ ಹೋಗಿ ರೇಶಮ್‌ನ ಬುಟ್ಟಿಯ ಹತ್ತಿರ ಕುಳಿತೆ ಹಾಗೂ ಡಯಾನಾ ಬ್ಯೆಕೆಟ್‌ಳ ಧೈರ್ಯದ ಬಗ್ಗೆ ವಿಚಾರ ಮಾಡತೊಡಗಿದೆ.

ಈ ಸಲ ಚಿಂಪಾಂಜಿಗಳು ಹಾಗೂ ಜೋಕರುಗಳು ಸರ್ಕಸ್ಸಿನ ಹ್ಯಾಂಡಬಿಲ್ ಹಂಚಿದರು ಅದರಲ್ಲಿ ಹೀಗೆ ಬರೆಯಲಾಗಿತ್ತು:

ಸರ್ಕಸ್ ಪ್ರೇಮಿಗಳಿಗೆ ಶುಭ ಸಮಾಚಾರ. ಅಪ್ಸರೆ–ಜಮಾಲ, ಯುರೋಪದ
ಸುಂದರಿಯ ಅಚ್ಚರಿಗೊಳಿಸುವ ಕಾರ್ಯಗಳು. ಲಂಡನ್‌ದ ಸುಂದರಿ
ಮಿಸ್ ಡಯಾನಾ ರೋಜ ಸಾವಿನಬಾವಿಯಲ್ಲಿ ಇಂದು ರಾತ್ರಿ

ಇವೇ ದಿನಗಳಲ್ಲಿ ಸಿನೆಮಾದ ಚರ್ಚೆ ನಡೆಯುತ್ತಿತ್ತು. ಹಾಗೆ ನೋಡಿದರೆ ಸಿನೆಮಾದ ಜಾಹೀರಾತು ಬಹಳ ದಿನದಿಂದಲೇ ಕಟ್ಟಿಗೆಯ ಗಾಲಿ ಹಲಗೆಯ ಮೇಲೆ ಹಚ್ಚಿ ಉರುಳಿಸಿಕೊಂಡು ಬರಲಾಗುತ್ತಿದೆ :

ಈ ವರ್ಷದ ಶ್ರೇಷ್ಠ ಸಿನೆಮಾ ಚಾಲೇಂಜ್, ಇದರಲ್ಲಿ ಮಿಸ್ ಸರ್ದಾರ
ಅಖ್ತರ್ ಕೆಲಸ ಮಾಡುತ್ತಾಳೆ. ಪರೇಡ ಗ್ರೌಂಡ್ ಎದುರಿಗೆ
ಪ್ಲೋಡಿಯಮ್ ಥೇಟರದಲ್ಲಿ ಇಂದು ರಾತ್ರಿ

ಮತ್ತು

ಈ ವರ್ಷದ ಶ್ರೇಷ್ಠ ಸಿನೆಮಾ ಎಕ್ಸಪ್ರೆಸ್‌ದಲ್ಲಿ, ಸರ್ದಾರ
ಅಖ್ತರ್ ನಟಿಸಿದ್ದಾಳೆ. ಪರೇಡಗ್ರೌಂಡ್ ಎದುರಿನಲ್ಲಿ ರಾಕ್ಸಿ
ಥೇಟರಿನಲ್ಲಿ ಇಂದು ರಾತ್ರಿ.

ಎರಡೂ ಸಿನೆಮಾಗಳಲ್ಲಿ ಒಂದೇ ಸಮಯದಲ್ಲಿ ಹೇಗೆ ನಟಿಸುತ್ತಾಳೆ ಎಂಬುದು ನನಗೆ ಅಚ್ಚರಿಯ ವಿಷಯವಾಗಿತ್ತು, ಹಾಗೂ ಈ ವಿಷಯ ನನ್ನನ್ನು ಬಹುವಾಗಿ ಕಾಡುತ್ತಿತ್ತು. ಮೋಜೆಂದರೆ ದೈವದ ರೀತಿಯೇ ಒಮ್ಮೆಲೇ ಬೇರೆಯಾಯಿತು. ಬಾಜೀ ಮತ್ತು ಆಕೆಯ ಗೆಳತಿಯರೊಂದಿಗೆ ಒಂದರ ಹಿಂದೆ ಒಂದರಂತೆ ಮೂರು ಸಿನೆಮಾ ನೋಡಲು ಸಾಧ್ಯವಾಯಿತು. 'ಅಛೂತಕನ್ಯಾ' ಅವರ ಬಗ್ಗೆ ಮಿಸೆಸ್ ಜೋಗ

ಮಾಯಾಳ ಅಭಿಪ್ರಾಯ ಹೀಗಿತ್ತು. ಈಗ ತುಂಬ ಸಾಮಾಜಿಕ ಕ್ರಾಂತಿಯಾಗ ತೊಡಗಿದೆ. ಅಂತೆಯೇ ಗುರುದೇವ ಠಾಕೂರ ಅವರ ಸಂಬಂಧಿ ದೇವಿಕಾರಾಣಿ ಈಗ ಫಿಲ್ಮಗಳಲ್ಲಿ ನಟಿಸತೊಡಗಿದ್ದಾಳೆ. 'ಜೀವನ ಲತಾ'ದಲ್ಲಿ ಸವಿತಾದೇವಿ ನಾಜೂಕ-ನಾಜೂಕ ಮೆಲುಧ್ವನಿಯಲ್ಲಿ ಹಾಡು ಹಾಡುತ್ತಿದ್ದಳು.

''ಮೋಹೆ ಪ್ರೇಮಕೆ ಝೂಲೇ ಝೂಲಾ ದೇ ಕೋಯೀ...'' ಮತ್ತು 'ಜೀವನ ಪ್ರಭಾತ' ಫಿಲ್ಮನ್ನು ಬಾಜೀ ತುಂಬ ಆಸಕ್ತಿಯಿಂದ ನೋಡಲು ಹೋಗಿದ್ದಳು. ಅದರಲ್ಲಿ ಖುರ್ಷಿದ್ ನಟಿಸಿದ್ದಳು. ಈಗ ಆಕೆಯ ಹೆಸರು ರೇಣುಕಾದೇವಿ. ಈ ಅಪೂರ್ವ ಸಾಮಾಜಿಕ ಕ್ರಾಂತಿಯ ಕಾರಣದಿಂದಾಗಿ ಇವೆಲ್ಲ ನಡೆಯುತ್ತಲಿವೆ. ಮಿಸೆಸ್ ಜೋಗಮಾಯಾ ಚಟರ್ಜಿಯ ಭವಿಷ್ಯವಾಣಿಯ ಅನುಸಾರವಾಗಿ ಹಿಂದೂಸ್ತಾನದ ಬಾಗಿಲಲ್ಲಿ ಈಗ ಕ್ರಾಂತಿ ಬಂದು ನಿಂತಿದೆ. ಅಂತೆಯೇ ಮಿಸೆಸ್ ಜೋಗಮಾಯಾ ಚಟರ್ಜಿಯ ಮಕ್ಕಳು ಹಾರ್ಮೋನಿಯಮ್ ನುಡಿಸುತ್ತ ಫಿಲ್ಮಿ ಹಾಡುಗಳನ್ನು ಹಾಡತೊಡಗಿದ್ದಾರೆ-''ಬಾಂಕ್ ಬಿಹಾರೀ ಭೂಲಜಾನಾ...ಪೀತಮ್ ಪ್ಯಾರ ಪ್ರೀತ ನಿಭಾನಾ...'' ಮತ್ತು ''ಚೋರ ಚುರಾವೆ ಮಾಲಖ ಜಾನಾ...ಪಿಯಾ ನಯಸಾಕೀ ನಿಂದಿಯಾ ಚುರಾವೆ. ''ತುಮ್ ಔರ್ ಮೈ ಮುನ್ನಾ ಪ್ಯಾರಾ...ಘರವಾ ಹೋಗಾ ಸ್ವರ್ಗ ಹಮಾರಾ...''

ಗಫೂರಬೇಗಂ ಕೆಲಸ ಮಾಡುತ್ತಲೇ ಈ ಹಾಡುಗಳನ್ನು ಕೇಳುತ್ತ ಟೊಂಕದ ಮೇಲೆ ಕೈ ಇಟ್ಟುಕೊಂಡು ಹೇಳುತ್ತಾಳೆ-''ಹಿರಿಯರು ಸತ್ಯವನ್ನೇ ಹೇಳಿಹೋಗಿದ್ದಾರೆ, ಕುಮಾರಿಯರು ತಾವೇ ತಮ್ಮ ಬಾಯಿಂದ ವರನನ್ನು ಬೇಡ ಹೊರಟಾಗ ಸತ್ಯಾನಾಶದ ದಿನಗಳು ಸಮೀಪಿಸುತ್ತವೆ''–ಎಂದು.

ಇಷ್ಟರಲ್ಲಿ ಮನೋರಮಾ ಚಟರ್ಜಿಯ ಸುಮಧುರ ಧ್ವನಿ ಕೇಳಿ ಬರುತ್ತದೆ. ''ಮೋಹೆ ಪ್ರೇಮ ಕೆ ಝೂಲಾ ಝೂಲಾದೆ ಕೋಯೀ...''

''ಲಜ್ಜೆಯಿಲ್ಲದವಳು...ದೇವರೇ ನೀನೇ ಗತಿ'' ಗಫೂರ ಬೇಗಮ್ ನಡುಗುತ್ತಲೇ ದೇವರಿಗೆ ಫಿರ್ಯಾದಿ ಒಪ್ಪಿಸುತ್ತಾಳೆ. ಸ್ಲಿಪರ್ ಹಾಕಿಕೊಂಡು ಪಟ ಪಟ ಸಪ್ಪಳ ಮಾಡುತ್ತ ತನ್ನ ಕೆಲಸ ಬೊಗಸೆಗಳಲ್ಲಿ ನಿರತಳಾಗುತ್ತಾಳೆ.

ಅದೇ ದಿನಗಳಲ್ಲಿ ಫಕೀರಾ ಕೂಡ ತನ್ನ ಅತ್ತಿಗೆಯನ್ನು ಸೆಕೆಂಡ್ ಶೋಕ್ಕೆ ಕರೆದುಕೊಂಡು ಹೋಗಿ ಈ ಎಲ್ಲ ಫಿಲ್ಮಗಳನ್ನು ತೋರಿಸಿಕೊಂಡು ಬಂದ. ಆದರೆ ಜಲಧರಾ 'ಚಂಡೀದಾಸ' ಫಿಲ್ಮ್ ನೋಡಿಕೊಂಡು ಬಂದದಿನ, ಅವಳಿಗೆ ಬಹಳ ಜೋರಾಗಿ ಜ್ವರ ಬಂದವು. ತಾಹೂನ ಬೆಳಗ್ಗೆ ಬಂದು ಅವಳನ್ನು ನೋಡಿದ. ಅವಳ ರೋಗ ಈಗ ಭಯಂಕರ ರೂಪ ತಾಳಿದೆ ಎಂದ. ಈಗ ಆಕೆ ದಿನವೂ ಟಾಂಗಾದಲ್ಲಿ ಆಸ್ಪತ್ರೆಗೆ ಹೋಗುತ್ತಾಳೆ ಹಾಗೂ ಮರಳಿ ಬಂದು ಬಿಸಿಲಿನಲ್ಲಿ ಹುಲ್ಲಿನ ಮೇಲೆ ಕಂಬಳಿ ಹಾಸಿಕೊಂಡು ಮಲಗುತ್ತಾಳೆ. ಕೆಲದಿನಗಳ ನಂತರ ಅವಳ ಸ್ಥಿತಿಯಲ್ಲಿ ಕೊಂಚ ಸುಧಾರಣೆಯಾಯಿತು. ಅಡಿಗೆಯವ ಸುಖನಂದನನ ಪತ್ನಿ ಧನಕಲಿಯಾ ಆಕೆಯ

ಸಮೀಪದಲ್ಲಿ ಕುಳಿತು ಆಕೆಯ ಮನ ಆಹ್ಲಾದಗೊಳಿಸುವುದಕ್ಕಾಗಿ ಪೂರ್ವೀಗೀತ ಹಾಡುತ್ತಿದ್ದಳು. ಜೋರಾಗಿ ಆಲಾಪ ಮಾಡುತ್ತಿದ್ದಳು.

''ನಾಜೊ ಅದಾ ಸೆ ಸರಮೋ ಹಯಾ ಸೆ
ಬಾಲೆ ಸಯಿಯಾ ಸೆ ಸರಮಾಯೆ ಗಯೀ ಮೈ ತೊ''

ಗಫೂರಬೇಗಂ ಜಲಧರಾಳ ಯೋಗಕ್ಷೇಮ ವಿಚಾರಿಸಲು ಹೋದಾಗ–''ನನಗೆ ಈ ಲೋಕ ತ್ಯಜಿಸುವ ಸಮಯ ಹತ್ತಿರವಾಗುತ್ತಿದೆ. ಇನ್ನೇನು ಕೆಲವೇ ದಿನಗಳಲ್ಲಿ ಪ್ರಾಣ ಪಕ್ಷಿ ಹಾರಿಹೋಗುತ್ತದೆ'' ಎಂದಳು.

ಆಗ ಗಫೂರಬೇಗಂ ಅವಳ ಮನಸ್ಸಿಗೆ ಸಮಾಧಾನ ನೀಡುತ್ತ ''ಏ ಹುಚ್ಚಿ ನೀನಿನ್ನೂ ಬಹಳಕಾಲ ಬದುಕುವೆ. ಏ...ಜಲಧರಾ, ಫಕೀರಾಗೆ ಯಾವ ಜಾದು ಮಾಡಿ ರುವೆ ಹೇಳು...ನನಗೂ ಕೊಂಚ ಆ ಮಂತ್ರ ಯಾವುದು ಹೇಳು. ನನಗಂತೂ ನನ್ನ ಮನೆಯವರನ್ನು ನನ್ನ ಕಬ್ಜಾದಲ್ಲಿಟ್ಟುಕೊಳ್ಳುವ ಯಾವ ಕಲೆಯೂ ಕರಗತವಾಗಲಿಲ್ಲ. ನೀನೇ ಯಾವುದಾದರೊಂದು ಉಪಾಯ ಹೇಳು. ಗುಡ್ಡಗಾಡಿನಲ್ಲಿ ಮಂತ್ರ–ತಂತ್ರ ಬಹಳ ನಡೆಯುತ್ತದೆಂದು ಕೇಳಿರುವೆ. ಫಕೀರಾ ಕೂಡ ಸದಾ ನಿನ್ನ ನಾಮಸ್ಮರಣೆ ಯಲ್ಲಿರುತ್ತಾನೆ. ಏ ನೀನಂತೂ ಅವನ ತಾಯಿ ಸಮಾನಳಿದ್ದೀಯೆ'' ಈ ಮಾತು ಕೇಳಿದ ಅವಳು ತುಂಬ ನಕರಾ ಮಾಡುತ್ತ ನಗುತ್ತಲೇ ಉತ್ತರಿಸುತ್ತಾಳೆ, ''ಓ ನೀನು ಕೇಳಿಲ್ಲೇನು ಹಳೆಯ ಅಕ್ಕಿ...''

''ಹಳೆಯ ಅಕ್ಕೀ?'' ನಾನು ಮತ್ತೆ ಅನ್ನುತ್ತೇನೆ, ಗಫೂರ ಬೇಗಮ್ ಕೊಂಚ ಹೆದರಿಕೊಂಡು ನನ್ನನ್ನು ನೋಡುತ್ತಾಳೆ ಹಾಗೂ ಕೂಡಲೇ ಹೇಳುತ್ತಾಳೆ–''ಬೀಬೀ ನೀವಿಲ್ಲಿ ಏನು ಮಾಡುತ್ತಿರುವಿರಿ, ಹೋಗಿ ದೊಡ್ಡ ಮಗಳು ನಿಮ್ಮನ್ನು ಕರೆಯುತ್ತಿದ್ದಾಳೆ.'' ನಾನು ಅಲ್ಲಿಂದ ತಲೆಕೆಳಗೆ ಮಾಡಿಕೊಂಡು ಬಣ್ಣಬಣ್ಣದ ಹಳ್ಳುಗಳನ್ನು ಚಪ್ಪಲಿಯ ತುದಿಯಿಂದ ಒದೆಯುತ್ತ ಬಾಜಿಯ ಹತ್ತಿರ ಹೋಗುತ್ತೇನೆ. ಆದರೆ ಆಕೆ ಆಧ್ಯಾತ್ಮಿಕ ಗ್ರಂಥಗಳ ಓದಿನಲ್ಲಿ ತಲ್ಲೀನಳು ಹಾಗೂ ಮುಜಫುರ್‌ಭಾಯಿಯ ಪತ್ರ ಓದುವುದರಲ್ಲಿ ಅಥವಾ ಉತ್ತರ ಬರೆಯುವಲ್ಲಿ ಮಗ್ನಳಾಗಿರುತ್ತಾಳೆ. ಹೀಗಾಗಿ ಆಕೆ ನನಗೆ ಇನ್ನೆಲ್ಲಿ ಯಾದರೂ ಹೋಗೆನ್ನುತ್ತಾಳೆ. ಆಗ ನಾನು ತಿರುಗಿ ಮುರಿಗಿ ಮತ್ತೆ ರೇಶಮ್ ಮಲಗಿ ರುವ ಬುಟ್ಟಿಯ ಹತ್ತಿರ ಕುಳಿತುಕೊಳ್ಳುವೆ ಹಾಗೂ ಅದು ಜಲ್ದಿ ಗುಣಮುಖವಾಗಲೆಂದು ಪ್ರಾರ್ಥಿಸುವೆ.

ಸ್ಕೂಲಿಗೆ ಕ್ರಿಸ್‌ಮಸ್ ರಜೆ ಆರಂಭವಾಗಿದ್ದವು. ನಾನು ಬೆಳಗ್ಗೆ ಕಮಲಾ, ವಿಮಲಾರ ಮನೆಗೆ ಹೋಗುತ್ತಲಿದ್ದೆ. ಆಗ ದಾರಿಯಲ್ಲಿ ಮಿಸ್ಟರ್ ಬೈಕಟ್ ಕಾಣಿಸಿದ, ಅವನು ಬಹಳ ಗಾಬರಿಯಿಂದ ಹುಚ್ಚನ ಹಾಗೆ ಓಡುತ್ತಲಿದ್ದ. ಅಷ್ಟರಲ್ಲಿ ಮೇಜರ್ ಶಲ್ಬನ್ ತನ್ನ ೧೯೨೬ರ ಮಾಡಲ್‌ನ ಫೋರ್ಡ ಗಾಡಿಯನ್ನು ನಿಲ್ಲಿಸಿ ಅವನನ್ನು ಅದರಲ್ಲಿ ಕುಳ್ಳಿರಿಸಿಕೊಂಡ. ಗಾಡಿ ಯುರೋಪಿಯನ್ ಆಸ್ಪತ್ರೆ ಕಡೆಗೆ ಹೊರಟು ಹೋಯಿತು.

ನಾನು ಕಮಲಳ ಮನೆ ತಲುಪಿದಾಗ ತನ್ನ ಸ್ವಭಾವಕ್ಕೆ ಭಿನ್ನವಾದ ರೀತಿಯಲ್ಲಿ ಸ್ವರ್ಣ ತುಂಬ ಮೌನವಾಗಿದ್ದ. ನಾನಾಗಲಿ ಕೇಳಿದಾಗ ಹೇಳಿದ–ತಾನು ಈಗ ತಾನೇ ಪರೇಡ ಗ್ರೌಂಡ್‌ಬಿಂದ ಬಂದಿರುವುದಾಗಿ ಅಲ್ಲಿಯ ಎಲ್ಲ ಘಟನೆ ಕೇಳಿರುವುದಾಗಿ ಹೇಳಿದ.

ಡಯಾನಾ ಬ್ರೈಕೆಟ್ ಇನ್ನೂ ಮಾಸ್ಟರ್ ಮಚ್ಛಂದರನೊಂದಿಗೆ ಮೋಟರ್ ಸೈಕಲ್ ಮೇಲೆ ಕುಳಿತಿದ್ದಳು. ಹೆದರಿಕೆಯಿಂದಾಗಿ ಕುಳಿತಲ್ಲಿಂದಲೇ ನಡುಗುತ್ತಲಿದ್ದಳೆಂದು ನೋಡಿದ ಜನ ಹೇಳುತ್ತಿದ್ದರು. ಹೆದರಿಕೆಯಿಂದಾಗಿ ಆಕೆಯ ಬಣ್ಣ ಪೇಲವ ವಾಗಿತ್ತು. ಕಣ್ಣುಮುಚ್ಚಿ ಕೊಂಡು ಕುಳಿತಿದ್ದಳು. ಸರ್ಕಸ್ ಮ್ಯಾನೇಜರ ಹೆದರಿಕೆ ಹೋಗ ಬೇಕಾದರೆ ಆಕೆ ಒಬ್ಬಾಕೆಯೇ ಮೋಟರ್ ಸೈಕಲ್ ಹೊಡೆಯಲಾರಂಭಿಸಬೇಕೆಂದು ಒತ್ತಾಯ ಮಾಡತೊಡಗಿದ ಹೆದರಿಕೆ ಹೋಗಲಾಡಿಸಲೆಂದು ಆಕೆ ಮೋಟರ್ ಸೈಕಲ್ ಮೇಲೆ ಒಬ್ಬಳೇ ಕುಳಿತು ಬಾವಿಯ ಗೋಡೆ ಏರಲು ಪ್ರಯತ್ನಿಸಿದಳು. ಆದರೆ ಮೋಟರ್ ಸೈಕಲ್ ಮೇಲಿನ ಹಿಡಿತ ತಪ್ಪಿ ಡಯಾನಾಳ ಎರಡೂ ಕಾಲುಗಳು ಮೋಟರ್ ಸೈಕಲ್ಲಿನ ತೀವ್ರಗತಿಯಲ್ಲಿ ತಿರುಗುತ್ತಿರುವ ಚಕ್ರದಲ್ಲಿ ಸಿಕ್ಕು ಎರಡೂ ಕಾಲು ಚೂರು ಚೂರು ಆದವು. ಕೂಡಲೇ ಆಕೆಯನ್ನು ಯುರೋಪಿಯನ್ ಆಸ್ಪತ್ರೆಗೆ ಸೇರಿಸಲಾಯಿತು. ಕರ್ನಲ್ ಮ್ಯಕೋಮ ಸಿವಿಲ್ ಸರ್ಜನ್ ''ಅವಳ ಎರಡೂ ಕಾಲುಗಳು ಸಂಪೂರ್ಣ ಹಾಳಾಗಿವೆ. ಇಡೀ ಜೀವನ ಆಕೆ ಗಾಲಿ ಕುರ್ಚಿಯ ಮೇಲೆ ಕುಳಿತು ಕಾಲ ಕಳೆಯಬೇಕು'' ಎಂದು ಹೇಳಿದ.

ಆ ದಿನ ನಮಗೆಲ್ಲ ಯಾವ ಆಟದಲ್ಲೂ ಉತ್ಸಾಹ, ಆಸಕ್ತಿ ಉಳಿಯಲಿಲ್ಲ. ಹೀಗಾಗಿ ನಾವೆಲ್ಲ ಒಂದು ಗಿಡದ ಮೇಲೆ ಸುಮ್ಮನೆ ಕುಳಿತಿದ್ದೆವು. ಕೆಲ ಹೊತ್ತಿನ ನಂತರ ಒಮ್ಮೆಲೇ ಸ್ವರ್ಣ ಗಿಡದಿಂದ ಕೆಳಗೆ ಹಾರಿದ ಹಾಗೂ ದಾಪುಗಾಲು ಹಾಕುತ್ತ ಕ್ರಿಕೆಟ್ ಆಡಲು ಓಡಿ ಹೋದ. ಎಲ್ಲರ ಮುಖದ ಮೇಲೂ ಒಂದು ರೀತಿಯ ವಿಷಾದ, ಪಶ್ಚಾತ್ತಾಪ ಮನೆಮಾಡಿತ್ತು.

ಎರಡನೆಯ ದಿನ 'ದ ಗ್ರೇಟ್ ಈಸ್ಟ್ ಇಂಡಿಯನ್ ಸರ್ಕಸ್ ಆ್ಯಂಡ್ ಕಾರ್ನಿವಲ್'ದ ಚೂಪಾದ ಮೀಸೆಯ ಮ್ಯಾನೇಜರ್ ಮತ್ತು ರಿಂಗ್‌ಮಾಸ್ಟರ್ ಪ್ರೊ. ಶಹಬಾಜ್ ಸರ್ಕಸ್ ಇಲ್ಲಿಂದ ಬೇರೆಡೆ ಹೋಗುತ್ತದೆಂದು ಘೋಷಿಸಿದ ಹಾಗೂ ಮುಂದಿನ ವರ್ಷ ಬಂದು ಈ ಸಲಕ್ಕಿಂತ ಆಶ್ಚರ್ಯಜನಕ, ಚಿತ್ರವಿಚಿತ್ರ ಆಟಗಳನ್ನು ತೋರಿಸಲಾಗುವುದು ಎಂದೂ ಹೇಳಿದ. ಆದರೆ ಫಕೀರಾನ ಹೇಳಿಕೆಯ ಪ್ರಕಾರ ಅವ ಹೆದರಿದ್ದ. ಅವನ ಸರ್ಕಸ್‌ನಲ್ಲಿ ಒಂದೇ ಸವನೆ ಎರಡು ಸಲ ಭಯಂಕರ ದುರ್ಘಟನೆಗಳು ಜರುಗಿದ್ದುದರಿಂದ ಪೋಲೀಸರು ಅವನ ಬೆನ್ನು ಹತ್ತಿದ್ದರು.

ಸರ್ಕಸ್ ಬೇರೆ ಊರಿಗೆ ಹೊರಟಿತು. ಜೋಹರಾ ವರ್ಬಿ ಕೂಡ ಸಿವಿಲ್ ಆಸ್ಪತ್ರೆಯಿಂದ ಎಲ್ಲಿಗೋ ಹೊರಟು ಹೋದಳು.

ಕ್ರಿಸ್‌ಮಸ್ ಆರಂಭವಾಗಿ ಒಂದು ವಾರ ಕಳೆದಿರಬೇಕು. ತೆಳ್ಳಗಿನ ಎತ್ತರದ ಓರ್ವ ಮಹಿಳೆ ನಮ್ಮಲ್ಲಿಗೆ ಅತಿಥಿಯಾಗಿ ಬಂದಳು. ಆಕೆಯ ಹೆಸರು ಡಾ॥ ಜುಬೈದಾ

ಸಿದ್ದೀಕಿ. ಆಕೆ ದಿಲ್ಲಿಯಿಂದ ಕಲಕತ್ತಾಕ್ಕೆ ಹೊರಟಿದ್ದಳು. ಒಂದು ವಾರದ ಮಟ್ಟಿಗೆ ನಮ್ಮಲ್ಲಿಗೆ ಬಂದು ತಂಗಿದ್ದಳು. ಆಕೆ ಇಂಗ್ಲೆಂಡದಲ್ಲಿ ವಿಜ್ಞಾನದ ಯಾವುದೋ ಒಂದು ವಿಷಯದಲ್ಲಿ ಪಿಎಚ್.ಡಿ. ಮಾಡಿದ್ದಳು. ಆಕೆ ಯಾವುದೋ ಸಂಸ್ಥಾನದ ಒಂದು ಮಹಿಳಾ ಕಾಲೇಜಿನ ಪ್ರಿನ್ಸಿಪಾಲಳಾಗಿದ್ದಳು. ಬಿಳಿಸೀರೆ, ಉದ್ದನ್ನ ಬಿಳಿ ಬ್ಲೌಜ್ ತೊಡುತ್ತಿದ್ದಳು. ಬಹಳ ಎತ್ತರವಿರುವುದರಿಂದ ಕೊಂಚ ಬಾಗಿ ನಡೆಯುತ್ತಿದ್ದಳು. ತಲೆಯೆತ್ತಿ ಆಳವಾದ ದೃಷ್ಟಿಯಿಂದ ಪ್ರತಿಯೊಬ್ಬರನ್ನು ನೋಡುತ್ತಿದ್ದಳು. ಕಡಲಾಚೆ ಹೋಗಿ ಉಚ್ಚ ಶಿಕ್ಷಣ ಪಡೆದು ಬಂದ ಬೆರಳೆಣಿಕೆಯ ಮುಸ್ಲಿಂ ಸ್ತ್ರೀಯರ ಲ್ಲೊಬ್ಬಳಾಗಿದ್ದಳು.

ಮೊದಲದಿನ ಊಟಕ್ಕೆ ಕುಳಿತಾಗ ಆಕೆ ಸಂಕೋಚದಿಂದಲೇ ಹೇಳಿದಳು ''ನಿಮ್ಮಲ್ಲಿ ಎಲ್ಲ ನೌಕರರೂ ಹಿಂದೂಗಳಿದ್ದಾರೆ. ಹಿಂದೂಗಳು ಮಾಡಿದ ಅಡಿಗೆ ನಾನು ಊಟ ಮಾಡುವುದಿಲ್ಲ.''

''ಮುಸಲ್ಮಾನರಾಗಿ ತಾವು ಸ್ಪರ್ಶ ಅಸ್ಪರ್ಶದ ಮಾತಾಡುತ್ತೀರಲ್ಲ ಸೋದರಿ ಜುಬೈದಾ? ಆಶ್ಚರ್ಯ, ಪರಮಾಶ್ಚರ್ಯ, ಅದರಲ್ಲೂ ತಾವಂತೂ ಇಂಗ್ಲೆಂಡಕ್ಕೂ ಹೋಗಿ ಬಂದಿರುವಿರಿ?'' ಎಂದು ಬಾಜೀ ತನ್ನ ಚೆಲುವುಗಂಗಳನ್ನು ಇನ್ನಷ್ಟು ಅಗಲ ಮಾಡಿ ಕೇಳಿದಳು.

''ನಿಜ ಹೇಳಬೇಕೆಂದರೆ ನಾನು...ನಾನು...ವಜೀಫಾ (ಜಪ) ಮಾಡುತ್ತಿದ್ದೇನೆ'' ಎಂದು ಸಮಾಧಾನ ಹೇಳಿದಳು. ಹೀಗಾಗಿ ಆಕೆಗಾಗಿ ಗಫೂರ ಬೇಗಮ್ ಸ್ವತಃ ಅಡಿಗೆ ಮಾಡತೊಡಗಿದಳು.

ಅಕ್ಕಪಕ್ಕದಲ್ಲಿ ವಾಸಿಸುತ್ತಿದ್ದ ಮುಸಲ್ಮಾನ ಮಹಿಳೆಯರ ಮೇಲೆ ಡಾ|| ಸಿದ್ದೀಕಿ ಅವರ ಧಾರ್ಮಿಕತೆಯ ಪ್ರಭಾವ ಚೆನ್ನಾಗಿಯೇ ಆಯಿತು. ''ಹುಡುಗಿ ಇದ್ದರೆ ಹೀಗಿರಬೇಕು. ಸಪ್ತಸಮುದ್ರ ದಾಟಿ ಹೋಗಿ ಬಂದಿದ್ದರೂ ಸೀರೆಯ ಸೆರಗು ಸ್ವಲ್ಪವಾದರೂ ಜಾರಿ ಬೀಳಲು ಸಾಧ್ಯವೇ?'' ಎಂದು ಮಿಸೆಸ್ ಫಾರೂಕೀ ಬಾಯಿ ತುಂಬ ಹೊಗಳಿದ್ದಳು.

''ಇಸ್ಲಾಂ ಧರ್ಮದಲ್ಲಿ ಪರದೆಯೆಂದರೆ ಮುಸಲ್ಮಾನ ಸ್ತ್ರೀ ಕೇವಲ ತನ್ನ ಮುಖ ಹಾಗೂ ಕೈ ಮಾತ್ರ ಕಾಣಿಸುವಷ್ಟು ಬಿಟ್ಟು ತನ್ನ ಸಮಸ್ತ ಶರೀರದ ಸೌಂದರ್ಯ, ರೂಪವನ್ನು ಪರದೆಯಿಂದ ಮುಚ್ಚಿಕೊಂಡಿರಬೇಕು. ಪವಿತ್ರ ಕುರಾನ್‌ದಲ್ಲಿ ಇದನ್ನೇ ಬರೆಯಲಾಗಿದೆ'' ಎಂದು ಮಿಸೆಸ್ ಕುರೇಶಿ ನುಡಿದಳು.

''ರೋಜಾ-ನಮಾಜ ತಪ್ಪದೇ ಮಾಡುವ, ನಾಚಿಕ, ಲಜ್ಜೆಯ ಪ್ರತಿಮೂರ್ತಿ ಯಾಗಿದ್ದಾಳೆ'' ಎಂದು ಮಿಸೆಸ್ ಅನ್ಸಾರಿ ಪ್ರಶಂಸೆ ಮಾಡಿದಳು. ಡಾ|| ಸಿದ್ದೀಕಿ ಎಲ್ಲ ಸಮಯದಲ್ಲೂ ಹಸಿರು ಹುಲ್ಲಿನ ಮೇಲೆ ಕುರ್ಚಿ ಹಾಕಿಕೊಂಡು ಕುಳಿತು ಬಾಜೀಗೆ ಅದು ಯಾವ ಕಥೆ ಕೇಳಿಸುತ್ತಿದ್ದಳೊ; ಫಕೀರಾನ ಅತ್ತಿಗೆಯನ್ನು ಕಂಡು ಆಕೆ ಹೇಳುತ್ತಿದ್ದಳು. ''ಓ ! ಎಂಥ ಭಾಗ್ಯವಂತೆ'' ಎಂದು.

ಡಾ|| ಸಿದ್ದೀಕಿ ಬೆಳಗಿನಿಂದ ಬೈಗಿನವರೆಗೂ ಗಂಭೀರ ಹಾಗೂ ದುಃಖ ತುಂಬಿದ ಮುಖ ಮುದ್ರೆಯಲ್ಲಿಯೇ ಇರುತ್ತಿದ್ದಳು. ಆಕೆಗೆ ಸಂತಸ, ಉಲ್ಲಾಸ ನೀಡಲು ಬಾಜೀ ನನ್ನನ್ನು ಕರೆಯಿಸಿಕೊಳ್ಳುತ್ತಿದ್ದಳು (ನಾನು ಯಾವುದೋ ಆಟ ಆಡುವ ಸಾಮಾನು ಎಂದು ಭಾವಿಸಿರಬೇಕು) ಮತ್ತೆ ಬಾಜೀ ''ಜುಬೇದಾ ಅವರಿಗೆ ಆ ಹಾಡು ಕೇಳಿಸು, ಈ ಕಥೆ ಹೇಳು, ಓಡಿಹೋಗಿ ನಿನ್ನ ಗೆಳತಿಯರನ್ನು ಕರೆದು ತಂದು ಎಲ್ಲರೂ ಕೂಡಿ ನಾಚು ಮಾಡಿರಿ'' ಎಂದು ಆಜ್ಞೆ ಮಾಡುತ್ತಿದ್ದಳು.

ಒಂದು ದಿನ ಡಾ|| ಸಿದ್ದೀಕಿ ಬಂಗ್ಲೆ ಹಿಂದಿದ್ದ ಲಾನ್‌ದಲ್ಲಿ ಕುಳಿತು ಬಾಜೀಗೆ ಹೇಳುತ್ತಿದ್ದಳು ''ಸತ್ತವರ ಬಗ್ಗೆ ಸಮಾಧಾನ ಬರುತ್ತದೆ, ರೆಹನಾ, ಜೀವಂತವಿರುವವನ ಬಗ್ಗೆ ಹೇಗೆ ಸಮಾಧಾನ ಮಾಡಿಕೊಳ್ಳಲಿ.'' ಆ ದಿನ ಆಕೆ ಯಾವ ಕಾರಣಕ್ಕೂ ನಗುವ ಮಾತನ್ನೇ ಎತ್ತದೇ ಹೋದಾಗ ನನ್ನನ್ನು ಕರೆದು ಬಾಜೀ ಅಪ್ಪಣೆ ಮಾಡಿದಳು ''ಏ ಪಿಸ್ಸಲ್ಲ ಆ ನಗೆಯ ಆಂಗ್ಲೊ ಇಂಡಿಯನ್ ಗೀತ ಕೇಳಿಸು, ಜುಬೇದಾ ಅಕ್ಕನಿಗೆ''

''ಹಾಗೇ ಆಗಲಿ'' ಆಜ್ಞಾಧಾರಿಯ ತೆರದಿ ಉತ್ತರ ನೀಡಿ ನೇರವಾಗಿ ಎದ್ದು ನಿಂತೆ, ಸ್ಕೂಲಿನಲ್ಲಿ ಇಂಗ್ಲೀಷ್ ಹಾಡು ಹಾಡುವಾಗ ನಿಲ್ಲುವಂತೆ. ಗೀತ ಆರಂಭಿಸಿದೆ–

'ಒಂದೊಮ್ಮೆ ಓರ್ವ ವ್ಯಾಪಾರಿ ಲಂಡನ್ ನಗರದಲ್ಲಿದ್ದ
ಅವನಿಗೋರ್ವ ಮಗಳು ಅವಳ ಹೆಸರು ಡಯಾನಾ
ಹೆಸರು ಡಯಾನಾ ಅವಳಿಗೆ ಹದಿನಾರು ವರ್ಷ
ಅವಳಲ್ಲಿ ಬಹಳಷ್ಟು ಉಡುಗೆ...ಬೆಳ್ಳಿ..'

ಒಮ್ಮೆಲೇ ನನ್ನ ಗಂಟಲಲ್ಲಿ ಏನೋ ಸಿಕ್ಕಂತಾಗಿ ಧ್ವನಿ ನಿಂತು ಹೋಯಿತು. ಡಾ|| ಸಿದ್ದೀಕಿ ಗಾಬರಿಯಿಂದ ನನ್ನನ್ನು ನೋಡುತ್ತಲಿದ್ದಳು...

ಸಾಯಂಕಾಲ ನಾನು ವಿಮಲಾಗೆ ಹೇಳಿದೆ–''ಈ ಜುಬೇದಾ ಅಕ್ಕ ಎಲ್ಲ ಸಮಯದಲ್ಲೂ ಹೀಗೇಕೆ ಗಾಬರಿಯಾಗಿರುತ್ತಾಳೋ ತಿಳಿಯದಾಗಿದೆ...''

''ನನಗೆ ಗೊತ್ತಿದೆ'', ವಿಮಲಾ ಉತ್ತರಿಸಿದಳು. ಆಕೆ ನನಗಿಂತ ಕೊಂಚ ದೊಡ್ಡವಳಿದ್ದಳು. ಯಾವುದೋ ಮಾತಿನ ಮರ್ಮ ಕಂಡು ಹಿಡಿಯುವಲ್ಲಿ ತುಂಬ ಚಾಲಾಕ ಇದ್ದಳು. ''ಓರ್ವ ಸೈಂಟಿಸ್ಟ್ ಇದ್ದಾನೆ. ಅವನ ಹೆಸರು ಡಾಕ್ಟರ್ ಏನೋ ಇದೆ. ನನಗಷ್ಟು ನೆನಪಿಗೆ ಬರುತ್ತಿಲ್ಲ. ಫಾರೂಕೀ ಆಂಟಿ ಗೋಸ್ವಾಮಿ ಆಂಟಿಗೆ ಹೆಸರೂ ಹೇಳಿದ್ದರು...ಆತ ಕಲಕತ್ತಾ ಯುನಿವರ್ಸಿಟಿಯಲ್ಲಿ ಜುಬೇದಾ ಅಕ್ಕನ ಸಹಪಾಠಿಯಾಗಿದ್ದನಂತೆ. ಜುಬೇದಾ ಅಕ್ಕ ಇಂಗ್ಲಂಡಗೆ ಹೋದಾಗ ಅಲ್ಲಿ ಮೆಂಚಸ್ಟರ ಯುನಿವರ್ಸಿಟಿಯಲ್ಲಿಯೂ ಎಷ್ಟೋ ವರ್ಷ ಆಕೆಯೊಂದಿಗೆ ಓದಿದ್ದನಂತೆ. ಈ ಜುಬೇದಾ ಅಕ್ಕ ಕಳೆದ ಹದಿನೈದು ವರ್ಷಗಳಿಂದ ಈ ಡಾಕ್ಟರನ ಹೆಸರಿನ ಮಾಲಾ ಜಪ ಮಾಡುತ್ತಿದ್ದಾಳೆ. ನಿನ್ನೆ ಬೆಳಿಗ್ಗೆ ಇಂಗ್ಲಿಷ್ ಸ್ಟೋರನಲ್ಲಿ ಫಾರೂಕಿ ಆಂಟಿ, ಗೋಸ್ವಾಮಿ ಆಂಟಿಗೆ ಈ ಎಲ್ಲ ಮಾತುಗಳನ್ನು ಹೇಳುತ್ತಿದ್ದಳು. 'ಈಕೆ ಯಾರದಾದರೂ ಹೆಸರಿನ ಮಾಲಾ ಏಕೆ ಜಪಿಸುತ್ತಾಳೆ?'' ಎಂದು ನಾನು ಪ್ರಶ್ನಿಸಿದೆ.

''ಇದು ತಿಳಿಯದು'' ಎಂದು ವಿಮಲಾ ಉತ್ತರಿಸಿದಳು.''

ನಾನು ಮನೆಯೊಳಗೆ ಬಂದಾಗ ಜುಬೇದಾ ಅಕ್ಕ ಗಫೂರ ಬೇಗಮಳೊಂದಿಗೆ ವಿಚಾರ ವಿನಿಮಯ ಮಾಡುತ್ತಿದ್ದುದನ್ನು ಕಂಡೆ.

ಜುಬೇದಾ ಅಕ್ಕ ಯಾವ ಸಂಸ್ಥಾನದಲ್ಲಿ ಕೆಲಸ ಮಾಡುತ್ತಾಳೋ ಅದು ಅಜಮೇರ ಕ್ಷೇತ್ರಕ್ಕೆ ಅತ್ಯಂತ ಸಮೀಪವಾಗುತ್ತದೆಂದು ಆಗಲೇ ತಿಳಿದು ಬಂದಿತು. ಇದರಿಂದಾಗಿಯೇ ಜುಬೇದಾ ಅಕ್ಕ ತುಂಬ ಧಾರ್ಮಿಕ ಮನೋಭಾವದವರಾಗಿದ್ದಾರೆ. ಜುಬೇದಾ ಅಕ್ಕಳ ಸಂಬಂಧಿ ಹದಿನೇಳು ವರ್ಷದ, ತುಂಬ ಚೆಲುವೆಯಾದ ಜಾನ ಸಾಯರಾಳೊಂದಿಗೆ ಕಲಕತ್ತಾದ ಲಾರೆಟೊ ಹೌಸ್‌ದಲ್ಲಿ ಡಾ. ಮೆಹಮೂದಖಾನ ಮದುವೆ ಮಾಡಿಕೊಳ್ಳುವ ಸುದ್ದಿ ತಿಳಿದಾಗಿನಿಂದ ಜುಬೇದಾ ಅಕ್ಕ ಐದು ಸಲ ನಮಾಜ ಅಲ್ಲದೆ 'ಜಾಶ್ತ ಇಶ್ರಾಕ್' ಮತ್ತು 'ತಹಜ್ಜುದ ನಮಾಜ' ಕೂಡ ಮಾಡತೊಡಗಿದ್ದಾಳೆ. ಇಲ್ಲಿ ಗಫೂರ ಬೇಗಮಳಿಂದ 'ಮಜನೂರ ಶರೀಫ' 'ದುವಾಯಿ ಗಂಜುಲ ಅರ್ಶ', ಮತ್ತು 'ದರೂದ ತಾಜ' ಮುಂತಾದ ಗ್ರಂಥಗಳನ್ನು ಪಡೆದು ಓದುತ್ತಿದ್ದಾಳೆ. ಪ್ರವಾಸಕ್ಕೆ ಹೊರಟಾಗ ತನ್ನಲ್ಲಿದ್ದ ಈ ಗ್ರಂಥಗಳನ್ನು ಮರೆತು ಬಂದಿದ್ದಾಳೆ.

ಒಂದು ದಿನ ರಾತ್ರಿ ಎರಡು ಗಂಟೆಯ ಸುಮಾರಿಗೆ ಹೃದಯ ಭೇದಕ ಚೀರುವಿಕೆ ಅತಿಥಿಯ ಕೋಣೆಯಿಂದ ಕೇಳಿ ಬಂತು. ಎಲ್ಲರೂ ತಮ್ಮ ತಮ್ಮ ಕೋಣೆಯಿಂದ ಗಾಬರಿಯಾಗಿ ಅತಿಥಿ ಕೋಣೆಗೆ ಓಡಿ ಬಂದರು. ಆದರೆ ಬಾಗಿಲು ಒಳಗಿನಿಂದ ಬಂದಾಗಿತ್ತು. ಬಾಜೀ ಜೋರು ಜೋರಾಗಿ ಬಾಗಿಲು ಬಡಿದಳು. ಕೆಲ ನಿಮಿಷಗಳ ನಂತರ ಒಳಗಿನಿಂದ ಜುಬೇದಾ ಅಕ್ಕ ತುಂಬ ಸೋತ ದನಿಯಲ್ಲಿ ಹೇಳಿದಳು.– ''ಚೆನ್ನಾಗಿರುವೆ...ಸಂಪೂರ್ಣ ಚೆನ್ನಾಗಿರುವೆ...ನೀವು ದಯಮಾಡಿ...ದೇವರಿಗಾಗಿ ಇಲ್ಲಿಂದ ಹೊರಟು ಹೋಗಿ...ನನ್ನ ಬಗ್ಗೆ ಚಿಂತಿಸಬೇಡಿ...ಹೋಗಿರಿ... ಹೋಗಿ ಮಲಗಿಕೊಳ್ಳಿ. ನಿದ್ರೆಯಲ್ಲಿ ಹೆದರಿಕೊಂಡಿದ್ದೆ ಅಷ್ಟೆ...ಹೋಗಿರಿ...''

''ಜುಬೇದಾ ಅಕ್ಕ ಬಾಗಿಲನ್ನಾದರೂ ತೆಗೆಯಿರಿ'' ಬಾಜೀ ಕೂಗಿಕೊಂಡಳು. ಅದಕ್ಕೆ ಆಕೆ ''ನೀವೆಲ್ಲ ಹೊರಟು ಹೋಗಿ. ನೀವು ಒಂದು ವೇಳೆ ಹೋಗದಿದ್ದರೆ ನಾನು ಮತ್ತೆ ಕೂಗಿಕೊಳ್ಳುತ್ತೇನೆ'' ಎಂದು ಜುಬೇದಾ ಅಕ್ಕ ಒಳಗಿನಿಂದ ಹಿಸ್ಟೀರಿಯಾದ ರೀತಿಯಲ್ಲಿ ಕೂಗಿಕೊಂಡಳು.

ಬೆಳಗ್ಗೆ ಎದ್ದಾಗ ಮುಖ ಇಳಿದು ತುಂಬ ಪೇಲವವಾಗಿತ್ತು. ಉಪಹಾರದ ನಂತರ ಡೈನಿಂಗ್‌ಹಾಲ್ ಖಾಲಿಯಾದಾಗ ಆಕೆ ಬಾಜೀಯೊಂದಿಗೆ ಮೆಲ್ಲ–ಮೆಲ್ಲಗೆ ಹೇಳಿದಳು– ''ನಾನು ಯಾರಿಗೂ ಹೇಳಿರಲಿಲ್ಲ. ನಾನೊಂದು ವ್ರತ ಮಾಡುತ್ತಲಿದ್ದೆ. ಮೂವತ್ತೊಂಬತ್ತು ರಾತ್ರಿಗಳು ಪೂರ್ಣಗೊಂಡಿದ್ದವು. ನಿನ್ನೆ ನಲವತ್ತನೆಯ ಹಾಗೂ ಕೊನೆಯ ರಾತ್ರಿಯಿತ್ತು. ಏನೇ ಆದರೂ ಈ ಜಪ ಮಾಡುವ ಸಮಯದಲ್ಲಿ ತಿರುಗಿ ನೋಡಬಾರದೆಂದು ಆಜ್ಞೆಯಾಗಿತ್ತು. ಹಾಗೆ ಮಾಡಿದಲ್ಲಿ ಮಾಡಿದ ತಪಸ್ಸು, ಧ್ಯಾನದ ಫಲ ನಾಶವಾಗುತ್ತದೆಂದು ಹೇಳಲಾಗಿತ್ತು. ನಿನ್ನೆ ರಾತ್ರಿ ಎರಡು ಗಂಟೆಯ ಸಮಯದಲ್ಲಿ ಜಪ ಮಾಡುತ್ತಿರುವ ಕಾಲದಲ್ಲಿ ಜಾ–ನಮಾಜದ ಎದುರಿನಲ್ಲಿ ಒಂದು ಕತ್ತೆ ಮುಖದ

ಭಯಂಕರ ಕರಿನಾಯಿ ನನ್ನೆದುರಿಗೆ ಕುಳಿತು ಹಲ್ಲು ಕಿರಿಯುತ್ತಲಿದೆ. ಇದರಿಂದ ಹೆದರಿ ಚೀರಿಕೊಂಡೆ ಮತ್ತು ವ್ರತ ಭ್ರಷ್ಟವಾಯಿತು. ನಾಯಿ ಮಾಯವಾಯಿತು. ಇದರಿಂದ ನಾನು ಇವರೆಗೂ ಮಾಡಿದ ವ್ರತ, ಜಪ ಎಲ್ಲ ನಿರುಪಯುಕ್ತವಾಯಿತು. ಈಗ ಏನು ಮಾಡಲೂ ಸಾಧ್ಯವಿಲ್ಲ'' ಇಷ್ಟು ಹೇಳಿದ ಆಕೆಯ ಕಣ್ಣಿಂದ ಕಣ್ಣೀರು ಧಾರಾಕಾರವಾಗಿ ಸುರಿಯಹತ್ತಿದವು. ಆಕೆ ಚಾಳೀಸು ತೆಗೆದು ಕಣ್ಣು ಒರೆಸಿಕೊಂಡಳು. ಬಾಜೀ ಅತ್ಯಾಶ್ಚರ್ಯಚಕಿತಳಾಗಿ ಆಕೆಯನ್ನು ನೋಡತೊಡಗಿದಳು. ನೋಡುತ್ತ ''ಆದರೆ ಜುಬೇದಾ ಅಕ್ಕ...ತಾವು...ತಾವು....ಸೈಂಟಿಸ್ಟ್. ಓರ್ವ ವಿಜ್ಞಾನಿ. ಮೆಂಚಸ್ಟರ ಯುನಿವರ್ಸಿಟಿಯಲ್ಲಿ ಓದಿ ಬಂದವರು...ಇಂಥ ಅಂಧವಿಶ್ವಾಸದ ಮಾತುಗಳನ್ನು ಆಡುತ್ತೀರಲ್ಲ... ವೈಜ್ಞಾನಿಕ...ವೈಚಾರಿಕ ಉಪಚಾರ ಮಾಡಿಕೊಳ್ಳಿ...ತಮಗೆ ಹೆಲೊಸಿನೇಶನ್ ಆಗಿರಬೇಕು...ಕತ್ತೆ ಆಕಾರದ ನಾಯಿ...ಅದೂ ನಂತರ ತನ್ನಷ್ಟಕ್ಕೆ ತಾನು ಮಾಯವಾಗುವುದು...'' ಎಂದು ಹೇಳಿದ ಬಾಜೀ ಜೋರಾಗಿ ಖೊಳ್ಳೆಂದು ನಗತೊಡಗಿದಳು...

''ರೆಹಾನಾ ಖಾತೂನ್'' ಎನ್ನುತ್ತ ಡಾ. ಸಿದ್ದೀಕಿ ತಲೆಯೆತ್ತಿ ಬಾಜೀಯನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿದಳು. ಹಾಗೂ ಮತ್ತೆ ಮೆಲ್ಲ–ಮೆಲ್ಲಗೆ ಹೇಳಿದಳು–''ನೀನಿನ್ನೂ ಕೇವಲ ಇಪ್ಪತ್ತೆರಡು ವರ್ಷದವಳಿರುವೆ. ನಿನಗೆ ಪ್ರೀತಿಸುವ ತಾಯಿ ತಂದೆ, ಚಿಕ್ಕಪ್ಪ ಇದ್ದಾರೆ, ನೀನೊಂದು ತುಂಬಿದ ಮನೆಯಲ್ಲಿ ಪ್ರೀತಿಸುವ ಅಣ್ಣ–ತಮ್ಮ ಅಕ್ಕ–ತಂಗಿಯರ ಸುಖದ ನೆರಳಿನಲ್ಲಿ ಹಾಯಾಗಿರುವೆ. ನಿನ್ನ ಮನಸ್ಸಿಗೆ ಬಂದ ವರನೊಂದಿಗೆ ಮದುವೆಯಾಗಲಿರುವೆ. ಇಡೀ ಜೀವನ ನಿನ್ನ ನಿರೀಕ್ಷೆಯಲ್ಲಿದೆ. ಲೋಕದ ಸಕಲ ಸಂತೋಷಗಳು ನಿನಗಾಗಿ ಕಾಯುತ್ತಲಿವೆ. ನನ್ನ ಜೀವನದ ಮೇಲೆ ಆಗಿರುವ ಆಘಾತಗಳು ಭಗವಂತನ ಕೃಪೆಯಿಂದ ನಿನ್ನ ಜೀವನದ ಮೇಲೆ ಆಗದಿರಲಿ. ಒಂಟಿತನ ಅನುಭವಿಸುವ ಯಾತನೆ ನಿನಗೆಂದೂ ಬರದಿರಲಿ...ದುಃಖತಪ್ತರಾದವರ, ಯಾತನೆಗೊಳಗಾದವರ ಚೇಷ್ಟೆ ಮಾಡದಿರು...'' ಅಕಸ್ಮಾತ್ತಾಗಿ ಆಕೆಯ ದೃಷ್ಟಿ ನನ್ನ ಮೇಲೆ ಬಿತ್ತು. ನಾನು ಮೇಜಿನ ತುದಿಯ ಮೇಲೆ ಕುಳಿತು ತತ್ಪರತೆಯಿಂದ ಜಾಸೂಸಿಯಲ್ಲಿ ನಿರತಳಾಗಿದ್ದೆ. ಕತ್ತೆಯ ರೀತಿಯ ಕರಿನಾಯಿಯೆಂದರೆ ಒಂದು ಅದ್ಭುತ ಆಶ್ಚರ್ಯಜನಕ ಘಟನೆಯಾಗಿತ್ತು. ನನ್ನನ್ನು ನೋಡಿದ ಆಕೆ ಸುಮ್ಮನಾದಳು. ಬಾಜೀ ಕಣ್ಣು ರೆಪ್ಪೆ ಹಾರಿಸಿ ಸನ್ನೆಮಾಡಿದಳು, ನಾನು ಅಲ್ಲಿಂದ ಪರಾರಿಯಾಗಬೇಕೆಂದು. ಆದ್ದರಿಂದ ಅಲ್ಲಿಂದ ನಾನು ಮರೆಯಾದೆ. ಈ ಘಟನೆಯ ನಂತರ ಎರಡನೆಯ ದಿನ ಡಾ. ಸಿದ್ದೀಕಿ ಕಲಕತ್ತಾಕ್ಕೆ ಹೊರಟು ಹೋದಳು. ಆಕೆ ಹೋದ ಕೆಲದಿನಗಳ ನಂತರ ವಿಚಿತ್ರವಾಗಿ, ಕರೆಯದಲೇ ಮತ್ತೋರ್ವ ಅತಿಥಿ ಒಕ್ಕರಿಸಿದ.

ಪಾಲನಪಾಲಾದ ದಾರಿ ಸಾಮಾನ್ಯವಾಗಿ ನಿರ್ಜನವಾಗಿರುತ್ತದೆ. ಒಬ್ಬಿಬ್ಬರು ದಾರಿಕಾರರು ಅಥವಾ ಒಂದೆರಡು ಕಾರು, ಟಾಂಗಾದ ಹೊರತಾಗಿ ಒಮ್ಮೊಮ್ಮೆ ಸೀಖ ಜ್ಯೋತಿಷಿ ಕೈಯಲ್ಲಿ ಹೊಲಸಾದ ಶಾಸ್ತ್ರ ಗ್ರಂಥಗಳ ಗಂಟನ್ನು ಹಿಡಕೊಂಡು ಅತ್ತಿತ್ತ ನೋಡುತ್ತ ಹೊರಟಿರುವುದು. ದೊಡ್ಡ ದೊಡ್ಡ ಗಂಟುಗಳನ್ನು ತುಂಬ ಕುಶಲತೆಯಿಂದ

ಸೈಕಲ್ ಮೇಲೆ ಹೇರಿಕೊಂಡು ಓಣಿಯಲ್ಲಿ ಸುತ್ತುವ 'ಜಾಯಿನಾಮೆನ್' ಕಾಣಸಿಗುತ್ತಾನೆ. ಕಾಶ್ಮೀರಿ ಶಾಲು, ಕಾರ್ಪೆಟ್, ಬಟ್ಟೆ, ಒಡವೆ ಮಾರುವವರು ಆಗಾಗ ಸಿಗುತ್ತಾರೆ. ಮಿಸ್ಟರ್ ಪೀಟರ ರಾಬರ್ಟ ಸರ್ದಾರ ಖಾನ್ ಇಂಥ ವ್ಯಾಪಾರಿಗಳ ಪೈಕಿ ಒಬ್ಬ ನಾಗಿದ್ದ. ಆದರೆ ಅವನು ತನ್ನನ್ನು ತಾನು ''ಟ್ರೆವಲಿಂಗ್ ಸೇಲ್ಸ್‌ಮೆನ್'' ಎಂದು ಕರೆದುಕೊಳ್ಳುತ್ತಿದ್ದ. ಮಿತಿಮೀರಿದ ಮಾತುಗಾರನಾಗಿದ್ದ. ಮುಸಲ್ಮಾನನಾಗಿದ್ದವನು ಈಗ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡಿದ್ದನು. ತುರ್ಕಿಟೊಪ್ಪಿಗೆ ಹಾಕಿಕೊಳ್ಳುತ್ತಿದ್ದ. ಸೈಕಲ್ ಮೇಲೆ ಪ್ಲಾಸ್ಟಿಕ್ ಪಾತ್ರೆಗಳನ್ನು ಹೇರಿಕೊಂಡು ಮಾರಾಟ ಮಾಡುತ್ತಿದ್ದ. ತಿಂಗಳು ಎರಡು ತಿಂಗಳಿಗೊಮ್ಮೆ ನಮ್ಮ ಓಣಿಯಲ್ಲಿ ಬರುತ್ತಿದ್ದ. ಆತ ಪ್ರತಿಯೊಂದು ಮಾತನ್ನು ಆರಂಭಿಸುವ ಮುನ್ನ 'ಖುದಾ ಬಾಪಕಾ ಶುಕರ ಹೈ' ಎಂದೇ ಆರಂಭಿಸುತ್ತಿದ್ದ. ಒಮ್ಮೊಮ್ಮೆ ತನ್ನ ಸಾಮಾನುಗಳ ಪ್ರಚಾರವನ್ನೇ ಆರಂಭಿಸಿ ಬಿಡುತ್ತಿದ್ದ.

ಆ ದಿನ ಮಿಸ್ಟರ್ ಪೀಟರ್ ರಾಬರ್ಟ್ ಸರ್ದಾರಖಾನ್, ಸೈಕಲ್ ಹೊರಗೆ ನಿಲ್ಲಿಸಿ ಒಳಗೆ ಪಡಸಾಲೆಯಲ್ಲಿ ಬಂದವನು ಅತಿಥಿಗಳ ಕೋಣೆಯಲ್ಲಿ ಹಣಿಕಿಕ್ಕಿ ನೋಡಿದ, ಅದರ ಬಾಗಿಲು ತೆರೆದಿತ್ತು, ಬಹಳ ಸಮಾಧಾನದಿಂದ ತನ್ನ ಅಭಿಪ್ರಾಯ ಮಂಡಿಸಿದ–

''ಈ ಕೋಣೆ ಸದಾಕಾಲ ಖಾಲಿಯಾಗಿಯೇ ಇರುತ್ತದೆ. ವಿಷಯವೇನೆಂದರೆ ನನ್ನೋರ್ವ ತಂಗಿ ಲೇಡಿ ಡಾಕ್ಟರ್ ಇದ್ದಾಳೆ. ಆಕೆ ಕೆಲ ದಿನಗಳ ಮಟ್ಟಿಗೆ ಡೆಹರಾಡೂನ್‌ಗೆ ಬರಲಿದ್ದಾಳೆ..'' ಇಷ್ಟು ಹೇಳಿ ಉತ್ತರಕ್ಕಾಗಿ ಕಾಯದ...ಸೈಕಲ್ ಹತ್ತಿ ಹೊರಟುಬಿಟ್ಟ. ಮಾರನೆಯ ದಿನ ಜಾರ್ಜೆಟ್ ಸೀರೆ ಉಟ್ಟ ದಪ್ಪಗಿನ ಮಹಿಳೆ ಟಾಂಗಾದಲ್ಲಿ ಬಂದು ಮನೆಯ ಮುಂದೆ ಇಳಿದಳು. ಮಿಸ್ಟರ್ ಸರ್ದಾರ್‌ಖಾನ್ ಸೈಕಲ್ ಮೇಲೆ ಆಕೆ ಜೊತೆಗೆ ಬಂದಿದ್ದ. ಅವನು ಇಳಿದು ಟಾಂಗಾದಲ್ಲಿದ್ದ ಸಾಮಾನು ಗಳನ್ನು ತೆಗೆದುಕೊಂಡು ಅತಿಥಿ ಕೋಣೆಯಲ್ಲಿರಿಸಿದ ಹಾಗೂ ಅಮ್ಮ ಮತ್ತು ಬಾಜೀಗೆ ಆಕೆಯ ಪರಿಚಯ ಮಾಡಿಸಿದ. ''ಈಕೆ ನನ್ನ ತಂಗಿ, ನಿಮ್ಮಲ್ಲಿ ಎರಡು ಮೂರು ದಿನ ಇರುತ್ತಾಳೆ. ಸರಿ...ನಾನೀಗ ಹೋಗುತ್ತೇನೆ'' ಎನ್ನುತ್ತ ತನ್ನ ತಂಗಿಗೆ–''ನಿಮಗೇನು ಬೇಕೋ ಯಾವುದೇ ಸಂಕೋಚವಿಲ್ಲದೇ ಬೇಗಮ್ ಸಾಹೇಬರಿಗೆ ಹೇಳಿ...ಇದು ನಿಮ್ಮ ಮನೆಯೆಂದೇ ತಿಳಿಯಿರಿ...ಸರಿ ಹಾಗಾದರೆ, ಬಾಯ್...ಬಾಯ್...'' ಎಂದು ಹೇಳುತ್ತ ಸೈಕಲ್ ಮೇಲೆ ಕುಳಿತು ಹೊರಟೇಬಿಟ್ಟ.

ಈಕೆ ಓರ್ವ ಮುಸಲ್ಮಾನ ಮಹಿಳೆಯಾಗಿದ್ದಳು. ಎಲ್ಲಿಂದ ಬಂದಳು ಹಾಗೂ ಎಲ್ಲಿಗೆ ಹೋಗಲಿದ್ದಾಳೆಂಬುದನ್ನು ತಿಳಿಸಲಿಲ್ಲ. ಖಾಸಗಿಯಾಗಿ ಹೋಮಿಯೋಫೆಥಿಕ್ ವೈದ್ಯಕೀಯ ಅಧ್ಯಯನ ಮಾಡುತ್ತಿರುವುದಾಗಿ ಹೇಳಿದಳು ಹಾಗೂ ಸಾಯಂಕಾಲ ತನ್ನ ಹ್ಯಾಂಡ್ ಬ್ಯಾಗಿನಿಂದ ಒಂದು ಉರ್ದು ದಪ್ಪ ಪುಸ್ತಕ ತೆಗೆದು ತೋರಿಸುತ್ತ ಅದು ಹೋಮಿಯೋಪೆಥಿಗೆ ಸಂಬಂಧಿಸಿದ ಪುಸ್ತಕವೆಂದು ತಿಳಿಸಿದಳು. 'ಓ ರಾಯಲ್ ತೋಹಫಾ ಹಾರಮೋನಿಯಮ್ ಗೈಡ್ ಸಿರೀಜ್'ದ ಪತ್ರಿಕೆಗಳ ಮುಖಾಂತರ ಆ ಕಲೆಯನ್ನು ಕೂಡ ಕರಗತ ಮಾಡಿಕೊಂಡಿದ್ದಳು. ಆಕೆ ''ಓ ! ತಾಯಂದಿರ, ಸೋದರಿಯರೆ, ಲೋಕದ ಗೌರವ ನಿಮ್ಮಿಂದ ಇದೆ...'' ಎಂದು ಹಾರಮೋನಿಯಮ್

ಬಾರಿಸುತ್ತ ಒಂದೇ ರೀತಿಯ ಬೇಸರದ ದನಿಯಲ್ಲಿ ಹಾಡಿದಳು. ಆಕೆ ಸ್ತ್ರೀ ಆಂದೋಲನ, ಸ್ವಾತಂತ್ರ್ಯದ ಸಮರ್ಥಕಳಿರುವುದಾಗಿ ಹೇಳುತ್ತ ಸ್ತ್ರೀಯರು ತಮ್ಮ ಇಚ್ಛೆಗನುಸಾರವಾಗಿ ಮದುವೆ ಮಾಡಿಕೊಳ್ಳಬೇಕೆಂಬ ಮಾತನ್ನೂ ಹೇಳಿದಳು... ಮೂರನೆಯ ದಿನ ಮಿಸ್ಟರ್ ಸರದಾರ ಖಾನ್ ಮತ್ತೆ ಬಂದ. ಆತ ಟಾಂಗಾ ತನ್ನೊಂದಿಗೇ ತಂದಿದ್ದ. ಹೋಮಿಯೊಪೆಥಿಕ್ ಲೇಡಿ ಡಾಕ್ಟರರನ್ನು ಅದರಲ್ಲಿ ಕೂಡಿಸಿಕೊಂಡು ತನ್ನೊಂದಿಗೆ ಕರೆದುಕೊಂಡು ಹೋದ...ಮಿಸ್ಟರ್ ಪೀಟರ್ ರಾಬರ್ಟ್ ಸರ್ದಾರ ಖಾನ್ ಅನಂತರ ಮತ್ತೆಂದೂ ಬರಲಿಲ್ಲ. ಈ ಲೋಕದಲ್ಲಿ ತುಂಬ ಚಿತ್ರ–ವಿಚಿತ್ರವಾದ ಘಟನೆಗಳು ನಡೆಯುತ್ತಲಿದ್ದವು.

ನೀಗಸ್, ಕಪ್ಪು ಮತ್ತು ಬಿಳಿಯ ಬಣ್ಣದ ಕಿವಿಗಳುಳ್ಳ ಕುರೂಪಿ ನಮ್ಮ ಸಣ್ಣ ನಾಯಿಯ ಹೆಸರಾಗಿತ್ತು. ಅದು ಇಡೀ ದಿನ ಹೊರಗಿನ ಒಂದು ಮೂಲೆಯಲ್ಲಿ ಕುಳಿತಿರುತ್ತಿತ್ತು. ಏಕೆಂದರೆ ಅದು ಅಪವಿತ್ರ ನಾಯಿಯಿತ್ತು; ಆದ್ದರಿಂದ ಅದನ್ನು ಒಳಗೆ ಬರಲು ಬಿಡುತ್ತಿರಲಿಲ್ಲ. ಚಳಿಗಾಲದಲ್ಲಿ ಅದು ಹೊರಗಿನ ಕೋಣೆಯೊಂದರಲ್ಲಿ ಮಲಗುತ್ತಿತ್ತು. ರೇಶಮ್ ಅದರ ಹೆಗಲ ಮೇಲೆ ಹತ್ತಿ ಗುರುಗುರು ಮಾಡಿದರೂ ಅದು ಏನೂ ಮಾಡುತ್ತಿರಲಿಲ್ಲ. ಅದು ಅತ್ಯಂತ ವಿಧೇಯ ಮತ್ತು ತಾನು ಪಡೆದ ಭಾಗ್ಯದ ಬಗ್ಗೆ ಸಂತೃಪ್ತಿಯಿಂದ ಇತ್ತು. ಏಕೆಂದರೆ ದೇವರು ಅದನ್ನು ಅಪವಿತ್ರ ನಾಯಿಯನ್ನಾಗಿಯೇ ಹುಟ್ಟಿಸಿದ್ದ. ಆ ಮನೆಯಲ್ಲಿ ರೇಶಮ್‌ಗೆ ಆದರ, ಗೌರವಗಳೆರಡೂ ಇವೆಯೆಂಬುದು ಅದಕ್ಕೆ ಗೊತ್ತಿತ್ತು. ಮೋಸದಿಂದ ತುಂಬಿದ ಈ ಜಗತ್ತಿನಲ್ಲಿ ಕೋರಿಕೆಯ ಬಣ್ಣ–ರೂಪಗಳಿಗೇ ಹೆಚ್ಚಿನ ಗೌರವವಿದೆಯೆಂಬ ವಾಸ್ತವಿಕ ಸತ್ಯವನ್ನು ಅದು ಮನಗಂಡಿತ್ತು. ಓರ್ವ ದಾರ್ಶನಿಕನ ರೀತಿಯಲ್ಲಿ ಕಣ್ಣು ಮುಚ್ಚಿಕೊಂಡು ಅದು ಇಡೀ ದಿನ ಬಹುಶಃ ಇದರ ಬಗ್ಗೆಯೇ ಯೋಚಿಸುತ್ತಿರಬೇಕು. ಅಪರಿಚಿತರ ಸ್ವಲ್ಪ ಕಾಲು ಸಪ್ಪಳವಾದರೂ ಸಾಕು, ಕಣ್ಣು ತೆರೆದು ಕೂಡಲೇ ಒದರಲು ಆರಂಭಿಸುತ್ತಿತ್ತು. ಅದು ಇಟಲಿ ಮತ್ತು ಅಬಿಸೀನಿಯಾದ ಯುದ್ಧದ ಸಮಯದಲ್ಲಿ ಮೇಜರ ಶೆಲ್ಟನ್ ಸಾಕಿದ ಒಳ್ಳೆಯ ಜಾತಿಯ ಹೆಣ್ಣು ನಾಯಿ ಮೇಗೀಯದ ಉದರದಿಂದ ಹುಟ್ಟಿತ್ತು. ಮೇಜರ್ ಶೆಲ್ಟನ್ ಅಂತಾರಾಷ್ಟ್ರೀಯ ರಾಜಕೀಯದಲ್ಲಿ ಆಳವಾದ ಆಸಕ್ತಿ ಇರಿಸಿಕೊಂಡವರು. ಆದ್ದರಿಂದ ಅದರ ಹೆಸರು ನೀಗಸ್ ಎಂದು ಇಟ್ಟಿದ್ದರು.

ಬಾಜೀ ತನ್ನ ಗೆಳತಿಯರನ್ನು ಸಾಯಂಕಾಲದ ಟೀ ಪಾರ್ಟಿಗೆ ಕರೆದ ದಿನ, ತೋಟದಲ್ಲಿ ಲೈಟಿನ ವ್ಯವಸ್ಥೆ ಮಾಡಲೋಸುಗ ವಿದ್ಯುತ್ತಿನ ತಂತಿಯೊಂದನ್ನು ಎಳೆಯಲಾಗಿತ್ತು. ಆ ದಿನ ಹವಾಮಾನ ತುಂಬ ಸುಖದಾಯಕವಾಗಿತ್ತು. ಬಾಜೀ ಮತ್ತು ಆಕೆಯ ಗೆಳತಿಯರು ಸೂರ್ಯಾಸ್ತ ಆಗುವವರೆಗೂ ಓವರ ಕೋಟ ಹಾಕಿಕೊಂಡು ಹೊರಗೆ ಶತಪಥ ಗೈಯ್ಯುತ್ತಿದ್ದರು. ಪಾರ್ಟಿಯ ನಂತರ ಬಾಜೀ ತನ್ನ ಅತಿಥಿಗಳನ್ನು ಬೀಳ್ಕೊಡಲು ರಸ್ತೆಯವರೆಗೂ ಹೋದಳು. ನೀಗಸ್ ಪಾರ್ಟಿಯ ಸಾಮಾನುಗಳನ್ನು ಕಾಯುತ್ತ ಪಾವಟಿಗೆಗಳ ಮೇಲೆ ಕುಳಿತಿತ್ತು. ಬಾಜೀ ಗೆಳತಿಯರನ್ನೆಲ್ಲ ಬೀಳ್ಕೊಟ್ಟು ಮರಳಿದಾಗ ಬಾಗಿ ದೂರದಿಂದಲೇ ನೀಗಸ್‌ಗೆ ಪ್ರೀತಿ ತೋರಿದಳು. ನೀಗಸ್ ಈ ಅನಪೇಕ್ಷಿತ

ಎಂದೂ ಊಹಿಸಲಾರದ ಅಸಾಧಾರಣ ಕೃಪಾ ದೃಷ್ಟಿಯಿಂದಾಗಿ ತುಂಬ ಸಂತೋಷಗೊಂಡು ಜೋರಾಗಿ ಹಾರಾಡತೊಡಗಿ ಬಾಜೀಗೆ ಹೆಚ್ಚಿನ ಸಂತೋಷ ನೀಡಲೋಸುಗ ಬರಕತ್ ಮಸೀಹ ಜಮಾದಾರ ಕಲಿಸಿದ ಎಲ್ಲ ಆಟ–ಪಾಠ ತೋರಿಸತೊಡಗಿತು. ಈ ರೀತಿ ಕುಣಿಯುತ್ತ ಕುಪ್ಪಳಿಸುತ್ತ ಅದು ಫಾರ್ಮದಲ್ಲಿಟ್ಟಿದ್ದ ಕುಂಡಗಳ ಹಿಂದೆ ಬಿದ್ದಿದ್ದ ವಿದ್ಯುತ್ತಿನ ತಂತಿಯನ್ನು ಬಾಯಲ್ಲಿ ಹಿಡಿದು ಚಿನ್ನಾಟವಾಡತೊಡಗಿತ್ತು. ತಂತಿಯಲ್ಲಿ ವಿದ್ಯುತ್ ಇದ್ದುದರಿಂದ ನೀಗಸ್ ಅದನ್ನು ಕಚ್ಚಿದ್ದರಿಂದ ಕೂಡಲೇ ಕೆಳಗೆ ಬಿತ್ತು. ಕೆಲ ನಿಮಿಷಗಳ ನಂತರ ಅದರ ಬಾಯಿಂದ ಹೊಗೆ ಬರತೊಡಗಿತು. ವಿದ್ಯುತ್ ಒಳಗೇ ಅದನ್ನು ಸುಟ್ಟು ಹಾಕಿತ್ತು...

ಒಂದು ದಿನ ಡಾ. ಜುಬೈದಾ ಸಿದ್ದೀಕೀಯ ಪತ್ರ ಕಲಕತ್ತಾದಿಂದ ಬಾಜೀಯ ಹೆಸರಿಗೆ ಬಂತು. ''ನಾನು ಇಲ್ಲಿಗೆ ಬಂದು ತಲುಪಿದ ನಂತರ ಅದೇ ವಾರದಲ್ಲಿ ಮೆಹಮೂದ ಸಾಹೇಬ, ನನ್ನ ಅಣ್ಣನ ಮಗಳು ಸಾಯರಾಳೊಂದಿಗೆ ಮದುವೆ ಮಾಡಿಕೊಂಡ, ಮದುವೆ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ನೀನು 'ಇಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ' ದಲ್ಲಿ ಮದುಮಕ್ಕಳ ಭಾವಚಿತ್ರ ನೋಡಿರಬೇಕು.

ವಿಶೇಷ–ನಾನೀಗ ದೇವರ ವಿರುದ್ಧ ಸಂಪು ಹೂಡಿದ್ದೇನೆ, ಮೊನ್ನೆ ಮೊನ್ನೆ ನಾನು ಕೂಡ ಡಾ. ಉಪ್ಪಲ್ ಅವರೊಂದಿಗೆ ಸಿವಿಲ್ ಮ್ಯಾರೇಜ್ ಮಾಡಿಕೊಂಡಿದ್ದೇನೆ. ಡಾಕ್ಟರ್ ಉಪ್ಪಲ್ ಬರದ್ವಾನ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆ. ಡಾಕ್ಟರ್ ಉಪ್ಪಲ್ ಹಿಂದೂ ಆಗಿದ್ದಾರೆ. ಮುಸ್ಲಿಂಯೇತರನೊಂದಿಗೆ ನಾನು ಮದುವೆ ಯಾಗಿರುವುದರ ಸುದ್ದಿಯನ್ನು ಮಿಸೆಸ್ ಫಾರೂಕಿ, ಮಿಸೆಸ್ ಖುರೇಶಿ ಮತ್ತು ಮಿಸೆಸ್ ಅನ್ಸಾರಿ ಅವರಿಗೂ ತಿಳಿಸು.

ಆಶೀರ್ವಾದದೊಂದಿಗೆ
''ಜುಬೇದಾ ಉಪ್ಪಲ್''

ಡಿಸೆಂಬರ್ ಮೊದಲ ವಾರದಲ್ಲಿ ಜಲಧರಾಳ ಆರೋಗ್ಯ ಆಕಸ್ಮಾತ್ತಾಗಿ ತುಂಬ ಕೆಟ್ಟಿತು. ಆಕೆಯನ್ನು ಕೂಡಲೇ ಆಸ್ಪತ್ರೆಗೆ ಸೇರಿಸಲಾಯಿತು. ಆದರೂ ಮಾರನೆಯ ದಿನ ಆಕೆ ಇಹಲೋಕ ಯಾತ್ರೆ ಮುಗಿಸಿದಳು.

ಫಕೀರಾ ಎದೆ ಬಡಿದುಕೊಳ್ಳುತ್ತಾ ಅಳುತ್ತ ತಿರುಗಿದ. ಆಗ ಗಫೂರಬೇಗಂ ''ಸಮಾಧಾನಿಯಾಗು, ಸಹಿಸಿಕೋ ಮಗು...'' ಎಂದು ಸಾಂತ್ವನ ಹೇಳಿದಳು.

''ಅನ್ನಾಜೀ...ಹೇಗೆ ಸಮಾಧಾನಿಯಾಗಿರಲಿ...ನನಗೆ ತಾಯಿಯೆಂದರೂ ಆಕೆಯೇ ಆಗಿದ್ದಳು...ಅತ್ತಿಗೆಯೆಂದರೂ ಆಕೆಯೇ ಆಗಿದ್ದಳು...ಹೆಂಡತಿಯೆಂದರೂ ಆಕೆಯೇ...'' ಹೀಗೆಂದು ಹೇಳುತ್ತ ಅವನು ಅಳುತ್ತ–ಕರೆಯುತ್ತ ಮತ್ತೆ ಹೊರಗೆ ಹೊರಟು ಹೋದ.

ಆದರೆ ಮಾರನೆಯ ದಿನ ಹೂ ಆರಿಸಿದ ನಂತರ ಸ್ಮಶಾನ ಭೂಮಿಯಿಂದ ಮರಳಿದಾಗ ಅವನು ಸಂತುಷ್ಟನಾಗಿದ್ದ. ಅವನ ಕೈಯಲ್ಲಿ ಮಣ್ಣಿನ ಮುಚ್ಚಳವೊಂದಿತ್ತು. ಅದರಲ್ಲಿ ಜಲಧರಾಳ ಬೂದಿಯಿತ್ತು. ಅದನ್ನು ರಾತ್ರಿ ತನ್ನ ತಲೆಯ ಹತ್ತಿರವಿಟ್ಟು ಕೊಂಡು ಮಲಗುವುದಾಗಿ ಅವನು ಹೇಳಿದ. ಜಲಧರಾ ಯಾವ ಗಳಿಗೆಯಲ್ಲಿ ಹುಟ್ಟಿರುವಳೋ ಆ ಗಳಿಗೆಯಲ್ಲಿ ಅವಳ ಪಾದದ ಚಿಹ್ನ ಬೂದಿಯ ಮೇಲೆ ಮೂಡುವುದು ಎಂಬುದು ಅವನ ವಿಶ್ವಾಸವಾಗಿತ್ತು.

ನಾನು ಮೊದಲೇ ತಿಳಿಸಿರುವಂತೆ ಬಾಜೀ ಎಂ. ಎ. ಫಿಲಾಸಫಿ ಓದುತ್ತಿದ್ದಳು. ಆಕೆ ತುಂಬ ಬುದ್ಧಿವಂತೆಯಾಗಿದ್ದಳು. ಫಕೀರಾನ ಮಾತುಗಳನ್ನು ಆಕೆ ಬಹಳ ಆಸಕ್ತಿಯಿಂದ ಕೇಳಿದಳು. ರಾತ್ರಿ ಊಟದ ಸಮಯದಲ್ಲಿ ಬಹಳ ಹೊತ್ತಿನವರೆಗೆ ಆಕೆ ಪುನರ್ಜನ್ಮ ಮತ್ತು ಜನರ ಅಂಧಶ್ರದ್ಧೆಯ ಬಗ್ಗೆ ತಂದೆಯೊಂದಿಗೆ ತುಂಬ ವಿಚಾರ–ವಿಮರ್ಶೆ ನಡೆಸಿ ದಳು. ರಾತ್ರಿ ಮಲಗುವಾಗ ಫಕೀರಾ ತನ್ನ ಕೋಣೆಯ ಬಾಗಿಲಕೊಂಡಿ ಒಳಗಿನಿಂದ ಹಾಕಿದ ಹಾಗೂ ಬೂದಿಯ ಮುಚ್ಚಳವನ್ನು ಪಲ್ಲಂಗದ ಬುಡದಲ್ಲಿರಿಸಿ ಮಲಗಿದ.

ಬೆಳಗ್ಗೆ ಅವನು ಅಪಾರ ಸಂತಸದಿಂದ ಊಟದ ಮನೆಯಲ್ಲಿ ಬಂದ. ತುಂಬ ಸಂತೋಷದಿಂದ ಇದ್ದ ಕಾರಣ ಅವನ ಕಣ್ಣುಗಳು ತುಂಬಿ ಬಂದಿದ್ದವು. ''ಬೇಗಂ ಸಾಹೇಬ ದೊಡ್ಡ ಮಗಳು ಬೀಬೀ, ನನ್ನ ಜಲಧರಾ ಜಲಪಕ್ಷಿ (ಗೌರೈಯಾ) ಆಗಿದ್ದಾಳೆ'' ಎಂದು ಹೇಳಿದ.

''ಗೌರೈಯಾ ಆದಳೆ?...'' ಬಾಜೀ ಹೀಗೆ ಅನ್ನುತ್ತ, ಕೂಡಲೇ ಶಾಲು ಹೊದೆದು ಕೊಂಡು ಸರ್ವೆಂಟ್ ಕ್ವಾರ್ಟರ್ಸದತ್ತ ಓಡಿದಳು. ನಾನು ಕೂಡ ಆಕೆಯ ಹಿಂದೆ ಹಿಂದೆ ಓಡಿದೆ.

ಫಕೀರಾ ಕೋಣೆಯಿಂದ ಮುಚ್ಚಳ ಹೊರಗೆ ತಂದು ''ನೋಡಿ...ಇಲ್ಲಿ ನೋಡಿ.... ನೋಡಿರಿ ಇಲ್ಲಿ...'' ಎಂದಾಗ ನಾನು, ಬಾಜೀ ತೆರೆದ ಕಣ್ಣು ಮತ್ತಷ್ಟು ತೆರೆದು ಬೂದಿಯನ್ನು ನೋಡಿದವು. ಅದರಲ್ಲಿ ಗುಬ್ಬಿಯ ಕಾಲಿನ ಗುರುತು ಸ್ಪಷ್ಟವಾಗಿ ತೋರುತ್ತಿತ್ತು.

''ಗೌರೈಯಾ...ಗುಬ್ಬಿಯಾಗಿದೆ ಬಡೀ ಬಿಟಿಯಾ... ಬೀಬೀ...'' ಎಂದು ಅವನು ಹೇಳುತ್ತ ತುಂಬ ಕಾಳಜಿಯಿಂದ ಬೂದಿಯಿದ್ದ ಮುಚ್ಚಳವನ್ನು ಒಳಗೆ ತೆಗೆದು ಕೊಂಡು ಹೋದ.

ಅಂದಿನಿಂದ ದಿನವೂ ಗುಬ್ಬಿಗಳಿಗೆ ಕಾಳು ಹಾಕುತ್ತಾನೆ, ಅವುಗಳಿಗೆ ಕುಡಿಯಲು ಬಟ್ಟಲಲ್ಲಿ ನೀರು ಹಾಕಿಡುತ್ತಾನೆ. ಯಾವುದಾದರೂ ಗುಬ್ಬಿ ಕಿಟಕಿಗಳಿಂದ ಯಾವುದಾದರೂ ಕೋಣೆಯಲ್ಲಿ ಬಂದರೆ ಅವನು ತನ್ನೆಲ್ಲ ಕೆಲಸ ಬಿಟ್ಟು ಚುಟುಕಿ ಹೊಡೆಯುತ್ತ ''ಅ...ಅ...ಲೇ...ಲೇ...'' ಎನ್ನುತ್ತ ಸಜ್ಜಿಯ ಕಾಳು ಅಂಗೈಯಲ್ಲಿರಿಸಿ ಕೊಂಡು ನಿಶ್ಚಲನಾಗಿ ನಿಲ್ಲುತ್ತಾನೆ, ಇದಕ್ಕಾಗಿಯೇ ಅವನು ತನ್ನ ಕಿಸೆಯಲ್ಲಿ ಸದಾ ಕಾಲ

ಸಜ್ಜಿಯ ಕಾಳುಗಳನ್ನಿರಿಕೊಳ್ಳುತ್ತಿದ್ದ. ರೇಶಮ್ ಯಾವುದೇ ಗೌರ್ರೈಯಾ (ಗುಬ್ಬಿ) ಹಿಡಿಯಬಹುದೆಂಬ ಚಿಂತೆ ಅವನನ್ನು ಯಾವಾಗಲೂ ಕಾಡುತ್ತಿತ್ತು.

ಈ ವರ್ಷ ವಿಪರೀತ ಛಳಿ ಬಿಟ್ಟಿತ್ತು. ಡಯಾನಾ ರೋಜ ಇನ್ನೂ ಆಸ್ಪತ್ರೆಯಲ್ಲಿಯೇ ಇದ್ದಳು. ಮಿಸ್ಟರ್ ಬೈಕೆಟ್ ಈಗೀಗ ಮುನ್ಸಿಪಾಲ್ಟಿಯ ನಳದ ಮೇಲೆ ಕಂಡು ಬರುತ್ತಿರಲಿಲ್ಲ. ಈಗ ಆತ ಇಡೀ ದಿನ ಪರೇಡ ಗ್ರೌಂಡ್‌ದ ಒಂದು ಬೆಂಚ ಮೇಲೆ ತಲೆ ಬಾಗಿಸಿಕೊಂಡು ಬಿಸಿಲು ಕಾಸುತ್ತ ಕುಳಿತಿರುತ್ತಾನೆ. ಈ ರೀತಿ ಕುಳಿತಲ್ಲಿಯೇ ತೂಕಡಿಸುತ್ತಾನೆ. ಆತನ ಟೊಪ್ಪಿಗೆ ಬೆಂಚ ಮೇಲೆ ಆತನ ಹತ್ತಿರ ಭಿಕ್ಷಾ ಪಾತ್ರೆಯ ಹಾಗೆ ಇಡಲ್ಪಟ್ಟಿರುತ್ತದೆ. ಗಿಡದ ಹಳದಿ ಎಲೆಗಳು ಉದುರಿ ಬೀಳುತ್ತ ಅದರಲ್ಲಿ ಜಮಾ ಆಗುತ್ತಲಿರುತ್ತವೆ.

ಕ್ರಿಸ್‌ಮಸ್ ಸಮೀಪವಾಗುತ್ತಲಿತ್ತು. ಕೈರಲ್ (ಕ್ರಿಸ್‌ಮಸ್ ಹಾಡು) ಹಾಡುವವರ ಗುಂಪು ರಾತ್ರಿ ಸಮಯದಲ್ಲಿ ಡಾಲನ್‌ವಾಲಾದ ರಸ್ತೆಯ ಮೇಲೆ ತಿರುಗುತ್ತ ಅಕಾರ್ಡಿಯನ್ ಮತ್ತು ಗಿಟಾರ ಬಾರಿಸುತ್ತ ಕ್ರೈಸ್ತನ ಜನ್ಮದ ಹಾಡು ಹಾಡುತ್ತಾರೆ. ಚುಮುಚುಮು ಬೆಳಿಗ್ಗೆ ಇದ್ದಲಿ ಮಾರುವ ಗುಡ್ಡಗಾಡು ಜನರ ಧ್ವನಿ ಕೇಳಿ ಬರುತ್ತದೆ. ಚಿಂದಿಯಲ್ಲಿ, ಬುಟ್ಟಿಯಲ್ಲಿ ತುಂಬಿದ ಇದ್ದಲಿಗಳ ಹೊರೆಯನ್ನು ಹಗ್ಗಕ್ಕೆ ಕಟ್ಟಿ ಹಗ್ಗವನ್ನು ಹಣೆಯ ಮೇಲಿಟ್ಟುಕೊಂಡು ಬುಟ್ಟಿ ಬೆನ್ನ ಮೇಲೆ ಇಳಿಬಿಟ್ಟುಕೊಂಡು ''ಇದ್ದಲಿ ಬೇಕೆ...ಇದ್ದಲಿ...'' ಎಂದು ಕೂಗುತ್ತ ತಿರುಗುತ್ತಾರೆ. ಸೂರ್ಯ ಮೇಲೆ ಬರುತ್ತಿರುವಂತೆ ಎದುರಿಗಿರುವ ಹಿಮಾಲಯದ ಹಿಮಾಚ್ಛಾದಿತ ಶಿಖರಗಳ ಮೇಲೆ ಸೂರ್ಯ ಕಿರಣಗಳು ಬಿದ್ದು, ಇಡೀ ಹಿಮಾಲಯ ಝಗ ಝಗಿಸುತ್ತದೆ. ರಾತ್ರಿ ಫಕೀರಾ ಗುಬ್ಬಿಗಳಿಗೆ ಕುಡಿಯಲೆಂದು ಇಟ್ಟ ನೀರೆಲ್ಲ ಬೆಳಗ್ಗೆ ಬರ್ಫ ಆಗಿರುತ್ತದೆ. ಯಾವುದೋ ಗುಡ್ಡಗಾಡಿನ ದಾರಿಕಾರನ ಕೊಳಲಗಾನ ಮಂಜಿನಲಿ ತೇಲಿ ಬಂದಂತೆ ಕೇಳಿಸುತ್ತದೆ.

ಕ್ರಿಸ್‌ಮಸ್ ಹಬ್ಬಕ್ಕೆ ಒಂದು ದಿನ ಮೊದಲೇ ಸೈಮನ್ ಹೇಳಿದ–''ಬೆಳಗ್ಗೆ ಎದ್ದು ಸ್ಟೌವ್ ಮೇಲೆ ಕ್ರಿಸ್‌ಮಸ್ ಪುಡಿಂಗ್ ತಯ್ಯಾರ ಮಾಡುವೆ. ಆ ಮೇಲೆ ಚರ್ಚ್‌ಗೆ ಹೋಗುವೆ. ಆ ನಂತರ ಕೋಣೆಯಲ್ಲಿ ಕುಳಿತು ಇಡೀ ದಿನ ಬೈಬಲ್‌ನ ಪಠಣ ಮಾಡುವೆ. ಕ್ರಿಸ್‌ಮಸ್‌ದ ಎರಡನೇ ದಿನ ಪುಡಿಂಗ್ ತೆಗೆದುಕೊಂಡು ಬರುವೆ.''

ಪವಿತ್ರ ದಿನದ ಉಪಹಾರವೆಂದು ಅವನು ಬಾಜೀಗೆ ಗುಲಾಬಿ, ಆರ್ಟಿಫಿಸಲ್ ಮುತ್ತುಗಳ ಸಣ್ಣ ಹಾರ, ನನಗೆ ಕೂದಲುಗಳ ಕಟ್ಟಲು ಎರಡು ಕೆಂಪು, ಹಸಿರು ರಿಬ್ಬನ್ ರೇಷಮ್‌ಗಾಗಿ ರಬ್ಬರಿನ ಬಣ್ಣದ ಸಣ್ಣ ಚೆಂಡು ತೆಗೆದುಕೊಂಡು ಬಂದಿದ್ದ. ಅವನಿಗೆ ಆ ಪವಿತ್ರ ದಿನದ ಕಾಣಿಕೆಯೆಂದು ಹತ್ತು ರೂಪಾಯಿ ಕೊಡಲಾಯಿತು. ಅದು ಅವನು ಬಯಸಿದ್ದಕ್ಕಿಂತ ಹೆಚ್ಚಾಗಿತ್ತು. ಹೀಗಾಗಿ ಅವನು ಅದೆಷ್ಟೋ ಹೊತ್ತು ಆ ಹತ್ತರ ನೋಟನ್ನೇ ಕಣ್ಣರಳಿಸಿ ನೋಡುತ್ತಲಿದ್ದ ಹಾಗೂ ನಡುಗುತ್ತಿರುವ ಕೈಗಳಿಂದ ಅದನ್ನು ಅತ್ಯಂತ ಕಾಳಜಿಯಿಂದ ವಾಸ್ಕೋಟಿನ ಜೇಬಿನಲ್ಲಿ ಇರಿಸಿಕೊಂಡ.

ಕ್ರಿಸ್‌ಮಸ್ ಹಬ್ಬ ಮುಗಿದು ಮೂರು ದಿನಗಳಾಗಿದ್ದವು. ಆದರೆ ಸೈಮನ್ ಬರಲಿಲ್ಲ. ನಾಲ್ಕನೆಯ ದಿನ ಅವನ ಯೋಗಕ್ಷೇಮ ತಿಳಿದುಕೊಂಡು ಬರಲು ಫಕೀರಾನನ್ನು ಪಾದ್ರಿ ಸ್ಕಾಟ್ ಅವರ ಮನೆಗೆ ಕಳಿಸಲಾಯಿತು. ಅವನು ಮರಳಿ ಬಂದು ತಲೆ ತಗ್ಗಿಸಿದ ಹಾಗೂ ದುಃಖದಿಂದ ಹೇಳಿದ...''ಸೈಮನ್ ಸಾಹೇಬ ಈ ಜಗತ್ತಿನಿಂದ ಹೊರಟು ಹೋಗಿದ್ದಾರೆ. ಪವಿತ್ರ ದಿನದಂದು ಅವನ ಕೋಣೆಯ ಬಾಗಿಲು ತೆರೆದಾಗ ಸೈಮನ್ ಸಾಹೇಬರು ಪಲ್ಲಂಗದ ಮೇಲೆ ಮಲಗಿರುವಂತೆಯೇ ಸತ್ತಿರುವುದನ್ನು ಕಂಡನಂತೆ. ಅವರಿಗೆ ಶೀತ ತಗಲಿತ್ತು. ಅವರ ಹತ್ತಿರ ಒಂದೇ ಕಂಬಳಿಯಿತ್ತು, ಬೇಗಂ ಸಾಹೇಬ. ರಾತ್ರಿಯ ಛಳಿ ಎದುರಿಸಲು ಪ್ಯಾಂಟ್, ಕೋಟ್ ಹಾಕಿಕೊಂಡೇ ಮಲಗುತ್ತಿದ್ದರು.''

''ತುಂಬ ಛಳಿ ಬೀಳುತ್ತಲಿದೆ ಬಡೀ ಬಿಟಿಯಾ. ನಮ್ಮಲ್ಲಿ, ಗಢವಾಲದಲ್ಲಿಯಂತೂ ಜನರು ಈ ವಿಪರೀತ ಛಳಿಯಿಂದ ನಡುನಡುಗಿ ಸಾಯುತ್ತಾರೆ. ಇನ್ನು ಇಷ್ಟೊಂದು ಬೆಚ್ಚನ್ನ ಬಟ್ಟೆ ಎಲ್ಲಿಂದ ತರುವುದು. ಛಳಿಯಂತೂ ಪ್ರತಿ ವರ್ಷ ಬೀಳುತ್ತಲಿದೆ.''

ಅಪರಾಹ್ನ ಸೈಮನ್ ಬರುವ ಸಮಯವಾದ ಕೂಡಲೇ ಥಂಡಿಯಿಂದಾಗಿ ಒಂದು ವಾರದಿಂದ ಬುಟ್ಟಿಯಲ್ಲಿ ತನ್ನ ಮಿದುವಾದ ಬೆಚ್ಚನ್ನ ಶಾಲ್‌ನಲ್ಲಿ ಮುದುಡಿ ಕೊಂಡಿದ್ದ ರೇಶಮ್ ಬುಟ್ಟಿಯಿಂದ ಹೊರಗೆ ಬಂದು ಕುಂಟುತ್ತ ಕುಂಟುತ್ತ ಗೇಟಿನ ಕಡೆಗೆ ಹೋಗಿ ಕುಳಿತು ಸೈಮನ್‌ನ ಬರುವಿಗಾಗಿ ಕಾಯತೊಡಗಿತು. ಏಕೆಂದರೆ ಸೈಮನ್ ಅದಕ್ಕಾಗಿ ದಿನವೂ ಬರುವಾಗ ದಾರಿಯಲ್ಲಿ ಸಿಗುವ ಮೇಜರ ಶೆಲ್ಟನ್‌ರ ಅಡುಗೆ ಮನೆಯಿಂದ ಕೋಳಿ ಹಾಗೂ ಬೇರೆ ಪಕ್ಷಿಗಳ ರುಚಿ ರುಚಿಯಾದ ಎಲುಬು ಗಳನ್ನು ತನ್ನ ಹೊಲಸಾದ ಕರವಸ್ತ್ರದಲ್ಲಿ ಅತ್ಯಂತ ಕಾಳಜಿಯಿಂದ ಸುತ್ತಿಕೊಂಡು ತರುತ್ತಿದ್ದ.

ಸೈಮನ್ ಬರಲಿಲ್ಲ. ಬಿಸಿಲು ಕಡಿಮೆಯಾಗುತ್ತ ಬಂತು. ಅದು ಬೇಸತ್ತು ಒಳಗೆ ಬರುವ ಮೊದಲು ಒಂದು ಗೌರೈಯಾ (ಗುಬ್ಬಿ) ದ ಮೇಲೆ ಕಣ್ಣಿಟ್ಟಿತ್ತು. ಗೌರೈಯಾ ಫುರ್ ಎಂದು ಹಾರಿ ಸಿಲ್ವರ್ ಓಕಮರದ ಟೊಂಗೆಯ ಮೇಲೆ ಹೋಗಿ ಕುಳಿತಿತ್ತು. ರೇಶಮ್ ಅದರ ಬೆನ್ನು ಹತ್ತಲು ಗಿಡ ಏರಲು ಬಯಸಿತ್ತು. ಆದರೆ ಗಾಯಗೊಂಡ ಕಾಲುಗಳಿಂದ ಅದು ಗಿಡದ ಬೊಡ್ಡೆಯಿಂದ ಜಾರಿ ಕೆಳಗೆ ಬರುತ್ತಿತ್ತು. ಗೌರೈಯಾ ಮತ್ತೆ ಹಾರಿ ಎತ್ತರದ ಟೊಂಗೆಯ ಮೇಲೆ ಹೋಗಿ ಕುಳಿತಿತು. ರೇಶಮ್ ಮುಖವೆತ್ತಿ ನಿರುಪಾಯವಾಗಿ ದೀನತೆಯಿಂದ 'ಮ್ಯಾವ್' ಎಂದಿತು. ಗೌರೈಯಾ ರೆಕ್ಕೆ ಬಿಚ್ಚಿ ನೀಲ ಬಯಲ ಬಾನಿನತ್ತ ಹಾರಿಹೋಯಿತು.

# ಹಿಂಸ್ರ ಪಶುವಿನ ನಗೆ

ಹಿಮಾಲಯ ಮತ್ತು ಶಿವಾಲಿಕ್‌ದ ಮಧ್ಯದ, ಬೆಟ್ಟಗಳ ನಡುವಿನ ಭೂಭಾಗ ''ಡೂನ್'' ಎಂದೆನ್ನಿಸಿಕೊಳ್ಳುತ್ತದೆ. (ಇವುಗಳಲ್ಲಿ ಒಂದು ಡೆಹರಾಡೂನ್) ಒಂದು ನೂರ ಇಪ್ಪತ್ತೈದು ಮೈಲುಗಳವರೆಗೆ ಹಬ್ಬಿರುವ ಕೊರಬೆಟ್ ನ್ಯಾಷನಲ್ ಪಾರ್ಕ ಕೂಡ ನೈನಿತಾಲ ಜಿಲ್ಲೆಯ ಒಂದು ಡೂನ್‌ದಲ್ಲಿದೆ. ರಾಮುಗಂಗಾ, ಬೆಟ್ಟಗಳಿಂದ ಕೆಳಗಿಳಿದು ಕೊರಬೆಟ್ ನ್ಯಾಷನಲ್ ಪಾರ್ಕದಲ್ಲಿ ಪ್ರವೇಶಿಸುತ್ತದೆ. ಅದರ ಒಂದು ತಟದ ಮೇಲೆ ಸಾಲು ಸಾಲು ಬೆಟ್ಟಗಳಿವೆ. ಇನ್ನೊಂದು ಕಡೆ ನಿಬಿಡವಾದ ವನಶ್ರೀ. ದಟ್ಟವಾದ ಕಾಡಿನಲ್ಲಿ ಹುಲಿ, ಚಿರ್ತ, ಜಿಂಕೆಗಳಿವೆ. ಆನೆಗಳು ಮತ್ತು ನೀರುಗುದುರೆಗಳ ಹಾಗೆ ಯಾವುದಾದರೂ ಜೀಪ ಅಡವಿಯ ದಾರಿಯಲ್ಲಿ ಹೊರಟರೆ, ಅದರ ಸಪ್ಪಳಕ್ಕೆ ಹುಲಿ, ಚಿರ್ತ, ಸಾರಂಗ, ಅಡವಿ ಆಕಳು ನಮ್ಮ ಕಣ್ಣಿಗೆ ಕಾಣದ ಹಾಗೆ ಮಾಯವಾಗಿ ಬಿಡುತ್ತವೆ. ಆಗ ಕೇವಲ ತರಗೆಲೆಯ ಸರಕ್...ಸರಕ್...ಎನ್ನುವ ಶಬ್ದ...ಅಥವಾ ಎಲ್ಲೊ ಒಂದಿಷ್ಟು ಅವು ಕಂಡ ಹಾಗೆ, ಅವುಗಳ ಪ್ರತಿಬಿಂಬ ಗೋಚರ ವಾಗುತ್ತದೆ...ಮನುಷ್ಯನ ತಲೆಯಒಳಗಿನ ಕಾಡಿನಲ್ಲಿ ಅಡಗಿಕೊಂಡಿರುವ ಯಾವುದೋ ಕಲ್ಪನೆ, ವಿಚಾರದ ಹಾಗೆ...ಮತ್ತು ಯಾವಾಗಾದರೊಮ್ಮೆ ರಾತ್ರಿಯ ಸಮಯ ಜೀಪಿನ ಅಥವಾ ಕಾರಿನ ಹೆಡ್ ಲೈಟ್ಸಗಳ ಬೆಳಕಿನಲ್ಲಿ ಏನನ್ನೋ ಕಾದುಕೊಂಡು ನಗುತ್ತ ಕುಳಿತಿರುವ ಹಿಂಸ್ರಪಶು ಅಥವಾ ಕರಡಿ ಕಾಣಿಸಿಕೊಳ್ಳುತ್ತವೆ...ಒಂದು ಆಕಸ್ಮಿಕ ಅಪರಿಚಿತ ಭಯ ಒಕ್ಕರಿಸಿದ ಹಾಗೆ...

ಜಿಂಕೆಗಳಿಂದ, ನಾನಾ ಬಣ್ಣದ ಪಕ್ಷಿ ಸಂಕುಲದಿಂದ, ಹಾವುಗಳಿಂದ ತುಂಬಿರುವ ದಟ್ಟಾರಣ್ಯದ ಮೇಲೆ ಹರಡಿರುವ ಕತ್ತಲೆಯ ರಾಗ...ಕಲ ಕಲ ರವ ಗೈಯುತ್ತ ಹರಿಯುವ ನದಿ...ನಿದ್ರಿಸುತ್ತಿರುವ ಪಶು ಪಕ್ಷಿಗಳು...ಹಿಂಸ್ರಪಶುಗಳು...ಹಿಮಪೂರಿತ ಛಳಿ, ಕವಿದಿರುವ ಮೋಡ...ಕತ್ತಲೆಯ ನಿಶ್ಯಬ್ಧತೆ...ಇವೆಲ್ಲವುಗಳ ಒಂದು ಸಿಂಫನಿ...

ಈ ವರ್ಷ ಡಿಸೆಂಬರ ತಿಂಗಳಲ್ಲಿ ಕಾಡಿನ ಬದಿಯಲ್ಲಿರುವ ರೆಸ್ಟ್‌ಹೌಸ್‌ದ ಕಂಪೌಂಡಿನಲ್ಲಿ ಎಂದಿನಂತೆ ನಾನಾ ರೀತಿಯ ವೇಷಭೂಷಣದ ಜನ ಇದ್ದಾರೆ...ತಮ್ಮ ತಮ್ಮ ಕಾರುಗಳಲ್ಲಿ ಇಂಗ್ಲೆಂಡಿನಿಂದ ಬಂದಿರುವ ಓರ್ವ ರಿಟೈಯರ್ಡ್ ಸೇನಾಧಿಕಾರಿ, ಆತನ ಮೇಮ, ಕೇಂಬ್ರಿಡ್ಜ್ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು... ಹಿಮಾಲಯ ದಲ್ಲಿರುವ ಸಸ್ಯಗಳ ಅಧ್ಯಯನಕ್ಕೆ ಬಂದಿದ್ದಾರೆ...ಕೆಲ ಯುರೋಪದ ತರುಣರು, ಇವರೆಲ್ಲ ಟೆಂಟಿನಲ್ಲಿ ವಾಸವಾಗಿದ್ದಾರೆ. ಕೆಲ ಅಂತರದಲ್ಲಿ ಸಣ್ಣ ಸಣ್ಣ ಡೇರಗಳಲ್ಲಿ ವಾಸವಾಗಿರುವ ಗುತ್ತಿಗೆದಾರರು, ಕೆಲಸದವರು ಕಂಪೌಂಡಿನಲ್ಲಿ ಹೊಸ ಹೊಸ ಕಟ್ಟಡ ಕಟ್ಟುತ್ತಿದ್ದಾರೆ. ಕೊರಬೆಟ್ ನ್ಯಾಷನಲ್ ಪಾರ್ಕದಲ್ಲಿ ಪ್ರವಾಸಿಕರ ಬರುಹೋಗುವ ಸಂಖ್ಯೆ ಹೆಚ್ಚುತ್ತಲೇ ಇದೆ.

ಮುಖ್ಯ ಮಾವುತ ಡಿನರ್‌ದ ನಂತರ ಎಲ್ಲ ಆನೆಗಳನ್ನು ಹಿಡಿದು ತರುತ್ತಾನೆ. ಅವು ಮೊಣಕಾಲುರಿ ಪಶ್ಚಿಮದಿಂದ ಬಂದಿರುವ ಪ್ರವಾಸಿಕರಿಗೆ ವಂದನೆ ಸಲ್ಲಿಸುತ್ತವೆ. ಅವರ ಹೆಂಗಸರು ಎಲ್ಲ ಆನೆಗಳಿಗೆ ಒಂದೊಂದು ಸಿಹಿಯಾದ ದಪ್ಪಗಿನ ರೊಟ್ಟಿಯನ್ನು ತಿನ್ನಿಸುತ್ತಾರೆ. ನಂತರ ಅವರು ತಮ್ಮ ತಮ್ಮ ಕೋಣೆಯೊಳಗೆ, ಡೇರೆಯೊಳಗೆ, ಕ್ವಾರ್ಟರ್‌ಗಳಲ್ಲಿ, ಗುಡಿಸಲುಗಳಲ್ಲಿ ಹೋಗಿ ನಿದ್ರಿಸುತ್ತಾರೆ. ಬೆಳಿಗ್ಗೆ ರಾಮುಗಂಗಾದಲ್ಲಿ ಸೂರ್ಯ ಹಣಿಕಿಕ್ಕುತ್ತಾನೆ...ಆಗ ಇಡೀ ಕಾಡು ಎಚ್ಚರವಾಗುತ್ತದೆ... ಜೀವಂತ ವಾಗಿರುವ ಜಿಂಕೆ ಮತ್ತು ಆಡು, ಸತ್ತ ಎಮ್ಮೆ (ಕೆಲವೊಮ್ಮೆ ಮನುಷ್ಯನ ಹೆಣಗಳು) ಹಸಿಮಾಂಸ, ಕ್ರಿಮಿ-ಕೀಟಗಳು ಬೇಯಿಸಿದ ತತ್ತಿಗಳು ಮತ್ತು ಟೋಸ್ಟ ಜಾಮ್, ಚಹಾ, ಕಾಫಿ, ಪುರಿಭಾಜಿ, ಪರಾಠಾ ಅಥವಾ ಒಣರೊಟ್ಟಿಯ ಉಪಹಾರ ಮುಗಿಸಿ ತಮ್ಮ ತಮ್ಮ ದಿನ ಆರಂಭಿಸುತ್ತಾರೆ.

ಆಗ ಕಳ್ಳಹೆಜ್ಜೆಯಲ್ಲಿ ಮೂರ್ಖ ಕಂಪೌಂಡಿನಲ್ಲಿ ಬರುತ್ತಾನೆ. ಅವನು ಹೊಸ ಕಟ್ಟಡದ ಕೆಳಗೆ ಹೋಗಿ ನಿಲ್ಲುತ್ತಾನೆ. ರಾಮುಪುರಿ ಬೇರಾ ಕೂಗಿ ಕೊಳ್ಳು ತ್ತಾನೆ-''ಮೂರ್ಖ ಬಂದ'' ಎಂದು. ಅಲ್ಲಿ ಅತ್ತಿತ್ತ ತಿರುಗಾಡುತ್ತಿರುವ ಮಿಸೆಸ್ ಫ್ರಿಮೆಂಟಲ್ ಹೇಳುತ್ತಾಳೆ- ''ಹಲೊ ಬೊಡು...ಗುಡ್‌ಮಾರ್ನಿಂಗ್'', ಬ್ರಿಗೇಡಿ ಯರ್ ಫ್ರಿಮೆಂಟಲ್ ಗರ್ಜಿಸುತ್ತ-''ಹಲೊ ಬೊಡು...ಓಲ್ಡ್ ರಾಸ್ಕಲ್...''ಎಂದರೆ ಅಮೇರಿಕನ್ ಪ್ರವಾಸಿ ಮುಗುಳ್ನಗುತ್ತ ''ಹಾಯ್...ಬೊಡು..'' ಎಂದರೆ, ಇನ್ನಾವುದೋ ಅಮೇರಿಕನ್ ಹುಡುಗಿ ಕೂಗುತ್ತಾಳೆ-''ಕೀವಟ್...?''

ಬುದ್ಧು (ಮೂರ್ಖ) ದಿನಕ್ಕೆ ಎರಡು ಸಲ ಕಂಪೌಂಡಿನಲ್ಲಿ ಬರುತ್ತಾನೆ. ಬೆಳಗ್ಗೆ ಉಪಹಾರಮಾಡುತ್ತಾನೆ ಹಾಗೂ ಹೊರಟು ಹೋಗುತ್ತಾನೆ...ರಾತ್ರಿ ಬಂದು ಊಟಮಾಡಿ ಮತ್ತೆ ಹೊರಟು ಹೋಗುತ್ತಾನೆ...

ಸಂಜೆಯಾಯಿತು. ಆ ಮಬ್ಬುಗತ್ತಲಲ್ಲಿ ಒಂದು ಹಸಿರು ಬಣ್ಣದ ಜೀಪ್ ಸ್ಟೇಷನ್ ವ್ಯಾಗನ್ ಬಂದು ಹೊಸ ಕಟ್ಟಡದ ಎದುರಿಗೆ ನಿಂತಿತು. ಇಬ್ಬರು ಗಂಡಸರು ಮತ್ತು ಓರ್ವ ಹೆಣ್ಣುಮಗಳು ಅದರೊಳಗಿಂದ ಇಳಿದರು. ಹೊಸ ರೆಸ್ಟ್‌ಹೌಸಿನ ಆಳುಗಳು ಓಡೋಡಿ ಬಂದು ಅವರ ಸಾಮಾನು ಇಳಿಸಿದರು, ಏಕೆಂದರೆ ಅವರು ವಿಶಿಷ್ಟ ಪ್ರವಾಸಿಗಳಾಗಿದ್ದರು ಎಂದೆನಿಸುತ್ತಿತ್ತು. ಅಮೇರಿಕನ್ ಮ್ಯಾಚಿಂಗ ಹೂ ಹೂವಿನ ಸೂಟಕೇಸ್, ಹೋಲ್ಡಾಲ್ ಮತ್ತು ಬ್ಯಾಗ...ಭರ್ಜರಿ ಪಿಕ್‌ನಿಕ್ ಬಾಸ್ಕೇಟ...ಅವರು ಮೂವರು ಸ್ವಾಗತ ಕಕ್ಷದಲ್ಲಿ ಪ್ರವೇಶಿಸಿದರು, ಅದರ ಒಂದು ಬದಿಯಲ್ಲಿ ಸುಸಜ್ಜಿತ, ಅಲಂಕೃತ ಬಾರ್ ಇತ್ತು. ಹುಡುಗಿ ಕಣ್ಣತ್ತಿ ಬೇಸರದಿಂದ ಸುತ್ತಲೂ ನೋಡಿದಳು...ಆಕೆ ನೋಡಿದ ರೀತಿ ನೋಡಿದರೆ, ಆಕೆ ಕೇವಲ ಪಂಚತಾರಾ ಹೋಟಲಿನಲ್ಲಿದ್ದವಳೆಂದು ತೋರುತ್ತಿತ್ತು.

ಬಾರ್‌ನಲ್ಲಿ ಬ್ರಿಗೇಡಿಯರ್ ಫ್ರೀಮೆಂಟಲ್ ಒಬ್ಬನೇ ಕುಳಿತಿದ್ದ. ಹೊಸದಾಗಿ ಬಂದವರಲ್ಲಿ ಒಬ್ಬ ಬಾರ್‌ನತ್ತ ಬಂದ. ಜೋಧಪೂರ ಡ್ರೆಸ್‌ನಲ್ಲಿದ್ದ ಅವನು, ತಲೆಯ ಮೇಲೆ ರುಮಾಲು, ಒಂದು ಕಿವಿಯಲ್ಲಿ ತೂತು, ಚೂಪಾದ ಮೀಸೆಗಳಿದ್ದವು...ಇಂಥ

ಪಾತ್ರ ರುಹೇಲ್ ಖಂಡದ ಕಥಾಸಾಹಿತ್ಯದಲ್ಲಿ ಈಗಲೂ ಸಿಗುತ್ತವೆ. ಅವನು ಬೆರಳೆತ್ತಿ ಬೆಟ್ಟದ ಹುಡುಗನಿಗೆ ಹೇಳಿದ–''ಒಂದು ಬ್ರ್ಯಾಂಡಿ ಮತ್ತು ಸೋಡಾ''. ಒಂದು ಚರ್ಮದ ಸ್ಟೂಲಿನ ಮೇಲೆ ಕುಳಿತ. ಕೆಲಕ್ಷಣಗಳ ನಂತರ ಅವನು ಬ್ರಿಗೇಡಿಯರ್‌ನ ಮೇಲೆ ದೃಷ್ಟಿಹಾಯಿಸಿದ, ತನ್ನತ್ತ ಅವನು ನೋಡುವಂತೆ ಮಾಡಲು ಪ್ರಯತ್ನಿಸಿದ. ಆದರೆ ಬ್ರಿಗೇಡಿಯರ್ ಅದನ್ನು ಎಳ್ಳಷ್ಟೂ ಗಮನಿಸಲಿಲ್ಲ. ಬಿಳಿತೊಗಲಿನ ಪಶ್ಚಿಮದ ವ್ಯಕ್ತಿಯಿದ್ದಾಗ ಹಿಂದುಸ್ತಾನಿ ಹೆಚ್ಚಾಗಿ ಅತ್ಯಂತ ವಿನಯಿಗಳಾಗಿ, ಸೋಬರ್ ಆಗಿ ವಿಚಿತ್ರವಾದ ದನಿಯಲ್ಲಿ ಇಂಗ್ಲೀಷ ಮಾತಾಡತೊಡಗುತ್ತಾರೆ. ಅವರೊಂದಿಗೆ ಮಾತಾಡಿದ್ದಕ್ಕೆ ಅಭಿಮಾನಪಡುತ್ತಾರೆ...ಇಂಥ ಹೊತ್ತಿನಲ್ಲಿ ಪಾಶ್ಚಿಮಾತ್ಯರು ಮನಸ್ಸಿನಲ್ಲಿಯೇ ಇಂಥವರ ಬಗ್ಗೆ ನಗುತ್ತಾರೆ...ಮೋಜೆಂದರೆ ಇದೇ ಹಿಂದೂಸ್ತಾನಿ ತನ್ನ ದೇಶದ, ತನ್ನವರೊಂದಿಗೆ ಬಹುತೇಕ ಒರಟಾಗಿ ವರ್ತಿಸುವ ಪರಿಪಾಠ ಹೊಂದಿರುತ್ತಾರೆ...

ಎರಡನೆಯವ ತೆಳ್ಳಗಿನ, ಕುಳ್ಳಗಿನ, ಬೋಳುದಲೆಯ, ಕರಡಿ ಕಣ್ಣಿನ ಗುಡ್ಡಿಗಳನ್ನು ತುಂಬ ಸರಳವಾಗಿ ಅತ್ತಿತ್ತ ತಿರುಗಿಸುವವನು, ಮೆಲ್ಲ ಮೆಲ್ಲಗೆ ಮಾತಾಡುತ್ತಿದ್ದ ಮತ್ತು ರೆಸ್ಟಹೌಸ್‌ನ ಮ್ಯಾನೇಜರನೊಂದಿಗೆ ಮಾತುಗಳಲ್ಲಿ ತೊಡಗಿದ್ದ. ತರುಣಿ ಇನ್ನೂ ನಿಂತೇ ಇದ್ದಳು. ಆಕೆ ಯಾವಳೋ ಸಿನಿಮಾಸ್ಟಾರ ಇರಬೇಕೆನಿಸುತ್ತಿತ್ತು. ಅಥವಾ ಯಶಸ್ವೀ, ದುಬಾರಿ...ಫ್ಯಾಶ್‌ನೆಬಲ್, ಮಾಡಲ್, ಸುಂದರಿ, ಹೊಳೆವ ಬಣ್ಣದ, ಆರೋಗ್ಯವಂತ ಹಾಳತ ಎತ್ತರದ, ಮಾದಕತೆಯಿಂದ ತುಂಬಿದ ಕಣ್ಣಿನವಳಾಗಿದ್ದಳಾಕೆ...ಆಕೆ ಬಹು ಬೆಲೆಯ ವಜ್ರ, ವೈಢೂರ್ಯದ ಆಭರಣಗಳನ್ನಿಟ್ಟಿದ್ದಳು. ಕುಳ್ಳವ್ಯಕ್ತಿ ವಯಸ್ಸಿನಲ್ಲಿ ಅವಳಿಗಿಂತ ಎರಡು ಪಟ್ಟು ಹೆಚ್ಚಿಗಿರಬೇಕು. ಕೆಲಕ್ಷಣಗಳ ನಂತರ ಅವರಿಬ್ಬರೂ ಮೇಲೆ ಹೋದರು. ಕಿವಿಯಲ್ಲಿ ತೂತಿದ್ದ ಮನುಷ್ಯ ಬಾರ್‌ನಲ್ಲಿ ಬ್ರ್ಯಾಂಡಿ ಕುಡಿಯುತ್ತಲಿದ್ದ. ಹೊರಗೆ, ಕಾಡಿನಲ್ಲಿ ಹುಲಿಗಳು ಗರ್ಜಿಸುವ ಶಬ್ದ ಕೇಳಿಬಂತು...

''ಅದ್ಭುತವಾದ ಈ ಟೈಗರ್ ಕಂಟ್ರಿ ಇನ್ನುಮುಂದೆ ಕಾಲಾಗಢ ಡ್ಯಾಮಿನಲ್ಲಿ ಮುಳುಗಿ ಹೋಗುತ್ತದಲ್ಲ–ಎಂದು ಚಿಂತೆ...'' ಎಂದು ಕಿವಿಯಲ್ಲಿ ತೂತಿದ್ದ ಮನುಷ್ಯ ಹೇಳಿದ.

''ನನಗೂ ಬೇಸರವೆನ್ನಿಸುತ್ತದೆ, ಈ ವಿಷಯ ಕೇಳಿ...'' ಎಂದು ಬ್ರಿಗೇಡಿಯರ್ ಸಂಕ್ಷಿಪ್ತವಾಗಿ ಉತ್ತರಿಸಿದ...

''ನಾನು ದೊಡ್ಡ ದೊಡ್ಡ ಬೇಟೆಯಾಡುವ ಸ್ಥಳಕ್ಕೆ ಶಿಕಾರಿಗಳನ್ನು ಕರೆದೊಯ್ಯುತ್ತೇನೆ...ಆ ಕಾಲ ಈಗ ಹೊರಟು ಹೋಯಿತು...ತಾವು?''

''ಮೀನದ ಬೇಟೆಯಾಡಲು ಪ್ರತಿವರ್ಷ ಇಂಗ್ಲೆಂಡಿನಿಂದ ಇಲ್ಲಿಗೆ ಬರುತ್ತೇನೆ...'' ಎಂದು ಬ್ರಿಗೇಡಿಯರ್ ಉತ್ತರಿಸಿದ.

''ತಮಗೆ ನನ್ನಿಂದ ಏನಾದರೂ ಸೇವೆಯ ಅವಶ್ಯಕತೆಯಿದ್ದರೆ ಹೇಳಿ, ನಾನು ಸಿದ್ಧನಿದ್ದೇನೆ.'' ಕಿವಿಯಲ್ಲಿ ತೂತಿದ್ದ ಮನುಷ್ಯ ಹೇಳಿದ...

''ಇಲ್ಲ...ಏನೂ ಇಲ್ಲ...ನಾನು ಉಪಕೃತ...'' ಎಂದು ಬ್ರಿಗೇಡಿಯರ್ ಬೇಸರದಿಂದ ಉತ್ತರಿಸಿದ.

ಹೊರಗೆ ರಾತ್ರಿಯ ದನಿಗಳು ಹೆಚ್ಚುತ್ತಲಿದ್ದವು. ೧೫–೨೦ ನಿಮಿಷಗಳು ಕಳೆದು ಹೋದವು. ಕಿವಿಯಲ್ಲಿ ತೂತಿದ್ದ ವ್ಯಕ್ತಿ ಬ್ರಿಗೇಡಿಯರನನ್ನು ದಿಟ್ಟಿಸಿ ನೋಡುತ್ತಲಿದ್ದ... ಅವನ ಕಣ್ಣು...ಕೇವಲ ಒಂದು ಕಣ್ಣು...ಕೆಂಪಗಾಗಿತ್ತು.

''ಸಸ್ಯಶಾಮಲೆಯ ಈ ಭಾಗ ತುಂಬ ರೋಮ್ಯಾಂಟಿಕ್ ಭಾಗವಾಗಿದೆ...'' ಎಂದು ಅವನೆಂದ...ಮತ್ತೆ–''ಒಂದು ವೇಳೆ ತಾವು...'' ಬ್ರಿಗೇಡಿಯರ್ ಯೋಚಿಸಿದ, ಸ್ಟೂಲ್ ಮೇಲಿಂದ ಎದ್ದ, ಚುರುಟ ಹಚ್ಚಿದ ಮತ್ತು ಅವನಿಗೆ ''ಗುಡ್ ನೈಟ್'' ಹೇಳುತ್ತ ಅಲ್ಲಿಂದ ಹೊರಟು ಹೋದ.

ಕಿವಿಯಲ್ಲಿ ತೂತಿದ್ದ ವ್ಯಕ್ತಿ ಬಾರ್ ಕೌಂಟರಿನ ಮೇಲೆ ತಬಲಾ ಬಾರಿಸಲಾರಂಭಿಸಿದ. ಅವನು ಬ್ರ್ಯಾಂಡಿ ಗ್ಲಾಸ್ ಖಾಲಿಮಾಡಿದ ಹಾಗೂ ಬಾರ್‌ಮನ್‌ನಿಗೆ ಹೇಳಿದ–''ಬಿಲ್ ಮೇಲೆ ಕಳಿಸು. ಅವರ ಕೋಣೆಯ ನಂಬರ ಏನಿದ...? ಬಿಲ್ ಸಾಹೇಬರಿಗೆ ಕಳಿಸು...ಮೇಮಸಾಬರೊಂದಿಗೆ ಬಂದಿದ್ದಾರಲ್ಲ... ಅವರಿಗೆ...ಮೇಲೆ ಹೋಗಲು ಸ್ಟೇರಕೇಸ್ ಎಲ್ಲಿದೆ...?'' ಬಾರ್‌ಮೆನ್ ದಾರಿ ತೋರಿಸಿದ.

ಮೇಲೆ ಹೋಗಿ ಈ ಮನುಷ್ಯ ಒಂದು ಕೋಣೆಯ ಬಾಗಿಲು ಬಡಿದ. ಒಳಗಿನಿಂದ ''ಬಾ'' ಎಂದು ಬುಲಾವ್ ಬಂತು. ಬಾಗಿಲು ಒಳಗಿನಿಂದ ಹಾಕಿಕೊಂಡಿರಲಿಲ್ಲ...ದಬ್ಬಿದ...ಒಳಗೆ ಹೋದ...ತರುಣಿ ಪಲ್ಲಂಗದ ಮೇಲೆ ಅಡ್ಡಾಗಿ ಜಿಮ್ ಕೋರಬಟ್‌ನ– ''ಕುಮಾಯುದಲ್ಲಿಯ ನರಭಕ್ಷಕ'' ಗ್ರಂಥದ ಪುಟ ತಿರುವುತ್ತಿದ್ದಳು...ಪ್ರವಾಸಿಕರಿಗಾಗಿ ಈ ಗ್ರಂಥವನ್ನು ಪ್ರತಿಯೊಂದು ಕೋಣೆಯಲ್ಲಿರಿಸ ಲಾಗಿರುತ್ತಿತ್ತು...ಕುಳ್ಳಗಿನ ವ್ಯಕ್ತಿ ಇನ್ನೊಂದು ಪಲ್ಲಂಗದ ಮೇಲೆ ಮಲಗಿ ಛತ್ ನೋಡುತ್ತಲಿದ್ದ...ಅವನು ಬಂದವನಿಗೆ ''ಹೋಗು'' ಎಂದು ಗದರಿಸಿದ...

''ಸರಿ. ಹೋಗುತ್ತೇನೆ...ನಾನು ರಾತ್ರೋ ರಾತ್ರಿ ಇಲ್ಲಿಂದ ಹೊರಟು ಹೋಗುತ್ತೇನೆ...ತಾವು ನನಗೆ ನಜೀಬ ಆಬಾದ...''

''ಹೋಗು'' ಆ ಕುಳ್ಳ ಮನುಷ್ಯ ಅವನ ಮಾತಿನ ಮಧ್ಯದಲ್ಲಿಯೇ ಮತ್ತೊಮ್ಮೆ ಗದರಿಸಿದ...

''ಗುಡ್ ನೈಟ್'' ಎಂದು ಹೇಳಿದ ಆ ಕಿವಿಯಲ್ಲಿ ತೂತಿದ್ದ ವ್ಯಕ್ತಿ ತರುಣಿಯನ್ನು ಕುರಿತು ಹೇಳಿದ–''ಆದಿತ್ಯವಾರ ಬೆಳಗ್ಗೆ ಬರುತ್ತೇನೆ...ಸಿದ್ಧವಾಗಿರು...''

''ಹೋಗು...'' ಮತ್ತೆ ಆ ಕುಳ್ಳ ಗರ್ಜಿಸಿದ...

ಕಿವಿ ತೂತಿದ್ದ ವ್ಯಕ್ತಿ ಅವನಿಗೆ ಬಾಗಿ ಸಲಾಮು ಮಾಡಿದ ಹಾಗೂ ಅಲ್ಲಿಂದ ಹೊರಗೆ ಹೊರಟು ಹೋದ...

ಕುಳ್ಳವ್ಯಕ್ತಿ ಎದ್ದು ಒಂದು ಸೂಟ್‌ಕೇಸ್ ತೆರೆದ. ಅದರಲ್ಲಿಂದ ಚರ್ಮದ ಪೆಟ್ಟಿಗೆ ತೆಗೆದ ಮತ್ತು ಒಂದು ಚಾಬುಕ..ಅವನು ಅವೆರಡನ್ನೂ ತರುಣಿಯತ್ತ ಎಸೆದ ಹಾಗೂ ಬಾಗಿಲು ಒಳಗಿನಿಂದ ಹಾಕಿಕೊಂಡ...

ಬೆಳಗ್ಗೆ ಮಿಸೆಸ್ ಫ್ರೀಮೆಂಟಲ್, ಬಟ್ಟೆ ತೊಳೆದು ಹರವುತ್ತಿದ್ದಳು. ಅವಳ ಗಂಡ ಅಲ್ಲಿಯೇ ಸಮೀಪದಲ್ಲಿ ಕುರ್ಚಿಯ ಮೇಲೆ ಕುಳಿತು ಪೇಪರ ಓದುವುದರಲ್ಲಿ ಮಗ್ನನಾಗಿದ್ದ. ಆಕೆ ತನ್ನಲ್ಲಿಯೇ ಅಂದುಕೊಂಡಳು–''ಪುವರ್ ಗರ್ಲ್... ಪುವರ್ ಥಿಂಗ್...'' ಬ್ರಿಗೇಡಿಯರ್ ಮೌನವಾಗಿಯೇ ಇದ್ದ.

''ಇಂಡಿಯನ್ ಎಳೆಯ ವಧು...ಬಡಪಾಯಿ...ನಾವು ಅವಳಿಗಾಗಿ ಏನನ್ನಾದರೂ ಮಾಡಲಾರೆವೆ ಹೆನ್ರಿ...?''

''ಏನು ಡೋರಸ್...?'' ಬ್ರಿಗೇಡಿಯರ್ ಕೊಂಚ ಬೇಸರದಿಂದ ಗಾಬರಿಯಾಗಿಯೇ ಕೇಳಿದ.

''ಆ ತರುಣಿ, ಬಡಪಾಯಿ ನಿನ್ನೆ ರಾತ್ರಿ ಇಲ್ಲಿಗೆ ಬಂದಿದ್ದಾಳೆ...ಅವಳು ಬೆಳಗ್ಗೆ ಶಾಲು ಹೊದ್ದು ಅಲ್ಲಿ ಶತಪಥ ಮಾಡುತ್ತಿದ್ದಳು...ಸೀರೆಯ ಕೆಳಗೆ ಬೆನ್ನ ಮೇಲೆ ಚಾಬುಕದ, ಬರೆ ಎಳೆದ ಹಾಗಿನ ಗುರುತುಗಳಿದ್ದವು...ಅವಳ ಗಂಡ ಅವಳನ್ನು ಹೀಗೆ ಹೊಡೆಯುತ್ತಾನೆ...ಏನು ನಾವು...''

''ಮೈಡಿಯರ್ ಡೋರಸ್...ನಾವು ಇನ್ನೊಬ್ಬರ ವಿಷಯದಲ್ಲಿ ಈ ರೀತಿ ಮಧ್ಯ ಪ್ರವೇಶಿಸುವುದು ಸರಿಯಲ್ಲ...''

''ಆದರೆ ಹೆನ್ರಿ...''

ಬೆಳಗಿನ ಹನ್ನೊಂದು ಗಂಟೆಗೆ ತರುಣಿ ತನ್ನ ಕೋಣೆಯಲ್ಲಿ ಡ್ರೆಸ್ಸಿಂಗ ಟೇಬಲ್ಲಿನೆದುರು ಕುಳಿತು ಸಿಂಗಾರಗೊಳ್ಳುತ್ತಿದಳು...ಅವನು ಸಫಾರಿ ಸೂಟ್ ಹಾಕಿ ಕೊಂಡಿದ್ದ. ತುಂಬ ಷೋಕಿ ಮನುಷ್ಯನಾಗಿದ್ದ. ಕೂದಲುಗಳಿಗೆ ಸ್ವಿಸ್ ಪೇಂಟನ್ ಹಚ್ಚಿಕೊಳ್ಳುತ್ತ ಕುಣಿಯುತ್ತ, ಕುಪ್ಪಳಿಸುತ್ತ ಹಾಡುತ್ತಲಿದ್ದ–''ಮನಸ್ಸು ಜಂಗಲದಲ್ಲಿಯೇ ಸುಖ ಅನುಭವಿಸುತ್ತದೆ, ಇಲ್ಲ ಸೌಂದರ್ಯದ ಮೇಲೆ ಪ್ರೇಮ ಇಮ್ಮಡಿ ಯಾಗುತ್ತದೆ...''

ತರುಣಿ ಆಸಕ್ತಿಯಿಂದ ಆ ಹಾಡು ಕೇಳುತ್ತಿದ್ದಳು...

''ಈ ಹಾಡು, ನೀನು ಹುಟ್ಟಿರಲಿಲ್ಲ ಇನ್ನೂ, ಆ ಕಾಲದ್ದು...'' ಅವನು ಕ್ಯಾಮರಾ ಮತ್ತು ದುರ್ಬಿನ್ ಎತ್ತಿ ಕೊಳ್ಳುತ್ತ ಅವಳಿಗೆ ಹೇಳಿದ.

ಇಬ್ಬರೂ ಹೊರಗೆ ಬಂದರು. ಬಾಗಿಲಗೆ ಕೀಲಿ ಹಾಕಿದರು. ಕೆಳಗೆ ಇಳಿದರು ಮತ್ತು ಆನೆ ನಿಲ್ಲುವ ಕಟ್ಟೆಯ ಹತ್ತಿರಕ್ಕೆ ಹೋದರು. ಪಾವಟಿಗೆ ಏರಿ ಪ್ಲ್ಯಾಟ್ ಫಾರ್ಮ ಮೇಲೆ ತಲುಪಿ, ಅಲ್ಲಿದ್ದ ಹೆಣ್ಣಾನೆಯ ಮೇಲೆ ಹತ್ತಿದರು. ಅದು ಪ್ಲ್ಯಾಟಫಾರ್ಮಗೆ ಹತ್ತಿ ಕಾರಿನ ಹಾಗೆ ನಿಂತಿತ್ತು.

ಅಂಬಾರಿಯಲ್ಲಿ ಕುಳಿತು ತರುಣಿ ಕಿಲ ಕಿಲ ಎಂದು ನಕ್ಕು, ನಗೆಯ ಬುಗ್ಗೆ

ಚಿಮ್ಮಿಸಿದಳು. ಆಕೆ ಮಗುವಿನ ಹಾಗೆ ಸಂತೋಷ ಅನುಭವಿಸುತ್ತಿದ್ದಳು. ಆ ಎಳೆ ಬಿಸಿಲಿನಲ್ಲಿ ಆಕೆ ತೊಟ್ಟ ವಜ್ರ ಖಚಿತ ಆಭರಣಗಳು ಮಿರಿ ಮಿರಿ ಹೊಳೆಯುತ್ತಿದ್ದವು. ಹೊಲಸಾದ ಖಾಕಿಕೋಟ ಹಾಕಿಕೊಂಡಿದ್ದ ಮಾವುತ ಅಂಕುಶ ಹಿಡಿದು ಆನೆಯನ್ನು ಮೆಲ್ಲಗೆ ಚಪ್ಪರಿಸಿದ–''ನಡೆ...ಬೇಟಾ ರಾಮಕಲಿ...ಬಿಸ್ಮಿಲ್ಲಾಹ್..''

ರಾಮಕಲಿ ಗೇಟಿನತ್ತ ಹೊರಟಿತು.

ಕಂಪೌಂಡಿನಿಂದ ಹೊರಹೊರಟು, ಅದು ರಾಮಗಂಗಾದ ಹೆಚ್ಚು ಆಳವಲ್ಲದ ಸ್ಥಳದಿಂದ ಹೊರಟು, ಜಂಗಲಿನತ್ತ ಹೊರಟಿತು. ತರುಣಿ ತುಂಬ ಖುಷಿಯಿಂದ ದುರ್ಬಿನ ಹಿಡಿದು ಸುತ್ತಲೂ ನೋಡುತ್ತಲಿದ್ದಳು. ಆಕೆ ಮತ್ತೆ ಮತ್ತೆ ಆ ಕುಳ್ಳನಿಗೆ ಹೇಳುತ್ತಿದ್ದಳು–''ಅದು...ಅದು...ಅಲ್ಲಿ ನವಿಲು...ಅರೇ ಅಲ್ಲಿ ಸಾರಂಗ... ಮೈಗಾಡ್...ಇನ್ನೂ ಏನೇನೋ... ಓ ! ಅದೆಷ್ಟು ದೊಡ್ಡದಾದ ಮೊಸಳೆ... ಅಲ್ನೋಡು...ಅದೇನು ಮಾವುತ...?''

''ಸಾರಂಗ...ಮೇಮಸಾಬ...ಮಾತಾಡಬೇಡಿ...ಸಪ್ಪಳ ಕೇಳಿದರೆ ಸಾಕು ಎಲ್ಲ ಪ್ರಾಣಿಗಳು ಮಾಯವಾಗಿ ಬಿಡುತ್ತವೆ...''

ರಾಮಕಲಿ ಜಂಗಲ್‌ದ ಒಳಗಡೆ ತಲುಪಿತು.... ಅಲ್ಲಿ ಗಿಡಗಳ ಟೊಂಗೆಗಳಿಗೆ ಅಸಂಖ್ಯಾತ ಪಕ್ಷಿಗಳ ಗೂಡುಗಳು ಕಂದೀಲಿನ ಹಾಗೆ ಇಳಿಬಿದ್ದಿದ್ದವು....ದೂರದಲ್ಲಿ ಇನ್ನೆರಡು ಆನೆಗಳು ಬರುತ್ತಿರುವುದು ಆಕೆಗೆ ಕಾಣಿಸಿತು...ಅವುಗಳ ಮೇಲೆ ಕೇಂಬ್ರಿಡ್ಜ್‌ದಿಂದ ಬಂದಿದ್ದ ಇಂಗ್ಲೀಷ ವಿದ್ಯಾರ್ಥಿಗಳು ಇದ್ದರು....

ಜಂಗಲ್‌ದ ಒಂದು ಭಾಗದ ಸುತ್ತ ಸುತ್ತಿ ರಾಮಕಲಿ ಮರಳಿ ಹೊರಟಿತು.... ರೆಸ್ಟ್ ಹೌಸ್ ತಲುಪಿದಾಗ ಮಾವುತನಿಗೆ ತರುಣಿ ಇಪ್ಪತ್ತು ರೂಪಾಯಿ ಬಕ್ಷಿಸ್ ಕೊಟ್ಟಳು. ಇಡೀ ಕಂಪೌಂಡಿನಲ್ಲಿ ತರುಣಿಯ ಉದಾರ ಮನಸ್ಸು ಆಗಲೇ ಪ್ರಸಿದ್ಧವಾಗಿತ್ತು, ಓರ್ವ ಬೇರಾ ಅವಳನ್ನು ಸಂತೋಷಗೊಳಿಸಲು ಮುಂದೆ ಬಂದು ಹೇಳಿದ– ''ಅಲ್ನೋಡಿ....ಮೇಮಸಾಬ ಬುದ್ದು ಬಂದ....''

''ಬುದ್ಧು....? ಅದನ್ನು ಹೋಗಲು ಬಿಡಬೇಡಿ. ನಾನು ಅದಕ್ಕೆ ನನ್ನ ಕೈಯಿಂದ ಊಟ ಮಾಡಿಸುವೆ....'' ಎಂದು ಹೇಳುತ್ತ ತರುಣಿ ಡೈನಿಂಗ್‌ಹಾಲ್ ಕಡೆಗೆ ಹೋದಳು. ತರುಣಿ, ಜಂಗಲ್‌ದಲ್ಲಿ ತುಂಬ ಖುಷಿಯಿಂದ ಇದ್ದಳು. ಈಗ ಅದೇಕೊ ಬೇಸರದಿಂದ ಊಟ ಮಾಡುವಲ್ಲಿ ಮಗ್ನಳಾಗಿದ್ದಳು.

ಅಲ್ಲಿ ಆಗ ಕೇವಲ ಒಂದು ಫ್ಯಾಮಿಲಿ ಮಾತ್ರ ಇತ್ತು, ತರುಣಿ ಬೇಸರದಿಂದ ಅವರನ್ನು ನೋಡಿದಳು. ಹೆಂಡತಿಯ ತಲೆಯಲ್ಲಿ ಎಣ್ಣೆ, ಬಿಗಿಯಾಗಿ ಕಟ್ಟಿದ ಜಡೆ, ಕೆಟ್ಟದಾದ ಒಂದು ನೈಲಾನ್ ಸೀರೆ, ಬಂಗಾರದ ಬಳೆಗಳು, ಬೈತಲೆಯಲ್ಲಿ ಕುಂಕುಮ, ಹಣೆಯ ಮೇಲೆ ಪ್ಲ್ಯಾಸ್ಟಿಕ್‌ದ ನೀಲಿ ಬಿಂದಿ. ಹುಡುಗರು ಪೇಟೆಯಲ್ಲಿ ಹೊಲಿದ 'ಬಾಬಾಸೂಟ' ಹಾಕಿದ್ದವು, ಗಂಡನ ಕೈಯಲ್ಲಿ 'ಧರ್ಮಯುಗ'ದ ಆ ವಾರದ ಪತ್ರಿಕೆಯಿತ್ತು, ಅವರೆಲ್ಲರೂ ಸುಸ್ತಾಗಿ, ಬೇಜಾರಾಗಿ ಕುಳಿತಿದ್ದರು.

ಬೇರಾ ಊಟ ಬಡಿಸಿದ. ಅವನು ರಾಮಪುರದಿಂದ ಬಂದವನಾಗಿದ್ದ. ಅವನು ನೋಡಲು ಅಹ್ಮದಜಾನ್ ಥಿರಕ್ವಾನ ಅಣ್ಣನಂತೆ ಕಾಣುತ್ತಿದ್ದ. ಜೀವನ, ತುಂಬ ವರ್ಣಹೀನ, ಬೇಸರದ ನಾಚಿಕೆಯಿಂದ ಕೂಡಿದ್ದಾಗಿದೆ.

ಊಟದ ನಂತರ ಆಕೆ ಪ್ಲೇಟ ತೆಗೆದುಕೊಂಡು ಬುದ್ಧುಗೆ ಊಟ ಮಾಡಿಸಲು ಹೊರಗೆ ಬಂದಳು. ಆಕೆ ಅಲ್ಲಿಂದ ಹಾಗೆಯೇ ನಡೆಯುತ್ತ ನದಿಯತ್ತ ಹೊರಟು ಹೋದಳು. ದಾರಿಯಲ್ಲಿ ಅವಳಿಗೆ ಆ ಪ್ಲ್ಯಾಸ್ಟಿಕ್ ಬಿಂದಿ ಇಟ್ಟ ಹೆಂಡತಿ ಸಿಕ್ಕಳು. ಆಕೆ, ಆಕೆಯನ್ನು ದಿಟ್ಟಿಸಿ ನೋಡಿದಳು. ಆಕೆ ಮುಗುಳ್ನಕ್ಕಳು...ಈಕೆಯೂ ನಿರುಪಾಯಳಾಗಿ ಮುಗುಳ್ನಕ್ಕಳು....ತರುಣಿ ಆಕೆಯೊಂದಿಗೆ ಮಾತಾಡ ತೊಡಗಿದಳು....

ಆಕೆ ಕೇಳಿದಳು–

''ಯಾವ ಜಾತಿ ನಿಮ್ಮದು?''

''ಬ್ರಾಹ್ಮಣ....'' ಆಕೆ ಉತ್ತರಿಸಿದಳು...

''ಹೆಸರೇನು....?''

''ಬನದೇವಿ....'' ಎಂದಳಾಕೆ.

''ಅವನು ನಿನ್ನ ಗಂಡನೇನು....?''

''ನಿಮಗೆ ಹೇಗೆನ್ನಿಸುತ್ತದೆ.....?'' ಎಂದು ತರುಣಿ ನಗುತ್ತ ಕೇಳಿದಳು.

ಅವಳು ಹುಬ್ಬೇರಿಸಿ ಮುಂದಕ್ಕೆ ಹೋದಳು....

ಕಂಪೌಂಡ್‌ದಿಂದ ಹೊರ ಹೊರಟು, ಹೊಸ ಕಟ್ಟಡ ಕಟ್ಟುವವರ ಡೇರೆಯಿದ್ದ ಕಡೆ ಹೋದಳು. ಅವರೆಲ್ಲ ಕಾಡಿನಂಚಿನಲ್ಲಿ ನಮಾಜ ಮಾಡುವಲ್ಲಿ ನಿರತರಾಗಿದ್ದರು. ಒಲೆಯ ಮೇಲೆ ಕೋಳಿ ಮಾಂಸದ ಅಡಿಗೆ ನಡೆದಿತ್ತು, ಓರ್ವ ಬಂದು ಸಲಾಮ್ ಮಾಡಿ ಕೇಳಿದ–''ಮೇಮಸಾಬ, ಹೇಳಿ, ಏನು ಬೇಕಿತ್ತು...?''

''ಏನೂ ಇಲ್ಲ...ಹೀಗೆಯೇ ಬಂದಿದ್ದೆ....ಏನು ಅಡಿಗೆ ನಡೆದಿದೆ...?''

''ಬಿಸ್ಮಿಲ್ಲಾ ಮಾಡಿ....ಏ....ದಿಲಾವರ.....ಮೇಮಸಾಬರಿಗೆ ಜರದಾ ತೆಗೆದುಕೊಂಡು ಬಾ....''ಎನ್ನುತ್ತ ಅವನು ಕುರ್ಚಿತಂದಿತ್ತ ''ನಾವು ಜಂಬೂರದಿಂದ ಬಂದಿದ್ದೇವೆ. ವರ್ಷದಿಂದ ಈ ಜಂಗಲಿನಲ್ಲಿದ್ದೇವೆ....ಕೆಲಸ ಮುಗಿದ ನಂತರ ಮರಳಿ ಊರಿಗೆ ಹೋಗುತ್ತೇವೆ.''

''ಪ್ರಸಾದ ಬಟ್ಟಲದಲ್ಲಿದ್ದುದನ್ನು ಕೊಡಬೇಡ....'' ಎಂದು ಓರ್ವ ಸುಂದರ ಹೆಂಗಸು ಹುಡುಗನಿಗೆ ಮೆಲ್ಲಗೆ ಹೇಳಿದಳು. ಆದರೂ ತರುಣಿ ಕೇಳಿಸಿಕೊಂಡಳು....

ದಿಲಾವರ ಹೂಗಳ ಚಿತ್ತಾರವಿರುವ ಚೀನಿ ಪ್ಲೇಟಿನಲ್ಲಿ ಜರದಾ ತೆಗೆದುಕೊಂಡು ಬಂದ. ತರುಣಿ ಮುಗುಳ್ನಗುತ್ತ ಕೇಳಿದಳು–

''ಯಾರ ಪ್ರಸಾದ......?''

''ದೊಡ್ಡ ಮಹಾತ್ಮರದು.....'' ಎಂದು ಹುಡುಗ ಉತ್ತರಿಸಿದ.

ತರುಣಿ ಜರದಾದ ರುಚಿ ನೋಡಿದಳು...ಹಾಗೂ ಇಪ್ಪತ್ತು ರೂಪಾಯಿ ನೋಟೊಂದನ್ನು ದಿಲಾವರನ ಕೈಯಲ್ಲಿರಿಸಿದಳು....

''ಆದಾಬ ಅರ್ಜ ಮೇಮಸಾಬ....''ಗುತ್ತಿಗೆದಾರ ತುಂಬ ವಿನಯದಿಂದ ಹೇಳಿದ.

''ವಾಲೆಕುಮ್ ಅಲ್‌ಸಲಾಮ್.....'' ಎಂದು ಉತ್ತರಿಸಿದ ಆಕೆ ಕಂಪೌಂಡಿನತ್ತ ಮರಳಿದಳು. ಬಂಜೂರಿಗಳು ಅಚ್ಚರಿಯಿಂದ ಪರಸ್ಪರರನ್ನು ನೋಡಿದರು.

ಮೂರನೆಯ ದಿನ ಬೆಳಗ್ಗೆ....ಬ್ರಿಗೇಡಿಯರ್ ಬಿಸಿಲಿನಲ್ಲಿ ಕುಳಿತು ಪೇಪರ ಓದುತ್ತಿದ್ದ. ಕುಳ್ಳ ವ್ಯಕ್ತಿ ಬಡಬಡ ಅವನಲ್ಲಿಗೆ ಬಂದು ಹೇಳಿದ–

''ನಾನು, ಅವಶ್ಯ ಕೆಲಸದಿಂದಾಗಿ ಪಟ್ಟಣಕ್ಕೆ ಹೋಗುತ್ತಿದ್ದೇನೆ. ರಾತ್ರಿ ಮರಳುತ್ತೇನೆ...ಅಥವಾ ನಾಳೆ ಬೆಳಗ್ಗೆ. ತಾವು ಮತ್ತು ತಮ್ಮ ಮಿಸೆಸ್ ನನ್ನ ಹೆಂಡತಿಯ ಬಗ್ಗೆ ಕಾಳಜಿ ವಹಿಸಿ....'' ತನ್ನ ಜೀಪ ಸ್ಟೇಷನ್ ವ್ಯಾಗಿನ್‌ದಲ್ಲಿ ಕುಳಿತು ಗೇಟಿನಿಂದ ಹೊರಗೆ ಹೋದ.

ಮಿಸೆಸ್ ಫ್ರಿಮೆಂಟಲ್–''ಅಸಭ್ಯ ಮನುಷ್ಯ....ಹೂವಿನಂಥ ಹುಡುಗಿಯನ್ನು ಹೊಡೆಯುತ್ತಾನೆ...ಆ ಬಡಪಾಯಿಯ, ಬಡತಾಯಿ ತಂದೆಗಳು ಹಣಕ್ಕಾಗಿ ಅವನಿಗೆ ಇವಳನ್ನು ಮಾರಿರಬೇಕೆಂದು ನನಗೆ ಖಚಿತವೆನಿಸುತ್ತದೆ....ಪೂರ್ವದೇಶದಲ್ಲಿ ಇದು ಸಾಮಾನ್ಯವಾಗಿ ನಡೆಯುತ್ತದೆ....''

ಬುದ್ಧು ಬಂದು ಕುರ್ಚಿಯ ಪಕ್ಕದಲ್ಲಿ ನಿಂತಿತು. ಮಿಸೆಸ್ ಫ್ರಿಮೆಂಟಲ್ ಪ್ರೀತಿಯಿಂದ ಅದರ ಮುಖದ ಮೇಲೆ ಕೈಯಾಡಿಸಿದಳು. ಅದೊಂದು ಅಡವಿ ಹಂದಿಯಾಗಿತ್ತು, ಜಂಗಲಿನೊಳಗಿಂದ ಬರುತ್ತಿತ್ತು, ಕೊಟ್ಟದ್ದನ್ನು ತಿಂದು ಮತ್ತೆ ಅಡವಿಯೊಳಕ್ಕೆ ಹೋಗುತ್ತಿತ್ತು. ಅಲ್ಲಿ ಕಂಪೌಂಡಿನಲ್ಲಿರುವವರು ಅದಕ್ಕೆ 'ಬುದ್ಧು' ಎಂದು ಹೆಸರಿಟ್ಟಿದ್ದರು.

ತರುಣಿ ರೆಸ್ಟ್‌ಹೌಸ್‌ನಿಂದ ಬಂದಳು–''ಗುಡ್‌ಮಾರ್ನಿಂಗ್'' ಎನ್ನುತ್ತ ಕುರ್ಚಿಯ ಮೇಲೆ ಕುಳಿತಳು.

''ಬೋಡು, ಜಂಗಲ್‌ದ ಒಳ್ಳೆಯ ಪಬ್ಲಿಕ್ ರಿಲೇಷನ್ಸ್ ಆಫೀಸರ ಆಗಿದೆ. ಅಲ್ಲಿಯ ಈ ಪ್ರತಿನಿಧಿ, ಮನುಷ್ಯರ ಜಂಗಲ್‌ನೊಂದಿಗೆ ಸಂಬಂಧವಿರಿಸುತ್ತದೆ....'' ಎಂದು ಬ್ರಿಗೇಡಿಯರ್ ಹೇಳಿದ.

''ಆ ಜಂಗಲ್ ಒಳಗೆ ಹೋಗಿದೆಯೋ....?'' ತರುಣಿ ಹೇಳಿದಳು.

''ನೀನು ಅದನ್ನು ಒಳಗೆ ಹೋಗಿ ನೋಡಿ ಬಂದಿರುವೆಯಲ್ಲ...''

''ಹೌದು, ಆದರೆ ಅತ್ಯಂತ ಒಳಗೆ ಹೋಗಿ ನೋಡಲಿಲ್ಲ....''

''ಅದರೊಳಗೆ ವಾಸಿಸುವವರಂತೆಯೇ ಅದೂ ಇರುತ್ತದೆ....ನಮಗೆ ಹೇಗೆ ನಮ್ಮ ಜಗತ್ತಿದೆಯೋ ಹಾಗೆ...ನಾವು ಮತ್ತು ಜಪಾನಿ ಬರ್ಮಾದ ಜಂಗಲಿನಲ್ಲಿ ಯುದ್ಧ ಮಾಡುತ್ತಿದ್ದಾಗ ನಾವೆಲ್ಲ ಹಿಂಸ್ರ ಪ್ರಾಣಿಗಳಂತಾಗಿದ್ದೆವು.....''

ಹಿಂದಿನ ಒಂದು ದಿನದಿಂದ ಈ ಸ್ನೇಹಮಯಿಯಾದ ತರುಣಿಯೊಂದಿಗೆ ಈ ದಂಪತಿಗಳ ಸಂಬಂಧ ತುಂಬ ಬೆಳೆದಿತ್ತು. ಮಿಸೆಸ್ ಫ್ರಿಮೆಂಟಲ್ ಹೊರಗೆ ಹೋದಳು....

"ನಾನು, ನಿಮ್ಮ ಊಟದ ಸಮಯದವರೆಗೂ ನಿಮ್ಮೊಂದಿಗೆ ಕೂಡ ಬಹುದೇ...?" ಎಂದು ತರುಣಿ ಬ್ರಿಗೇಡಿಯರ್‌ನನ್ನು ಕೇಳಿದಳು.

"ಹಾಂ ! ಹಾಂ....ನಿನ್ನ ಗಂಡನೂ ನಮಗೆ ಹೇಳಿ ಹೋಗಿದ್ದಾನೆ...." ಅವಳು ನಕ್ಕಳು. "ಅವನು ನನ್ನ ಗಂಡನಲ್ಲ....ನಾನು ಕಲಕತ್ತಾದಲ್ಲಿ ರೇಸಕೋರ್ಸ್‌ದಲ್ಲಿ ಅವನನ್ನು ಭೇಟಿಯಾಗಿದ್ದೆ. ಅವನೊಬ್ಬ ಶ್ರೀಮಂತ....ಸಂಸಾರವೊಂದಿಗ...ಹೆಂಡತಿ ಮಕ್ಕಳು ಮರಿಗಳಿವೆ...ಆದರೆ ಪರವರಟೆಡ್....ನಾನು ಆರು ತಿಂಗಳಿನಿಂದ ಅವನೊಂದಿಗಿರುವೆ. ಆದರೆ ಈಗೀಗ ತುಂಬ ಬೋರಾಗಿದೆ...ಅವನನ್ನು ಬಿಟ್ಟು ಬಿಡಬೇಕೆಂದು ಮಾಡಿರುವೆ...ಆದರೆ ಅವನು ನನ್ನನ್ನು ಬಿಡಲು ಸಿದ್ಧನಿಲ್ಲ...ಅವನಿಂದ ಹಣ, ಚಿನ್ನ ಸಾಕಷ್ಟು ಕೊಳ್ಳೆ ಹೊಡೆದಿದ್ದೇನೆ....ವರ್ಷದಲ್ಲಿ ಕೂಡ ಇಷ್ಟು ಸಂಪಾದಿಸಲು ನನಗೆ ಸಾಧ್ಯವಿರಲಿಲ್ಲ. ಈ ವಜ್ರ ನೋಡಿ....ಬ್ಲ್ಯು ಬೆಲ್ಜಿಯಂ...."ಎಂದಳು.

"ಓ ! ಐ. ಸಿ......"ಎಂದು ಬ್ರಿಗೇಡಿಯರ್‌ನ ಬಾಯಿಂದ ಒಮ್ಮೆಲೇ ಹೊರಟಿತು....ಅವನಿಗೆ ಸಾಕಷ್ಟು ಲೋಕಾನುಭವವಿತ್ತು. ಜಗತ್ತನ್ನು ತುಂಬ ನೋಡಿದ್ದ. ಅದಕ್ಕೆಂದೇ ಅವನು ಹೇಳಿದ–"ಆದರೆ ಈ ವಿಷಯ ನನ್ನ ಹೆಂಡತಿಗೆ ಹೇಳಬೇಡ. ಆಕೆ ಓರ್ವ ಧರ್ಮಭೀರು, ದೇವರಲ್ಲಿ ನಂಬಿಕೆಯಿಟ್ಟಿರುವ ಇಂಗ್ಲೀಷ ಸದ್ಗೃಹಿಣಿ. ನೀನು ಇದನ್ನೆಲ್ಲ ಹೇಳಿದರೆ ಆಕೆ ನಿನ್ನೊಂದಿಗೆ ಮಾತು ಕೂಡ ಆಡುವುದಿಲ್ಲ..."

"ವೆರಿ ವೆಲ್ ಬ್ರಿಗೇಡಿಯರ್....."

"ಆದರೆ ನೀನು, ಒಳ್ಳೆಯ, ಸುಸಂಸ್ಕೃತ ಮನೆತನದ ತರುಣಿಯ ಹಾಗೆ ಕಾಣುತ್ತಿರುವೆ. ನೀನು ಈ ರೀತಿ....."

"ತಾವು ಕೂಡ, ನಿನ್ನಂಥ ಸಾಧ್ವಿಶಿರೋಮಣಿ ಇದನ್ನೇನು ಮಾಡುತ್ತಿರುವೆ... ಎಂದು ಕೇಳಲಿದ್ದೀರಾ....? ಇದರ ಉತ್ತರ ಹೀಗಿದೆ ಮಾನ್ಯರೆ....There is big money in it ಅದೂ ಅಲ್ಲದೆ ನಮ್ಮೀ ಬಿಜಿನೆಸ್ ಇಂಟರ್ ನ್ಯಾಷನಲ್ ಆಗುತ್ತ ನಡೆದಿದೆ. ನನ್ನ ಕೆಲ ಗೆಳತಿಯರು ಮಿಡ್ಲ್ ಈಸ್ಟ್ ಮತ್ತು ಪಶ್ಚಿಮ ದೇಶಗಳಿಗೆ ಹೋಗಿ ಬರುತ್ತಾರೆ. ನನ್ನ ತಾಯಿ, ತಂದೆ ಮತ್ತು ಸೋದರರಿಗೆ ನನ್ನ ಬಗ್ಗೆ ಎಲ್ಲ ಗೊತ್ತಿದೆ. ಅವರೆಲ್ಲ ದಿಲ್ಲಿಯಲ್ಲಿದ್ದಾರೆ....."

"ಆ ಭಯಂಕರ ಮನುಷ್ಯ.....ನಿನ್ನೊಂದಿಗೆ ಬಂದವನು....ಅವನಾರು...?" ಬ್ರಿಗೇಡಿಯರ್ ವಿಚಾರಿಸಿದ.

"ಅವನು ನನ್ನ ಪಬ್ಲಿಕ್ ರಿಲೇಷನ್ಸ್ ಆಫೀಸರ್....."

ಬ್ರಿಗೇಡಿಯರ್ ಮಿದು ಮಾತಿನಲ್ಲಿ ಹೇಳಿದ–

''ಮೈ ಡಿಯರ್....ನಿನಗೆ ಹೆದರಿಕೆಯಾಗುವುದಿಲ್ಲವೆ.....? ಎಂದಾದರೂ ನೀನು ಹುಚ್ಚ, ಮೂರ್ಖ, ಅರ್ಧಮರ್ಧ ಮಜನು..... ಇಂಥವರ ಸಂಗದಲ್ಲಿ ಸಿಕ್ಕರೆ......?''

''ಈ ಮನುಷ್ಯನೂ Sadist ಇದ್ದಾನೆ. ಆದರೆ ಅವನನ್ನು ಹೇಗೆ ಹ್ಯಾಂಡಲ್ ಮಾಡಬೇಕೆನ್ನುವುದು ನನಗೆ ಗೊತ್ತಿದೆ. ಅದೂ ಅಲ್ಲದೆ Occupational hazards. ಇವೆಲ್ಲ ನಾವು ಧಂದೆಯಲ್ಲಿರುವವರು ಎದುರಿಸಲೇಬೇಕಾಗುತ್ತದೆ. ನನ್ನ ಓರ್ವ ಗೆಳತಿ, ಸ್ಕೂಲಿನಲ್ಲಿ ನನ್ನೊಂದಿಗೆ ಓದುತ್ತಿದ್ದಳು. ನರ್ಸ ಆಗಿ ವೆಸ್ಟ್‌ಜರ್ಮನಿಗೆ ಹೋದಳು. ನರ್ಸಿಂಗ್ ಬಿಟ್ಟು ಹೆಂಬರ್ಗ ಏರವೇಜ ಪ್ಯಾಲೇಸ್‌ದಲ್ಲಿ ಸೇರಿದಳು. ಕೇವಲ ಕೆಲವೇ ದಿನಗಳಲ್ಲಿ ಆಕೆ ಲಕ್ಷಾಧೀಶಳಾದಳು. ವೈಭವದಿಂದ ಕೂಡಿದ ಬಂಗ್ಲೆ ಸ್ವೀಮಿಂಗ್ ಪೂಲ....ಬೆಲೆ ಬಾಳುವ ಕಾರು, ನನಗೂ ಅವಕಾಶ ಸಿಕ್ಕರೆ ಹೊರಗೆ ಹೋಗಿ ಇದೇ ಕೆಲಸವನ್ನೇ ಮಾಡುತ್ತೇನೆ.....''

''ಯಾವ ಕೆಲಸ ಮೈ ಡಿಯರ್....?'' ಮಿಸೆಸ್ ಫ್ರಿಮೆಂಟಲ್ ಹೊರಗಿನಿಂದ ಒಳಗೆ ಬರುತ್ತ ವಿಚಾರಿಸಿದಳು.

''ಇದೇ....ಸೋಶಲ್‌ವರ್ಕ್, ಸಮಾಜ ಸೇವೇ, ಮಿಸೆಸ್ ಫ್ರಿಮೆಂಟಲ್....'' ತರುಣಿ ತುಂಬ ಶಾಂತಿಯಿಂದ ಉತ್ತರಿಸಿದಳು.

''ಬಿಚ್....'' ಬ್ರಿಗೇಡಿಯರ್, ಮನಸ್ಸಿನಲ್ಲಿಯೇ ಅಂದ...ಕೆಲ ಹೊತ್ತಿನ ನಂತರ ಆಕೆ ಲಂಚ್‌ಗಾಗಿ ಹೊರಟು ಹೋದಳು. ಅಪರಾಹ್ನ ಹೊರಗೆ ಬಂದಳು. ಒಂದು ಗಾಯಗೊಂಡ ಪಕ್ಷಿ ರೆಕ್ಕೆ ಬಡಿಯುತ್ತ...ಬಡಿಯುತ್ತ...ಪಡಸಾಲೆಯಲ್ಲಿ ಹಾರಾಡು ತ್ತಿತ್ತು...ಒಂದು ಗೋಡೆಗೆ ತಾಗಿ ನೆಲಕ್ಕೆ ಬಿತ್ತು. ತರುಣಿ ಕೂಡಲೇ ಅದನ್ನು ಎತ್ತಿ ಮುದ್ದಾಡಿದಳು. ತುಂಬ ದುಃಖ, ನೋವು ಅನುಭವಿಸುತ್ತ ಅದರ ಮೈ ಮೇಲೆ ಕೈಯಾಡಿಸಿದಳು. ಆಕೆಗೆ ಏನೋ ಹೊಳೆಯಿತು. ಪಕ್ಷಿಯನ್ನು ಸೀರೆಯ ಸೆರಗಿನಲ್ಲಿ ಮುಚ್ಚಿಕೊಂಡು ಕೇಂಬ್ರಿಡ್ಜ್‌ದಿಂದ ಬಂದಿದ್ದ ವಿದ್ಯಾರ್ಥಿಗಳ ಡೇರೆಯತ್ತ ನಡೆದಳು....

ಒಂದು ಅಗ್ಗಿಷ್ಟಿಕೆಯ ಸುತ್ತ ಆ ಐವರೂ ಕುಳಿತಿದ್ದರು. ಮೂವರು ಹುಡುಗರು, ಇಬ್ಬರು ಹುಡುಗಿಯರು ತುಂಬ ಆರೋಗ್ಯವಂತರಾಗಿದ್ದರು, ಎತ್ತರದ....ಗಟ್ಟಿ ಮುಟ್ಟಾದ....ಸುವರ್ಣ ವರ್ಣದ ಕೂದಲಿನ ಗಡ್ಡದ....ತರುಣರು....ಯುರೋಪದ ಉತ್ತರ ಭಾಗದ ಜಂಗಲ್‌ಗಳ ಸೂರ್ಯದೇವತೆಯ ಮಕ್ಕಳು....ಮತ್ತು ಹುಡುಗಿ ಯರು ಕೆಂಪಗಿನ, ಬಂಗಾರದಗೂದಲಿನ, ಅತ್ಯಂತ ತಾಜಾ ಬನದೇವತೆ ಗಳು....ಏನೆಂಥ ಭವ್ಯ ಜನರೀ ಯುರೋಪಿಯನ್‌ರು.... ನಾವಿದ್ದೇವೆ... ನಿರ್ಬಲ, ದುರ್ಬಲ, ಕಪ್ಪಗಿನ, ಇಲ್ಲಾಣದ ಹಾಗೆ....ಕುಳ್ಳಗಿನ, ಒಣಗಿದ.... ಕುರೂಪಿಗಳು.... ಮಿಡಿಚಿಗಳ ಹಾಗೆ.... ಅವಳು ಹೀಗೆಲ್ಲ ಯೋಚಿಸಿದಳು...ಒಂದೇ ಸವನೇ ಅವರನ್ನು ದಿಟ್ಟಿಸಿ ನೋಡುತ್ತಲಿದ್ದಳು....ಮತ್ತೆ ಕೊಂಚ ಸಂಕೋಚದಿಂದಲೇ ಮುಂದೆ ಹೋದಳು....ಆ ಐವರೂ ಏನೋ ವಿಚಾರ ವಿನಿಮಯದಲ್ಲಿ ಮಗ್ನ ರಾಗಿದ್ದರು. ಅವರ ಅಧ್ಯಯನದ ಪುಸ್ತಕಗಳು ಅವರ ಹತ್ತಿರವೇ ಬಿದ್ದಿದ್ದವು...

"ಗುಡ್ ಮಾರ್ನಿಂಗ್....." ಎಂದ ಅವಳು.....ಮತ್ತೆ ನುಡಿದಳು– "ಎಕ್ಸ್‌ಕ್ಯೂಜಮಿ...."

"ಹಲೊ....ಗುಡ್ ಮಾರ್ನಿಂಗ್....." ಓರ್ವ ಸೂರ್ಯನ ಮಗ ಎದ್ದು ಅವಳತ್ತ ಬಂದ.

ಅವಳು ಗಾಯಗೊಂಡ ಪಕ್ಷಿಯನ್ನು ಅವನಿಗೆ ಕೊಡುತ್ತ "ನೀವೆಲ್ಲ ಅರಣ್ಯ, ಸಸ್ಯಗಳ ಅಧ್ಯಯನಕ್ಕೆ ಬಂದಿರುವುದು ನನಗೆ ತಿಳಿದದ್ದರಿಂದ ಇದರ ಬಗ್ಗೆಯೂ ನೀವು ಆಸಕ್ತಿ ವಹಿಸಬಹುದೆಂದು ತಂದೆ....."ಎಂದಳು.

"ಓ ! ಹೌ....ವೆರಿ ನೈಸ್ ಆಫ್ ಯು....ಥ್ಯಾಂಕ್ಸ್....." ತರುಣ ಪಕ್ಷಿಯನ್ನು ತುಂಬ ಕಾಳಜಿಯಿಂದ ತನ್ನ ಕೈಯಲ್ಲಿ ತೆಗೆದುಕೊಂಡ ಮತ್ತು ತನ್ನ ಸಂಗಡಿಗರ ಕಡೆಗೆ ಓಡಿದ. ಅವರೆಲ್ಲ ಪಕ್ಷಿಯ ಶುಶ್ರೂಷೆಯಲ್ಲಿ ತಲ್ಲೀನರಾದರು.

ಆಕೆ ಕೆಲಕ್ಷಣ, ಅವರು ತನ್ನೊಂದಿಗೆ ಮಾತಾಡಬಹುದೆಂಬ ಆಸೆಯಿಂದ ನಿಂತಳು. ಆದರೆ ಅವರಾರೂ ಆಕೆಯತ್ತ ನೋಡಲಿಲ್ಲ ಕೂಡ. ಆಗ ನಿರಾಶಳಾಗಿ ಮರಳಿ ದಳು....

ಸಂಜೆಯ ಹೊತ್ತಿನಲ್ಲಿ ಆಕೆ ಹೊರಗಡೆ ನಿಂತಿದ್ದಳು, ಆಗಲೇ ಆ ಇಂಗ್ಲಂಡ ಹುಡುಗ ಬಾರ್ ಕಡೆ ಹೋಗುವುದನ್ನು ಕಂಡಳು...ಅವಳು ಆ ಕೂಡಲೇ ಒಳಗೆ ಹೋದಳು ಹಾಗೂ ಬಾರ್ ರೂಮಿನ ಸೋಫಾದಲ್ಲಿ ಕುಳಿತಳು. ಹುಡುಗ, ಬೀರಬಾಟ್ಲಿ ಖರೀದಿಸಿ ಬಾಗಿಲದ ಕಡೆ ಹೊರಟ....ಹುಡುಗಿ ಕೈಯೆತ್ತಿ "ಹಲೊಃ" ಎಂದಳು.... ಅವನು ತಿರುಗಿ ನೋಡಿ ಮುಗುಳ್ನಕ್ಕ....ಹಾಗೂ ಅವಳ ಹತ್ತಿರ ಬಂದು–"ಗುಡ್ ಯಿವ್ಹಿನಿಂಗ್....ಮೇಮ.....ಮಿಸೆಸ್....."

"ಮಿಸೆಸ್ ಏಲ್....."

"ಹೌ ಆರ್ ಯು ಮಿಸೆಸ್ ಏಲ್.....?"

"ನನ್ನ ಹೆಸರು ರಮ್....."

"ಚೇಷ್ಟೆ ಮಾಡುತ್ತಿಲ್ಲ ತಾನೇ ನೀವು.....? ರಮ್ ಮತ್ತು ಏಲ್ !...."

"ಎಳ್ಳಷ್ಟೂ ಇಲ್ಲ....ನಾನು ನನ್ನ ಗಂಡನಿಗೆ Ale ಎಂದು ಕರೆಯುತ್ತೇನೆ. ಆತ ಅದೇ ಹೆಸರಿನಿಂದ ಪ್ರಸಿದ್ಧನಾದ. ನನ್ನ ನಿಜವಾದ ಹೆಸರು ರಂಭಾ....ನಮ್ಮ ಹಿಂದೂ ಮೈಥಾಲಾಜಿಯಲ್ಲಿ ಸ್ವರ್ಗಲೋಕದ ಓರ್ವ ಅಪ್ಸರೆಯಾಗಿದ್ದಳು...ರಂಭಾ....."

"ಓ ! ಏನೆಂಥ ಅದ್ಭುತ, ರೋಮಾಂಚನಕಾರಿ...." ಎನ್ನುತ್ತ ಹುಡುಗ ತನ್ನ ಬಗ್ಗೆ ಹೇಳಿದ–"ನನ್ನ ಹೆಸರು ಕೇವಲ ಬರ್ನಾರ್ಡಕ್ರಿಗ್....."

"ಕೂತುಕೊ....ಕಾಫಿ ಕುಡಿ...ಬೀರಾ...." ತರುಣಿ ಕೂಗಿದಳು....ಅವಳು ಒಮ್ಮೆಲೇ ತುಂಬ ಸಂತಸದಲ್ಲಿದ್ದಳು, ಆಶಾವಾದಿಯಾಗಿದ್ದಳು.

"ನಿಮ್ಮ ಪಕ್ಷಿ ಹೇಗಿದೆ ಈಗ...?"

"ಶುಶ್ರೂಷೆಯ ನಂತರ ಅದು ಚಲೋ ಆಯಿತು. ಅದು ತನ್ನ ಜಂಗಲ್‌ಗೆ ಮರಳಿ ಹೊರಟು ಹೋಯಿತು." ಎಂದು ಇಂಗ್ಲಂಡದ ಹುಡುಗ ಉತ್ತರಿಸಿದ.... ಹಾಗೂ ಕುಳಿತು ಸಂಪ್ರದಾಯದಂತೆ ಅವಳೊಂದಿಗೆ ಮಾತಾನಾಡ ತೊಡಗಿದ.....

''ನಾನೂ ಯೋಚಿಸುತ್ತಿದ್ದೇನೆ.....ನಮ್ಮ ನಮ್ಮ ಜಂಗಲ್‌ಗೆ ಮರಳ ಬೇಕೆಂದು....ನಮ್ಮ ಜಗತ್ತಿಗೆ.....ಇಲ್ಲಿ ಸಮಯ ಕಳೆಯುವುದು ತುಂಬ ಕಷ್ಟ....ಇಲ್ಲಿ ಕಾಲ ನಿಂತು ಹೋಗಿದೆ....ಆದರೆ ಕ್ಯಾಪ್ಟನ್ ಇನ್ನೂ ಕೆಲ ಸಮಯ, ಕೆಲದಿನ ಇದ್ದು ಹೋಗೋಣವೆಂದು ಹೇಳುತ್ತಾರೆ....ಬೆಟ್ಟಗಳ ಕೆಳಗೆ ರಾಮಗಂಗಾ ಉಗಮದ ಸ್ಥಾನದಲ್ಲಿ....''

''ನಾವು ಕೂಡ ಆ ಸ್ಥಳ ನೋಡಲು ಹೋಗಿದ್ದೆವು....'' ಎಂದು ಸೂರ್ಯದೇವತಾ ಹೇಳಿದ. ಬಂಗಾರ ವರ್ಣದ ಕೂದಲು, ಗಡ್ಡ...ಬಾರ್ ರೂಮಿನ ಅರೆಕತ್ತಲಲ್ಲಿ ಸೂರ್ಯನ ಹಾಗೆ ಹೊಳೆಯುತ್ತಿದ್ದ, ಬೆಳಗುತ್ತಿದ್ದ....ಅವಳು ಅವನನ್ನು ತದೇಕಚಿತ್ತಳಾಗಿ ನೋಡುತ್ತಿದ್ದಳು.....ಅವನು ಹೇಳುತ್ತಿದ್ದ....ಇವಳು ಕೇಳುತ್ತಿದ್ದಳು.... ''ನನಗೆ ಹಿಂದೂಸ್ತಾನ ತುಂಬ ಹಿಡಿಸಿದೆ... ಎಷ್ಟರ ಮಟ್ಟಿಗೆಂದರೆ....ಹಿಂದೂಸ್ತಾನಿ ಹುಡುಗಿಯರೊಂದಿಗೆ ಮದುವೆಯಾಗಿ ಬಿಡಲೇ ಎನ್ನುವಷ್ಟು....ಇಂಗ್ಲಂಡದಲ್ಲಿರುವ ನನ್ನ ಕೆಲವು ಮಿತ್ರರು, ಹಿಂದೂಸ್ತಾನಿ ಹುಡುಗಿಯರನ್ನು ಮದುವೆಯಾಗಿ ತುಂಬ ಸಂತೋಷವಾಗಿದ್ದಾರೆ....ನೀವು ತುಂಬ ಪ್ರಾಮಾಣಿಕರು, ಸೇವಾಸಕ್ತರು, ಪತಿವ್ರತೆ ಯರು–ಎಂದು ಅವರು ಹೇಳುತ್ತಾರೆ.....ನಮ್ಮ ಹುಡುಗಿಯರಿಗಿಂತ ತುಂಬ ಭಿನ್ನರು ನೀವು....''

ಹುಡುಗಿಯ ಮುಖ ಕೆಂಪಗಾಯಿತು....ತುಂಬ ಸಂತೋಷದಲ್ಲಿದ್ದಳು...

ಬೇರಾ ಕಾಫಿಯ ಟ್ರೇ ತಂದಿಟ್ಟ. ಆಕೆ ಕಾಫಿ ಮಾಡಲಾರಂಭಿಸಿದಳು. ಮತ್ತೆ ಆಕೆ ಕೇಳಿದಳು–''ನೀವು ಇಲ್ಲಿ ಸಿಂಹ ನೋಡಿದಿರೇನು.....?''

''ಇಲ್ಲ...ಮೊನ್ನೆ ಗಾರಬಾಂಧಾಕ್ಕೆ ಹೋಗಿದ್ದೆವು....ನಾವಲ್ಲಿ ಬಹಳ ಹೊತ್ತು ಮೆಂಚಿಯ ಮೇಲೆ ಕುಳಿತಿದ್ದೆವು....ಆದರೆ ಸಿಂಹ ಬರಲೇ ಇಲ್ಲ....ನಾಳೆ, ನಾಡದ್ದು ನಾವು ದಿಲ್ಲಿಗೆ ಹೋಗುತ್ತೇವೆ...ಅಲ್ಲಿಂದ ಇಂಗ್ಲಂಡಕ್ಕೆ ಹೊರಡುತ್ತೇವೆ....''

ಹುಡುಗಿ, ನಿರಾಶೆಯ ದನಿಯಲ್ಲಿ ಮೆಲ್ಲ ಮೆಲ್ಲಗೆ ಹೇಳ ತೊಡಗಿದಳು–''ನನ್ನ ತಂದೆ ಹಿಜ್ ಹೈನೆಸ್ ಆಫ್ ಕರನಪುರ, ತನ್ನ ಕಾಲದ ಪ್ರಸಿದ್ಧ ಶಿಕಾರಿಯಾಗಿದ್ದ. ಅವರೊಂದಿಗೆ ನಾನು ಬಹಳ ಸಲ, ಬೇಟೆಯಾಡುವ ಸ್ಥಳಗಳಿಗೆ ಹೋಗಿರುವೆ....ನನ್ನ ಅಣ್ಣ ಕೂಡ ಚಾಣಾಕ್ಷ ಬೇಟೆಗಾರನಾಗಿದ್ದಾನೆ....''

ಇಂಗ್ಲೀಷ ಹುಡುಗ ತುಂಬ ಆಸಕ್ತಿಯಿಂದ ಆಕೆಯ ಮಾತುಗಳನ್ನು ಕೇಳುತ್ತಿದ್ದ. ಅವಳು ಹೇಳುತ್ತಲಿದ್ದಳು....ಸಂಸ್ಥಾನಗಳ ನಿರ್ಮೂಲನೆಯಾದಾಗ ನಾನು ಚಿಕ್ಕವಳಿದ್ದೆ.... ನಮ್ಮ ವೈಭವದ ಬದುಕಿನಲ್ಲಿ ಬಹಳಷ್ಟು ಏರುಪೇರುಗಳು ಬಂದವು.... ನಾನು ದೊಡ್ಡವಳಾದ ನಂತರ, ಏರ್ ಹೋಸ್ಟಸ್ ಆಗಬೇಕಾಗಿ ಬಂತು....ಅವಳು ತನ್ನ ಕೈಯೆತ್ತಿ ಉಂಗುರ ತೋರಿಸಿದಳು....''ಈ ಬ್ಲ್ಯುಬೆಲ್ಜಿಯಂ....ನಮ್ಮ ಅರಮನೆಯ ಬೊಕ್ಕಸದ ಕೊನೆಯ ಗುರುತು....ಈ ಉಂಗುರ...''

''ಫೆಸಿನೇಟಿಂಗ್....ಹಾಗಾದರೆ ನೀವು ಫ್ಲೈಯಿಂಗ್ ಪ್ರಿನ್ಸೆಸ್ ಆಗಿದ್ದಿರಿ....''

"ವಿಮಾನ ಹಾರಾಟದ ಕಾಲದಲ್ಲಿ ತಯಾರೆಯ ಕ್ಯಾಪ್ಟನ್‌ನೊಂದಿಗೆ ಸ್ನೇಹವಾಯಿತು.... ನಾವು ಮದುವೆ ಆದೆವು...ಅವನು ತುಂಬ ಕುಡಿಯುತ್ತಿದ್ದ.... ಅವನನ್ನು ಆ ನೌಕರಿಯಿಂದ ತೆಗೆಯಲಾಯಿತು....ನನಗೀಗ ಅವನನ್ನು ಸಹಿಸುವುದು ಕಷ್ಟವಾಗಿದೆ....ಅವನಿಂದ ಡೈವರ್ಸ್ ಪಡೆಯಬಯಸಿದ್ದೇನೆ...."

ಇಂಗ್ಲೀಷ ಹುಡುಗ ಸುಮ್ಮನಿದ್ದ....

"ಈ ಸ್ಥಳ ತುಂಬ ವಿಶಿಷ್ಟವಾದುದು....ಇಲ್ಲಿಗೆ ಬಂದ ಮನುಷ್ಯ ಸತ್ಯ ಹೇಳಲು ನಿರುಪಾಯನಾಗುತ್ತಾನೆ...ಅದಕ್ಕಾಗಿ ನಾನು ನಿನಗೆ ಇದನ್ನೆಲ್ಲ ಹೇಳುತ್ತಿದ್ದೇನೆ....."

"ನನ್ನ ಗೌರವವನ್ನು ಹೆಚ್ಚಿಸಿದ್ದೀರಿ ಮಿಸೆಸ್ ಎಲ್...." ಎಂದ ನಮ್ರತೆಯಿಂದ ಬರ್ನಾರ್ಡ್ ಕ್ರಿಗ್.

ಓರ್ವ ಮನುಷ್ಯ ದೊಡ್ಡದಾದ ಓವರ ಕೋಟ ತೊಟ್ಟು ಕೋಣೆಯಲ್ಲಿ ಬಂದ. ಬರ್ನಾರ್ಡ್ ಆ ಮನುಷ್ಯನನ್ನು ನೋಡಿ ಹೇಳಿದ-"ಮಿಸೆಸ್ ಎಲ, ಕೆಲ ಮನುಷ್ಯರ ಮುಖಗಳು ಪ್ರಾಣಿಗಳ ಮುಖ ಹೋಲುತ್ತವೆ, ನೀವು ಯಾವಾಗಾದರೂ ಗಮನವಿಟ್ಟು ನೋಡಿದ್ದೀರಾ ? ಈ ಮನುಷ್ಯ ಹಿಮಾಲಯದ ಕರಿಕರಡಿ ಅಲ್ಲ ತಾನೇ ? ನಿನ್ನೆ ನಾವು ಓರ್ವ ಗಿಡ್ಡ ಮನುಷ್ಯನನ್ನು ನೋಡಿದೆವು. ಅವನು ಥೇಟ Sloth bear ಕಂಡ ಹಾಗೇ ಕಾಣಿಸುತ್ತಿದ್ದ."

"ಹಾಗಾದರೆ ನಾನು ಯಾವ ಪ್ರಾಣಿಯನ್ನು ಹೋಲುತ್ತೇನೆ?" ಎಂದು ಹುಡುಗಿ ಮುಗುಳ್ನಗುತ್ತ ವಿಚಾರಿಸಿದಳು.

ಇಂಗ್ಲಂಡದ ತರುಣ ಅವಳನ್ನು ದಿಟ್ಟಿಸಿ ನೋಡುತ್ತ ಹೇಳಿದ-"ಚಿರ್ಚದ ಹಾಗೆ....ಅಥವಾ ಅಡವಿ ಬೆಕ್ಕು..."

"ಧನ್ಯವಾದಗಳು..ಏಕೆಂದರೆ ನನ್ನ ಕಣ್ಣುಗಳು ತುಂಬ ಮಾದಕವಾಗಿವೆ ಅಲ್ಲ..? ಹಾಂ ! ಮನುಷ್ಯರ ಹಾಗೂ ಪ್ರಾಣಿಗಳ ಕಣ್ಣು ಒಂದೇ ತೆರಹವಾಗಿರುತ್ತವೆ. ಮೀನಿನ ಶೀತಲ ಕಣ್ಣು..ಬೆಕ್ಕಿನ ಕಣ್ಣು..ಹೀಗೆಯೇ..."

"ಅಲ್ಲಿ ನೋಡಿ, ಓರ್ವ ಗುಡ್ಡಗಾಡಿನ ಆಡು ಸ್ಟೂಲಿನ ಮೇಲೆ ಹೋಗಿ ಕುಳಿತಿತು..." ಎಂದು ಹುಡುಗ ನಗುತ್ತ ಹೇಳಿದ...

ಅವಳು ಕೂಡ ನಕ್ಕಳು. "ಕೆಲವು ಜನರು ಕಪ್ಪೆಯ ಹಾಗೆ ಕಾಣುತ್ತಾರೆ... ಕೆಲವರು ಆನೆಯ ಹಾಗೆ, ಕೆಲವರು ಗೇಂಡಾ ಮೃಗದ ಹಾಗೆ. ಮಿಡಿಚಿ ಮತ್ತು ಎತ್ತಿನ ಹಾಗೆ, ಸಾರಂಗದ ಹಾಗೆ...ಕೆಲ ಹೆಂಗಸರು ಹಲ್ಲಿಯ ಹಾಗೆ ಕಾಣಿಸುತ್ತಾರೆ...ಅಥವಾ ಮೂರ್ಖ ಗುಬ್ಬಿಯ ಹಾಗೆ...ಹೀಗೆ ನಾನಾ ತರಹ....."

"ಇವೆಲ್ಲವೂ ಒಂದು ಮನೆತನ, ಒಂದು ಕುಟುಂಬ..." ಎಂದ ಬರ್ನಾರ್ಡ್ ಮತ್ತೆ ಹೇಳಿದ- "ನನ್ನೊರ್ವ ಹಿಂದೂ ಗೆಳೆಯ, ಸಮಸ್ತ ಪ್ರಾಣಿಗಳೆಲ್ಲ ಎಂಬತ್ತು ಸಾವಿರ ಯೋನಿಗಳಲ್ಲಿ ಹಾದು ಬರುತ್ತವೆ" ಎಂದು ಹೇಳುತ್ತಾನೆ...

''ಹೌದೇನು...?'' ಹುಡುಗಿ ಅಚ್ಚರಿಯಿಂದ ಕೇಳಿದಳು...

''ತಾವು ಹಿಂದೂ ಅಲ್ಲವೇನು?''

''ಅಲ್ಲ...ನಾನು...ನಾನು ಕ್ರೈಸ್ತಳು...ನನ್ನ ತಾಯಿ ಹರ್ ಹೈನಸ್ ಆಫ್ ಕರನ್‌ಪುರ ಕ್ರೈಸ್ತಳಾಗಿದ್ದಳು...''

''ಓ !.....'' ಬರ್ನಾರ್ಡ್ ಕಣ್ಣು ತುಂಬ ಅವಳನ್ನು ನೋಡಿದ...ಕಾಫಿ ಮುಗಿಸಿ ಅವನು ಎದ್ದು ನಿಂತು ಹೇಳಿದ–''ಕಾಫಿಗಾಗಿ ಧನ್ಯವಾದಗಳು, ಗುಡ್‌ನೈಟ್... ಪ್ರಿನ್ಸೆಸ್...ನಾಳೆ ಮತ್ತೆ ಭೇಟಿ ಆಗೋಣ...''

ಅವನು ಕೊಂಚ ತೀವ್ರಗತಿಯಲ್ಲಿ ಹೊರ ಹೋದ ಹಾಗೂ ಮಬ್ಬುಗತ್ತಲಿನಲ್ಲಿ ಕಾಣದಾದ.

ನಾಲ್ಕನೆಯ ದಿನದ ಬೆಳಗ್ಗೆ ಇಂಗ್ಲಂಡದ ವಿದ್ಯಾರ್ಥಿಗಳು ಒಂದು ಮರದ ಕೆಳಗೆ ಕುಳಿತು ಚರ್ಚೆಯಲ್ಲಿ ಮುಳುಗಿದ್ದರು. ಹುಡುಗಿ ಅಡ್ಡಾಡುತ್ತ ಅವರ ಹತ್ತಿರ ಬಂದಳು. ಅವರು ಆಕೆಯನ್ನು ನೋಡಲಿಲ್ಲ... (''ನಾನು ಯಾವುದಾದರೂ ಹಿಂದೂಸ್ತಾನಿ ಹುಡುಗಿಯೊಂದಿಗೆ ಮದುವೆಯಾಗಬಯಸುತ್ತೇನೆ...ನಾನು ಹಿಂದೂಸ್ತಾನಿ ಹುಡುಗಿಯೊಂದಿಗೆ.....'') ಆಕೆ ಅಲ್ಲಿಂದ ವೇಗವಾಗಿ ನಡೆಯುತ್ತ ಒಂದು ಡೇರೆಯ ಹತ್ತಿರ ಹೋದಳು. ಅಲ್ಲಿ ಓರ್ವ ಹಿರಿಯ ಮುಲ್ಲಾ ಕುಳಿತಿದ್ದ....

''ಅಸ್ಸಲಾಮು ಆಲೇಕುಮ್....'' ಎಂದಳು ಅವನ ಸಮೀಪ ಹೋಗಿ.

''ವಾಲೇಕುಮ್ ಸಲಾಮ್....'' ಎಂದ ಅವನು, ಅವಳನ್ನು ದಿಟ್ಟಿಸಿ ನೋಡಿದ.

ಆಕ ಮೆಲ್ಲಗೆ ಬೇಡಿಕೊಳ್ಳುವ ರೀತಿಯಲ್ಲಿ ಹೇಳಿದಳು–''ಹುಜೂರ...ನನಗಾಗಿ ಅಲ್ಲಾನಲ್ಲಿ ಪ್ರಾರ್ಥನೆ ಮಾಡಿ, ನನ್ನ ಯೋಗಕ್ಷೇಮಕ್ಕಾಗಿ ಪ್ರಾರ್ಥಿಸಿ.... ಬೇಡಿಕೊಳ್ಳಿ...ನನ್ನ ಜೀವನ ಸುಖಮಯವಾಗಲಿ...ಮಹಾತ್ಮರಲ್ಲಿ ಪ್ರಾರ್ಥನೆ ಸಲ್ಲಿಸಿ....ಏನಾದರೂ ಮಾಡಿ....ಜಲ್ದಿ....ಜಲ್ದಿ....ಇದನ್ನು ತಗೊಳ್ಳಿ.....'' ಎಂದು ಅವಳು ಪರ್ಸ್ ತೆಗೆದು ಎರಡು ನೂರು ರೂಪಾಯಿಯ ನೋಟುಗಳನ್ನು ಅವನ ಎದುರಿನಲ್ಲಿರಿಸಿ, ಕೂಡಲೇ ಮರಳಿ ಹೊರಟಳು. ಈ ಹಿರಿಯ ಮುಲ್ಲಾ ಅಚ್ಚರಿಯಿಂದ ಅವಳು ಹೋದತ್ತ ನೋಡುತ್ತಲೇ ಇದ್ದ....

ಸಂಜೆ ಹೊತ್ತಿಗೆ ಆ ಗಿಡ್ಡ ವ್ಯಕ್ತಿ ಮರಳಿ ಬಂದಿದ್ದ. ಹಾಲ್‌ನಲ್ಲಿ ನಿಂತು ಜೇಪಸ್ಸೇಷನ್ ವೇಗನ್‌ದಲ್ಲಿ ಮೀನಿನ ಬೇಟೆಯ ಸಾಮಾನು ಇರಿಸುತ್ತಿದ್ದ. ಅವನು ಓರ್ವ ಬೇರಾಗೆ ಆರ್ಡರ್ ಮಾಡಿದ– ''ಮೇಮ್‌ಸಾಬಳಿಗೆ ಹೇಳು....ಜಲ್ದಿ ಬರಲು...''

ಬೇರಾ ಮೇಲೆ ಹೋಗಿ, ಕೋಣೆಯ ಕದ ಬಡಿದ. ಹುಡುಗಿ ಬೂದಿ ಬಣ್ಣದ ಟ್ರೌಜರ್ ಸೂಟ್ ತೊಟ್ಟಿದ್ದಳು. ಕನ್ನಡಿಯ ಎದುರಿಗೆ ನಿಂತು ಮೇಕಪ್ ಮಾಡಿಕೊಳ್ಳುತ್ತಿದ್ದಳು...ಬಾಗಿಲು ತೆರೆದು ಆಕೆ ಹೇಳಿದಳು–''ಈಗ ಬಂದೆಯೆಂದು

ಸಾಹೇಬರಿಗೆ ಹೇಳು.....''. ಆಕೆ ಹಿಂದಿನ ಸ್ಟೇರ್‌ಕೇಸಿನಿಂದ ಇಳಿದು ಕೇಂಬ್ರಿಡ್ಜ್ ವಿದ್ಯಾರ್ಥಿಗಳ ಕ್ಯಾಂಪಿನತ್ತ ಓಡಿದಳು...

ಬರ್ನಾರ್ಡ್ ಅರಳಿ ಮರದ ಬುಡದಲ್ಲಿದ್ದ ಕಲ್ಲು ಬಂಡೆಯ ಮೇಲೆ ಕುಳಿತು ಪೈಪ್ ಸೇದುತ್ತಿದ್ದ...ಆಕೆಯನ್ನು ಕಂಡು ಅಚ್ಚರಿಯಿಂದ–''ಗುಡ್ ಇವನಿಂಗ್ ಮಿಸೆಸ್ ಏಲ್.....'' ಎಂದ.

''ರಮ್....'' ಎಂದಳು ಹುಡುಗಿ ಮುಗುಳ್ನಗುತ್ತ.....

ಅವನು ಸುಮ್ಮನಿದ್ದ. ಅವನು ಓರ್ವ ಗೃಹಿಣಿಯ ಸಂಗ ಬೆಳೆಸಿ ಯಾವುದೇ ತೊಂದರೆಯಲ್ಲಿ ಸಿಕ್ಕಿ ಕೊಳ್ಳಲು ಬಯಸುತ್ತಿರಲಿಲ್ಲ.

''ನಾನು ಮಿಸೆಸ್ ಏಲ್ ಅಲ್ಲ.....''ಹುಡುಗಿ ಅತ್ಯಂತ ಶಾಂತಳಾಗಿ ಹೇಳಿದಳು. ಮತ್ತೆ''ನನಗೆ ನಿನ್ನ ದಿಲ್ಲಿಯ ವಿಳಾಸ ಕೊಟ್ಟು ಹೋಗು. ನಾನೀ ಮೋಸದ ಬದುಕಿನಿಂದ ಹೊರಬರಬೇಕೆನ್ನುತ್ತೇನೆ...ನಾನು ಇಂಗ್ಲಂಡಕ್ಕೆ ಬರಲು ಇಚ್ಛಿಸುತ್ತೇನೆ.... ಏನು, ನೀನು ನನಗೆ ಸಹಾಯ ಮಾಡಬಲ್ಲೆಯಾ?'' ಎಂದು ಕೇಳಿದಳು.

''ತುಂಬ ಆಶ್ಚರ್ಯ....ನನಗೆ ಸಿಕ್ಕ ಹಿಂದೂಸ್ತಾನಿ ಹುಡುಗಿಯರೆಲ್ಲ ಇದೇ ಬೇಡಿಕೆಯನ್ನು ನನ್ನ ಮುಂದಿಡುತ್ತಾರೆ...'' ಎಂದು ಬರ್ನಾರ್ಡ್ ಖೇದದಿಂದ ಉತ್ತರಿಸಿದ.

''ನಿನಗೆ ನನ್ನ ಎಲ್ಲ ವಿಷಯ ಹೇಳುತ್ತೇನೆ.... ಎಲ್ಲ ವಿಷಯ.... ನಿನ್ನ ದಿಲ್ಲಿಯ ವಿಳಾಸ ಕೊಡು...''

''ನಾವಿನ್ನೂ ಎಲ್ಲಿಳಿದು ಕೊಳ್ಳುವುದೆಂದು ನಿಶ್ಚಯ ಮಾಡಿಲ್ಲ.'' ಎಂದ ಹುಡುಗ.

ಜೀಪ ಸಮೀಪ ಬಂದು ನಿಂತಿತು. ಗಿಡ್ಡ ಮನುಷ್ಯ ಗಾಡಿಯ ಬಾಗಿಲು ತೆರೆದ ಹಾಗೂ ಹೇಳಿದ–''ನಡೆ....''

ಅವಳು ಹೆದರಿ ಬರ್ನಾರ್ಡ್‌ನನ್ನೊಮ್ಮೆ ನೋಡಿದಳು ಹಾಗೂ ಜೀಪಿನಲ್ಲಿ ಕುಳಿತಳು. ಗೇಟಿನ ಹತ್ತಿರ ಬಂದು ಜೀಪ ಉಸುಗಿನಲ್ಲಿ ಸಿಕ್ಕಿಕೊಂಡಿತು. ಬ್ರಿಗೇಡಿಯರ್ ಫ್ರಿಮೆಂಟಲ್ ವಾಕಿಂಗ್ ಹೋಗಿ ಬರುತ್ತಿದ್ದ. ಅವನು ಅಲ್ಲಿದ್ದ ಕೆಲ ಜನರನ್ನು ಕರೆದ. ಎಲ್ಲರೂ ಸೇರಿ ಗಾಡಿ ನುಗಿಸಿದರು. ಅದು ಗೇಟಿನಿಂದ ಹೊರಗೆ ಹೋಯಿತು. ಹುಡುಗಿ ಹೊರಳಿ ನೋಡಿದಳು. ಬ್ರಿಗೇಡಿಯರ್ ಕರವಸ್ತ್ರದಿಂದ ಕೈ ಮತ್ತು ಮುಖ ಒರಸಿಕೊಳ್ಳುತ್ತ– ''ಗುಡ್ ಬೈ.....'' ಹೇಳಲು ಕೈ ಎತ್ತಿದ...ದೂರದಲ್ಲಿದ್ದ ಕೇಂಬ್ರಿಡ್ಜ್ ವಿದ್ಯಾರ್ಥಿಗಳ ಡೇರೆಯಲ್ಲಿ ದೀಪ ಬೆಳಗುತ್ತಿತ್ತು...

ಕಾಡಿನ ದಾರಿಯಲ್ಲಿ ಗಾಢವಾದ ಕತ್ತಲೆ...ಆಕೆ ಹೆದರಿಕೊಂಡು, ಆ ಕುಳ್ಳನನ್ನು ತಬ್ಬಿಕೊಂಡು ಹೇಳಿದಳು–''ತುಂಬ ಭಯಾನಕ ಸ್ಥಳವಾಗಿದೆ ಇದು...ನಡೆ...ಮರಳಿ ಹೋಗೋಣ....''

''ನಾಳೆ ನಿನ್ನ ಆ ಅಣ್ಣ ಬರಲಿದ್ದಾನೆ. ಅವನನ್ನು ಇದಕ್ಕಾಗಿಯೇ ಕರೆಸಿದ್ದಿಯಾ? ನೀನು ಹೇಗೆ ಹೋಗುತ್ತಿ...ನೋಡುತ್ತೇನೆ.....''

ಅವಳು ಮನಸ್ಸಿನಲ್ಲಿಯೇ ಅಂದು ಕೊಂಡಳು.... ನಾನು ಅವನ ಜೊತೆಗೂ ಹೋಗುವುದಿಲ್ಲ... ಈ ಸಮಯದಲ್ಲಿ ಮೌಲ್ವಿ ನನಗಾಗಿ ಪ್ರಾರ್ಥನೆ ಸಲ್ಲಿಸುತ್ತಿರ ಬಹುದು.... ಮಿಸ್ಟರ್ ಬರನಾರ್ಡ್ ಕ್ರಿಗ್....ನಾನು ಅತ್ಯಂತ ಪ್ರಾಮಾಣಿಕ, ಸೇವಾ ಮನೋಭಾವದ ಹಿಂದೂಸ್ತಾನಿ ಪತ್ನಿ....ಇಲ್ಲವೇ ಜರ್ಮನಿಯ ಏರ್‌ವೇಜ ಪ್ಯಾಲೇಸ್....ಕಿವಿಯಲ್ಲಿ ತೂತಿದ್ದ ಮನುಷ್ಯನ ದನಿ.... ಅವನು ಬಂದೂಕು ಹಿಡಿದು ಮೆಂಚಿಯ ಮೇಲೆ ಕುಳಿತಿದ್ದ. ಅವಳು ಕೆಳಗೆ ಆಹಾರದ ಹಾಗೆ ಬಂದಿ ಯಾಗಿದ್ದಳು....ಮತ್ತೆ ಆ ಸುಂದರ ಮುಖದ ಮೌಲ್ವಿಯ ಚಹರೆ....ಆ ಚಹರೆಯ ಕಲ್ಪನೆಯಲ್ಲಿ....ತನ್ನನ್ನು ತಾನು ಸುರಕ್ಷಿತೆಯೆಂದು ಭಾವಿಸತೊಡಗಿದಳು. ಅವಳು ಹೇಳಿದಳು–''ಆ ಹಾಡನ್ನಾದರೂ ಹೇಳು....ದಿಲ್ ಜಂಗಲ್ ಹೀ ಮೇ.....''

ಯಾರೋ ರಿಕಾರ್ಡ್ ಮೇಲೆ ಪಿನ್ ಇರಿಸಿರಬೇಕು.... ಅನ್ನುವ ಹಾಗೆ ಆ ಮನುಷ್ಯ ಕೂಡಲೇ ಆಲಾಪ ಆರಂಭಿಸಿದ ''ದಿಲ್ ಜಂಗಲ್ ಹೀ ಮೇ.....ಬಹಲ್ತಾ ಹೈ..... ಯಹಾ ಪ್ರೇಮಕಾ ಸಾಗರ ಚಲ್ತಾ ಹೈ.... ಪರದೇಸಿ ಪೀರತ್ ಕ್ಯಾ ಜಾನೇ.... ಹಮ್ ಐಸಾ ಗೀತ ಕಹಾ ಜಾನೆ....ಖುಲ್ ಜಾಯ್....ಜಿಸ್‌ಸೆ ದಿಲ್ ಕಿ ಕಲಿ.... ಯಹಾ ದಿಲ್ ಕಿ ಕಲಿ ತೊ ಕಭೀ ನಾ....'' ಎನ್ನುತ್ತ ಆ ಮನುಷ್ಯ ದಂಡೆಯ ಮೇಲೆ ಗಾಡಿ ನಿಲ್ಲಿಸಿದ. ಅವಳು ಉಸುಗಿನ ಮೇಲೆ ಜಿಗಿದಳು. ಫಿಷಿಂಗ್ ಸಾಮಾನು ಇಳಿಸುವಲ್ಲಿ ಅವನಿಗೆ ಸಹಾಯ ಮಾಡಿದಳು.

ರಾಮಗಂಗಾ, ಕರಗಿದ ಬೆಳುದಿಂಗಳ ಹಾಗೆ ಹೊಳೆ ಹೊಳೆಯುತ್ತಿತ್ತು. ಆತ ಹಿಪ್ ಪಾಕೆಟ್‌ದಲ್ಲಿದ್ದ ಬಾಟ್ಲಿ ತೆಗೆದ ಹಾಗೂ ಒಂದು ಗುಟುಕು ಕುಡಿದ.....

''ಇಲ್ಲಿ ಇನ್ನೂ ಛಳಿಯಿದೆ....'' ಎಂದಳು ಹುಡುಗಿ.

''ಡಿಸೆಂಬರದ ರಾತ್ರಿ ಅದೂ ನದಿ ತೀರದಲ್ಲಿ ಬಿಸಿ ಇರಲು ಹೇಗೆ ಸಾಧ್ಯ....?'' ಎನ್ನುತ್ತ ಆತ ಮತ್ತೆ ಹೇಳಿದ–''ಉಸುಗಿನಲ್ಲಿ ಓಡು.....ಛಳಿ ಓಡಿ ಹೋಗುತ್ತದೆ...'' ಅವಳು ಉಸುಗಿನ ಮೇಲೆ ಓಡತೊಡಗಿದಳು. ಅವನು ಅವಳ ಹಿಂದೆ ಹಿಂದೆ.... ಮತ್ತೆ ತೇಕತೊಡಗಿದ.... ಒಮ್ಮೆಲೇ ಹುಡುಗಿ ನಿಂತು ಹೇಳಿದಳು....''ಏನೆಂಥ ಸುಂದರ ವಾಗಿದೆ ಈ ಸ್ಥಳ....'' ಎನ್ನುತ್ತ ಬಗಲಲ್ಲಿದ್ದ ಕಾಫಿಯ ಫ್ಲಾಸ್ಕ್ ತೆಗೆದು ಉಸುಗಿನ ಮೇಲೆ ಕುಳಿತಳು.

ಎದುರಿಗೆ, ನದಿಯ ಆಚೆಯ ದಡದಲ್ಲಿ ಕಲ್ಲು ಬಂಡೆ ಗೋಡೆಯ ಹಾಗೆ ಕಾಣಿಸುತ್ತಿತ್ತು...ಅದರ ಮೇಲೆ ನೀರಿನ ನೆರಳು ಹೊಯ್ದಾಡುತ್ತಲಿತ್ತು...ಇದರಿಂದಾಗಿ ಅದು....ಜಲ ಅಪ್ಸರೆಯರ ಮಹಲಿನ ಹಾಗೆ ತೋರುತ್ತಲಿತ್ತು...

ಆ ಮನುಷ್ಯ ಅವಳ ಸಮೀಪ ಬಂದು ಧಪ್ಪೆಂದು ಕುಳಿತ....ಅವನು ಹಿಪ್ ಫ್ಲಾಸ್ಕ್ ಮತ್ತೆ ಬಾಯಿಗಿರಿಸಿ ಗಟಗಟ....ಕುಡಿದು ಬಡಬಡಿಸತೊಡಗಿದ.... ''ತುಟಿಗಳಿದ್ದರೆ.... ಹೀಗಿರಬೇಕು....ನೀರಿನ ಹಾಗೆ....ನನ್ನ ಹತ್ತಿರ ಕುಳಿತಿರಬೇಕು ಹೀಗೆ.....ಓ ! ಪ್ರಿಯತಮ.....ತಗೋ ನಿನ್ನ ಕೈಯಲಿ ಈ ಜಾಮ್.... ಜಾಮ..... ಏ ಲೂಫ ಆಫ್ ಬ್ರೆಡ್.... ಏ.... ಜಗ್ ಆಫ್ ವಾಯ್ನ್.... ತಗೋ ಪ್ರಿಯೆ ಕುಡಿ.....''

''ಇಲ್ಲ.... ನಾನು ಕಾಫಿ ಕುಡಿಯುತ್ತೇನೆ.....''ಎನ್ನುತ್ತ ಅವಳು ಮನದಲ್ಲಿಯೇ ಅಂದುಕೊಂಡಳು.... ತನಗಾಗಿ ಅಲ್ಲಿ ಮೌಲ್ವಿ ಸಾಬ ಈಗ ಪ್ರಾರ್ಥನೆ ಸಲ್ಲಿಸುತ್ತಿರ ಬಹುದು...ನಾನು ಈ ವಾಯ್ನ್ ಹೇಗೆ ಕುಡಿಯಲು ಸಾಧ್ಯ....?

ಆ ಮನುಷ್ಯ ಗುರ್....ಗುರ್....ಎನ್ನುತ್ತಲಿದ್ದ.....''ನನ್ನ ಜೊತೆಯಲ್ಲಿ ಕುಳಿತಿದ್ದಾಳೆ ಮೋಸಗಾರ್ತಿ ಸನಮ್....ಹರಾಮಿ....ಧಗಾಬಾಜ....ಬದ್ಮಾಷ್ ಸನಮ್.....'' ಎನ್ನುತ್ತ ಬಾಟ್ಲಿ ಖಾಲಿ ಮಾಡಿದ...ಅವನು ವಿಷ ಕುಡಿದ ಇಲಿಯಂತಾ ಗಿದ್ದ..... ಅವನು ಕಣ್ಣು ಮುಚ್ಚಿ, ತಲೆಬಾಗಿ ಕುಳಿತು ಬಿಟ್ಟ....

ಹುಡುಗಿ ಬಡಬಡಿಸಿದಳು–''ಇಂಥ ಛಳಿಯಲ್ಲಿ ಯಾರಾದರೂ ಮೀನ ಹಿಡಿಯಲು ಬರುತ್ತಾರೆಯೇ? ಅದೂ ರಾತ್ರಿಯಲ್ಲಿ?....ಮರಳಿ ಹೋಗೋಣ ನಡೆ....ಇಲ್ಲದಿದ್ದರೆ ನಾನು ನೆಮೋನಿಯಾದಿಂದ ಸತ್ತು ಹೋಗುತ್ತೇನೆ.''

ಅವನಿಗೆ ಏನೊಂದೂ ಕೇಳಿಸಲಿಲ್ಲ. ಅವನು ಸುಂದಾಗಿದ್ದ.

''ನಾನು ಹೋಗಿ ಗಾಡಿಯಲ್ಲಿ ಕುಳಿತು ಕೊಳ್ಳುತ್ತೇನೆ.....''ಎಂದಳು.

ಅವನು ಎಳ್ಳಷ್ಟೂ ಮಿಸುಗಾಡಲಿಲ್ಲ....

''ಓ ! ಕಾಡು ಮನುಷ್ಯ.....''

ಅವನು ತಲೆ ಎತ್ತಲಿಲ್ಲ....

''ಓ ! ವನ್ಯ ಪ್ರಾಣಿ.....''

ಅವನು ಮೊದಲಿನಂತೆಯೇ ಕುಳಿತಿದ್ದ.

''ಓ ! ಜಂತು.....ಕುಳ್ಳ ಮಾಸ್ಟರ್....''

ಅವನು ಸುಮ್ಮನೇ ಇದ್ದ.

''ಮುದಿ ಮಿಡಚಿ.....''

ಅವನು ಒಮ್ಮೆಲೇ ಎದ್ದ. ಹುಡುಗಿಗೆ ಜೋರಾಗಿ ಒದ್ದ. ಅವಳು ನದಿಯಲ್ಲಿ ಬಿದ್ದಳು.

''ಉಳಿಸು.....'' ಎಂದು ಕೂಗಿಕೊಂಡಳು....ನೀರ ಸುಳಿ ಹಾಗೂ ತೆರೆಗಳು ಅವಳನ್ನು ಮುಂದಕ್ಕೆ ತಳ್ಳಿದವು...ಎದುರಿನ ದಡದಲ್ಲಿದ್ದ ಬಂಡೆಗಲ್ಲಿನ ಗೋಡೆಯ ಮೇಲೆ ನೀರಿನ ಪ್ರತಿಬಿಂಬದಲ್ಲಿ ಹೊಯ್ದಾಟ ಜೋರಾಯಿತು...ಒಂದು ಮೊಸಳೆ ಕತ್ತಲೆಯಲ್ಲಿ ನಿದ್ರೆಯಿಂದ ಎಚ್ಚತ್ತಿತ್ತು...ಬಂಡೆಯ ಮೇಲಿಂದ ಸರಿಯುತ್ತ ಸರಿಯುತ್ತ ನೀರಲ್ಲಿಳಿಯಿತು ಹಾಗೂ ಮುಳುಗುತ್ತಿರುವ ಹುಡುಗಿಯತ್ತ ಸಾಗಿತು....ಕೈ ಕಾಲು ಬಡಿಯುತ್ತ ಹುಡುಗಿ ಮೇಲೆದ್ದಳು... ಅವಳು ಮೊಸಳೆ ನೋಡಿದಳು....ಶೀತಲ ಬೆಳುದಿಂಗಳಲ್ಲಿ ಹೊಳೆಯುತ್ತಿರುವ ನೀರು ಅವಳ ಸುತ್ತಲೂ ಹಬ್ಬಿತ್ತು...ಬಾಯ್ದೆರೆದು ಮೊಸಳೆ ತಿನ್ನಲು ಧಾವಿಸುತ್ತಲಿತ್ತು...

ಮೊಸಳೆ ಹುಡುಗಿಯ ಕಾಲುಗಳನ್ನು ತನ್ನ ದವಡೆಯಲ್ಲಿರಿಸಿಕೊಂಡಿತು..... ಹುಡುಗಿ ಒಮ್ಮೆ ಜೋರಾಗಿ ಚೀರಿದಳು...ಆ ನಂತರ ಎಲ್ಲ ಶಾಂತ....ಸುತ್ತಲೂ ಮೌನ ಆವರಿಸಿತು....ಮೊಸಳೆಯ ಬಾಯಲ್ಲಿ ಹೊಕ್ಕ ಕೂಡಲೇ ಅವಳು ಅಂಜಿಯೇ ಸತ್ತು ಹೋಗಿದ್ದಳು....

ಮೊಸಳೆ ಅವಳನ್ನು ಸಂಪೂರ್ಣ ಒಳಗೆ ಹಾಕಿಕೊಂಡು, ಬಂಡೆಗಲ್ಲಿನ ಮೇಲೆ ಬಂದು ಕೊಂಚ ದಣಿವಾರಿಸಿಕೊಂಡಿತು....ಹಿಮಾಲಯದ ಈ ನದಿ ಎಂದಿನಂತೆ ಹಿಮದಿಂದ ಹೊರಟು ಹರಿಯುತ್ತಲಿತ್ತು.... ಈ ಬೆಟ್ಟ.... ಈ ಕಾಡು.... ಈ ದಿನ್ನೆ..... ಎಲ್ಲ ಹಾಗೇ ಇವೆ ಲಕ್ಷ ಲಕ್ಷ ವರ್ಷಗಳಿಂದ...ಮೊಸಳೆ ಹುಡುಗಿಯನ್ನು ಚಪ್ಪರಿಸಿ.... ಚಪ್ಪರಿಸಿ....ತಿನ್ನತೊಡಗಿತ್ತು....ನದಿಯ ತೆರೆಗಳ ಮೇಲೆ ರಕ್ತದ ಕೆಲ ಗುಳ್ಳೆಗಳು ಎದ್ದವು ....ಅವಳ ಕೇಶರಾಶಿ....ಕಟ್ಟಿದ ಜಡಿ....ಮಾಂಸ....ಬಟ್ಟೆಯ ತುಂಡುಗಳು..... ನೀರಿನ ಮೇಲೆ ತೇಲತೊಡಗಿದವು....ಮೊಸಳೆ ಅತ್ಯಂತ ಸಂತೋಷದಿಂದ ತನ್ನ ಡಿನರ್ ತಿನ್ನುತ್ತಲಿತ್ತು.....

ಆ ಕುಳ್ಳ, ನದಿಯ ತೀರದಿಂದ ನೋಡಿದ.....ಅವನ ಮೈ ಮೇಲಿನ ಕೂದಲು ಆ ಛಳಿಯಲ್ಲೂ ನಿಮಿರಿ ನಿಂತವು....ಅವನ ಕರಡಿಯಂಥ ಕಣ್ಣುಗಳು ತೆರೆದಂತೆಯೇ ಇದ್ದವು.... ಅವನು ಗಾಬರಿಯಿಂದ ಜೀಪಿನತ್ತ ಓಡಿದ....ನದಿ ತೀರದಲ್ಲಿ ದೂರದಲ್ಲಿದ್ದ ಒಂದು ಗಿಡದ ಬುಡದಲ್ಲಿತ್ತು....ಜೀಪು....

ಆ ದಟ್ಟವಾದ ಮರದ ಕೆಳಗೆ, ಬುಡದಲ್ಲಿ ಹುತ್ತವಿತ್ತು...ಮನುಷ್ಯನ ಕಾಲಿನ ಸಪ್ಪಳಕ್ಕೆ ಹುತ್ತದಿಂದ ಒಂದು ವಿಷಸರ್ಪ ಹೊರಬಂತು.... ಒಂದು ಜಿಂಕೆ ಎಚ್ಚರಗೊಂಡಿತು.... ನಡುಗುತ್ತಿದ್ದ ಕುಳ್ಳ ಹೊರಳಿ ನೋಡಿದ.... ರಾಮಗಂಗಾ ಶಾಂತವಾಗಿ ಕರಗಿದ ಬೆಳುದಿಂಗಳ ಹಾಗೆ ಹರಿಯುತ್ತಲಿತ್ತು.... ಕುಳ್ಳ ಇಂಜಿನ್ ಸ್ಟಾರ್ಟ ಮಾಡಿದ....ಅದರ ಗಡಗಡ ಸಪ್ಪಳ.....ಆ ನಿಶ್ಯಬ್ದತೆಯಲ್ಲಿ ತುಂಬ ಭಯಾನಕವಾಗಿ ತೋರಿತು....ಅಂಧಾ....ಧುಂಧಾ....ಗಾಡಿ ನಡೆಸಿಕೊಂಡು ಅವನು ಕಾಡಿನ ಮುಖ್ಯ ರಸ್ತೆಗೆ ಬಂದ.....ಹೆಡ್ ಲೈಟ್ಸ್‌ದ ಮುಂದೆ ಒಮ್ಮೆಲೇ ಒಂದು ಹಿಂಸ್ರ ಪಶು ಬಂದು ನಿಂತು ಜೋರಾಗಿ ಗಹಗಹಿಸಿತು....

ರಾತ್ರಿ ಕಳೆಯಿತು.....ಚಂದಿರ ಮುಳುಗಿದ....ಸೂರ್ಯ ರಾಮಗಂಗಾದಲ್ಲಿ ಉದಯಿಸಿದ....ಕಾಡು ಎಚ್ಚೆತ್ತಿತ್ತು....ಬ್ರೇಕ್‌ಫಾಸ್ಟ್‌ದ ಸಮಯಕ್ಕೆ ಬುದ್ಧು ಕಾಡಿನಿಂದ ಹೊರಟು ಕಾಂಪೌಂಡಿನಲ್ಲಿ ಬಂದಿತು.... ಲೆಸ್ಟ್‌ಹೌಸಿನ ಪಡಸಾಲೆಯ ಕೆಳಗೆ ತಲುಪಿತು....ಹಾಗೂ ಹುಡುಗಿಯ ಬರುವಿನ ನಿರೀಕ್ಷೆಯಲ್ಲಿ ತಲೆಬಾಗಿಸಿ ನಿಂತಿತು ....ಅವಳು ದಿನವೂ ಅದಕ್ಕೆ ಬ್ರೆಕ್‌ಫಾಸ್ಟ್ ಮಾಡಿಸುತ್ತಿದ್ದಳು....

# ಪುನರ್ಜನ್ಮವಾದಲ್ಲಿ ಹೆಣ್ಣಾಗಿಸಬೇಡ

## -1-

"ಲಗಾಕೇ ಕಾಜಲ್ ಚಲೆ ಗೋಸಾಯೆ...." ಭೂರೆ ಖವ್ವಾಲಿಯ ಆಕಾಶ ಭೇದಿಸುವ ತಾನದಿಂದ ದೀಪದ ಕುಡಿ ಕೂಡ ಥರ ಗುಟ್ಟಿತು... "ಅರೆ ಲಗಾಕೇ ಕಾಜಲ್ ಚಲೆ ಗೋಸ್ಯೆಯಾ....." ಭೂರೆ ಖಾನನ ಹತ್ತು ವರ್ಷದ ಪುತ್ರ ಷದ್ದು, ತನ್ನ ಮೆಲು ದನಿಯಲ್ಲಿ ಹಾಡು ಹಾಡುತ್ತಿದ್ದ.... "ಅಹೇ ಲಗಾಕೆ ಕಾಜಲ್ ಚಲೆ ಗೋಸ್ಯೆಯಾ..." ಹಸಿದ ಹೊಟ್ಟೆಯಲ್ಲಿರುವ ನಾಲ್ಕು ಜನ ಸಂಗಡಿಗರು ಚಪ್ಪಾಳೆ ಬಾರಿಸುತ್ತ ಬಾರಿಸುತ್ತ ಪುನಃ ಪುನಃ ಹಾಡತೊಡಗಿದರು...ಭೂರೆ ಖಾನ, ಹಾರ್ಮೋನಿಯಂ ಮೇಲೆ ತಲೆಬಾಗಿಸಿ ಜೋರಾಗಿ ಬೆರಳುಗಳನ್ನು ಆಡಿಸುತ್ತಿದ್ದ....ಮತ್ತೆ ತಲೆಯೆತ್ತಿ ಮೇಲೆ ಬೆಳಗುತ್ತಿದ್ದ ಆಕಾಶವನ್ನು ನೋಡಿದ...ಅಲ್ಲಿ ಹನ್ನೆರಡನೆಯ ದಿನದ ರಾತ್ರಿಯ ಚಂದಿರ ಹೊಳೆಯು ತ್ತಿದ್ದ...ರಾತ್ರಿಯಲ್ಲಿ ಮಾರ್ಗದರ್ಶನ ಮಾಡುವಾತ ಮಸೀದೆಯ ಕಮಾನಿನಲ್ಲಿ ಕಂದೀಲ ಹಚ್ಚಿಡುತ್ತಾನೆ....ಆದರೆ ಪ್ರವಾಸಿಕರಿಗೆ ದಾರಿ ಸಿಗುವುದಿಲ್ಲ....

"ಚಲೆ ಗೋಸಾಯೇ....ಚಲೆ....." ಷಬ್ ಮೇರಾಜನ ವ್ಯಾಖ್ಯೆ ಮತ್ತು ಭೂರೆ ಖಾನನ ಅಮೋಘವಾದ ಕಲೆ...ಹಂಡೇಷಾಹನ ಪವಿತ್ರ, ಬೆಳಕಿನ ಉರಸು....ಒಬ್ಬಾತ ಖವ್ವಾಲಿ ಪಾರ್ಟಿಯ ಎದುರಿನಲ್ಲಿ ಚಿಮಣಿಯ ಬೆಳಕು ಹೆಚ್ಚಿಸುವಲ್ಲಿ ನಿರತನಾಗಿದ್ದ... ಏಕೆಂದರೆ ದರಗಾದಲ್ಲಿ ಗ್ಯಾಸಿನ ಬೆಳಕು ಮಂದವಾಗತೊಡಗಿತ್ತು.

ಆ ಪೆಟ್ರೊಮ್ಯಾಕ್ಸಿನ ಕಾರಣದಿಂದಲೇ ಆ ಮಹಾತ್ಮ ಹಂಡೆಷಾಹ ಎಂದೆನ್ನಿಸಿ ಕೊಳ್ಳುತ್ತಿದ್ದ...ಆತ ಅಲೌಕಿಕ ಪುರುಷನಾಗಿದ್ದ. ಆತ ತಿಳಿದಿದ್ದನೋ, ತಿಳಿದಿರ ಲಿಲ್ಲವೋ....ಇದೆಲ್ಲ ಏನು ನಡೆಯುತ್ತದೆಯೋ ನಡೆಯುತ್ತಿಲ್ಲವೋ....ಎಂಬುದನ್ನು.... ಮತ್ತು ಇದರ ಮೂಲ ಹಾಗೂ ಬುನಾದಿ ಏನು...ಹಂಡೆಷಾಹ ಇರಲೇ ಇಲ್ಲ ಅನ್ನುವುದಾದರೆ, ಇರುವುದು ಏನು...ಯಾವುದೆಲ್ಲ ಇದೆಯೋ ಇಲ್ಲಿಯೇ ಇರುವು ದಾದರೆ....ಇಲ್ಲದಿರುವುದು ಯಾವುದು....ಯಾವುದು ಇದೆಯೋ ಅದರ ಅಸ್ತಿತ್ವವನ್ನು ಯಾರಾದರೂ ಹೇಳಲಿ....ಕಲಾವಿದರನ್ನು, ಸಾಹಿತಿಗಳನ್ನು, ಕವಿಗಳನ್ನು ಅರಿತು ಕೊಂಡಂತೆ...ಮಹಾತ್ಮರೂ ಕೆಲವರು ಭಾಗ್ಯಶಾಲಿಗಳಾಗಿರುತ್ತಾರೆ...ಇವರನ್ನೂ ಜಗತ್ತು ಅರಿತುಕೊಂಡಿರುತ್ತದೆ...ಉಳಿದವರಿಗೆ, ಕೆಲ ಭಗವದ್ಭಕ್ತರು ಮಾತ್ರ ಅವರ ಸಮಾಧಿಯ ಬಳಿ ದೀಪ ಉರಿಸಲು ಸಾಧ್ಯವಾಗುತ್ತದೆ....ಇನ್ನು ಕೆಲವರಿಗೆ ಅದೂ ಇಲ್ಲ....

ಕರುಣಾಳು ಪೀರ ಹಂಡಷಾಹರ ಉರಸಿನಲ್ಲಿ ಬರುವ ಎಣ್ಣೆ ಮಾರುವವರು, ನೇಕಾರರು, ಕಟುಗರು, ಕುಶಲಕರ್ಮಿಗಳು, ರೈತರು, ಕೂಲಿಕಾರರು, ಗುಡಿಸಲುಗಳಲ್ಲಿ ಜೀವನ ಸಾಗಿಸಿ, ಮಣ್ಣಿನಲ್ಲಿ ಮಣ್ಣಾದರು....ದೇವರ ನಿಜವಾದ ಭಕ್ತರು ಅವರು.... ಆ ಮುದುಕಿ ಷರಫಿನ್....ವಿಧವೆ...ಅನಾಥೆ....ದಾರಿದ್ರ್ಯದಿಂದ ಕೂಡಿದಾಕೆ,

ಅವಿದ್ಯಾವಂತೆ...ದರಗಾದ ಹಿಂದೆ ಕಟ್ಟೆಯ ಮೇಲೆ ನಮಾಜ ಮಾಡುತ್ತಿದ್ದಾಳಲ್ಲ.. ಬಿಸ್ಮಿಲ್ಲಾ ಅಲ್‌ರಹಮನ್ ಅಲ್‌ರಹೀಮ...ಅಲ್ಲಾ ಅಕ್ಬರ...ಓದುತ್ತಿದ್ದೇನೆ...ಅಲ್ಲಾ ಮಹಮ್ಮದನ ಶ್ಲೋಕಗಳನ್ನು... ಲಾಇಲಾ ಇಲ್ಲಲ್ಲಾ ಮಹ್ಮದ ರಸೂಲ ಉಲ್ಲಾ...ಅಲ್ಲಾ ಅಕ್ಬರ್...ಬಿಸ್ಮಿಲ್ಲಾ ಅಲ್ಲಾ ರಹಮನ್...ರಹೀಮ...ಲಾಯಿಲಾ ಇಲ್ಲಲ್ಲಾ ಮಹ್ಮದ ರಸೂಲ ಇಲ್ಲಾ...ಅಲ್ಲಾ ಅಕ್ಬರ...ಅಲ್ಲಾ ಅಕ್ಬರ...ಖಯಾಮ್...ರಕೊ.... ಖೊಮಾ....ಸಜದಾ...ಖದಾ...ಆ ಹೆಣ್ಣುಮಗಳಿಗೆ ನಮಾಜ ಮಾಡಲು ಬರುವು ದಿಲ್ಲ, ಇಡೀ ಆಯುಷ್ಯವೆಲ್ಲ ಯಾವಯಾವಾಗ ಬೆನ್ನು ಮೂಳೆ ಮುರಿವ ಹಾಗೆ ದುಡಿದು, ಕೂಲಿ–ನಾಲಿ ಮಾಡಿ ಮುಗಿಸಿದ ನಂತರ, ಸಿಕ್ಕ ಸಮಯದಲ್ಲಿ ತನ್ನ ದೇವರನ್ನು ತನಗೆ ತಿಳಿದಂತೆ ಸ್ಮರಿಸಿದಳು....ಅವಳ ಏಕೈಕ ವಯಸ್ಸಿಗೆ ಬಂದ, ಮುಗ್ಧ ಮಗಳನ್ನು ಆಕೆಯ...ಗಂಡನ ಮನೆಯವರು ಬಡಿಗೆಯಿಂದ ಹೊಡೆ ಹೊಡೆದು ಹಲಾಕ ಮಾಡಿದ್ದರು....ಪೋಲಿಸರಿಗೆ ತಿನ್ನಿಸಿ, ಉಣ್ಣಿಸಿ ಬಾಯಿ ಮುಚ್ಚಿಸಿದ್ದರು.... ಷರಫೆನ್ ಮನೆ ಮನೆಗೆ ಹೋಗಿ ಹಿಟ್ಟು ಬೀಸಿಕೊಟ್ಟು ನಾಲ್ಕಾಣೆ ದಿನದ ಕೂಲಿ ರೂಪದಲ್ಲಿ ಸಂಪಾದಿಸುತ್ತಾಳೆ....ಎಲ್ಲರಿಗಿಂತ ಮೊದಲು ಸ್ವರ್ಗಕ್ಕೆ ಆಕೆ ಮಾತ್ರ ಹೋಗುತ್ತಾಳೆ.

ಮತ್ತೆ ಈ ಅನಾಮಿಕ, ಪರಿಶ್ರಮಿ ಹಳ್ಳಿಯ, ಮಹತ್ವವಲ್ಲದ ಜನ ಮತ್ತು ಉರುಸಿಗೆ ಬಂದಿರುವ ಈ ಜಾತ್ರೆಯ ಅಂಗಡಿಕಾರರು...ಹೊಲಸು ದುಪಟ್ಟಾ ಹೊದ್ದವರು, ಬೆಳ್ಳಿಯ ಓಲೆಯಿಟ್ಟವರು, ಅಲ್ಲಲ್ಲಿ ತ್ಯಾಪಿ ಹಚ್ಚಿದ ಬಟ್ಟೆ ಹಾಕಿಕೊಂಡ ಬಡವರು, ತಮ್ಮ ಮುಂದೆ ಗೋಣಿ ತಟ್ಟು ಹಾಸಿಕೊಂಡು ಅದರಲ್ಲಿ ಖಜೂರ, ಸೇಂಗಾದ ಸಣ್ಣ ಸಣ್ಣ ಗುಂಪು ಮಾಡಿಟ್ಟು, ರೇವಡಿ, ಬೆತ್ತಾಸ, ಇನ್ನೂ ಏನೇನೋ ಇರಿಸಿದ್ದಾರೆ...ಚಿಮಿಣಿಯ ಬೆಳಕು ಮಂದವಾಗಿ ಹರಡಿದೆ...ವಿಶ್ವಾಸವಿಡಿ...ಸ್ವರ್ಗಕ್ಕೆ ಹೋಗಲು ಯೋಗ್ಯ ರಾದವರು ಇವರು ಮಾತ್ರ...

ಓರ್ವ ಬಿಳಿಯ ಉದ್ದನ್ನ ಗಡ್ಡದ ವೃದ್ಧ ''ಪ್ರತಿಯೊಂದು ಸಾಮಾನಿಗೆ ಬರೀ ನಾಲ್ಕಾಣೆ....'' ಎಂದು ಕೂಗುತ್ತಿದ್ದ. ಅವನ ಅಂಗಡಿಯಲ್ಲಿ ರಿಬ್ಬನ್ನಿಗೆ ಕಟ್ಟಿರುವ ಇಳಿಬಿಟ್ಟ ಪ್ಲಾಸ್ಟಿಕ್ ಕಪ್‌ಗಳು, ಹಾರಗಳು ಹಾಗೂ ನಕಲಿ ಗಡಿಯಾರಗಳಿದ್ದವು. ಜಾತ್ರೆಗೆ ಬಂದ ಹೆಂಗಸರು ಈ ಡಿಪಾರ್ಟಮೆಂಟಲ್ ಸ್ಟೋರಿನ ಮೇಲೆ ಮುಗಿಬಿದ್ದಿದ್ದಾರೆ.

''ಈ ಕಪ್‌ನ್ನು ಎಷ್ಟಕ್ಕೆ ಕೊಡುತ್ತಿಯಾ ?'' ಎಳೆಯ ವಯಸ್ಸಿನ ಹುಡುಗಿ, ಜಾರ್ಜೆಟ್ ಸೀರೆ ಹಸಿರು ದುಪಟ್ಟಾ ತಲೆಯ ಮೇಲೆ ಹಾಕಿಕೊಂಡವಳು ತುದಿ ಗುಂಡಿಯಲ್ಲಿ ಕುಳಿತುಕೊಳ್ಳುತ್ತ ಕೇಳಿದಳು.

''ಪ್ರತಿಯೊಂದು ಸಾಮಾನು ನಾಲ್ಕಾಣೆಯಲ್ಲಿ ಸಿಗುತ್ತದೆ ಬಿಟಿಯಾ....'' ಎಂದ ವ್ಯಾಪಾರಿ.

ಹುಡುಗಿ ದುಪಟ್ಟಾದ ಮೂಲೆಯಲ್ಲಿ ಕಟ್ಟಿದ್ದ ಗಂಟನ್ನು ಬಿಚ್ಚಿ ನಾಲ್ಕಾಣೆ ತೆಗೆದಳು. ಮತ್ತೆ ಒಂದು ಹಾರವನ್ನು ಆಶೆಗಣ್ಣಿನಿಂದ ನೋಡುತ್ತಾಳೆ. ಗಂಟಿನಲ್ಲಿ ಕೇವಲ ನಾಲ್ಕಾಣೆ ಉಳಿದಿದೆ.... ಇನ್ನೂ ಜಮಿಲೀನ್‌ಳಿಗೆ ಏನಾದರೂ ಖರೀದಿಸಬೇಕಾಗಿದೆ.

"ಹಾಂ !....ಇನ್ನೊಂದು ಕಪ್ ಕೊಡು...ಅದು...ಆ ಕೆಂಪುದು...ನಮ್ಮ ತಂಗಿಗೆ.."

ಹಳದಿ, ಬಾಳೆಹಣ್ಣಿನ ಬಣ್ಣದ ಕಮೀಜ ಮತ್ತು ನೀಲಿ ಸಾಟಿನ್‌ದ ಷಲ್ವಾರ ತೊಟ್ಟುಕೊಂಡಿದ್ದಳು. ಕೈಯಲ್ಲಿ ಹಸಿರು ರೇಶ್ಮೆ ಬಳೆ ಇಟ್ಟುಕೊಂಡಿದ್ದಳು–

"ರಷ್ಕ್‌ಕಮರ್...ಓ !...ರಷ್ಕ್‌ಕಮರ್..." ಎಂದು ಗದ್ದಲದೊಳಗಿಂದ ಕೂಗಿದ್ದು ಕೇಳಿಸುತ್ತದೆ– ಆಕೆ ದರಗಾದ ಕಡೆ ಓಡಿ ಹೋಗುತ್ತಾಳೆ. ಅಲ್ಲಿ ಭೂರೆಖಾನನ ಪ್ರೊಗ್ರಾಮ ಮುಗಿದಿದೆ. ಈಗ 'ಅಮರತಿ ಜಿಲೇಬಿ' ಮತ್ತು 'ಕಾಂಟ್ರೊ ಭಾಂಡ್' ಅವರ ಸರದಿ...

ಹುಡುಗಿ ಓಡುತ್ತ ಕಟ್ಟೆಯ ಕಡೆ ಬರುತ್ತಾಳೆ...ಅಲ್ಲಿ ಓರ್ವ ಹಾಸ್ಯಗಾರ ತುರ್ಕಿ ಟೊಪ್ಪಿಗೆ, ಕೆಂಪು ವಾಸ್ಕೋಟ್, ಸ್ಲಿಪಿಂಗ್ ಸೂಟಿನ ನೀಲಿ ಪಟ್ಟೆ ಪಟ್ಟೆಯ ಪೈಜಾಮಾ ಹಾಕಿಕೊಂಡು ಹಾರ್ಮೋನಿಯಮ್ ಹಿಡಿದು ಕುಳಿತಿದ್ದಾನೆ...ಮಸ್ತ ಧಡೂತಿ ಹೆಂಗಸೊಬ್ಬಳು ತನ್ನೆಡೆಗೆ ಡೋಲಕ್ ಸರಿಸಿಕೊಳ್ಳುತ್ತಾಳೆ...ಓರ್ವ ಎಳೆಯ ಹುಡುಗಿ ತನ್ನ ಅಕ್ಕ ಪಕ್ಕದಲ್ಲಿ ಕುಳಿತಿರುವ ಶ್ರೋತೃಗಳನ್ನು ದಿಟ್ಟಿಸಿ ನೋಡುತ್ತಾಳೆ...ಮಸ್ತಾಗಿರುವ ಧಡೂತಿ ಹೆಂಗಸು ಸಿಟ್ಟಿನಿಂದ– "ಏ ಕುಲಹೀನಳೆ, ಇಲ್ಲಿಯೇಕೆ ಕುಳಿತಿರುವೆ...ಥೂ.... ಥೂ...ಎದುರಿಗೆ ಬಂದು ಕೂಡು..." ಎನ್ನುತ್ತಾಳೆ.

ಅದಕ್ಕೆ ಆ ಮಗು– "ಚಿಕ್ಕಮ್ಮ, ನನ್ನನ್ನೆತ್ತಿಕೊಂಡು ಹೋಗಿ ಕುಳಿಸಿ..." ಮೃದುವಾಗಿ ಹೇಳುತ್ತದೆ.

"ಉಪವಾಸ...ವನವಾಸವಿದ್ದರೂ ತೂಕ ಮಾತ್ರ ಹೆಚ್ಚುತ್ತಲೇ ಹೋಗುತ್ತ ಲಿದೆ..." ಎಂದು ಆ ಧಡೂತಿ ಹೆಂಗಸು ಬಡಬಡಿಸುತ್ತಲಿದ್ದಳು...ಅಷ್ಟರಲ್ಲಿ ನೀಲಿ ಷಲ್ವಾರ, ಹಸಿರು ದುಪಟ್ಟಾದ ಹುಡುಗಿ ಕಟ್ಟೆಯ ಮೇಲೆ ತಲುಪುತ್ತಾಳೆ.

"ಬಿಜಿಯಾ....." ಎನ್ನುತ್ತ ಆ ಹುಡುಗಿ ಅವಳತ್ತ ಕೈ ಚಾಚುತ್ತದೆ....ದೊಡ್ಡ ಹುಡುಗಿ ಅವಳನ್ನು ತೋಳ ತೆಕ್ಕೆಯಲ್ಲಿ ಎತ್ತಿಕೊಂಡು ಹಾರ್ಮೋನಿಯಮ್‌ದ ಹತ್ತಿರ ಕೂಡಿಸುತ್ತಾಳೆ. ಹುಡುಗಿ ತನ್ನ ಒಣಗಿದ ಹಾಗಿರುವ ಕಾಲುಗಳನ್ನು ತುಂಬ ಕಾಳಜಿಯಿಂದ ತನ್ನ ಲಂಗದಲ್ಲಿ ಮುಚ್ಚಿಕೊಳ್ಳುವ ಪ್ರಯತ್ನ ಮಾಡುತ್ತದೆ. ಈಗ ಆ ಹಾಸ್ಯಗಾರನ ಹಾಗಿರುವವ ತಲೆ ವಾರೆಮಾಡಿ ಹಾರ್ಮೋನಿಯಮ್ ಮೇಲೆ ಅವಸರವಸರವಾಗಿ ಬೆರಳಾಡಿಸುತ್ತಾನೆ...ದೊಡ್ಡ ಹುಡುಗಿ ಕಿವಿಯ ಮೇಲೆ ಒಂದು ಕೈಯಿರಿಸಿ ಹಾಡಲಾರಂಭಿಸುತ್ತಾಳೆ...

"ನಡೆಯಿರಿ...ನಡೆಯಿರಿ...ಅಮರತಿ ಜಿಲೇಬಿ ಹಾಡುತ್ತಿದ್ದಾಳೆ..." ಗದ್ದಲದಲ್ಲಿ ಜನರ ಕೂಗಾಟ...

ದೊಡ್ಡ ಹುಡುಗಿ ಹಾಡು ಆರಂಭಿಸಿದ್ದಾಳೆ....

"ಸಫರ್ ಹೈ...ದುಷ್ವಾರ್...ಸಫರ್ ಹೈ ದುಷ್ವಾರ್...ಖ್ವಾಬ ಕಬ್ ತಕ್... ಬಹೂತ ಬಡಿ ಮಂಜಿಲ್ ಅದಮ್ ಹೈ..."

ಕುಂಟಿ ಹುಡುಗಿ ಚರಣದ ಮೊದಲ ಪಂಕ್ತಿ ಆರಂಭಿಸುತ್ತದೆ... ''ನಸೀಮ ಜಾಗೊ...ನಸೀಮ ಜಾಗೂ...ಕಮರ್‌ಕೂ ಬಾಂಧೂ...ಉಠಾವ್ ಬಿಸ್ತರ ಕೆ ರಾತ ಕಮ್ ಹೈ...'' ಪ್ರೇಕ್ಷಕರು ತಾಳ ಹಾಕುತ್ತ ಆನಂದ ತುಂದಿಲರಾಗಿದ್ದಾರೆ....

''ಜವಾನಿ ವ ಹುಸ್ನ, ಜಾವ್ರೋ ದ್ವಲತ್...ಎ ಕುಛ್ ಸಾಸೋಂ ಕೆ ಹೈ ಝಗಡೆ...'' ಎಂದು ಆ ಕುಂಟಿ ಹುಡುಗಿ ತುಂಬ ಶ್ರಮದಿಂದ ಅಕ್ಕನ ಸಾತ್ ಕೊಡುತ್ತಿದ್ದಳು.

''ಅಜಲ್ ಹೈ ಇಸ್ತಾದಾ ದಸ್ತಾ ಬಸ್ತಾ, ನೊಯ್ದ ರುಖ್ಸಿತ್ ಹರ್ ಏಕ ದಮ್ ಹೈ....ಬಸಾನ ಬಸ್ತ ಸವಾಲಿ ಸಾಯಲ್ ತಹಿ ಹೂ ಹರ್ ಏಕ್ ಮುದ್ದಾ ಸೆ...'' ಎಂದು ದೊಡ್ಡ ಹುಡುಗಿ ಷ ಶ ಸ ಕ,ಖ... ಸಹಿತ ಸರಿಯಾಗಿ, ಅತ್ಯಂತ ಶುದ್ಧವಾಗಿ ಹಾಡುತ್ತಿದ್ದಾಳೆ...

''ನಯಾಜ ಹ್ಯ ಜೀನಯಾಜಿಯೌಸ, ಜಗಲ್ ಮ ದಿಲ್ ಸೂರತ್ ಸನಮ್ ಹ್ಯ....''

''ಹಖ್ ಅಲ್ಲಾ...'' ಎಂದು ಕೂಗುತ್ತ ಒಬ್ಬ ಕಪ್ಪು ಭುಜಂಗ ನೆಲದ ಮೇಲೆ ಉಳ್ಳಾಡತೊಡಗುತ್ತಾನೆ... ''ಅಲ್ಲಾ ಹೊ ಅಲ್ಲಾ...ಅಲ್ಲಾ ಹೊ...ಅಲ್ಲಾ...''

''ಮಾಲ ಕಾರ ಜಹಾನ್-ಎ-ಫಾನಿ ಕಭೀ ನಹೀ....ಏಕ ಕಾಯ್ದೇ... ಪೆ.... ಜೋ ಚಾರ ದಿನ್ ಹ್ಯ ಮಫೂರ ರಾಹತ್ ತೊ ಬಾದ ಉಸ್‌ಕೆ ಗಮ್ ವ ಆಲಮ್ ಹ್ಯ....''

ಊರಿನ ಚೌಧರಿ ಹಾಮೀದ್ ಅಲಿ ದೊಡ್ಡಪ್ಪನ ಮಗ, ಮುಕದ್ದಮೆಯಲ್ಲಿ ಸೋತಿದ್ದಾನೆ...ಅವನು ಜೋರಾಗಿ ನೆಲದ ಮೇಲೆ ಅಂಗೈ ಹೊಡೆಯುತ್ತ ಹೊಡೆಯುತ್ತ ಕೂಗಿ ಕೂಗಿ ಪುನರುಚ್ಚರಿಸುತ್ತಾನೆ.... ''ಜೊ ಚಾರ ದಿನ್ ಹ್ಯ...ಜೊ ಚಾರ ಹೈ... ವಾರೆ....ಅಲ್ಲಾ...ವಾ...ವಾ...ರೆ ಮೌಲಾ...ವಾ...ದೇಖಲಿ... ತೇರಿ ಕುದರತ್... ದೇಖಲಿ....''

''ಜನಾಬ ರೋಕೋ...ಬಹಕ್ ರಹೆ ಹೊ... ಸರವರ ದೋಶೀ ನಾ...ಜೋಷ ಪರ್ ಹೈ...'' ಎಂದು ದೊಡ್ಡ ಹುಡುಗಿ ಅವನನ್ನೇ ಕುರಿತು ಹಾಡುತ್ತಾಳೆ. ಹುರುಪು....ಹುಮ್ಮಸ್ಸು ಹೆಚ್ಚುತ್ತಾ ಹೋಗುತ್ತದೆ.. ಸಣ್ಣ ಹುಡುಗಿಯನ್ನು ಓರ್ವ ಹಾಸ್ಯಗಾರ ತನ್ನ ಹೆಗಲ ಮೇಲೆ ಕೂಡಿಸಿಕೊಂಡಿದ್ದಾನೆ...ಅದು ತನ್ನ ಪುಟ್ಟ ಪುಟ್ಟ ಕೈಗಳಿಂದ ತಾಳ ಹಾಕುತ್ತ ಸೋದರಿಯ ಹಾಡುಗಾರಿಕೆಯಲ್ಲಿ ಮಗ್ನಳಾಗಿದ್ದಾಳೆ... ''ಜನಾಬ ರೋಕೋ...ಬಹಕ್ ರಹೀ ಹೊ... ಸರವರ ದೋಷೀನಾ ಜೋಷ ಪರ್ ಹ್ಯ.....''

''ಎ ಮಿಸ್ರ ಬಂಜರ್ ಮುಸೀಬತ್ ಪಸಂದ್ ಹಮ್ ಕೊ ಕಮಾಲ ಆಯಾ...ನಸೀಮ ಜಾಗೂ...ಕಮರಕೊ ಬಾಂಧೂ...ಉಠಾವ್ ಬಿಸ್ತರ್..ಉಠಾವ್ ಬಿಸ್ತರ್...ಕೆ...ರಾತ ಕಮ್ ಹ್ಯ....''

ಬಡತನ, ದಾರಿದ್ರ್ಯದಲ್ಲಿರುವ ಯಾತ್ರಿಕರು ಒಂದಾಣೆ, ಎರಡಾಣೆ, ಅವರೊಂದಿಗಿದ್ದ ಹೆಂಗಸಿನ ಕಡೆಗೆ ಒಗೆಯುತ್ತಾರೆ...ಆಕೆ ತನ್ನ ದುಪಟ್ಟಾ ಹರಡಿ ಕೊಂಡು ಅದರಲ್ಲಿ ಅವುಗಳನ್ನು ಕೂಡಿಸುತ್ತಾ ಹೋಗುತ್ತಿದ್ದಾಳೆ....

''ಖುಸ್ಕೆ ಡಬಲ್.... ಖುಸ್ಕೆ ಡಬಲ್...ಖುಸ್ಕೆ ಡಬಲ್....'' ಎಂದು ದೊಡ್ಡ ಹುಡುಗಿ ರಷ್ಕ್‌ಕಮರ್ ಉರ್ಫ್ ಕಮರನ್ ಉರ್ಫ್ ಅಮ್ರುತಿ ನಕರಾ ಮಾಡುತ್ತ ಊರಲ್ಲಿ ಉಳ್ಳವರ ಕಡೆ ಹೋಗುತ್ತಾಳೆ...ಅವರು ಆಕೆಗೆ ನಾಲ್ಕಾಣೆ, ಎಂಟಾಣೆ ಕೊಡುತ್ತಾರೆ...ಎಲ್ಲ ಸೇರಿ ಒಂಬತ್ತು ರೂಪಾಯಿ ಎಂಟಾಣೆ ಸಂಪಾದನೆಯಾಗುತ್ತದೆ... ರಷ್ಕ್‌ಕಮರ್ ದುಃಖಿತಳಾಗಿ ರೊಕ್ಕ ನೋಡುತ್ತಾಳೆ ಹಾಗೂ ಅವುಗಳನ್ನು ದುಪಟ್ಟಾದ ಮೂಲೆಯಲ್ಲಿ ಕಟ್ಟಿಕೊಳ್ಳುತ್ತಾಳೆ.

ಉರಸಿಗೆ ಬಂದ ಜನ ಚದರಲಾರಂಭಿಸುತ್ತಾರೆ. ಕಮರನ್‌ಳ ಪಾರ್ಟಿ ತನ್ನ ವಾದ್ಯಗಳೊಂದಿಗೆ ವೇದಿಕೆಯಿಂದ ಇಳಿಯುತ್ತದೆ. ಅವರು ದರಗಾದ ಆವರಣದಿಂದ ಹೊರ ಹೊರಟು ನಾನ್ ಭಾಯಿಯ ಅಂಗಡಿಯತ್ತ ಹೋಗುತ್ತಾರೆ...ಅಲ್ಲಿ ಅವರ ಉಳಿದ ಸಾಮಾನುಗಳನ್ನು ಒಂದು ಮೂಲೆಯಲ್ಲಿರಿಸಲಾಗಿತ್ತು. ನಾನಬಾಯಿ ಕೂಡ ತನ್ನ ಅಂಗಡಿಯನ್ನು ವಿಸ್ತರಿಸುವಲ್ಲಿ ತತ್ಪರನಾಗಿದ್ದಾನೆ...ಕಮರನ್ ತನ್ನ ಸಣ್ಣ ಟ್ರಂಕನ್ನು ತೆರೆದು, ತುಂಬ ಕಾಳಜಿಯಿಂದ ಅದರಲ್ಲಿ, ತಾನು ಖರೀದಿಸಿದ ಎರಡೂ ಕಪ್‌ಗಳನ್ನಿರಿಸುತ್ತಾಳೆ...ಆಕೆಯ ಕಣ್ಣುಗಳಿಂದ ಕಣ್ಣೀರು ಟಪ್...ಟಪ್...ಎಂದು ಬೀಳುತ್ತಲಿವೆ...

''ಕಣ್ಣೀರು ಏಕೆ ಉದುರಿಸುತ್ತಿರುವೆ....ಓ !....ಭಾಗ್ಯಹೀನಳೆ...'' ಎಂದು ಆ ಹೆಂಗಸು ಬುರ್ಕಾ ತಲೆಯ ಮೇಲೆ ಹಾಕಿಕೊಳ್ಳುತ್ತ ಆಕೆಗೆ ಸಿಟ್ಟು ಮಾಡುತ್ತ– ''ಜಮಿಲೀನ್ ಎತ್ತಿಕೊ...'' ಎಂದು ಹೇಳುತ್ತಾಳೆ.

''ಊಟನಾದರೂ ಮಾಡಿರಿ...'' ಎನ್ನುತ್ತ ನಾನಬಾಯಿ ಅಲ್ಯೂಮಿನಿಯಮ್‌ದ ತಟ್ಟೆಯಲ್ಲಿ ಸ್ವಲ್ಪ ಸ್ವಲ್ಪ ತರಕಾರಿ, ಮಾಂಸದ ರಸ ಹಾಗೂ ನಾಲ್ಕು ರೊಟ್ಟಿ ಅವರಿಗೆ ಕೊಡುತ್ತಾನೆ... ಅವರು ನೆಲದ ಮೇಲೆ ತುದಿ ಗುಂಡಿಯಲ್ಲಿ ಕುಳಿತು, ಎಲ್ಲರೂ ಕೂಡಿ ರಾತ್ರಿಯ ಊಟ ಮಾಡುತ್ತಾರೆ. ನಾನಬಾಯಿ ಅವರಿಂದ ಹಣ ತೆಗೆದುಕೊಳ್ಳುವುದಿಲ್ಲ. ಈಗ ಓರ್ವ ವೇಷಗಾರ ರೇಲ್ವೆ ಕೂಲಿಯ ಹಾಗೆ ಹುರುಪಿನಿಂದ ಟ್ರಂಕ್ ಮತ್ತು ಚಾಪೆಯಲ್ಲಿ ಸುತ್ತಿದ ಹಾಸಿಗೆ ತನ್ನ ತಲೆಯ ಮೇಲೆ ಹೊರುತ್ತಾನೆ. ಹಾರ್ಮೋನಿಯಮ್ ಬಗಲಲ್ಲಿ ಜೋತು ಬಿಡುತ್ತಾನೆ... ಹೆಂಗಸು ಢೋಲಕ್ ಹೊತ್ತುಕೊಳ್ಳುತ್ತಾಳೆ... ಕಮರನ್ ಜಮಲೀನ್‌ಳನ್ನು ಬಗಲಲ್ಲಿ ಎತ್ತಿಕೊಳ್ಳುತ್ತಾಳೆ...ಮೂವ್ವರೂ ತಲೆ ಕೆಳಗೆ ಮಾಡಿಕೊಂಡು ಯಕ್ಕಾಗಾಡಿಗಳು ನಿಲ್ಲುವ ಸ್ಥಳದತ್ತ ಹೊರಡುತ್ತಾರೆ. ಜಾತ್ರೆಯ ಬಜಾರ ದೊಳಗಿಂದ ಹೋಗುತ್ತಿರುವಾಗ ಪುಟ್ಟ ಜಮಲೀನ್ ತಿರುತಿರುಗಿ ಆಶೆಯ ಕಣ್ಣುಗಳಿಂದ ಬಳೆ ಅಂಗಡಿಗಳನ್ನು ನೋಡುತ್ತಾಳೆ...ವೇಷಗಾರ ಕಲಾವಿದ ಹೋಗುತ್ತ ಹೋಗುತ್ತ ನಿಟ್ಟುಸಿರು ತೆಗೆದುಕೊಂಡು ದರಗಾ ಕುರಿತು ಹೀಗೆ– ''ವ್ಹಾ...ಪೀರ ಹಂಡೆಷಾಹ...

ಬಹಳಷ್ಟು ಆಶೆಗಳನ್ನು ಹೊತ್ತು ತಮ್ಮ ಸನ್ನಿಧಿಗೆ ಬಂದಿದ್ದೆವು... ಸಿಕ್ಕದ್ದೇನು... ಒಂಬತ್ತು ರೂಪಾಯಿ ಎಂಟಾಣೆ....."

**-2-**

ಪುರಕಾನ ಮಂಜಿಲ್‌ದ ಹೆಣ್ಣು ಮಕ್ಕಳು ವಾಸಿಸುವ ಕೋಣೆಯಲ್ಲಿ ಡೆಪ್ಯೂಟಿ ಸಾಹೇಬ ಆರಾಮ ಕುರ್ಚಿಯ ಮೇಲೆ ಕುಳಿತು ಮುಂದಕ್ಕೆ ಬಾಗಿ ಹುಬ್ಬೇರಿಸಿ ಕೇಶ ಕಲ್ಪ ಮಾಡಿಕೊಳ್ಳುತ್ತಿದ್ದರು. ಮೇಮ ಸಾಬ ಕನ್ನಡಿ ಹಿಡಿದು ಎದುರಿಗೆ ನಿಂತಿದ್ದಳು. ಡೆಪ್ಯೂಟಿ ಸಾಹೇಬ ಗುನು ಗುನು ರಾಗಾಲಾಪ ಮಾಡುತ್ತಿದ್ದರು...ಮುಖ ಸುಂದರ ಗೊಳಿಸುವ ಕ್ರಿಯೆ ನಡೆದಿತ್ತು...ಮೇಮ ಸಾಬ ಕನ್ನಡಿ ಸ್ಟೂಲ ಮೇಲಿರಿಸಿದಳು ಹಾಗೂ ಹೈಹೀಲ್ಡ್ ಚಪ್ಪಲಿ ಎಳೆಯುತ್ತ ಗಪ್–ಚುಪ್ ತನ್ನ ಕೋಣೆಯತ್ತ ಹೋದಳು...ಒಳಗೆ ಹೋಗಿ ಕುಳಿತಳು....ಕೆಲ ಹೊತ್ತು ಹೊರಗೆ ನೋಡುತ್ತಿದ್ದಳು....ಗಂಡ ಚಾಳೀಸಿನ ಕೇಸ್ ಮತ್ತು 'ಸರ್‌ಫರಾಜ' ಪತ್ರಿಕೆ ಹಿಡಿದು ಗಂಡಸರ ಕೋಣೆಯತ್ತ ಹೊರಟಿದ್ದರು.

ಮೇಮಸಾಬ ಹಾಲ್‌ನಲ್ಲಿ ಬಂದು ಕೂಗಿದಳು– "ಛೇದುಕಿ ಬೀಬಿ....ಸ್ವಲ್ಪ ಕಮರನ್‌ಳ ಚಿಕ್ಕಮ್ಮನನ್ನು ಕಳಿಸು...." ಎಂದು.

ಛೇದುಕಿ ಬೀಬಿ ಹಾಲ್‌ನ ಕೆಳಗಿನಿಂದ ಕಾಣಿಸಿಕೊಂಡಳು ಹಾಗೂ ಬಂಗ್ಲೆಯತ್ತ ಹೊರಟಳು.

ಈ ಫುರಕಾನ್ ಮಂಜಿಲ್ ಡೆಪ್ಯುಟಿ ಸಾಹೇಬರ ಮುತ್ತಜ್ಜ ನಿರ್ಮಿಸಿದ್ದ. ಕಂಧಾರದ ಗೌರ್ನರ್ ಇದ್ದರೆಂದು ಪ್ರತೀತಿ. ಡೆಪ್ಯುಟಿ ಸಾಹೇಬರ ಹೇಳಿಕೆಯ ಪ್ರಕಾರ ಅವರ ವಂಶಸ್ಥರು ವಾಜಿದ್ ಅಲಿ ಷಾಹನ ಕುದುರೆ ದಳದ ವ್ಯವಸ್ಥಾಪಕರಾಗಿದ್ದರು. ಈಗ ಹಿರಿಯರು–ಮೇಮ ಸಾಬ ಅತ್ಯಂತ ಜಿಪುಣೆಯಾಗಿದ್ದಳು. ಬಂಗ್ಲೆಯ ಕೆಳ ಮನೆಯಲ್ಲಿಯ ಕೆಲ ಭಾಗ ತಿಂಗಳಿಗೆ ಎರಡು ರೂಪಾಯಿಯಂತೆ ಬಾಡಿಗೆ ಕೊಟ್ಟಿದ್ದಳು. ಬಾಡಿಗೆಯಿದ್ದ ಹೆಂಗಸರು ಫುರಾಕಾನ್ ಮಂಜಿಲ್‌ದಲ್ಲಿ ಪುಕ್ಕಟೆ ಕೆಲಸ ಮಾಡುತ್ತಿದ್ದರು. ಅವರ ಮಕ್ಕಳು ಕಟ್ಟಿಗೆ ತರುವ ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು. ಗಂಡಸರು ಹೊರಗೆ ಹೋಗುತ್ತಿದ್ದರು. ಬಂಗ್ಲೆಯ ಹೊರಗಡೆ ನಾಲ್ಕು ಕೋಣೆಗಳನ್ನು ಬಾಡಿಗೆಗೆ ಕೊಟ್ಟಿದ್ದಳು. ಅವುಗಳಲ್ಲಿಯ ಒಂದರಲ್ಲಿ ರಷ್ಕಕಮರ್ ಮನೆತನವಿರುತ್ತಿತ್ತು, ಕಾಂಟ್ರೆ ಖಾಲೂ, ನಟರನ್ ಖಾಲಾ, ಲಂಗಡಿ ಬಹನ್ ಮುಂತಾದವರು ಇರುತ್ತಿದ್ದರು...ಅಲ್ಲಾ ತೊಬಾ...ಅಲ್ಲಾ ತೊಬಾ....

ಛೇದುಕಿ ಬಿಬಿ ವಾಡೆಯಿಂದ ಹೊರಟು ಓಣಿಯಲ್ಲಿಗೆ ತಲುಪಿದಳು. ಕೋಣೆಯ ಹೊರಗೆ ಕಾಂಟ್ರೆಖಾಲು ಅಂಗಡಿ ತೆರೆದಿದ್ದಳು. ಓರ್ವ ಗ್ರಾಹಕ ಅವಳೊಂದಿಗೆ ಏನೋ ಮಾತಾಡುತ್ತಿದ್ದ. ಹೊಗೆಯಿಂದ ತುಂಬಿದ್ದ ಕೋಣೆಯೊಳಗೆ ಕಮರನ್‌ಳ ಖಾಲಾ ಹರಮುಜಿ ಬೇಗಂ ಒಲೆ ಊದುತ್ತಿದ್ದಳು. ತರುಣ ಜಮಿಲೆನ್ ಕಟ್ಟೆಯ ಮೇಲೆ ಬಿದ್ದಿದ್ದ ಕಪ್ಪು ತುಂಡುಗಳನ್ನು ಎಣಿಸುತ್ತಿದ್ದ....ಒಂದು ಗೂಟಕ್ಕೆ ಢೋಲಕ್ (ಚರ್ಮವಾದ್ಯ) ಇಳಿ

ಬಿಟ್ಟಿದ್ದರು. ಛೇದುಕಿ ಬಿಬಿ ತಟ್ಟಿನ ಪರದೆ ಸರಿಸಿ ''ಏ ಕಮುರನ್‌ಳ ಖಾಲಾ... ನಿನಗೆ ಮೇಮ ಸಾಬ ಕರೆಯುತ್ತಿದ್ದಾಳೆ...'' ಎಂದಳು.

''ಓ ! ಬಂತು ಮಾಲಿಕಳ ಸಾವಿನ ಕರೆ....'' ಎನ್ನುತ್ತ ಹರಮಜಿ ಬೇಗಂ ಕೆಲಕ್ಷಣಗಳ ನಂತರ ಬಡಬಡಿಸುತ್ತ, ಒದರಿಕೊಳ್ಳುತ್ತ ಒಳಗೆ ಹೋದಳು.... ಅಲ್ಲಿ ಮೇಮ ಸಾಬ ಈಕೆಯ ಬರುವಿಕೆಯ ಹಾದಿ ಕಾಯುತ್ತ ಕುಳಿತಿದ್ದಳು. ಇವಳು ಹೋಗಿ ನಿಂತಳು.

''ಬಾ....ಕುಳಿತುಕೊ....'' ಎನ್ನುತ್ತ ಮೇಮಸಾಬ ನೆಲದ ಕಡೆ ಸನ್ನೆ ಮಾಡಿದಳು.

ಆಕೆ ಕುಳಿತಳು...

''ಕಮುರನ್‌ಕಿ ಖಾಲಾ...ನಾವು, ನೀನು ಗೃಹಿಣಿ ಎಂದು ತಿಳಿದು ಬಾಡಿಗೆಗೆ ಮನೆ ಕೊಟ್ಟೆವು....''

''ಅಂದರೆ, ನಾವು ಗೃಹಸ್ಥರಲ್ಲವೇನು....?'' ಖಾಲಾ ಜೋರಾಗಿ ಕೇಳಿದಳು...

''ನಿನ್ನ ಕುಂಟಿ ಸೊಸೆಯ ಬಗ್ಗೆ ನಾನು ಕರುಣೆ ತೋರಿದೆ...''

''ತಮ್ಮ ಕರುಣೆಗೆ ಕೃತಜ್ಞತೆಗಳು.''

ತುಂಬ ಕೆಟ್ಟ ಹೆಂಗಸಾಗಿದ್ದಳು.

''ನೀನು ನಮಗೆ, ನಿನ್ನ ಗಂಡ ಹಜಾಮನೆಂದು ಹೇಳಿದ್ದೆ.....''

''ಹೌದು, ಅದಲ್ಲದೆ ಗ್ರಾಸ್‌ಕಟ್ ಏನು ಮತ್ತೆ ?''

''ಆದರೆ ಜನ ಬಂದು ಬಂದು ಹೇಳಿದ್ದು ನಮಗೆ ಬೇರೆ ಬೇರೆ...ಓಣಿ ಓಣಿ ತಿರುಗಿ ಗಾನಾ–ಬಜಾನಾ ಗೈಯುತ್ತ ಬೇಡುತ್ತ ತಿನ್ನುತ್ತಲಿದ್ದೀರಿ''–ಎಂದು.

''ತಮ್ಮಿಂದ ಬೇಡಿ ತಿನ್ನುತ್ತಿಲ್ಲವಲ್ಲ !''

ಮೇಮಸಾಬ ತಳಮಳಗೊಂಡಳು ಈ ಉತ್ತರದಿಂದ. ಒಟ್ಟು ಮಾತುಕತೆ ಅವರಿಬ್ಬರಲ್ಲಿ ಇಂತಿತ್ತು–

''ಬಾಯಿಗೆ ಬಂದಂತೆ ಮಾತಾಡದಿರು. ಇಲ್ಲದಿದ್ದರೆ, ಬುದ್ಧಿ ಸರಿಯಾಗಿ ಹಾದಿಗೆ ಬರುವಷ್ಟು ಚಪ್ಪಲಿ ಪೆಟ್ಟು ಬಿದ್ದಾವು. ಹುಸೇನಾಬಾದದ ಜನರ ಬಗ್ಗೆ ಹೇಳಿದವರೆಲ್ಲ ಸರಿಯಾಗಿಯೇ ಹೇಳಿದ್ದಾರೆ. ಆದರೆ ನಾವು ಅದನ್ನು ನಂಬಲಿಲ್ಲ. ಸ್ವತಃ ನೋಡಿದ್ದೇವೆ–ರಷ್ಕ್‌ಕಮರ ಬುರ್ಖಾ ಹಾಕಿಕೊಂಡು ರಾತ್ರೋ ರಾತ್ರಿ ಹೊರಗೆ ಹೋಗುವುದನ್ನು... ಇನ್ನು ನೀನು ಇಲ್ಲಿ ಇರಲು ಯೋಗ್ಯಳಾಗಿಲ್ಲ ಕಮುರನ್‌ಳ ಖಾಲಾ....''

ತನ್ನ ತಾಯಿ ಮತ್ತು ಕಮುರನ್‌ಳ ಖಾಲಾಳ ನಡುವೆ ಜಗಳದ ಗದ್ದಲ ಕೇಳಿ ಫರಹಾದಮಿಯ್ಯಾ ಮೇಲಿನಿಂದ ಕೆಳಗಿಳಿದ. ಇಂದು ಯುನಿವರ್ಸಿಟಿಗೆ ಹೋಗಿರಲಿಲ್ಲ...ಹೊತ್ತಾಗಿ ಮಲಗಿ ಎದ್ದಿದ್ದ....ಪಾವಟಿಗೆಗಳಿಂದ ಇಳಿಯುತ್ತ ಕಣ್ಣುಜ್ಜಿಕೊಳ್ಳುತ್ತ ಕೆಳಗಡೆ ಬಂದ. ಮೈ ಮುರಿದು, ಆಕಳಿಸುತ್ತ ಕೇಳಿದ–

''ಅಮ್ಮಿಜಾನ, ಮತ್ತೆ ರಷ್ಕ್‌ಕಮರಳ ಜಗಳ, ಕೇಸ ಬಂದಿದೆಯೇನು ?''

''ಅರೆ, ನಾವು ಮನೆಯಿಲ್ಲದ, ಕೃತಘ್ನರ ಮೇಲೆ ಎಷ್ಟೊಂದು ಉಪಕಾರ ಮಾಡಿದೆವು. ರಷ್ಕ್‌ಕಮರಳನ್ನು ಸ್ಕೂಲಿಗೆ ಕಳಿಸಿದೆವು...ಸಂಸ್ಕೃತಿ ಕಲಿಸಿದೆವು, ಆಚಾರ–ವಿಚಾರ ಕಲಿಸಿದೆವು....'' ಎಂದು ಮೇಮ ಸಾಬ ಫಿರ್ಯಾದಿ ಸಲ್ಲಿಸಿದಳು ಮಗನಿಗೆ...

''ಅಮ್ಮಿಜಾನ, ತಾವಿನ್ನು ಸುಮ್ಮನಿರಿ. ನಾವಿಂದು ಈ ಎಲ್ಲ ಜಗಳ ಮುಗಿಸಲಿದ್ದೇವೆ. ಕಮರ ಕೀ ಖಾಲಾ, ತಾವು ತಮ್ಮ ಮನೆಗ ದಯಮಾಡಿಸಿ...''

''ನನಗೆ ಧಮ್ಕಿಕೊಡಬೇಡ ಭಯ್ಯಾ, ದೇವರ ಭೀತಿಯಾದರೂ ಇರಲಿ...''

ಖಾಲಾ, ನೆಲದ ಮೇಲೆ ಕೈಯೂರಿ ಏಳುತ್ತ ಹೇಳಿದಳು. ಮೇಲಿಂದ ಕೆಳಗಿಳಿದು ಹೊರಗೆ ಬಂದಳು. ಫುರಕಾನ ಮಂಜಿಲ್‌ದ ಸಫ್ದರ್ ಹುಸೇನ ಖಾನ ಕಂಧಾರಿ ಎಂ. ಎ. (ಪಾರಸಿ)ಯ ಕಿವಿಯಲ್ಲಿ ತನ್ನ ಮನೆತನದ ಕಥೆಯಲ್ಲ ಬಿದ್ದಿದೆ ಎಂಬುದು ಹಾಗೂ ರಷ್ಕಕಮರಳಲ್ಲಿ ಅವನಿಗೆ ಮೋಹವಿದೆಂಬುದು ಅವಳಿಗೆ ಭರವಸೆಯುಂಟಾಗಿತ್ತು. ರೋಷ ಹಾಗೂ ನಾಚಿಕೆಯಿಂದ ಸಿಡಿಮಿಡಿಗೊಂಡು ಪಾವಟಿಗೆ ಇಳಿದಳು. ರಷ್ಕಕಮರ ಉರ್ಫ್ ಕಮರನ್ ಅಂಗಳದ ಒಂದು ಮೂಲೆಯಲ್ಲಿ ಹ್ಯಾಂಡ್ ಪಂಪಿನ ಹತ್ತಿರ, ತುದಿ ಗುಂಡಿಯಲ್ಲಿ ಕುಳಿತು ಮುಖ ತೊಳೆದುಕೊಳ್ಳುತ್ತಿದ್ದಳು. ರೇಶ್ಮೆಯ ದುಪಟ್ಟಾ ಸಮೀಪದ ಬಳ್ಳಿಯ ಮೇಲೆ ಒಣಗುತ್ತಲಿತ್ತು.

ಕಟ್ಟೆಯ ಮೇಲೆ ಹೇರ ಆಯಿಲ್ ಬಾಟ್ಲಿ, ಸೋಪ ಬಾಕ್ಸ್‌ನಲ್ಲಿ ಲಕ್ಸ್ ಸೋಪ ಇರಿಸಲಾಗಿತ್ತು. ಈ ಎಲ್ಲ ಸೊಗಸುಗಾರಿಕೆಗೆ, ಸಿಂಗಾರಕ್ಕೆ ಹಣ ಎಲ್ಲಿಂದ ಬರುತ್ತದೆ... ರಷ್ಕಕಮರ್ ಮುಖ ತೊಳೆದುಕೊಂಡು ತಲೆಯೆತ್ತಿದಳು. ಅವಳ ಮುಖ ನೋಡಿದ ಕೂಡಲೇ ಫರ್‌ಹಾದಮಿಯ್ಯಾನ ಸಿಟ್ಟೆಲ್ಲಾ ಮಟಾಮಾಯವಾಯಿತು....

''ರಷ್ಕ್‌ಕಮರ್...ಮುಖ ತೊಳೆದುಕೊಳ್ಳುವುದು ಮುಗಿದ ನಂತರ, ಮೇಲೆ ಕೊಂಚ ನಮ್ಮ ಕೋಣೆಗೆ ಬರಬೇಕು....''

''ಮೇಮಸಾಬ ಎದುರಿಗೇ ಕುಳಿತಿದ್ದಾರಲ್ಲ....'' ರಷ್ಕ್‌ಕಮರ್ ನಗುತ್ತಲೇ ಉತ್ತರಿಸಿದಳು. ಫರ್‌ಹಾದ ಸಾಬ ಗಾಬರಿಯಿಂದ ಗುಲಾಬಿಯಾದರು. ನಿಜವಾಗಿಯೂ ನವಾಬಿ ಮಕ್ಕಳು...ನಾಚಿಕೆಯಿಲ್ಲದವರು.. ಉಡಾಳರು... ಅವನು ಅತ್ಯಂತ ಗಾಂಭೀರ್ಯದಿಂದ ಹೇಳಿದ–

''ರಷ್ಕ...ನಾವು ನಿನ್ನ ಒಳಿತನ್ನು ಬಯಸುತ್ತೇವೆ. ಇಲ್ಲಿ ಪ್ರತಿದಿನವೂ ನಿನ್ನಿಂದಾಗಿ ಒಂದಿಲ್ಲ ಒಂದು ವಿಚಿತ್ರ ವಿಷಯಗಳು ಕೇಳಿ ಬರುತ್ತಿವೆ...ಮೇಲೆ ಬಾ...ನಿನಗಾಗಿ ಏನು ವ್ಯವಸ್ಥೆ ಮಾಡಲು ಸಾಧ್ಯವೆಂಬುದನ್ನು, ಕುಳಿತು ಯೋಚಿಸೋಣ...''

''ಹಾಗೇ ಆಗಲಿ ಸಾಬ...ಈಗಲೇ ಬರುತ್ತೇನೆ....ನೀವು ಹೋಗಿ.....'' ಎಂದು ಹುಡುಗಿ ಮೊದಲಿನಂತೆಯೇ ನಿರ್ವಿಕಾರತೆಯಿಂದ ಉತ್ತರಿಸಿದಳು....

ಕೆಲ ಹೊತ್ತಿನ ನಂತರ ನಖರಾದೊಂದಿಗೆ, ಗಂಡಸರು ಹತ್ತಿ ಹೋಗುವ ಪಾವಟಿಗೆಗಳ ಮೇಲೆ ಹತ್ತಿ ಎರಡನೆಯ ಅಂತಸ್ತಿನಲ್ಲಿದ್ದ ಆಗಾ ಫರ್‌ಹಾದ್‌ರ ಸಾಮ್ರಾಜ್ಯದಲ್ಲಿ ತಲುಪಿದಳು. ಅವನೊಂದು ಕುರ್ಚಿಯ ಮೇಲೆ ಬಾಗಿಲದ ಹತ್ತಿರವೇ

ಕುಳಿತು ಘಾನಿಯ ಕಾವ್ಯದ ಪುಟಗಳನ್ನು ತಿರುವಿ ಹಾಕುತ್ತಿದ್ದ. ಬಾಗಿಲ ಕೆಳ ಭಾಗಕ್ಕೆ ಕಬ್ಬಿಣದ ಸಳಿ ಹಾಕಿದ್ದರು. ಅದು ಓಣಿಯ ಕಡೆ ತೆರೆದುಕೊಳ್ಳುತ್ತಿತ್ತು. ತುಂಬ ಸೊಗಸಾದ ಗಾಳಿ ಆ ಕಡೆಯಿಂದ ತೂರಿ ಬರುತ್ತಲಿತ್ತು.

''ಹ್ಞಂ ! ಹೇಳಿ...'' ರಷ್ಕ್‌ಕಮರ ಕೋಣೆಯಲ್ಲಿ ಬಂದು ಯಾವುದೇ ಮುಲಾಜಿಲ್ಲದೆ ಕೇಳಿದಳು.

''ಕಮರೀನ್....'' ಎನ್ನುತ್ತ ಫರ್‌ಹಾದ್ ಸಾಹೇಬ ಪುಸ್ತಕವನ್ನು ಕಾಶ್ಮೀರಿ ಟೀಪಾಯ್ ಮೇಲೆ ಇರಿಸಿ ಮಾತು ಆರಂಭಿಸಿದ. ''ನಾವು ನಿನ್ನನ್ನು ಎರಡು ವರ್ಷ ದಿಂದ ನೋಡುತ್ತಿದ್ದೇವೆ. ನೀನು ಇಲ್ಲಿಗೆ ಬಂದು ಎರಡು ವರ್ಷ ಆಯಿತು ತಾನೆ ?...ಈ ಮೊದಲು ನಿನ್ನ ಬಗ್ಗೆ ಯಾವುದೇ ದೂರು ಕೇಳಿಬರುತ್ತಿರಲಿಲ್ಲ. ಎಲ್ಲಿಯವರೆಗೂ ನೀನು ಹೈಸ್ಕೂಲಿಗೆ ಹೋಗುತ್ತಿದ್ದೆಯೋ ಅಲ್ಲಿಯವರೆಗೂ ಕಾಶ್ಮೀರಿ ಓಣಿಯಲ್ಲಿ ಶಾಂತಿ ನೆಲೆಸಿತ್ತು. ನೀನೇಕೆ ಸ್ಕೂಲಿಗೆ ಹೋಗುವುದನ್ನು ನಿಲ್ಲಿಸಿ ಬಿಟ್ಟೆ ?''

''ಅಲ್ಲಿ, ಕೆಲ ದೊಡ್ಡವರ ಮಕ್ಕಳು ನಾವು ಸ್ಕೂಲಿಗೆ ಬರುವುದರ ಬಗ್ಗೆ ತಕರಾರು ಮಾಡಿದರು. ಆಗ ನಾವು ಹೋಗಲಿ, ಹಾಳಾಗಿ ಹೋಗಲಿ ಶಾಲೆ, ನಾವೇನು ನಿಮ್ಮ ಜೊತೆ ಕುಳಿತು ಓದಬೇಕೆಂದು ಇಚ್ಛಿಸಿಲ್ಲ...''

''ರಷ್ಕ್‌ಕಮರ್, ಕುಳಿತುಕೋ''

ಆಕೆ ಕೆಳಗೆ ಹಾಸಿದ ರತ್ನ ಗಂಬಳಿಯ ಮೇಲೆ ಕೂಡತೊಡಗಿದಳು....

ಆಗ ಅವನು ''ಹ...ಹ...ಅಲ್ಲಿ...ಅಲ್ಲ....ಇಲ್ಲಿ....'' ಎಂದು ಸೋಫಾದ ಕಡೆ ತೋರಿಸಿದ.

ಆಕೆ ಸೋಫಾದ ಮೇಲೆ ಕುಳಿತಳು.

''ಇಂದು ನೀನು, ನಿನ್ನ ಸಂಪೂರ್ಣ ಕಥೆ ಹೇಳು. ನೀವು ಇದೆಲ್ಲ ಏನು ಮಿಸ್ಟ್ರಿ ಮಾಡಿಟ್ಟಿದ್ದೀರಿ...''

''ಮಿಸ್ಟ್ರಿ....ಏನು ಹಾಗೆಂದರೆ....?''

''ರಹಸ್ಯ..''

''ನಮ್ಮದೆಲ್ಲ ರಹಸ್ಯ ಎಲ್ಲಿ ಬಂತು ಸಾಹೇಬರೆ...ರಹಸ್ಯವೆಲ್ಲ ದೊಡ್ಡವರ ಜೀವನದಲ್ಲಿರುತ್ತದೆ...ನಾವು ಅತ್ಯಂತ ಸಣ್ಣ ಹಾಗೂ ನಿಕೃಷ್ಟ ಜನರಾಗಿದ್ದೇವೆ...''

''ಲಾಹುಲ್‌ವಲಾ ಖುವತ್...ಆದರೆ ತಾಯಿಯವರಲ್ಲಿ ಓಣಿಯವರೆಲ್ಲ ಏನೇನೋ ನಮೂನಮೋನಿ ಮಾತುಗಳನ್ನು ಹೇಳುತ್ತಿದ್ದಾರಲ್ಲ....''

''ಎಲ್ಲರೂ ಸತ್ಯವನ್ನೇ ಹೇಳುತ್ತಿದ್ದಾರೆ.''

''ಏನು ಹಾಗೆಂದರೆ....?''

''ಹೌದು ಸಾಹೇಬ, ನಮ್ಮಲ್ಲಿ ಇದುವೇ ವೈಶಿಷ್ಟ್ಯವಾಗಿದೆ, ನಾವೆಂದೂ ಸುಳ್ಳು ಹೇಳುವುದಿಲ್ಲ.''

''ನೀವು ಇಲ್ಲಿಗೆ ಬಂದಾಗ, ಊರಲ್ಲಿಯ ಧಂಧೆ ಮಂದವಾದ್ದರಿಂದ ಪಟ್ಟಣಕ್ಕೆ ಮರಳಿ ಬಂದೆವು''– ಎಂದು ಹೇಳಿದಿರಿ.

''ನಾವು ಹೇಳಿದ್ದು ಅದೂ ಕೂಡ ಸತ್ಯವಾಗಿದೆ. ನಾವು ಊರೂರು ತಿರುಗುತ್ತಿದ್ದೆವು. ಒಂದು ರೀತಿ ಅಲೆಮಾರಿಗಳಾಗಿದ್ದೆವು. ಚಿಕ್ಕಮ್ಮ ಹೇಳಿದಳು, ತಿರುಗುತ್ತ ತಿರುಗುತ್ತ ಚಪ್ಪಲಿ ಹರಿದು ಹೋದವು...ಮೈಯೆಲ್ಲ ಹಣ್ಣಾಯಿತು...ಇನ್ನು ಪಟ್ಟಣಕ್ಕೆ ಹಿಂದಿರುಗೋಣ....ಇಲ್ಲಿ ಯಾರೋ ಹೇಳಿದರು...ನಿಮ್ಮ ಅಧೀನದಲ್ಲಿರುವ ಕೋಣೆಗಳು ಖಾಲಿ ಇವೆ...ಅವುಗಳನ್ನು ಬಾಡಿಗೆಗೆ ಕೊಡುತ್ತಾರೆ...ಎಂದು...ಇಲ್ಲಿಗೆ ಬಂದೆವು....ಹಾಡೋದು, ಬಾರಿಸೋದು ಬಹುತೇಕ ಬಿಟ್ಟಿದ್ದೇವೆ.... ಇಲ್ಲಿ ಅವಕ್ಕೆ ಅವಕಾಶವಿಲ್ಲ... ಮನೆ ಮನೆಯಲ್ಲಿ ರೇಡಿಯೋಗಳಿವೆ... ಚಿಕ್ಕಪ್ಪ ತನ್ನ ಮೊದಲಿನ ಹಜಾಮತಿ ಕೆಲಸ ಆರಂಭಿಸಿದ...ಇಡೀ ಓಣಿಯ ಜನರ ಹಜಾಮತಿ ಅವರೇ ಮಾಡುತ್ತಾರೆ... ಇದರಲ್ಲಾವ ಉದ್ದ–ಅಗಲ ರಹಸ್ಯದ ಮಾತೆಲ್ಲಿ ಬಂತು ?''

''ಈಗ ನಿನ್ನ ಇಚ್ಛೆ ಏನಿದೆ ಹೇಳು ರಷ್ಕಮರ...ಮದುವೆ ಮಾಡಿಕೊಳ್ಳುವುದಿಲ್ಲವೆ...?''

''ಮದುವೆ...?''

''ಅದೇಕೆ ? ನಿನಗೆ ಆಶ್ಚರ್ಯವೇಕಾಯಿತು ? ಹುಡುಗಿಯರು ದೊಡ್ಡವರಾದ ಕೂಡಲೇ ಮದುವೆ ಮಾಡಬೇಕೆಂಬುದು ಪದ್ಧತಿ.''

''ದೊಡ್ಡ ದೊಡ್ಡ ಶ್ರೀಮಂತ ಮನೆತನದ ವಯಸ್ಸಿನ ಹುಡುಗಿಯರು, ತಾಯಿ ತಂದೆಯವರೊಂದಿಗಿದ್ದೂ ಮದುವೆ ಇಲ್ಲದೆ ಅವರ ಕೌಮಾರ್ಯ ಕರಗಿ ಹೋಗುತ್ತಲಿದೆ. ಹೀಗಿರುವಾಗ ನಮ್ಮಂಥವರೊಂದಿಗೆ ಮದುವೆ ಮಾಡಿಕೊಳ್ಳುವವರು ಬುದ್ಧಿ ಮಾಂದ್ಯರಿರಬೇಕು, ಅಷ್ಟೇ. ಸಾಹೇಬ, ನೀವು ಎಂಥ ಮುಗ್ಧ ಮಾತು ಆಡುತ್ತಿದ್ದೀರಿ... ಕೊಡಿ... ಇಲ್ಲಿ.. ನಮಗೆ ತೋರಿಸಿ... ನೀವು ಏನು ಓದುತ್ತಿರುವಿರಿ...'' ಆಕೆ ಪುಸ್ತಕವನ್ನು ಟೀಪಾಯಿ ಮೇಲಿಂದ ಎತ್ತಿಕೊಂಡಳು. ಅದರ ಪಾನ ತಿರುವಿದಳು...ಒಂದು ಗಜಲ್ ಗುನಗುನಿಸತೊಡಗಿದಳು...

''ಕೊಂಚ ಜೋರಾಗಿ....''

''ಹಾಗಾದರೆ ಬಾಗಿಲು ಹಾಕಿರಿ...ಕೆಳಗೆ ಕೇಳಿಸುತ್ತದೆ...''

ಫರ್‌ಹಾದ ಎದ್ದು ಬಾಗಿಲು ಹಾಕಿದ. ರಷ್ಕಮರ್ ಕೊಂಚ ತಗ್ಗಿದ ದನಿಯಲ್ಲಿ ರಾಗಬದ್ಧವಾಗಿ ಹಾಡತೊಡಗಿದಳು...ಫರ್‌ಹಾದ್ ತುಂಬ ಖುಷಿಯಿಂದ ತನ್ಮಯನಾಗಿ ಕೇಳತೊಡಗಿದ...ಕೇಳುತ್ತಿದ್ದಂತೆಯೇ ಒಮ್ಮೆಲೇ ಎದ್ದು ಹೇಳಿದ– ''ರಷ್ಕೇ...ಕೈ ಕೊಡಿಲ್ಲಿ... ನಿನ್ನ ಕರೀಯರ್ ಏನು ಅನ್ನುವುದು ನನಗೀಗ ಗೊತ್ತಾಯಿತು. ನಾವು ನಿನ್ನನ್ನು ಕವಯಿತ್ರಿಯನ್ನಾಗಿ ಮಾಡುತ್ತೇವೆ...''

**-3-**

“ಆಲ್ ಇಂಡಿಯಾ ಕವಿ ಗೋಷ್ಠಿಯನ್ನು ಖೈಸರ್‌ಬಾಗದ ಬಾರಾದರಿಯ ಕೇಂದ್ರದಿಂದ ರಿಲೆ ಮಾಡುತ್ತಿದ್ದೇವೆ... ಶ್ರೀಮತಿ ಸೋಫಿಯ ನಸೀಮ ಸೇಬ ಆಬಾದಿ ಅವರು ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದಾರೆ. ಈಗ ತಾನೇ ತಾವು ಶ್ರೀಮತಿ ನಾಜನೀನ ಬರೇಲ್ವಿ ಅವರಿಂದ ಅವರ ಕವಿತೆ ಕೇಳಿದಿರಿ...ಈಗ ಲಖನೌದ ಪ್ರತಿಭಾವಂತ ಕವಯಿತ್ರಿ ಮಿಸ್ ರಷ್ಕ್‌ಕಮರ್ ಅವರಿಂದ ಅವರ ಅತ್ಯಂತ ಹೊಸದಾದ ಗಜಲ್ ಕೇಳಿರಿ...ಬನ್ನಿ, ಸೋದರಿ ರಷ್ಕಕಮರ್....”

ಕವಿಗೋಷ್ಠಿ ಮುಗಿದ ನಂತರ ರಷ್ಕ್‌ಕಮರ್ ತನ್ನ ಲೇಡಿ ಹೇಮಿಲ್ಟನ್‌ಳ ಕಪ್ಪು ಬುರ್ಕಾ ಹೊದ್ದುಕೊಂಡು ಹಿಂದಿನ ಬಾಗಿಲಿನಿಂದ ಹೊರ ಬಂದು ಗ್ಯಾಲರಿ ತಲುಪಿದಳು. ಅಲ್ಲಿ ಆಗಾ ಫರಹಾದ್ ಕರಿಯ ಷೇರವಾನಿ, ಬಿಳಿಯ ಪೈಜಾಮ ಹಾಕಿ ಕೊಂಡು ರೇಡಿಯೊ ಸ್ಟೇಷನ್ನಿನ ಓರ್ವ ತರುಣ ಅಧಿಕಾರಿ ಸೈಯ್ಯದ ಸಾಹೇಬನೊಂದಿಗೆ ಕುಳಿತಿದ್ದ. ಸೈಯ್ಯದ್ ಸಾಹೇಬ ಹೆಡ್‌ಫೋನ್ ತೆಗೆದ... ಅವನ ಜನ ಟೇಪ ರಿಕಾರ್ಡರ್ ಮುಂತಾದ ಸಾಮಾನುಗಳನ್ನು ಜೋಡಿಸಿಕೊಳ್ಳತೊಡಗಿದರು.

“ರಷ್ಕೆ ಸಾಹೇಬಾ, ನಿಮ್ಮ ರಾಗಬದ್ಧ ಕಾವ್ಯ ವಾಚನ ಇಡೀ ಗೋಷ್ಠಿಯನ್ನೇ ಕೊಳ್ಳೆ ಹೊಡೆಯಿತು.” ಸೈಯ್ಯದ್ ಸಾಹೇಬ ಮುಗುಳ್ನಗುತ್ತ ಹೇಳಿದ. ರಷ್ಕ್‌ಕಮರ್ ಮುಖದ ಮೇಲಿದ್ದ ಪರದೆ ಎತ್ತಿ ಕೃತಜ್ಞತೆ ಹೇಳಿದಳು.

“ಈಗ ಇಲ್ಲಿಂದ ಹೊರಡೋಣ. ವರ್ಮಾ ಸಾಹೇಬ ನಿನಗಾಗಿ ಇನ್ನೊಂದು ಪ್ರೋಗ್ರಾಮ್ ಫಿಕ್ಸ್ ಮಾಡಿದ್ದಾರ...” ಎಂದ ಆಗಾ ಫರ್‌ಹಾದ್ ಏಳುತ್ತ ಮತ್ತೆ ಹೇಳಿದ– “ಪ್ರೋಗ್ರಾಮ್ ಬಗ್ಗೆ ಅವರು ನಾಳೆ ಹೇಳುತ್ತಾರೆ... ಆಗಲಿ, ಸಯ್ಯದ್ ಭಾಯಿ, ನಾಳೆ ವರ್ಮಾ ಅವರಲ್ಲಿ ನಿಮ್ಮನ್ನು ಕಾಣುತ್ತೇನೆ....”

ಆಗಾ ಫರ್‌ಹಾದ್‌ನೊಂದಿಗೆ ಹೊರಗೆ ಬಂದು ರಷ್ಕ್‌ಕಮರ್ ಟಾಂಗಾದಲ್ಲಿ ಕುಳಿತಳು.

“ನಿನಗೆ ಯಾರೂ ಪ್ರಶ್ನೆ ಕೇಳಲಿಲ್ಲ ತಾನೇ ಅನಾವಶ್ಯಕವಾಗಿ....” ಫರ್‌ಹಾದ್ ವಿಚಾರಿಸಿದ.

“ಪ್ರಶ್ನೆಗಳು ಯಾವಾಗಲೂ ಅನಾವಶ್ಯಕವಾಗಿರುತ್ತವೆ...” ಎಂದ ರಷ್ಕ್‌ಕಮರ್,

“ಆದರೆ ಈಗ ನೀವು ಯಾವ ಪ್ರೋಗ್ರಾಮ್ ಬಗ್ಗೆ ಯೋಚಿಸುತ್ತಿದ್ದೀರಿ...” ಎಂದಳು.

“ಇದು ಕೂಡ ಅನಾವಶ್ಯಕ ಪ್ರಶ್ನೆಯಾಗಿದೆ. ನೀನು ಸುಮ್ಮನಿರು...ನೋಡುತ್ತ ಹೋಗು... ನಾವು ನಿನ್ನ ಕರೀಯರ್ ರೂಪಿಸುತ್ತಿದ್ದೇವೆ...”

ಟಾಂಗಾ ಪಾಟೆನಾಲೆಯ ಹತ್ತಿರದ ಒಂದು ಮನೆಯ ಮುಂದೆ ಹೋಗಿ ನಿಂತಿತು. ಆ ಮನೆಯ ಬಾಗಿಲದ ಮೇಲೆ ಭರ್ಜರಿಯಾದ ಪರದೆ ಇಳಿಬಿದ್ದಿತ್ತು. ಆದರೆ ಈ ಮನೆ ಫುರ್‌ಖಾನ್ ಮಂಜಿಲ್‌ದ ಆ ಕೋಣೆಗಿಂತ ಸಾವಿರ ಪಟ್ಟು ಚೆನ್ನಾಗಿತ್ತು. ಮನೆಯ

ಒಳಗಡೆ ಚಿಕ್ಕದಾದ ಅಂಗಳ, ಒಳ ಪಡಸಾಲೆ, ನಂತರ ಎರಡು ಕೋಣೆಗಳು. ಮತ್ತೊಂದೆಡೆ ಅಡಿಗೆ ಮನೆ. ಅಮೃತಫಲದ ಗಿಡದ ಕೆಳಗೆ ನಳವಿತ್ತು. ರಷ್ಕ ಕಮರ್‌ಳಿಗೆ ಕವಿಗೋಷ್ಠಿಗಳಿಂದ ಸಂಪಾದನೆ ಆಗುತ್ತಲಿತ್ತು. ರೇಡಿಯೋ ಕಾರ್ಯಕ್ರಮ ಗಳೂ ಸಿಗತೊಡಗಿದ್ದವು. ಆರೇಳು ತಿಂಗಳಲ್ಲಿ ಅವಳ ಜೀವನದಲ್ಲಿ ತುಂಬ ಪರಿವರ್ತನೆ ಯಾಯಿತು. ಚಿಕ್ಕಪ್ಪ ಈಗ ಯಾವುದಾದರೂ ಶ್ರೇಷ್ಠ ಹೇರ್‌ಕಟಿಂಗ್ ಸಲೂನಿನಲ್ಲಿ ಕೆಲಸ ಮಾಡಬೇಕೆಂದು ಬಯಸುತ್ತಿದ್ದ. ಮಿಸ್ ರಷ್ಕಕಮರ್‌ಳ ಚಿಕ್ಕಪ್ಪ ನಾಪಿತನಾಗಿದ್ದಾ ನೆಂದು ಜನ ಕರೆಯದಿರಲಿ ಎಂದು, ಆಕೆಯು ಚಿಕ್ಕಮ್ಮ ಇದನ್ನು ಒಪ್ಪಲಿಲ್ಲ. ಫರ್‌ಹಾದ್ ಸಾಹೇಬ ಒಂದು ಅಂಗಡಿಯಲ್ಲಿ ಅವನಿಗ ಬೈಂಡಿಂಗ್ ಕೆಲಸಕ್ಕೆ ಸೇರಿಸಿದ.

ಮಾರನೆಯ ದಿನ ಸಾಯಂಕಾಲ ಐದು ಗಂಟೆಗೆ ಕಮರನ್ ಮತ್ತು ಜಮೀಲಿನ್ ಬುರ್ಖಾ ಹಾಕಿಕೊಂಡು ಫರ್‌ಹಾದ್‌ಸಾಹೇಬ ಹೇಳಿದ ನಜರಬಾಗದ ಮನೆ ತಲುಪಿದರು. 'ಬಾಲಾಯೀ ಮಂಜಿಲ್'ದ ಬಾಲ್ಕನಿಯಲ್ಲಿ ಮಿಯ್ಯಾಫರ್‌ಹಾದ್ ಇವರ ನಿರೀಕ್ಷೆಯಲ್ಲಿದ್ದ. ಸಣ್ಣ ಮಾಟ ಇವರನ್ನು ಮೇಲೆ ಬರುವಂತೆ ತಿಳಿಸಿದ. ಜಮೀಲಿನ್‌ಳಿಗೆ ಪಾವಟಿಗೆ ಹತ್ತುವುದು ತೊಂದರೆಯಾಗುತ್ತಿತ್ತು. ಫರ್‌ಹಾದ್ ಸ್ವತಃ ಓಡಿ ಕೆಳಗೆ ಬಂದ. ಆಕೆಗೆ ಆಸರ ನೀಡಿ ಮೇಲೆ ಕರೆದು ತಂದ. ಗ್ಯಾಲರಿಯಲ್ಲಿ ಒಂದು ಬಾಗಿಲದ ಮೇಲೆ ಸ್ಕ್ರೀನ್ ಬೋರ್ಡ ಇತ್ತು...ನರೇಂದ್ರ ಕುಮಾರ ವರ್ಮಾ ಜರ್ನಲಿಸ್ಟ್ (ಗೋಲ್ಡ್ ಮೆಡಲಿಸ್ಟ್) ರೈಟರ್, ಆ್ಯಂಡ್ ಆರ್ಟ್ ಎಡ್ವೈಜರ್....

ಕೋಣೆಯ ಸಾಜ-ಸಜ್ಜಾದಿಂದಲೇ ಅದೊಂದು ಇಂಟಲೆಕ್ಚುವಲ್ ವ್ಯಕ್ತಿಯ ವಾಸಸ್ಥಾನವೆಂದು ಹೇಳಬಹುದಾಗಿತ್ತು. ಗೋಡೆಗಳ ಮೇಲೆ ಚುಗ್ತಾಯಿಯ ಪೇಂಟಿಂಗ್ಸ್...ಒಂದೆಡೆ ಗಾಲಿಬ್‌ನ ಚಿತ್ರ ಇನ್ನೊಂದೆಡೆ ಟ್ಯಾಗೋರರ ಚಿತ್ರ. ಒಂದು ಮೂಲೆಯಲ್ಲಿ ಫ್ಲೋರ್ ಲ್ಯಾಂಪ್...ಬುಕ್‌ಶೆಲ್ಫ್‌ದಲ್ಲಿ ಇಂಗ್ಲೀಷ ಮತ್ತು ಉರ್ದು ಪುಸ್ತಕಗಳು. ಉದ್ದವಾದ ಅಷ್ಟು ಎತ್ತರವಲ್ಲದ ಮೇಜಿನ ಮೇಲೆ ಉರ್ದು ಪ್ರಗತಿ ಶೀಲ ಪತ್ರಿಕೆಗಳು ಹಾಗೂ ಪಾಕಿಸ್ತಾನಿ ಮಾಸಿಕಗಳು. ನೆಲದ ಮೇಲೆ ಬಣ್ಣ ಬಣ್ಣದ ಚಾಪೆ ಹಾಸಲಾಗಿದೆ. ಸಾಹೇಬ ಕೆಳಗೆ ಕುಳಿತು ರೇಡಿಯೋ ಸ್ಟೇಷನ್‌ದ ಗೆಳೆಯನೊಂದಿಗೆ ಮಾತು ಕತೆಯಲ್ಲಿ ಮಗ್ನನಾಗಿದ್ದ. ದೀವಾನ್‌ದ ಮೇಲೆ ಓರ್ವ ನಾಜುಕಾದ, ಗೌರ ವರ್ಣದ ಹದಿನೇಳು, ಹದಿನೆಂಟು ವರ್ಷದ ಹುಡುಗಿ ಸಾಧಾರಣ ಸೀರೆಯುಟ್ಟು ಮುದುಡಿಕೊಂಡು ಕುಳಿತಿದ್ದಳು. ಹೊಸದಾಗಿ ಬಂದ ಹುಡುಗಿಯರನ್ನು ಕಂಡು ಗಾಬರಿಯಾಗಿ ಎದ್ದು ನಿಂತಳು ಹಾಗೂ ಕೈ ಜೋಡಿಸಿ ನಮಸ್ಕರಿಸಿದಳು. ಸಾಹೇಬ ಆ ಕೂಡಲೇ ಎದ್ದು ನಿಂತ. ಕಮರನ್ ಮತ್ತು ಜಮೀಲಿಯನ್‌ಳಿಗೆ ತುಂಬ ಆದರದಿಂದ ನಮಸ್ಕಾರ ಹೇಳಿದ ಹಾಗೂ ಅತ್ಯಂತ ಆರ್ಟಿಸ್ಟಿಕ್ ಕುರ್ಚಿಗಳ ಮೇಲೆ ಕೂಡಿಸಿದ. ವರ್ಮಾ ಸಾಹೇಬ ಆಗ ಫರ್‌ಹಾದ್‌ನಿಗಿಂತ ವಯಸ್ಸಿನಲ್ಲಿ ಕೆಲ ವರ್ಷ ಹಿರಿಯ ನಾಗಿದ್ದ. ದಪ್ಪಗಿನ ಕಪ್ಪು ಬಣ್ಣದ ಫ್ರೇಮಿನ ಚಾಳೀಸು, ಖಾದಿ ಸಿಲ್ಕಿನ ಬಾದಾಮಿ ಕಲರಿನ ಜುಬ್ಬಾ, ನಹರೂ ಜಾಕೀಟ್, ಚೂಡಿದಾರ ಪೈಜಾಮಾ, ನೋಡಲು ಅತ್ಯಂತ ರುದ್ದ ಮನಸ್ಸಿನ, ಸೊಗಸುಗಾರನಾಗಿದ್ದ. ನೋಡಲು, ಕೇಳಲು ಕೂಡ ಚೆನ್ನಾಗಿದ್ದ.

ಬ್ಯಾಚ್ಯುಲರ್ ಅಪಾರ್ಟಮೆಂಟ್ ಅದು. ಆಳು ಹುಡುಗನನ್ನು ಕೂಗಿದ. ಅವನು ಬರದೇ ಹೋದಾಗ ಸಿಡಿಮಿಡಿಗೊಂಡು ಚಹಾದ ಟ್ರೇ ಎತ್ತಿಕೊಂಡು ತಾನೇ ಕಿಚನ್ ಕಡೆ ಓಡಿದ.

"ನೀವು ಈವರೆಗೂ ಸಾಹೇಬ ಖಾನಾ ಯಾರೆಂಬುದನ್ನು ಹೇಳಲಿಲ್ಲ. ರಷ್ಕ್‌ಕಮರ ಸುಮ್ಮನೆ ಕೇಳಿದಳು. ರೇಡಿಯೋದ ಮಿತ್ರ ದಿವಾನ್‌ದ ಮೇಲೆ ಕುಳಿತು ನಾಜೂಕು ಹೆಣ್ಣಿನೊಂದಿಗೆ ಮಾತನಾಡುತ್ತಿದ್ದ."

"ಅರೆ, ಆ ಮನುಷ್ಯ ಅಪರೂಪದ ವ್ಯಕ್ತಿಯಾಗಿದ್ದಾನೆ. ಭಾರೀ ಶ್ರೀಮಂತ. ತಾಯಿ–ತಂದೆ ಬೇರೆಡೆಯಿರುತ್ತಾರೆ. ಅವರು ಈ ಫ್ಲ್ಯಾಟ್ ಖರೀದಿಸಿ, ಆರ್ಟ ಮತ್ತು ಕಲ್ಚರ್‌ದ ಸೇವೆಗಾಗಿ ಮೀಸಲಿರಿಸಿದ್ದಾರೆ. ನಾವು ನಿನ್ನ ಬಗ್ಗೆ ಅವರಿಗೆ ಹೇಳಿದೆವು. ಅವರು ಆ ಕೂಡಲೇ ಒಂದು ಸ್ಕೀಮ್ ಸಿದ್ಧಗೊಳಿಸಿದ್ದಾರೆ. ಈಗ ನೋಡುತ್ತೀರು, ಅವರೇ ಬಂದು ಹೇಳುತ್ತಾರೆ" ಎಂದು ಆಗಾಫರ್‌ಹಾದ್ ಉತ್ತರಿಸಿದ.

ವರ್ಮಾ ಸಾಹೇಬ ಚಹಾ ಟ್ರೇಯೊಂದಿಗೆ ಮತ್ತೆ ಮರಳಿ ಬಂದರು ಮುಗುಳ್ನಗುತ್ತ. ಈಗ ಆಗಾ ಫರ್‌ಹಾದ್ ಮಾತು ಮಾತಿನಲ್ಲಿ ಅವನನ್ನು ವಿಚಾರಿಸಿದ– "ದೋಸ್ತ, ಈ ಹುಡುಗಿ ಯಾರು ?"

"ಇವಳಾ?...."

"ಗುಪ್ತಗಾಮಿನವಳೇನೊ ?"

"ಈ ಚಪ್ಪಟೆ ಮೂಗು, ಕಮಲ ನಯನ, ಬಡವಾದ ನಡುವುಳ್ಳವಳು ನಿಮಗ ಗುಪ್ತಗಾಮಿನವಳಾಗಿ ಕಾಣಿಸುತ್ತಾಳೇನು....."

"ಅವಳಿಗೆ ನಡುವೇ ಇಲ್ಲವೆಂದು ಕೇಳಿರುವೆ. ದೇವರಿಗೇ ಗೊತ್ತು ಅವಳು ಲಂಗದ ಲಾಡಿ ಎಲ್ಲಿ ಕಟ್ಟಿಕೊಳ್ಳುತ್ತಾಳೋ ಏನೋ...." ಎಂದು ಫರ್‌ಹಾದ್ ಸಾಹೇಬ ಯಕ್ಕಾಗಾಡಿ, ಟಾಂಗಾವಾಲಾನ ತರಹ ಗುನುಗುನಿಸಿದ...

"ಲಾಹುಲ್‌ವಲಾ ಖುವ್ವತ್..." ವರ್ಮಾ ಸಾಹೇಬ ಬೇಸರದಿಂದ ಹೇಳಿದ ಹಾಗೂ ಗೌರವರ್ಣದ ಹುಡುಗಿಯೊಂದಿಗೆ ಮಾತಾಡತೊಡಗಿದ– "ಮೋತಿ...ಇತ್ತ ಬಂದು ಕೂಡು... ಚಹಾ ಮಾಡುವುದನ್ನು ಕಲಿ...ರಷ್ಕ್‌ಕಮರ್ ಸಾಹಿಬಾ, ನೀವು ಆಕೆಗೆ ಕೊಂಚ ತರಬೇತಿ ಕೊಡಿ...."

ಹುಡುಗಿ ದೀವಾನ್‌ದಿಂದ ಎದ್ದು ಪಲ್ಲಂಗದ ಮೇಲೆ ಬಂದು ಕುಳಿತಳು. ಗಾಬರಿಯಾದವಳ ಹಾಗೆ ಎಲ್ಲರ ಮುಖ ನೋಡಲಾರಂಭಿಸಿದಳು.

"ತಗೋ...ಎಲ್ಲರಿಗೂ ಚಹಾ ಮಾಡಿಕೊಡು..." ಎನ್ನುತ್ತ ವರ್ಮಾ ಸಾಹೇಬ ಟ್ರೇ ಅವಳತ್ತ ಸರಿಸಿದ.

"ಅಡುಗೆ ಮನೆಯಲ್ಲಿ ಕೂಡುವುದನ್ನು ಬಿಡು ನನ್ನವಳೆ,(ಚೂರಿ, ಚಮಚಾ ಗಳಿಂದ ಉಣ್ಣುವುದನ್ನು ಕಲಿ. ಲಂಗಾ ತೊಡುವುದನ್ನು ಬಿಡು ನನ್ನವಳೆ,)ಸೀರ ಉಡುವುದನ್ನು

ಕಲಿ, ಗಿಡದ ಮೇಲೆ ಕೂಡುವುದನ್ನು ಬಿಡು ನನ್ನವಳೆ...ಢೋಲ, ತಂಬೂರಿ...'' ಏನೇನೋ ಆಲಾಪ ಮಾಡತೊಡಗಿದ ದಿಲ್ಲಿಯಿಂದ ಬಂದಿದ್ದ ಸೈಯ್ಯದ್ ಸಾಬ....

''ಇದೇನು...ಇದೆಲ್ಲಿಯ ಲೋಕ ಗೀತ...?'' ಮಿರ್ಜಾ ಸಾಹೇಬ ಆಸಕ್ತಿಯಿಂದ ಕೇಳಿದ.

''ಓರ್ವ ಹಳ್ಳಿಯ ಹೆಣ್ಣನ್ನು ಮೋಹಿಸಿದ ದಿಲ್ಲಿಯ ಇಂಗ್ಲಿಷ್ ಮನುಷ್ಯ.. ಅದರ ಬಗ್ಗೆ ಆ ಕಾಲದಲ್ಲಿ ನಮ್ಮ ಕಡೆ ಈ ಹಾಡು ಹಾಡುತ್ತಿದ್ದರು.''

''ಮತ್ತೇನಾಯಿತು....?''

''ಆ ಇಂಗ್ಲಿಷ್ ಮನುಷ್ಯನ ಕೊಲೆಯಾಯಿತು...''

''ವಿಲಿಯಂ ಫ್ರೇಜರ್...?'' ಆಗಾ ಫರ್‌ಹಾದ್ ವಿಚಾರಿಸಿದ.

''ನಮ್ಮ ಮೋತಿಯನ್ನು ಯಾವನಾದರೂ ಫಿರಂಗಿ ಪ್ರೀತಿಸಿದರೆ ನಾವು ಕೂಡ ಅವನನ್ನು ಕೊಲ್ಲುತ್ತೇವೆ'' ಎಂದು ಮಿರ್ಜಾ ಸಾಹೇಬ ಉದ್ಘೋಷಿಸಿದ....

''ಸಾಹೇಬರೆ, ಈ ಕೊಲೆ, ಈ ರಕ್ತದ ಮಾತುಗಳನ್ನಾಡಬೇಡಿರಿ. ಇದೆಲ್ಲ ಅಪಶಕುನ....'' ಎಂದು ರಷ್ಕ್‌ಕಮರ್ ಹೇಳಿದಳು.

''ಬಂಧುಗಳೇ....'' ಮಿರ್ಜಾ ಸಾಹೇಬ ಸಂಡ್‌ವಿಚ್ ಸರ್ವ್ ಮಾಡುತ್ತ ಹೇಳಿದ–

''ಕಳೆದ ವಾರ ನಾವು ನಮ್ಮ ತಾಯಿಯನ್ನು ಕರೆದುಕೊಂಡು ಅಲಿಗಂಜದ ಜಾತ್ರೆಗೆ ಹೋಗಿದ್ದೆವು. ಆಕೆ ಪಾಪ, ಹನುಮಂತ ದೇವರ ಗುಡಿಗೆ ಹೋಗಿ ನಾವು ಸರಿಯಾದ ದಾರಿಯಲ್ಲಿ ಸಾಗುವಂತೆ ನಮಗಾಗಿ ಪ್ರಾರ್ಥಿಸುತ್ತಾಳೆ, ಬೇಡಿಕೆ ಸಲ್ಲಿಸುತ್ತಾಳೆ, ಹರಕೆ ಹೊರುತ್ತಾಳೆ. ಅಂದರೆ...ನನ್ನದೊಂದು ಮನೆ, ಅಂದರೆ... ಗೃಹಸ್ಥನಾಗಲೆಂದು...ಈಗ ಈಶ್ವರೀಯ ಶಕ್ತಿಯ ಚಮತ್ಕಾರ ನೋಡಿ... ತಾಯಿ ಮಂದಿರದ ಒಳಗೆ ಹೋದಳು... ನಾವು ಕ್ಯಾಮರಾ ತೆಗೆದುಕೊಂಡು ಅತ್ತಿತ್ತ ನೋಡುತ್ತ ಹೊರಟೆವು...ಆಗ ಇವರು ಕಾಣಿಸಿಕೊಂಡರು...ಒಂದು ಗಿಡದ ಬುಡದಲ್ಲಿ ನಿಂತು ವರ್ಷಾಋತುವಿನ ಗೀತ ಹಾಡುತ್ತಿದ್ದಳು...ಇಡೀ ಟೋಳಿ ಆಕೆಯೊಂದಿಗಿತ್ತು...ಅತ್ಯಂತ ಪ್ರಭಾವಶಾಲಿ, ಸುಮಧುರ ಕಂಠ....ಹೆಚ್ಚೇನು...ರಷ್ಕ್‌ಕಮರ್ ಸಾಹಿಬಾ...ನಿಮಗೆ ಸರಿದೊರೆಯಾಗಿ ನಿಲ್ಲಬಲ್ಲ ಗಾಯಕಿ....ನಾವು ನಿಮ್ಮ ಹಾಡುಗಳನ್ನು ಅನೇಕ ಸಲ ರೇಡಿಯೋದಲ್ಲಿ ಕೇಳಿದ್ದೇವೆ....''

''ಓಹೋ ಹೀಗೋ....ಹಾಗಾದರೆ ನೀವು ಆಕೆಯನ್ನು ಇಲ್ಲಿಗೆ ಕರೆತಂದಿರಿ...'' ರಷ್ಕ್‌ಕಮರ್ ಯಾವುದೇ ಸಂಕೋಚವಿಲ್ಲದೆ ನಗುತ್ತ ಹೇಳಿದಳು...

''ತುಂಬ ಧಾವತಿ ಪಟ್ಟು...ಅವಳನ್ನೊಪ್ಪಿಸಿ ಕರೆತಂದಿರುವೆ...ಖಾಸ್ ಅಲ್ಲಾಸ್, ಜಿಲ್ಲಾ ಫೈಜಾಬಾದದ ಪಾತರದವಳು...''

''ಮತ್ತೆ ತಾಯಿಯವರಿಗೆ ಗೊತ್ತಾದರೆ....?'' ಅಚ್ಚರಿಯಿಂದ ಆಗಾ ಫರ್‌ಹಾದ್ ಕೇಳಿದ.

"ಈವರೆಗೂ ಅವರಿಗೆ ಈ ವಿಷಯ ಏನೂ ಗೊತ್ತಿಲ್ಲ. ನಾವಾದರೂ ಏನು ಮಾಡೋಣ...ಭಜರಂಗ ಬಲಿಯ ಮರ್ಜಿ ಹೀಗೆಯೇ ಇರಬೇಕು...ಹ್ಞೂಂ ! ಇದೆಲ್ಲ ಹೋಗಲಿ ಮಿತ್ರರ...ಈಗ ಕೇಳಿ...ನಮ್ಮ ಸ್ಕೀಮು ನಾವೊಂದು 'ಸಾಂಗ್ ಬರ್ಡ್ಸ್ ಕ್ಲಬ್' ಸ್ಥಾಪಿಸುತ್ತೇವೆ. ನೀವು ಮೂವರೂ...ನಿಮ್ಮ ಪ್ರತಿಭೆಯಿಂದಾಗಿ ಲೋಕಗೀತದ ಎಕ್ಸಪರ್ಟ್...ಅದರ ಸ್ಟಾರ್ಸ್...ನಗರಗಳಲ್ಲಿ ಪ್ರೋಗ್ರಾಮ್ ಕೊಡೋಣ.... ಟೂರ್ ಮಾಡೋಣ...ಸಾಂಗ್ ಬರ್ಡ್ಸ್‌ಕ್ಲಬ್ ಹೀಗೆಯೇ ಮೇಲಕ್ಕೆ ಹಾರುತ್ತದೆ. ನಾವು ಆರ್ಗನೈಜರ್...ಏಜೆಂಟ್...ನಿನ್ನೆ ನಾವು ಆರ್ಟ್‌ಸ್ಕೂಲಿನಿಂದ ಅದರ ಲೆಟರ್ ಹೆಡ್‌ದ ನಮೂನೆ ಕೂಡ ಮಾಡಿಸಿಕೊಂಡು ಬಂದಿದ್ದೇವೆ...ಇಲ್ಲಿ ನೋಡಿ..." ಎನ್ನುತ್ತ ಅವನು ಟೇಬಲ್ಲಿನ ಕೆಳಗಿನ ಡ್ರಾಯಿಂದ ಒಂದು ಕಾಗದ ತೆಗೆದ...ಅದರ ಮೇಲೆ ಬರೆದಿತ್ತು.

"ಸಾಂಗ್ ಬರ್ಡ್ಸ್ ಕ್ಲಬ್...ಮ್ಯಾನೇಜಿಂಗ್ ಡೈರೆಕ್ಟರ್ ಎಸ್. ಕೆ. ವರ್ಮಾ". ಮೂಲೆಯಲ್ಲಿ ಮಾವಿನ ಹಣ್ಣಿನ ಮರ.. ಅದರ ಮೇಲೆ ಪಕ್ಷಿಗಳು...ಕೆಳಗೆ ಒಂದು ಹುಡುಗಿ ಕುಳಿತು ತಂಬೂರಿ ನುಡಿಸುತ್ತಿದ್ದಾಳೆ...ಎಲ್ಲರೂ ಸರತಿಯಂತೆ ಆ ಕಾಗದ ನೋಡಿದರು...

"ಪಕ್ಷಿಗಳಿರುವಾಗ ಹುಡುಗಿಯ ಅವಶ್ಯಕತೆ ಏನಿದೆ...?" ಎಂದು ಆಗಾ ಫರ್ ಹಾದ್ ಆಕ್ಷೇಪ ಎತ್ತಿದ.

"ಭಾಯಿ, ಆಗಾಸಾಹೇಬ...ಈ ಸೂಕ್ಷ್ಮತೆ ನಿಮ್ಮ ತಿಳಿವಳಿಕೆಗೆ ನಿಲುಕದು... ಇನ್ನೂ ಮತ್ತೆ ಕೇಳಿ....ಇವಳ ಹೆಸರಿತ್ತು ಮೋತಿ....ನಾವಿರಿಸಿದ್ದೇವೆ ಸದಫ್ ಆರಾ ಬೇಗಂ ಮೋತಿ...." ಎನ್ನುತ್ತ ವರ್ಮಾ ಸಾಹೇಬ ಹುಡುಗಿಯನ್ನು ನಾಕು ಬಕ್ಕನ್ನು ನೋಡುವಂತೆ ನೋಡಿ ಹೇಳಿದ– "ಮೋತಿ....ಹೇಳು...ಸದಫ್..."

"ಸದಫ್...." ಹುಡುಗಿ ಹೇಳಿದಳು...

"ಅರೇ...ಹಾಗಲ್ಲ....ಸದಫ್...ಫ್..."

"ಸದಫ...ಫ...."

"ಅಯ್ಯೋ ದೇವರೇ...ಹೇಳು...ಸದಫ್ ಆರಾ ಬೇಗಂ...."

"ಸದಫ್ ಆರಾ ಬೇಗಮ್...."

ವರ್ಮಾ ಸಾಹೇಬ ನಿಟ್ಟುಸಿರು ಬಿಡುತ್ತ ಹೇಳಿದ–"ಹೋಗಲಿ...... ದೇವರಿದ್ದಾನೆ.. ನಾಳೆಯಿಂದ ಅವಳ ಈ ಉಚ್ಚಾರ ಸರಿಪಡಿಸುವ Intensive ಟ್ರೇನಿಂಗ್ ಆರಂಭ...ಒಂದೂವರೆ ತಿಂಗಳ ನಂತರ ರೇಡಿಯೋದಲ್ಲಿಯೂ ಸಾಂಗ್ ಬರ್ಡ್ಸ್ ಕ್ಲಬ್ಬಿನ ಪ್ರಥಮ ಪ್ರೋಗ್ರಾಮ್ ಆಗಲೇ ಷೆಡ್ಯೂಲ್ ಆಗಿದೆ.... ಏನಂತೀರಿ....." ಎಂದು ಅವನು ಸಯ್ಯದ್ ಸಾಹೇಬನನ್ನು ವಿಚಾರಿಸಿದ.

"ಅವಶ್ಯ.....ಅವಶ್ಯ..." ಎಂದ ಪೈಪ್ ಉರಿಸುತ್ತ.

ಈಗ ವರ್ಮಾ ಸಾಹೇಬ ಜಮೀಲೀನ್‌ಳತ್ತ ಹೊರಳಿದ...ಇಲ್ಲಿಯವರೆಗೂ ಆಕೆ ಸುಮ್ಮನೆ ಕುಳಿತು ಎಲ್ಲರ ಮಾತುಗಳನ್ನಾಲಿಸುತ್ತಿದ್ದಳು...ವರ್ಮಾ ಅವಳನ್ನು ತುಂಬ ಆಸಕ್ತಿಯಿಂದ ನೋಡಿದ...ಮತ್ತೆ ಒಮ್ಮೆಲೇ ಚುಟಕಿ ಬಾರಿಸುತ್ತ ಹೇಳಿದ- ''ಕುಮಾರಿ ಜಲಬಾಲಾ ಲಹರಿ....''

''ಯಾರು...? ನಾವು....? ನಮ್ಮ ಹೆಸರು ಜಮೀಲ ಅಲನ್‌ಸಾ ಬೇಗಂ....'' ಜಮಿಲೀನ ರೇಗುತ್ತ ಹೇಳಿದಳು.

''ಕುಮಾರಿ ಜಲ್‌ಬಾಲಾ ಲಹರಿ'' ವರ್ಮಾ ಸಾಹೇಬ ಬೇಕಂತಲೇ ಮತ್ತೆ ಒತ್ತಿ ಹೇಳಿದ.

''ನೋಡುವುದಕ್ಕೆ ರೂಪದಲ್ಲಿ ಥೇಟ ಬಂಗಾಲಿ ಹಾಗೆಯೇ ಕಾಣುತ್ತೀರಿ...ನೀವು ಬಂಗಾಲದಿಂದ ನಿನ್ನೆ ತಾನೇ ಬಂದಿದ್ದೀರಿ.. ಜಲಬಾಲಾ ಲಹರಿ...''

''ಈ ಜಲಾಬಲಾ ಇದು ಯಾವುದರ ಬಲಾ...? ಬಂಗಾಲದಿಂದ ಯಾರು ಬಂದಿದ್ದಾರೆ ಬಲಾ...? ನಾವು ಹುಸೇನಾಬಾದದಲ್ಲಿ ಹುಟ್ಟಿದೆವು...? ಈಗ ಪಾಟನಾಲ ದರಿಯಾವಲ್ಲಿರುತ್ತೇವೆ....''

''ಅರೆ...ಸ್ವಲ್ಪ ಯೋಚಿಸು...ನಾವು ನಿನ್ನ ಕರೀಯರ್ ನಿರ್ಮಿಸುತ್ತಿದ್ದೇವೆ....''

''ಕರೀಯರ್...ಸರೀರ...ಏನು ಹಾಗಂದರೆ....''

''ನಿನ್ನ ಭವಿಷ್ಯ...ನಿನ್ನ ವರ್ತಮಾನ...''

''ಹೋಗು...ಹೋಗು...ನಮ್ಮ ಕರೀರ ದೇವರೇ ಮಾಡಲಿಲ್ಲ...ಇನ್ನು ನೀವೇನು ಮಾಡಬಲ್ಲಿರಿ...'' ಜಮಿಲೀನ್ ನಿರಾಸಕ್ತಿಯಿಂದ ಹೇಳಿದಳು.

''ಅರೇ, ನೀನು ಏನು ಒದರುತ್ತಿರುವೆ...'' ಎಂದು ವರ್ಮಾ ಬೇಸರದಿಂದ ಅಂದ...

''ಜಲಬಾಲಾ ಲಹರಿ'' ಆಗಾ ಫರ್‌ಹಾದ ಮತ್ತೆ ಅನ್ನುತ್ತ ''ತುಂಬ ಸೊಗಸಾದ ಹೆಸರನ್ನು ಯೋಚಿಸಿದ್ದೀರಿ....'' ಎಂದು ಪ್ರಶಂಸೆ ಗೈದ....

''ಲಹರಿ ಏಕೆ...? ಏಕೆಂದರೆ ನಾವು ಲಹರಿನ ಹಾಗೆ...ತೆರೆಗಳ ಹಾಗೆ...ನಡೆಯುತ್ತೇವೆಯೇ...?...'' ಜಮಿಲೀನ್ ಪ್ರಶ್ನಿಸಿದಳು.

''ಅರೆ... ಈ ಉಲ್ಲಾ, ಪಲ್ಲಾ, ಹುಡುಗಿಗೆ ಕೊಂಚ ತಿಳಿಸಿ ಹೇಳಿ....'' ಎಂದು ವರ್ಮಾ ಅನುನಯದಿಂದ ಹೇಳಿದ- ''ಲಹರಿ ಒಂದು ಬಂಗಾಲಿ Surname....''

''ವರ್ಮಾ ಸಾಹೇಬ, ನಾವು ಆಕೆಗೆ ತಿಳಿಸಿ ಹೇಳುತ್ತೇವೆ....ಈಗ ನೀವು ರಿಹರ್ಸಲ್ಸ್ ಯಾವಾಗ ಆರಂಭಿಸಲಿದ್ದೀರೆಂಬುದನ್ನು ಹೇಳಿ....'' ಎಂದು 'ರಷ್ಮಿ ಕುಮಾರ್ ವಿಚಾರಿಸಿದಳು....

ವರ್ಮಾ ಸಾಹೇಬ ಪ್ಯಾಡ್ ಮೇಲೆ ಬರೆಯುವಲ್ಲಿ ಮಗ್ನರಾಗಿದ್ದರು...

ಸಾಂಗ್ ಬರ್ಡ್ಸ್ ಕ್ಲಬ್

1. ಸದಫ್ ಆರಾ ಬೇಗಂ
2. ಮಿಸ್ ರಷ್ಕ್‌ಕಮರ್
3. ಕುಮಾರಿ, ಜಲಬಾಲಾ ಲಹರಿ....

-4-

''ಹಲೋss....ಹಲೋss...ಹಾಂ...ಹಾಂ...ನಾನು ವರ್ಮಾ ಮಾತಾಡುತ್ತಿದ್ದೇನೆ... ಆದಾಬ ಅರ್ಜ...ಸೌಖ್ಯ ತಾನೇ...ಅರೆ....ನೀವು ಎಲ್ಲಿದ್ದೀರಿ....ದಿಲ್ಲಿಯಿಂದ ಯಾವಾಗ ಬಂದಿರಿ...ನಮ್ಮ ಕಾನ್ಸರ್ಟ Miss ಮಾಡಿದಿರಿ... ಹಾಂ...ಅದ್ಭುತವಾಗಿತ್ತು... ಓರ್ವ ಮಂತ್ರಿಗಳು ಉದ್ಘಾಟನೆ ಮಾಡಿದರು...ಬೇಕಾದಷ್ಟು ಚಿತ್ರಗಳನ್ನು ತೆಗೆಯ ಲಾಯಿತು...ಅಭೂತಪೂರ್ವವಾದ ಪಬ್ಲಿಸಿಟಿ ಮಾಡಲಾಗಿತ್ತು...ಮತ್ತೆ ಹೌಸ್‌ಫುಲ್.... ಹಾಂ...ಹಾಂ...ಆಂ...ಏನಂದಿರಿ...? ಇಲ್ಲ... ಇಲ್ಲ... ಕೇವಲ ಲೈಟ್ ಮ್ಯುಜಿಕ್... ನಮ್ಮ ಆರ್ಟಿಸ್ಟ್‌ಗಳು ಗಜಲ್ ಮತ್ತು ಗೀತ ಹಾಡುವಲ್ಲಿ ತುಂಬ ಎಕ್ಸಪರ್ಟ... ಪ್ರೆಸ್ಸಿನವರು ತುಂಬ ಉತ್ತಮ ರಿವ್ಯೂವ್..ಮಾಡಿದ್ದಾರೆ...ಈಗನ...? ಕ್ಷಮೆ ಮಾಡಿ... ಇಂದು ಮಂಗಳವಾರದ ಸಂಜೆ...ತಾಯಿಯವರನ್ನು ಕೀರ್ತನ ಕೇಳಲು ಕರೆದುಕೊಂಡು ಹೋಗಬೇಕಾಗಿದೆ....ಇವತ್ತಂತೂ ದಯಮಾಡಿ ಬರಬೇಡಿ...ನಾವು ಈಗಿಂದೀಗಲೇ ನರಹೀಗೆ, ನಮ್ಮ ಮನೆಗೆ ಹೋಗಲಿದ್ದೇವೆ...ಹೌದು...ಹೌದು... ತುಂಬ... ತುಂಬ... ಥ್ಯಾಂಕ್ಸ್...ತಮ್ಮ ಪ್ರಾರ್ಥನೆಗಾಗಿ ಕೃತಜ್ಞನಾಗಿರುವೆ... ಹಾಗಾದರೆ ಮುಂದಿನ ಆದಿತ್ಯವಾರ...ತುಂಬ ಒಳ್ಳೇದು...ಬಹುತ ಖೂಬ...ಆದಾಬ ಅರ್ಜ...'' ಎನ್ನುತ್ತ ವರ್ಮಾ ಸಾಹೇಬ ಫೋನಿನ ರೆಸಿವರ್ ಇರಿಸಿದ ಹಾಗೂ ದೊಡ್ಡದಾದ ನಿಟ್ಟುಸಿರು ಬಿಟ್ಟ....ಬಂದು ದೀವಾನ್ ಮೇಲೆ ಧೊಪ್ಪನೇ ಬಿದ್ದ... ಮತ್ತೆ ಹೇಳಿದ... ''ತಾಯಿಯವರೇ ಇಂಥ ಅಡವಟ್ಟ ಸಮಯದಲ್ಲಿ...ಉಪಯೋಗಕ್ಕೆ ಬರುತ್ತಾರೆ...''

''ಪ...ಇಂಥ ಭಾರಿ ಸುಳ್ಳು ಪಕ ಹೇಳುತ್ತಿ ಮಹಾರಾಯ...ತಾಯಿಯವರನ್ನು ಕೀರ್ತನಕ್ಕೆ ಕರೆದುಕೊಂಡು ಹೋಗಬೇಕೆಂದು ಹೇಳಿಬಿಟ್ಟ...'' ಎನ್ನುತ್ತ ಫರ್‌ಹಾದ್ ಚಾಪೆಯ ಮೇಲೆ ಮಲಗಿಕೊಂಡೇ ಮತ್ತೆ ಕೇಳಿದ–

''ಯಾರಿದ್ದರು....?''

''ಓರ್ವ ಮಹಾಚೋರ....ಪ್ರೋಗ್ರಾಮ್‌ದ ಯಶಸ್ಸಿನ ಬಗ್ಗೆ ಪ್ರಶಂಸೆಯ ಮಾತು ಹೇಳಲು ಬರಲಿದ್ದ...ನಾವು ಬೇಡವೆಂದು ಹೇಳಿಬಿಟ್ಟೆವು...ಅರೆ ಸದಫ್ ಆರಾ...'' ಎಂದು ವರ್ಮಾ ಸಾಹೇಬ ಕೂಗಿದ....

''ಸದಫ್ ಆರಾ ಕಿಚನ್‌ದಲ್ಲಿ ಅಡಿಗೆ ಮಾಡುತ್ತಿದ್ದಾಳೆ...'' ಎಂದು ರಷ್ಕ್‌ಕಮರ್ ಹೇಳಿದಳು. ಆಕೆ ಕುರ್ಚಿಯ ಮೇಲೆ ಕುಳಿತು ಮಾಸ ಪತ್ರಿಕೆಗಳ ಪುಟ ತಿರುವುತ್ತಿದ್ದಳು...

"ಸದಫ್ ಆರಾ...ನಿಮಗಾಗಿ ಬಹು ರುಚಿ...ರುಚಿ ಅಡಿಗೆ ಮಾಡಿದ್ದಾಳೆ..." ಎಂದು ಮಿರ್ಜಾ ಸಾಹೇಬ ಹೇಳಿದ.

"ತುಂಬ ಒಳ್ಳೆಯ ಹುಡುಗಿ..." ಕಮರನ್ ಹೇಳಿದಳು.

ಮಿರ್ಜಾ ಸಾಹೇಬ ಇದ್ದಕ್ಕಿದ್ದಂತೆ ಹುರುಪಿಗೆ ಬಂದು ಎದ್ದು ಕುಳಿತ..."ನೀವು ಮೂವರೂ ತುಂಬ ಒಳ್ಳೆಯ ಹುಡುಗಿಯರಿದ್ದೀರಿ... ಕೇಳಿಲ್ಲಿ ರಷ್ಕ್‌ಕಮರ್...ನಾವು ಮತ್ತೊಂದು ಸ್ಕೀಮ್ ಸಿದ್ಧಗೊಳಿಸಿದ್ದೇವೆ...."

"ದೇವರು ಒಳ್ಳೇದು ಮಾಡಲಿ..."

"ಕೇಳಿಲ್ಲಿ...ನಾವೊಂದು ಉರ್ದು ಮಾಸಿಕ ತೆಗೆಯುತ್ತೇವೆ...ನಾಳೆಯೇ ಹೋಗಿ ಡಿಕ್ಲೇರಷನ್ ದಾಖಲು ಮಾಡುತ್ತೇವೆ...ಅದರ ಹೆಸರಿನ ಬಗೆಗೂ ಯೋಚನೆ ಮಾಡಿದ್ದೇವೆ...ಗೋಹರ್ ಷಬ್ ಚಿರಾಗ್...."

"ಸುಬಾನಲ್ಲಾಹ..." ಎನ್ನುತ್ತ ಫರ್‌ಹಾದ್ ಹೇಳಿದ "ಸದಫ್ ಆರಾ ಬೇಗಂ...ಮತ್ತು ಗೋಹರ್ ಷಬ್ ಚಿರಾಗ್ ನಿಮ್ಮದು ಲಾಜವಾಬ...."

"ಮೊದಲ ಸಂಚಿಕೆಯಲ್ಲಿ ಒಂದು ಲೇಖನ ರಷ್ಕಕಮರ್‌ಳ ಬಗ್ಗ ಬರೆಯುತ್ತೇನೆ. ಇಲ್ಲಿ ನೋಡು...." ಎನ್ನುತ್ತ ಅವನು ಕಾಗದದ ಮೇಲೆ ಜಲ್ದಿ ಜಲ್ದಿ ಏನೇನೋ ಗೀಚಿದ ಹಾಗೂ ಅದನ್ನು ರಷ್ಕ್‌ಕಮರ್‌ಳಿಗೆ ಕೊಟ್ಟ–

ಬರಬಹುದಾದ ವಿಷಯಗಳು...

"ರಷ್ಕ್‌ಕಮರಳ ಕಾವ್ಯ

ರಷ್ಕ್‌ಕಮರಳ ಕಲಾದೃಷ್ಟಿ

ರಷ್ಕ್‌ಕಮರಳ ಜೀವನ ತತ್ತ್ವಜ್ಞಾನ

ರಷ್ಕ್‌ಕಮರಳ ಜೊತೆ ಒಂದು ಸಂಜೆ

ರಷ್ಕ್‌ಕಮರಳ ದಿನಾ–ರಾತ್ರಿಗಳು"

ಆಗಾ ಫರ್‌ಹಾದ್ ಕಾಗದ ತೆಗೆದುಕೊಂಡು ಓದಿದ...ನಂತರ ಹೇಳಿದ– "ಈ ಕೊನೆಯ ವಿಷಯ ನಮಗೆ ತುಂಬ ಹಿಡಿಸಿತು..."

"ನನ್ನನ್ನು ಚೇಷ್ಟೆಗೆ ಗುರಿಮಾಡುವಲ್ಲಿ ನಿಮಗೆ ನಾಚಿಕೆಯೆಂಬುದಿಲ್ಲ..." ಎಂದು ರಷ್ಕ್‌ಕಮರ್ ತುಂಬ ನಿರುತ್ಸಾಹದಿಂದ ಹೇಳಿದಳು.

"ಚೇಷ್ಟೆ....? ವಿಚಿತ್ರ ಮಾತಾಡುತ್ತಿ...ನಾವು ನಿನ್ನ ಸಾಹಿತ್ಯಿಕ ಕರೀಯರ್ ನಿರ್ಮಾಣ ಮಾಡುತ್ತಿದ್ದೇವೆ...." ಎಂದು ಮಿರ್ಜಾ ಸಾಹೇಬ ಗಂಭೀರವಾಗಿ ವಿವರಿಸಿದ.

ಜಮೀಲಿನ್ ಸೋಫಾದ ಮೇಲೆ ಮಲಗಿದ್ದಳು. ಊರುಗೋಲಿನ ಸಹಾಯದಿಂದ ಏಳುವ ಪ್ರಯತ್ನ ಮಾಡಿದಳು... ಮಿರ್ಜಾ ಸಾಹೇಬ ಹಾಗೂ ಆಗಾ ಫರ್‌ಹಾದ್

ಈರ್ವರೂ ಆಕೆಗೆ ಸಹಾಯ ಮಾಡಲೆಂದು ಮುಂದೆ ಬಂದರು...ಒಮ್ಮೆಲೇ ಜಮೀಲಿನ್ ತಲೆಬಾಗಿಸಿ ಅಳತೊಡಗಿದಳು...

"ಜಲಿಮುನ್...ಜಮೀಲಿನ್...ಏನಾಯಿತು...?" ಎಂದು ಮಮ್ಮಾ ಬಡಬಡಿಸುತ್ತ ಕೇಳಿದ.

"ಏನೂ ಇಲ್ಲ ಮಮ್ಮಾ ಸಾಹೇಬ..." ಎಂದ ಜಮೀಲಿನ್, ಕಾಶ್ಮೀರಿ ಸಿಲ್ಕಿನ ಸೀರೆಯ ಸೆರಗಿನಿಂದ ಕಣ್ಣೀರು ಒರಸಿಕೊಳ್ಳುತ್ತ ಮತ್ತೆ ಹೇಳಿದಳು– "ನಮಗೆ ಈಗ ತಾನೇ ಒಂದು ಯೋಚನೆ ಹೊಳೆಯಿತು...ಏನೆಂದರೆ..."

"ಏನು....? ಏನೆಂದು....?"

"ಏನೆಂದರೆ...ನಾವು ಜೀವನದಲ್ಲಿ ಎಂದೂ ಸುಖ, ಶಾಂತಿ ಕಂಡೇ ಇಲ್ಲ...ಈಗ ಅಕಸ್ಮಾತ್ತಾಗಿ ನಮ್ಮ ಜೀವನದ ರೀತಿ–ನೀತಿ ಪರಿವರ್ತನೆಯಾಗಿದೆಯಲ್ಲ..ಎಲ್ಲಿ ಇದು ಕೂಡ ಒಂದು ಮೋಸವಲ್ಲ ತಾನೇ...? ಎಂಬ ಸಂಶಯ ನಮ್ಮನ್ನು ಕಾಡುತ್ತದೆ. ಬಿಜಿಯಾಳಂತೂ ಗಟ್ಟಿ ಮನದವಳು...ಆದರೆ ನಾವು ಹಾಗಲ್ಲ..."

"ಎಂಥ ಮಾತಾಡುತ್ತಿರುವ...ಜಲಿಮುನ್...ಜಮೀಲಿನ್" ಎಂದ ಮಮ್ಮಾ ಅತ್ಯಂತ ಪ್ರೀತಿಯಿಂದ...

"ಅರೆ..ನಮ್ಮ 'ರಾಮ ಕಹಾನಿ' ಕೇಳಿದರೆ ನಿಮಗೆ ನಂಬಲೂ ಸಾಧ್ಯವಿಲ್ಲ.. ಅಷ್ಟೊಂದು ಭಯಾನಕ..." ರಷ್ಕೆಕಮುರ್ ಕಾಫಿ ಸಿದ್ಧಗೊಳಿಸುತ್ತ ಮತ್ತೆ ಹೇಳಿದಳು– "ಆದರೆ ನಮಗೆ ಯಾರಿಂದಲೂ ಕರುಣೆ, ಅನುಕಂಪದ ಮಾತುಗಳು ಬೇಕಾಗಿಲ್ಲ ಅದರ ಬಗ್ಗೆ ನಮಗೆ ದ್ವೇಷವಿದೆ ಹಾಗೂ ನಾಚಿಕೆಯೆನ್ನಿಸುತ್ತದೆ..."

"ಆದರೆ ನಮಗೆ ನಾಚಿಕೆ ಬರುವುದಿಲ್ಲ... ದೇವರೇ ನಮಗೆ ಇಂಥ ಜೀವನ ನೀಡಿರುವಾಗ ಅವನಿಗೇ ನಾಚಿಕೆ ಬರುವುದಿಲ್ಲವೆಂದಾಗ, ನಮಗೇಕೆ ನಾಚಿಕೆ ಬರಬೇಕು...?" ಎಂದಳು ಜಮೀಲಿನ್ ಕರವಸ್ತ್ರದಿಂದ ಮೂಗು ಒರೆಸಿಕೊಳ್ಳುತ್ತ... ಮಮ್ಮಾ ಎಲ್ಲರಿಗೂ ಕಾಫಿ ನೀಡಿದ...

"ನಾವು ಹುಟ್ಟಿದ ಕೂಡಲೇ ತಾಯಿ ತೀರಿ ಹೋದಳು..."

ಜಮಿಲೀನ್ ಕಾಫಿ ಗುಟುಕರಿಸುತ್ತ ಹೇಳಿದಳು– "ಅಂಗವಿಕಲಳಾಗಿ ಹುಟ್ಟಿದೆ... ಚಿಕ್ಕಮ್ಮ ಜೋಪಾನ ಮಾಡಿದಳು...ಓಣಿಗಳಲ್ಲಿ ಉರುಳಾಡುತ್ತ ಐದಾರು ವರ್ಷದವಳಾದೆ.... ತಾಯಿ ಸತ್ತ ನಂತರ ಮನೆಯ ಖರ್ಚು ನಿಭಾಯಿಸಲು ಕೇವಲ ಚಿಕ್ಕಮ್ಮ ಉಳಿದಿದ್ದಳು.... ಆಕೆಗೆ ಅಸ್ತಮಾ ಆಯಿತು.... ತಾಯಿ ಕೂಡಿಟ್ಟಿದ್ದ ಅಷ್ಟಿಷ್ಟು ಹಣ ಚಿಕ್ಕಮ್ಮಳ ಔಷಧೋಪಚಾರಕ್ಕೆ ಖರ್ಚಾಯಿತು... ಡಾಕ್ಟರ್ ಹೇಳಿದರು– 'ಭವಾಲಿಗೆ ಹೋಗಿರಿ...' ಎಂದು. ಅಳಿದುಳಿದ ಹಣವನ್ನು ತೆಗೆದುಕೊಂಡು ಚಿಕ್ಕಮ್ಮ ಭವಾಲಿಗೆ ಹೋಗಲು ಯೋಚಿಸಿದಳು..."

"ಮತ್ತೆ ನಿಮ್ಮ ಚಿಕ್ಕಪ್ಪ ?" ಆಗಾಫರ್‌ಹಾದ್ ಮಾತಿನ ಮಧ್ಯದಲ್ಲಿಯೇ ಕೇಳಿದ...

"ಎಲ್ಲ ಹೇಳುತ್ತೇನೆ... ಕೇಳುತ್ತ ಹೋಗಿ...ಈತ ನಾಪಿತ... ನಮ್ಮ ಜೊತೆಗಿರಲು ಕರೆಯಿಸಿಕೊಳ್ಳಲಾಗಿತ್ತು...ಆತನಿಗೆ ನಮ್ಮ ಬಗ್ಗೆ ಕನಿಕರ ಹುಟ್ಟಿತು...ಆಗಾಗ ನಮ್ಮಲ್ಲಿಗೆ ಆಮೇಲೆಯೂ ಬರುತ್ತಿದ್ದ... ಚಿಕ್ಕಮ್ಮ ಮೊದ ಮೊದಲು ಅವನಿಂದ ತನ್ನ ಚಿಲುಮೆಯಲ್ಲಿ ತಂಬಾಕು ಕೂಡ ತುಂಬಗೊಡುತ್ತಿದ್ದಿಲ್ಲ.. ಯಾವಾಗಲೂ ಪರದೆಯಲ್ಲಿರುತ್ತಿದ್ದಳು..... ಜಡ್ಡಾಗಿ ಮಲಗಿದಾಗ ಜನ ಆಕೆಯನ್ನು ನೋಡಲು ಬರುವುದನ್ನು ನಿಲ್ಲಿಸಿದರು......ಈಗ ಆಕೆಯ ಶುಶ್ರೂಷೆಗಾಗಿ, ಔಷಧ ತರಲು ದವಾಖಾನೆಗೆ ಓಡಾಡುವವರು ಯಾರೂ ಇಲ್ಲವಾದರು.. ನಾವು ಆಗ ಕೇವಲ ಆರು ವರ್ಷದ ಬಾಲಕಿ...ಬಿಜಿಯಾ ಹತ್ತು ಹನ್ನೊಂದು ವರ್ಷದವಳು...ಈ ಜಮನ್‌ಖಾನ್ ಹಜಾಮ ಹೊರಗಿನ ಕೆಲಸ ಮಾಡುತ್ತಿದ್ದ....ಅವನ ಹೆಂಡತಿ, ಮಕ್ಕಳು ಎಲ್ಲರೂ ಸತ್ತಿದ್ದರು.... ಅವನು ಕೂಡ ಪ್ರೀತಿಯ ಎರಡು ಮಾತುಗಳಿಗಾಗಿ ಹಪಹಪಿಸುತ್ತಿದ್ದ.... ನಾನು ಕೂಡ ನಿಮ್ಮೊಂದಿಗೆ ಭವಾಲಿಗ ಬರುತ್ತೇನೆ.....ಎಂದ...ಹುಸೇನಾಬಾದದ ಮನೆ ಕೂಡಾ ಬಾಡಿಗೆಯದಾಗಿತ್ತು...ನಾವು ಗುಡಿಚಾಪಿ ಕಟ್ಟಿಕೊಂಡು ಹೊರಟೆವು...."

"ಈ ಜಮನ್‌ಖಾನ್ ತುಂಬ ವ್ಯಸನಿಯಾಗಿದ್ದ....ಗಾಂಜಾ, ಅಫೀಮು, ಅದೂ ಅಲ್ಲದೆ ಜೂಜಾಟ ಆಡುತ್ತಿದ್ದ...ಚಿಕ್ಕಮ್ಮ, ನಾವು ಮತ್ತು ಬಿಜಿಯಾ ಹೆಣ್ಣು ಮಕ್ಕಳ ಫರ್ಸ್ಟ್‌ಕ್ಲಾಸ್ ಬೋಗಿಯಲ್ಲಿ ಕುಳಿತೆವು. ಅವನು ಗಂಡಸರ ಬೋಗಿಯಲ್ಲಿ ಕುಳಿತ..."

ಹಣವನ್ನು ಕೊಲೆ ಮಾಡಿದ ಧೂರ್ತ– ಎನ್ನುವ ಹಾಗಾಯ್ತು ನಮ್ಮದು. ಎಲ್ಲ ಹಣವನ್ನೂ ಚಿಕ್ಕಮ್ಮ ಅಂಥ ವ್ಯಸನಿಯ ಕೈಯಲ್ಲಿ ಕೊಟ್ಟಿದ್ದಳು, ಅವನು ಸುರಕ್ಷಿತವಿಟ್ಟುಕೊಳ್ಳಬಹುದೆಂದು ತಿಳಿದು. ಆಕೆ ಸ್ವತಃ ರೋಗಿ, ನಾವಿಬ್ಬರೂ ಸಣ್ಣ ಹುಡುಗಿಯರು...ಅಂತೂ ಟ್ರೇನು ಕಾಠಗೋದಾಮು ತಲುಪಿತು. ನಾವೆಲ್ಲ ಇಳಿದಾಗ ಜಮನ್‌ಖಾನ್ ತನ್ನ ಬೋಗಿಯಿಂದ ಕೆಳಗಿಳಿದು ಎದೆ ಎದೆ ಬಡಿದುಕೊಳ್ಳುತ್ತ ಅಳತೊಡಗಿದ. ಅಳುತ್ತಲೇ ಹೇಳಿದ– ರಾತ್ರಿ ಮಲಗಿದಾಗ ಯಾರೋ ಕಿಸೆ ಕತ್ತರಿಸಿ ಹಣವೆಲ್ಲ ದೋಚಿದ್ದಾರೆ– ಇದನ್ನು ಕೇಳಿದ ಚಿಕ್ಕಮ್ಮ ಅಳೋದು–ಕರೆಯೋದು ಮಾಡತೊಡಗಿದಳು.....ವ್ಯಸನಿ.....ಬದ್ಮಾಷ್....ಕೆಟ್ಟಕುಲದವ....ಯಾವನೋ ಸಹ ಪ್ರಯಾಣಿಕನೊಂದಿಗೆ ಇಸ್ಪೀಟ ಆಡಲು ಕುಳಿತಿರಬೇಕು. ಎಲ್ಲ ರೂಪಾಯಿ ಸೋತಿರಬೇಕು...ಅವನು ಕುರಾನ್ ಷರೀಫ್ ಕೈಯಲ್ಲಿ ಹಿಡಿದು ಆಣೆ ಮಾಡಿದ...ಯಾವನೋ ಕಿಸೆಗಳ್ಳ ಕಿಸೆ ಕತ್ತರಿಸಿ ಪಾಕೀಟು ಕಳವು ಮಾಡಿರಬೇಕು...ಅವನು ಜೂಜಾಟ ಆಡಿಲ್ಲ...ನಾವು ನಮ್ಮ ಹಣೆ ಬರೆಹಕ್ಕೆ ಅತ್ತು ಕರೆದು ಫ್ಲ್ಯಾಟಫಾರ್ಮದ ಮೇಲೆಯೇ ಕುಳಿತೆವು....ಈಗೇನು ಮಾಡುವುದು...ಬುತ್ತಿ ಜೊತೆಗೆ ತಂದುದು ಈಗ ಖಾಲಿಯಾಯಿತು... ಚಿಕ್ಕಮ್ಮನ ಹತ್ತಿರ ನಾಲ್ಕೆಂಟು ರೂಪಾಯಿಗಳಿದ್ದವು. ಅವು ಕೂಡ ಖರ್ಚಾಗಿ ಹೋದವು..ಈಗ ತಿನ್ನುವುದಾದರೂ ಏನನ್ನು...ಎಲ್ಲಿಂದಲೋ...ಜಮನ್ ಖಾನ್ ತನ್ನೊಂದಿಗೆ ಹಜಾಮತಿಯ ಹಡಪ ತಂದಿದ್ದ. ಮಾರನೆಯ ದಿನ ಅವನು ಫ್ಲ್ಯಾಟಫಾರ್ಮದ ಒಂದು ಮೂಲೆಯಲ್ಲಿ ಕುಳಿತು ಪ್ರಯಾಣಿಕರ ಕ್ಷೌರ ಮಾಡಹತ್ತಿದ...ಆಗ ಚಿಕ್ಕಮ್ಮನಿಗ ಒಂದು ವಿಚಾರ ಹೊಳೆಯಿತು...ಆಕೆ ಹಾರ್ಮೋನಿಯಮ್ ಮತ್ತು

ಢೋಲಕ್ ಜೊತೆಯಲ್ಲಿ ತಂದಿದ್ದಳು...ಆಕೆ ಢೋಲಕ್ ಬಿಜಿಯಾಳ ಮುಂದೆ ಸರಿಸಿದಳು. ಬಿಜಿಯಾ ಹಾಡತೊಡಗಿದಳು...ಪ್ರಯಾಣಿಕರು ಗುಂಪು ಗುಂಪಾಗಿ ಬಂದು ಹಾಡು ಕೇಳತೊಡಗಿದರು... ಕೊಂಚ ಸಂಪಾದನೆ ಆಯಿತು... ನೈನಿತಾಲಗೆ ಹೋಗುವ ಶ್ರೀಮಂತ ಜನ ನಮ್ಮ ಹಾಡು ಕೇಳಲು ಬಂದರು...ಅವರು ರೂಪಾಯಿ, ಎರಡು ರೂಪಾಯಿ ಕೊಡುತ್ತಿದ್ದರು. ರೇಲ್ವೆ ಸ್ಟೇಷನ್‌ದಲ್ಲಿಯೇ ಇರತೊಡಗಿ ಬಹಳ ದಿನಗಳು ಕಳೆದವು...ಪೋಲೀಸರು ಬಂದು ಹಕಲಾಯಿಸಿದರು. ಸ್ಟೇಷನ್ ಸಮೀಪ ಕಟ್ಟಿಗೆ ಅಡ್ಡೆ ಇತ್ತು...ಅದರಲ್ಲಿ ಹೋಗಿ ಕುಳಿತೆವು.

"ಕಾಡಗೋದಾಮು ಕೂಡ ಅರ್ಧ ನೈನಿತಾಲ ಇದ್ದ ಹಾಗೆ...ಚಿಕ್ಕಮ್ಮನ ಆರೋಗ್ಯ ಸುಧಾರಿಸತೊಡಗಿತು...ಆಕೆಯಲ್ಲಿ ಶಕ್ತಿ ಮರಳಿದಾಗ ಸಮೀಪದ ಹಳ್ಳಿಗಳಲ್ಲಿ ಹೋದರೆ ಗಾನಾ–ಬಜಾಕರ ಬಹಳಷ್ಟು ಸಂಪಾದಿಸಬಹುದೆಂದು ಜಮುನ್ ಖಾನ್‌ಗೆ ಯಾರೋ ಹೇಳಿದರು.....ನಾವು ಲಾರಿಯಲ್ಲಿ ಕುಳಿತು ಬಲ್ದವಾನಿ ತಲುಪಿದೆವು...ಮತ್ತೆ ಅಲ್ಲಿಂದ ಇನ್ನೂ ಮುಂದಕ್ಕೆ ಹೋದೆವು...ಹಚ್ಚ ಹಸಿರಿನ ಪ್ರದೇಶದಲ್ಲಿ ತಿರುಗಾಡ ತೊಡಗಿದೆವು... ಅಫ್ಜಲ್‌ಗಢ, ಲಾಲಡಾಂಗ್, ಕಾಲಾಗಢ...ನಿಬಿಡವಾದ ಅರಣ್ಯ... ಹುಲಿ ಚಿರ್ತಗಳ ಹಾವಳಿ...ರಾತ್ರಿ ನಾವು ಯಾವುದೋ ಅಡವಿಯ ರಸ್ತೆಯಲ್ಲಿ ಹೊರಟಾಗ ಸಿಂಹದ ಗರ್ಜನೆ ಕೇಳಿಸಿತು... ಆಗಾಗ ಚಿಕ್ಕಮ್ಮ ನನ್ನನ್ನು ಕುರಿತು.... ಯಾವುದಾದರೂ ಸಿಂಹ ಬಂದು ಇವಳನ್ನು ತಿನ್ನುತ್ತಿಲ್ಲವೆಂದು ಶಪಿಸುತ್ತಿದ್ದಳು...ನಾನು ಕೂಡ ದೇವರಲ್ಲಿ ಪ್ರಾರ್ಥಿಸುತ್ತಿದ್ದೆ...ಯಾವುದಾದರೂ ಸಿಂಹವನ್ನು ಕಳಿಸು....ನನ್ನನ್ನು ತಿನ್ನಲು...ಎಂದು. ಲಾಲಡಂಗದಲ್ಲಿ ಕೊರಬಟ್ ಸಾಹೇಬನ ಬಂಗ್ಲೆಯಿತ್ತು..... ಅವನು ನರಭಕ್ಷಕನನ್ನು ಕೊಲ್ಲಲು ಬಂದೂಕ ಹಿಡಿದು ಅಡವಿ ಅಡವಿ ತಿರುಗುತ್ತಿದ್ದ..."

"ಈ ಭಾಗದಲ್ಲಿಯ ಹವೆ ತುಂಬ ಆರೋಗ್ಯಕರವಾಗಿತ್ತು. ಚಿಕ್ಕಮ್ಮ ಹಲವು ವರ್ಷಗಳಿಂದ ಹುಸೇನಾಬಾದದ ಆ ಹೊಲಸು ಮನೆಯಲ್ಲಿದ್ದು ನರಳುತ್ತಿದ್ದವಳು ಇಲ್ಲಿ ಆರೋಗ್ಯ ಭಾಗ್ಯ ಪಡೆದಳು. ಇದು ನಿತ್ಯ ಹರಿದ್ವರ್ಣದಿಂದ ಕೂಡಿದ ಪ್ರದೇಶ ವಾಗಿತ್ತು...ನಾವು ಇಲ್ಲೆಲ್ಲ ಬಹಳ ವರ್ಷಗಳ ಕಾಲ ಸುತ್ತಾಡಿದೆವು...ಅಫ್ಜಲ್‌ಗಢದಲ್ಲಿ ಕ್ರೈಸ್ತರ ಮಿಷನ್ ಇತ್ತು. ಒಮ್ಮೆ ಅವರು ನಮ್ಮನ್ನು ಕ್ರೈಸ್ತ ಮತಕ್ಕೆ ಮತಾಂತರ ಹೊಂದಲು ಹೇಳಿದರು. ಹಾಗೆ ಆದಲ್ಲಿ ನಮ್ಮಿಬ್ಬರ ಚಿಕಿತ್ಸೆ ಹಾಗೂ ಸ್ಕೂಲ, ಕಾಲೇಜ ಓದಲು ವ್ಯವಸ್ಥೆ ಮಾಡುವುದಾಗಿ ಹೇಳಿದರು. ಅದನ್ನು ಚಿಕ್ಕಮ್ಮನಿಗೆ ಹೇಳಿದೆ... ದೇವರು ಇಲ್ಲಿಯೂ ಇಲ್ಲ, ಅಲ್ಲಿಯೂ ಇಲ್ಲ.....ಯಾವ ಧರ್ಮವಾದರೇನು....ಕ್ರೈಸ್ತರಾದರೆ ನನ್ನ ನಿನ್ನ ಚಿಕಿತ್ಸೆ ನಡೆಯುತ್ತದೆ... ಬಿಜಿಯಾ ಸ್ಕೂಲಿಗೆ ಹೋಗುತ್ತಾಳೆ... ಅವಳ ಜೀವನ ವಾದರೂ ಉದ್ಧಾರವಾಗುತ್ತದೆ...ಆದರೆ ಚಿಕ್ಕಮ್ಮ ಎಂದಿನಂತೆ ಅದೇ ಹಟಮಾರಿತನ ತೋರುತ್ತ...ಕಾಲು ಕಳೆದುಕೊಂಡಿರುವೆ..... ಈಗ ಧರ್ಮವನ್ನೂ ಕಳೆದುಕೊಳ್ಳಲು ಸಿದ್ಧಳಾಗಿರುವೆಯಾ...? ಎಂದು ತರಾಟೆಗೆ ತೆಗೆದುಕೊಂಡಳು...ಆದರೂ ಮಿಷನರಿ ಹೆಣ್ಣು ಮಕ್ಕಳು ನಮಗೆ, ಬಿಜಿಯಾಗೆ ಇಂಗ್ಲಿಷ್ ಓದಿಸಿದರು...ಉಣ್ಣೆಯ ಬಟ್ಟೆ ಹೆಣೆಯುವುದನ್ನು ಕಲಿಸಿದರು..."

"ಜಮುನ್ ಖಾನ್ ಹೇಳುತ್ತಿದ್ದ.. ಅವನ ಅಜ್ಜ, ಮುತ್ತಜ್ಜ ಲಖನೌದಲ್ಲಿ ಬಾದಶಾಹನ ಸೇವೆಯಲ್ಲಿದ್ದವರು....ಕಾಲ ಬದಲಾಯಿತು...ಅವರ ಕಲೆ ಗುರುತಿಸುವವರು ಯಾರೂ ಇಲ್ಲವಾಯಿತು... ಜಮುನ್ ಖಾನ್ ನಿರುಪಾಯನಾಗಿ ಕ್ಷೌರಿಕ ಕೆಲಸ ಕಲಿತ...ಈಗಲೂ ಅವನು ನಕಲು ಮಾಡುವ ಕಲೆಯಲ್ಲಿ ನಿಷ್ಣಾತನೇ...ಪಾಪ, ಆಗಾಗ ಜಾತ್ರೆ, ಸಮಾರಂಭಗಳಲ್ಲಿ ಅದನ್ನೇ ಮಾಡಿ ತೋರಿಸುತ್ತಾನೆ...ನಾನು ಮತ್ತು ಬಿಜಿಯಾ ಹಾಡುತ್ತೇವೆ...ಚಿಕ್ಕಮ್ಮ ಢೋಲಕ್ ಬಾರಿಸುತ್ತಾಳೆ...ಅನಿವಾರ್ಯವಾಗಿ ಚಿಕ್ಕಮ್ಮ ಅವನ ಜೊತೆ 'ನಿಕಾಹ' ಮಾಡಿಕೊಂಡಳು. ಹಳ್ಳಿಯ ಹುಂಬರು ನನ್ನ ಹೆಸರನ್ನು ಜಮೀಲಿನ ಅನ್ನುವ ಬದಲು ಜಿಲೇಬಿ ಅನ್ನುತ್ತಿದ್ದರು...ಬಿಜಿಯಾ ಅಮರತಿ ಎಂದು ಕರೆಯಿಸಿಕೊಳ್ಳ ತೊಡಗಿದಳು...ತುಂಬ ಕಷ್ಟದ ಜೀವನ ಅದಾಗಿತ್ತು...ಆದರೆ ಚಿಕ್ಕಮ್ಮ ಹುಸೇನಾಬಾದಗೆ ಬರಲು ಸಿದ್ಧಳಿರಲಿಲ್ಲ.... ಮತ್ತೆ ಅಲ್ಲಿ ಆ ಹೊಲಸು ವಾತಾವರಣದಲ್ಲಿ ಹೋದರೆ ತನಗೆ ಟಿ.ಬಿ. ಆಗುವುದು ಖಚಿತ ಎಂದು ಭಾವಿಸಿದ್ದಳು... ಆದರೆ ಹಳ್ಳಿಗಳಲ್ಲಿ ತುಂಬ ಬಡತನವಿತ್ತು......ಜಮೀನ್ದಾರರಲ್ಲಿ ಕಾರ್ಯಕ್ರಮಕ್ಕೆ ಹತ್ತಾರು ರೂಪಾಯಿ ಸಂಪಾದನೆಯಾಗುತ್ತಿತ್ತು...ಅರ್ಧಮರ್ಧ ಉಡಲು ಬಟ್ಟೆ ಸಿಗುತ್ತಿದ್ದವು...ಬಹಳ ತಾಪ ತ್ರಯದಿಂದ ದಿನ ಕಳೆಯುತ್ತಿದ್ದವು..... ಆ ಮೇಲೆ ಪಾಕಿಸ್ತಾನವಾಯಿತು...ಸಿಖ್ ಶರಣಾರ್ಥಿಗಳ ವಾಸಕ್ಕಾಗಿ ಗಿಡ-ಮರ ಕಡಿದು ಸಪಾಟ ಮಾಡಲಾಯಿತು...ಈ ಭಾಗದಲ್ಲಿ ಪಂಜಾಬದಿಂದ ಬಂದಿದ್ದ ಶರಣಾರ್ಥಿಗಳು ನೆಲೆಸಿದರು...ಅವರು ನಮ್ಮ ಹಾಡು ನಕಲಿನ ಕಲೆ ಏನು ಬಲ್ಲರು...ನಾವು ಮತ್ತೆ ಔಧದತ್ತ ಹೊರಟೆವು...."

"ಅಲ್ಲಿ ನಾವು ಒಂದು ಧರ್ಮಶಾಲೆಯಲ್ಲಿ ತಂಗಿದ್ದೆವು...ಛಳಿಗಾಲ ಅದು.. ರಮ್ಜಾನ ತಿಂಗಳು...ನನಗೆ ಆ ರಾತ್ರಿ ಇನ್ನೂ ಚೆನ್ನಾಗಿ ಕಣ್ಣಿಗೆ ಕಟ್ಟಿದ ಹಾಗಿದೆ...21, ರಮ್ಜಾನ್‌ದ ರಾತ್ರಿ...ಚಿಕ್ಕಪ್ಪ ಊರಲ್ಲಿದ್ದ ಮಸೀದೆಯಲ್ಲಿ ನಮಾಜ ಮಾಡಲು ಹೋಗಿದ್ದ. ನಾನು ಮತ್ತು ಚಿಕ್ಕಮ್ಮ ಮತ್ತು ಬಿಜಿಯಾ ಧರ್ಮಶಾಲೆಯ ಪಡಸಾಲೆ ಯಲ್ಲಿ ಬೆಂಕಿ ಕಾಸಿಕೊಳ್ಳುತ್ತಿದ್ದೆವು... ಚಿಕ್ಕಪ್ಪ ಮಸೀದೆಯಲ್ಲಿ ಊಟ ಮಾಡಿಕೊಂಡು ಬರುವುದು ರೂಢಿಯಾಗಿತ್ತು. ಅಲ್ಲಿ ದಾನಿಗಳು ಮಸೀದೆಯಲ್ಲಿ ಊಟದ ವ್ಯವಸ್ಥೆ ಮಾಡಿರುತ್ತಿದ್ದರು. ಊರಿನ ಕಡೆಯಿಂದ ಶೋಕತಪ್ತ ಜನರ ಅಳೋದು ಕರೆಯೋದರ ಗದ್ದಲ ಕೇಳಿಸಿತು. ಅಬನ್ ಮುಲ್ಜಿಮ್ ಹೈದರನನ್ನು ಕೊಂದ...ಅದು ರೋಜಾ ಹಾಗೂ ಪ್ರಳಯದ ದಿನದ ಆಚರಣೆಯಾಗಿತ್ತು...ಚಿಕ್ಕಮ್ಮ, ಬಿಜಿಯಾ ಮತ್ತು ನಾನು ಅವೇ ಶೋಕಗೀತ ಓದತೊಡಗಿದೆವು. ಅದೇ ಸಮಯದಲ್ಲಿ ತಲೆಗೆ, ಗಡ್ಡಕ್ಕೆ ಪಟ್ಟಿ ಕಟ್ಟಿಕೊಂಡ ದರೋಡೆಗಾರರು ಅಂಗಳದಲ್ಲಿ ಹಾರಿ ಬಂದರು...ಓರ್ವ ಡಾಕು ಬಿಜಿಯಾಳನ್ನು ಹೊತ್ತುಕೊಂಡು ಹೋಗಲು ಮುಂದೆ ಬಂದ. ಧರ್ಮಶಾಲೆಯ ಹೊರ ಅಂಗಳದಲ್ಲಿ ಛಳಿಯಿಂದಾಗಿ ಅಲ್ಲಲ್ಲಿ ಉರಿಹಾಕಲಾಗಿತ್ತು. ನಮ್ಮ ಚೀರಾಟ ಕೇಳಿದ ಅಲ್ಲಿ ಉರಿ ಕಾಯಿಸುತ್ತ ಕುಳಿತಿದ್ದ ಪ್ರವಾಸಿಗರೆಲ್ಲ ನಮ್ಮತ್ತ ಓಡಿ ಬಂದರು...ದರೋಡೆ ಗಾರರನ್ನು ಹೊಡೆದೋಡಿಸಿದರು. ಆದರೆ ನಾವು ಮೂವರೂ ಸತ್ತಂತಿದ್ದೆವು... ಚಿಕ್ಕಪ್ಪ ನಮಾಜ ಮಾಡಿ ಮಸೀದೆಯಿಂದ ಮರಳಿದ. ಚಿಕ್ಕಮ್ಮ ಹೇಳಿದಳು- ಇಂದೇ ನಾವು ಪಟ್ಟಣಕ್ಕೆ

ಮರಳೋಣ...ಹಳ್ಳಿಗಳಿಂದ ಸಾಕಷ್ಟು ಉಂಡ ಹಾಗಾಯ್ತು..ಹೀಗಾಗಿ ನಾವು ಮತ್ತೆ ಲಖನೌಕ್ಕೆ ಮರಳಿದೆವು...ಇಲ್ಲಿ ಆಗಾಫರ್‌ಹಾದ್ ಅವರಲ್ಲಿ ಒಂದು ಕೋಣೆ ಬಾಡಿಗೆಗಾಗಿ ಖಾಲಿ ಇತ್ತು. ಅದರಲ್ಲಿ ಬಂದು ವಾಸ್ತವ್ಯ ಮಾಡಿದೆವು....'' ಎಂದಳು.

ವರ್ಮಾ ಸಾಹೇಬ ಮತ್ತು ಆಗಾ ಫರ್‌ಹಾದ್ ಸುಮ್ಮನೆ ಕುಳಿತು ಕೇಳುತ್ತಿದ್ದರು. ಜಮೀಲಿನ್ ಹೇಳುವುದನ್ನೆಲ್ಲ ಹೇಳಿ ಮುಗಿಸಿದಾಗ ಇವರು ಅಚ್ಚರಿಪಟ್ಟರು. ಸದಫ್ ಆರಾ, ಅಡಿಗೆ ಮನೆಯಿಂದ ಇವರಿದ್ದಲ್ಲಿಗೆ ಬಂದವಳು ಇದನ್ನೆಲ್ಲ ಕೇಳಿ ಕಣ್ಣೀರು ಹಾಕುತ್ತಲಿದ್ದಳು.

''ಆದರೆ ಅಚ್ಚರಿಯೇನೆಂದರೆ ರಷ್ಕ್‌ಕಮರ್ ನೀವು ಎಲ್ಲೆಲ್ಲೊ ಜೀವನ ಸಾಗಿಸಿದಿರಿ...ಮತ್ತು ನಿಮ್ಮ ಉರ್ದು ಎಷ್ಟೊಂದು ಚೆನ್ನಾಗಿದೆ...'' ಎಂದು ವರ್ಮಾ ಹೇಳಿದ...

''ವರ್ಮಾ ಸಾಹೇಬ....ಅದು ಅವರದೇ ಭಾಷೆಯಾಗಿದೆ...'' ಎಂದು ಆಗಾಫರ್‌ಹಾದ್ ಹೇಳಿದ...

''ಮತ್ತೆ ಹರಮುಜಿ ಚಿಕ್ಕಮ್ಮ ಮತ್ತು ಜಮನ್‌ಖಾನ್‌ನ ತರಬೇತಿ...'' ಎಂದ ರಷ್ಕಕಮರ್ ಮತ್ತೆ ಹೇಳಿದಳು– ''ಹರಮುಜಿ ಚಿಕ್ಕಮ್ಮ ಈಗ ಮುಪ್ಪಾಗಿದ್ದಾಳೆ... ಆದರೂ ಆಕೆಗೆ ಈಗಲೂ ಡಜನ್‌ಗಟ್ಟಲೆ ಗೀತಗಳು ನೆನಪಿವೆ....''

''ಓಹೋ....ನಮ್ಮ ವಿಚಾರದಲ್ಲಿ ನೀವು ಜಾತಿಯಲ್ಲಿ ಮೀರಾಸುನ್ನಿಯಿರ ಬೇಕು...''

''ಮೀರಾಸುನ್ನಿ, ಬಡಪಾಯಿಗಳು...ಅವರು ತುಂಬ ಸಾತ್ವಿಕರು...ಧಂದೆ ಮಾಡುವುದಿಲ್ಲ..... ನಿಜವಾಗಿಯೆಂದರೆ ನಮಗೆ ಮತ್ತು ಬಿಜಿಯಾಗೆ ಹಾಡುವಲ್ಲಿ ತುಂಬ ಆಸಕ್ತಿ ಇತ್ತು.. ಹೀಗಾಗಿ ಚಿಕ್ಕಮ್ಮ ಢೋಲಕ್ ತರಿಸಿ ಕೊಟ್ಟಿದ್ದಳು....''

''ಪರದೆಯಲ್ಲಿರಬೇಕಾದ ಈ ಜನ ಗಾನಾ– ಬಜಾನಾ ಮಾಡುವುದಿಲ್ಲ..ನಮಗೆ ಕೇಳು... ಅದು ಸರಿ. ಕಮರನ್ ಒಂದು ವಿಷಯ ಹೇಳು...ಈ ಹೆಂಗಸರು ಈ ಉದ್ಯೋಗಕ್ಕೆ ಏಕೆ ಹೋಗುತ್ತಾರೆ...?''

''ಇದು ಕೂಡ ಅತ್ಯಂತ ಅನಾವಶ್ಯಕ ಪ್ರಶ್ನೆಯಾಗಿದೆ ಆಗಾಸಾಹೇಬ...ನಿಮಗೆ ಗೊತ್ತೇ ಇಲ್ಲವೆನ್ನುವ ರೀತಿಯಲ್ಲಿ ಕೇಳುತ್ತಿದ್ದೀರಿ...?

ರಷ್ಕ್‌ಕಮರ್ ರೋಸಿ ಉತ್ತರಿಸಿದಳು... ''ಮನುಷ್ಯ ಹೊಟ್ಟೆಪಾಡಿಗಾಗಿ ಎಲ್ಲ... ಎಲ್ಲ ರೀತಿಯ ಉದ್ಯೋಗಕ್ಕೆ ಸಿದ್ಧನಾಗುತ್ತಾನೆ.... ಆತ್ಮಗೌರವ, ಸಂಸ್ಕೃತಿ, ಮೌಲ್ಯ ಎಲ್ಲ ಆಗ ರಸಾತಳಕ್ಕಿಳಿದು ಹೋಗುತ್ತವೆ... ಹೆಚ್ಚಾಗಿ ಈ ಜನ ದಾರಿದ್ರ್ಯದಲ್ಲಿ ಕೊಳೆಯುತ್ತಿರುತ್ತಾರೆ...ಸ್ವತಃ ನನ್ನ ಅಜ್ಜ (ತಾಯಿಯ ತಂದೆ) ತುಂಬ ಸುಸಂಸ್ಕೃತ ಹಾಗೂ ಅಷ್ಟೇ ಬಡವರಾಗಿದ್ದರು......ಅವರು ಸತ್ತರು, ಸಾಯಿಸಲ್ಪಟ್ಟರು...ಅವರು ನನ್ನ ತಾಯಿಯನ್ನು ಓರ್ವ ಬಡವ ಆದರೆ ಸಭ್ಯ ವ್ಯಕ್ತಿಗೆ ಮದುವೆ ಮಾಡಿಕೊಟ್ಟಿದ್ದರು...ಆತ ಯಾವುದೋ ಅಘಾತದಲ್ಲಿ ಸತ್ತು ಹೋದ...ನಮ್ಮ ತಂದೆ ಸತ್ತಾಗ ನಾನು ಎರಡೂವರೆ

ವರ್ಷದವಳಿದ್ದ... ನನ್ನ ತಾಯಿ ಹದಿನೇಳೇ ವರ್ಷದ ತಾರುಣ್ಯದಲ್ಲಿ ವಿಧವೆಯಾದಳು.....ಅತ್ಯಂತ ಆಶ್ರಯಹೀನಳಾದಳು......ಹರಮಜಿ ಚಿಕ್ಕಮ್ಮನ ಗಂಡ ಯಾವುದೋ ಫೌಜದಾರಿ ಕೇಸಿನಲ್ಲಿ ಸಿಲುಕಿಕೊಂಡು, ಅವನು ಪೋಲೀಸರ ಕಣ್ಣು ತಪ್ಪಿಸಲು ಭೂಗತನಾದ. ಚಿಕ್ಕಮ್ಮನ ಅತ್ತೆ ಮನೆಯವರು ಹತ ಭಾಗ್ಯಳು...ನತ ದೃಷ್ಟಳು...ಎಂದು ದೂಷಿಸುತ್ತ ಚಿಕ್ಕಮ್ಮನನ್ನು ಮನೆಯಿಂದ ಹೊರ ಹಾಕಿದರು...ಆಕೆ ಕೂಡ ನಿರುಪಾಯಳಾಗಿ ನನ್ನ ತಾಯಿಯ ಹತ್ತಿರ ಹುಸೇನಾಬಾದಕ್ಕೆ ಬಂದಳು... ಜಮೀಲಿನ್ ಅಲ್ಲಿಯೇ ಜನಿಸಿದಳು...ಅವಳ ತಂದೆ ಅದೇ ನಗರದ ತುಂಬ ಗೌರವಾನ್ವಿತ ವ್ಯಕ್ತಿಯಾಗಿದ್ದ...ಅವನೆಂದೂ ಮಗಳತ್ತ ಹೊರಳಿ ಕೂಡ ನೋಡಲಿಲ್ಲ...''

''ಉಫ್...ಎಂಥ ಕರುಣಾಜನಕ...'' ವರ್ಮಾ ನಿಟ್ಟುಸಿರು ಬಿಡುತ್ತ– ''ಸದಫ್ ಆರಾಳಿಂದ ಕೇಳಿ...ಅವಳೂ ತುಸ ಕಷ್ಟಪಟ್ಟಿಲ್ಲ..ಹದಿಮೂರು ವರ್ಷದ ಅವಳನ್ನು ಅವಳ ತಾಯಿ ಒಬ್ಬ ಜಮೀನದಾರನಿಗೆ ಮಾರಿಕೊಂಡಳು...ಅವನೋ Sadist ಆಗಿದ್ದ.... ಅವಳ ಸುದೈವದಿಂದ ಅವನು ಎರಡೇ ವರ್ಷದಲ್ಲಿ ಸೆಟೆದು ಹೋದ....ಈಕೆ ಅಲ್ಲಿಂದ ಓಡಿ ಹೋಗಿ ಮತ್ತೆ ತನ್ನ ಊರು ಸೇರಿದಳು...''

ಇದನ್ನೆಲ್ಲ ಕೇಳುತ್ತಿದ್ದ ಪಾಪ, ಸದಫ್ ಆರಾ ಒಂದೇ ಸವನೇ ಕಣ್ಣೀರು ಗರೆಯುತ್ತಿದ್ದಳು....

''ಯಾವಾಗಾದರೂ ನಿಮಗೆ ಸಮಯ ಸಿಕ್ಕಾಗ ನಮ್ಮ ಜಮನ್‌ಖಾನ್‌ನ ಜೀವನ ವೃತ್ತಾಂತ ಕೇಳಿ...ನೀವು, ನಿಮ್ಮಂಥ ಜನ ನಿಮ್ಮ ಪುಸ್ತಕಗಳಲ್ಲಿ, ಪತ್ರಿಕೆಗಳಲ್ಲಿ ಬಹಳ ದೊಡ್ಡ ಮಾತು ಬರೆಯುತ್ತೀರಲ್ಲ..ಅದನ್ನೆಲ್ಲ ಮರೆತು ಬಿಡುತ್ತೀರಿ...'' ಎಂದಳು ಜಮ್‌ಲೀನ ಕೊಂಚ ವ್ಯಂಗ್ಯವಾಗಿ ನಗುತ್ತ....

''ವೇಷಧಾರಿ ಹಾಡುಗಾರರ ಜೀವನ ತುಂಬ ಶೋಚನೀಯವಾದುದು.'' ಆಗಾ ಫರ್‌ಪಾದ್ ಹೌದು ಎನ್ನುವಂತೆ ತಲೆ ಅಲ್ಲಾಡಿಸಿ ಹೇಳಿದ– ''ಉಪವಾಸ, ವನವಾಸವಿದೆ ಅವರ ಪಾಲಿಗೆ. ನಮ್ಮ ಬಾಲ್ಯ ಕಾಲದಲ್ಲಿ ಈ ಜನರನ್ನು ಸಮಾರಂಭಗಳಲ್ಲಿ ಕರೆಯಿಸಲಾಗುತ್ತಿತ್ತು, ಮಿತ್ರ, ವರ್ಮಾ ! ನಿನಗೆ ಮುಸ್ತಫಾ ಹುಸೇನನ ನೆನಪಿರಬೇಕಲ್ಲ....? ಎಂಥ ಅದ್ಭುತ ಕಲಾಕಾರನಾಗಿದ್ದ.''

''ಮಸುಕು ಮಸಕಾಗಿ ನೆನಪಿದೆ..... ನಮ್ಮ ಅತ್ತೆಯ ಮದುವೆಯಲ್ಲಿ ಮೆರವಣಿಗೆಯೊಂದಿಗೆ ನರಹಿಗೆ ಬಂದಿದ್ದ....'' ವರ್ಮಾ ಹೇಳಿದ.

''ನಮಗೆ ತುಂಬ ನೆನಪಿದೆ. ನಾನು ಆತನನ್ನು ನೋಡಿದಾಗ ಆತನಿಗೆ ಎಂಬತ್ತು ವರ್ಷಗಳಾಗಿದ್ದವು...ಆ ವಯಸ್ಸಿನಲ್ಲೂ ಅಮೋಘವಾಗಿ ನೃತ್ಯ ಮಾಡುತ್ತಿದ್ದ. ಅಪರೂಪದ ಕಲಾವಿದನಾಗಿದ್ದ ಮತ್ತೆ ಕೆಲವು ಸಲ ಸುಮ್ಮನೆ ನಿಂತು ಬಿಡುತ್ತಿದ್ದ... ಹಾಗೆ ಆತ ನಿಂತ ಭಂಗಿಯಲ್ಲೂ ಇಡೀ ಪ್ರೇಕ್ಷಕರನ್ನು ಮಂತ್ರಮುಗ್ಧಗೊಳಿಸುತ್ತಿದ್ದ. ಆ ಭಂಗಿಯೇ ಅಷ್ಟು ಕಲಾತ್ಮಕವಾಗಿರುತ್ತಿತ್ತು... ಜೊತೆಗ ಆತ ಕುದುರೆ ಸವಾರನಾಗಿ ಕುದುರೆ ಓಡಿಸುತ್ತಿದ್ದ ರೀತಿ... ಇದು ಕುದುರೆ ಸವಾರನ ನಕಲೆಂದು ಪ್ರೇಕ್ಷಕರಿಗೆ ಅನ್ನಿಸುತ್ತಲೇ

ಇರಲಿಲ್ಲ...ಅಷ್ಟು ಸಹಜ, ಸುಂದರವಾಗಿರುತ್ತಿತ್ತು. ಇದು ಸಾಮಾನ್ಯ ಕಲಾವಿದನಿಗೆ ಸಾಧಿಸಲಾರದ ಕಲೆ. ಒಂದು ವೇಳೆ ಈ ಜನ ವೆಸ್ಟ್‌ದಲ್ಲಿ ಜನಿಸಿದ್ದರೆ ಲೋಕಪ್ರಸಿದ್ಧರಾಗುತ್ತಿದ್ದರು ಹಾಗೂ ಲಕ್ಷಾಧೀಶರಾಗಿರುತ್ತಿದ್ದರು...."

"ಚಿಕ್ಕಪ್ಪ ಮುಸ್ತಫಾ ಹುಸೇನರನ್ನು ಚೆನ್ನಾಗಿ ಬಲ್ಲವರಾಗಿದ್ದರು...." ಎಂದು ರಷ್ಕ್‌ಕಮರ್ ಹೇಳಿದಳು.

"ಈಗ ಹೇಳು...ಬಡಪಾಯಿ ಜಮನ್‌ಖಾನ್ ಕ್ಷೌರಿಕನಾಗಬೇಕಾಯಿತು..." ಎಂದು ವರ್ಮಾ ಹೇಳಿದ.

"ಈ ನಮ್ಮ ಸೊಸೈಟಿಯಲ್ಲಿ ಈ ಬಡಪಾಯಿ ಅನ್ನಿಸಿಕೊಳ್ಳುವವರೇನಿದ್ದಾರಲ್ಲ ಇವರ ಜೀವನದಲ್ಲೂ ಹೊಕ್ಕು ನಾವು ನೋಡಬೇಕು. ಇಂಥವರ ಬಗ್ಗೆ ನಮಗೆ ಕನಿಕರ ಬರುತ್ತದೆ...ಹೆಣ ಹೊರುವುದು, ಮದುವೆಯಲ್ಲಿ ವಿಚಿತ್ರ ವಿಚಿತ್ರ ವೇಷ ಧರಿಸಿ ಹುಚ್ಚುಚ್ಚು ನರ್ತಿಸುವುದು, ವಿಚಿತ್ರ ಪೈಗಳನ್ನು ಬಯ್ಯುವುದು, ಇದುವೇ ಅವರ ಜೀವನವಾಗಿದೆ. ಇದೇ ರೀತಿ ಅವರು ತಮ್ಮ ಹೊಟ್ಟೆ ಹೊರೆಯುತ್ತಾರೆ...." ಎಂದು ಆಗಾಫರ್ ಹೇಳಿದ.

"ಓ ! ಬಂಧು, ಇನ್ನೂ ಹೆಚ್ಚು ಡಿಪ್ರೆಸ್‌ಗೊಳಿಸಬೇಡಿ..." ಎಂದು ವರ್ಮಾ ಚಿಂತಿತನಾಗಿ ಹೇಳಿದ....

ಅದೇ ದನಿಯಲ್ಲಿ ಜಮೀಲಿನ್ ಹೇಳಿದಳು– "ಇನ್ನು ಸಾಂಗ್ ಬರ್ಡ್ಸ್ ಕ್ಲಬ್..."

## -5-

ಲಾಲಬಾಗದ ಒಂದು ಹೊಸ ಬಿಲ್ಡಿಂಗಿನ ಗ್ಯಾಲರಿಯಲ್ಲಿ ಬೋರ್ಡ–

ಆಫೀಸು : ಸಾಂಗ್ ಬರ್ಡ್ಸ್ ಎಂಟರಪ್ರೈಜರ್ಸ್ (ಪ್ರೈವೇಟ್) ಲಿಮಿಟೆಡ್....

ಮ್ಯಾನೇಜಿಂಗ ಡೈರಕ್ಟರ್ : ಎಸ್. ಕೆ. ವರ್ಮಾ (ಗ್ರೌಂಡ್ ಫ್ಲೋರ್) ಸಾಂಗ್ ಬರ್ಡ್ಸ್ ಸ್ಕೂಲ್ ಆಫ್ ಲೈಟ್ ಮ್ಯುಜಿಕ್

ಪ್ರಿನ್ಸಿಪಾಲ್ : ಸದಫ್ ಆರಾ ಬೇಗಂ

ವೈಸ್ ಪ್ರಿನ್ಸಿಪಾಲ್ : ಕುಮಾರಿ ಜಲಬಾಲಾ ಲಹರಿ– ಫಸ್ಟ್ ಫ್ಲೋರ್.

"ಗೋಹರ ಷಬ್ ಚಿರಾಗ" ಉರ್ದು ಕ್ವಾರ್ಟರ್ಲಿ. ಡಿವೋಟೆಡ್ ಟು ಲೈಫ್ ಆ್ಯಂಡ್ ಲಿಟರೇಚರ.

ಪೆಟ್ರಾನ್ : ಆಗಾ ಫ್‌ರ್‌ಹಾದ ಖಂಧಾರಿ.

ಎಡಿಟರ್ : ಎಸ್. ಕೆ. ವರ್ಮಾ

ಅಸಿಸ್ಟಂಟ್ ಎಡಿಟರ್ : ಮಿಸ್ ರಷ್ಕಕಮರ್ ಲಖನೌಯಿ, ಫಸ್ಟ್‌ಫ್ಲೋರ್....

ಸಾಂಗ್ ಬರ್ಡ್ಸ್ ಡಾನ್ಸ್ ಆ್ಯಂಡ್ ಡ್ರಾಮಾ ಗ್ರುಪ್.... ಫಸ್ಟ್‌ಫ್ಲೋರ್.... ರಸಿಡೆನ್ಸಿ ಮ್ಯಾನೇಜಿಂಗ್ ಡೈರಕ್ಟರ್ : ಶ್ರೀ ಎಸ್.ಕೆ. ವರ್ಮಾ–ಸೆಕಂಡ್ ಫ್ಲೋರ್....

ಶ್ರೀ ಎನ್.ಕೆ. ವರ್ಮಾ ತನ್ನ ಸುಂದರ ಮಲಗುವ ಕೋಣೆಯಲ್ಲಿ ಕುಳಿತು "ಗೋಹರ ಷಬ್ ಚಿರಾಗ" ಪತ್ರಿಕೆಯ ಸಂಪಾದಕೀಯ ಬರೆಯುವಲ್ಲಿ ಮಗ್ನನಾಗಿದ್ದ. ಸದಫ್ ಆರಾ ಬೇಗಂ ಓರ್ವ ಪತಿವ್ರತಾ ಸ್ತ್ರೀಯ ಹಾಗೆ ಕುಳಿತು ಅವನ ಕಾಲು ಒತ್ತುತ್ತಿದ್ದಾಳೆ... ಅಪರಾಹ್ನದ ಸಮಯ... ಖುದಾ ತನ್ನ ಸ್ವರ್ಗದಲ್ಲಿದ್ದಾನೆ... ಮತ್ತು ಜಗತ್ತಿನಲ್ಲಿ ಎಲ್ಲ ರೀತಿಯ ಸುಖ, ಸಮೃದ್ಧಿ ನೆಲೆಸಿದೆ...

"ವರ್ಮಾ ಸಾಹೇಬ.... ಏ, ವರ್ಮಾ ಸಾಹೇಬ.... ನಾವು ಇದನ್ನು ಹೇಳುತ್ತಿದ್ದೆವು... ಏನೆಂದರೆ...."

"ನಾವು ಇದನ್ನು ಹೇಳುತ್ತಿದ್ದೆವು.... ಕಮರನ್‌ಳ ಗತಿಯೇನು.... ಜಮೀಲಿನ್ ಹೇಳುತ್ತಿದ್ದಳು... ಕವಿಗೋಷ್ಠಿಯಲ್ಲಿ ಬರಲಿರುವ ಕವಯಿತ್ರಿಯರು ಎಜಿಟೇಷನ್ ಮಾಡುತ್ತಿದ್ದಾರಂತೆ.... ಯಾವ ಕವಿಗೋಷ್ಠಿಯಲ್ಲಿ ರಷ್ಕ್‌ಕಮರ್ ಇರುತ್ತಾಳೋ ಅದರಲ್ಲಿ ಅವರು ಭಾಗವಹಿಸುವುದಿಲ್ಲವಂತೆ.... ಅವಳ ನಡತೆ ಚೆನ್ನಾಗಿಲ್ಲವಂತೆ....."

"ಕವಯಿತ್ರಿಯರ ತಲೆ ಕೆಟ್ಟಿದೆ ಅಷ್ಟೆ. ಆಕೆಯನ್ನು ಎಲ್ಲ ಸಾಹಿತಿಗಳು, ಕವಿಗಳು ಸಾಕಷ್ಟು ಹೊಗಳಿದ್ದಾರೆ, ಗೌರವಿಸಿದ್ದಾರೆ...."

"ಆಂ ! ಏನಂದಿ...."

"ಓ ! ನೀನು ಕತ್ತೆ.... ಇನ್ನು ಹೆಚ್ಚು ಒದರಬೇಡ.... ಸುಮ್ಮನಿರು.... ನನಗೀ ಲೇಖನ ಬರೆಯಗೊಡು...."

"ವರ್ಮಾ ಸಾಹೇಬ...ನಾವೊಮ್ಮೆ ಕನಸು ಕಂಡೆವು....ನೀನು ನಮ್ಮೊಂದಿಗೆ ಮದುವೆಮಾಡಿಕೊಳ್ಳುವಿಯೋ ಅಥವಾ ಆಗಾಫರ್‌ಹಾದ್ ರಷ್ಕ್‌ಕಮರ ಳೊಂದಿಗೊ...."

"ಆ ರಾತ್ರಿ ನೀನು ಬಹಳಷ್ಟು ಉಂಡು ಮಲಗಿರಬೇಕು...."

"ಆದರೆ ಕೆಲಕಾಲ ಅವನು ಆಗಾ ಫರ್‌ಹಾದನ ಜೊತೆ ಚೆನ್ನಾಗಿಯೇ ಕಳೆದ.... ಕವಿಗೋಷ್ಠಿಗಳಲ್ಲಿ ಭಾಗವಹಿಸಲು ಬಹು ದೂರ ದೂರದಿಂದ ಆಮಂತ್ರಣ... ಅಲ್ಲಲ್ಲಿ ಜೊತೆಗೂಡಿ ಹೋದರು.... ಮುಂಬೈಗೆ ಹೋದರು, ಅಲ್ಲಿ ಅಪೂರ್ವಸ್ವಾಗತ.... ಸಾಹಿತಿಗಳು ದಿನವೂ ಆಮಂತ್ರಿಸಿದರು.... ಸಂತೋಷಕೂಟ.... ಫೋಟೋ ತೆಗೆಯಲಾಯಿತು.... ಬಹಳ ಕಡೆ ಗಜಲ್ ಹಾಡಲಾಯಿತು.... ಕವಿಗೋಷ್ಠಿಗಳು ನಡೆದವು... ಎಲ್ಲ ಕಡೆ ಫರ್‌ಹಾದ ಮತ್ತು ರಷ್ಕ್‌ಕಮರ್.... ಕೋಲಾಹಲ ಎಬ್ಬಿಸಿಬಿಟ್ಟರು."

"ಹಾಂ.... ಹಾಂ.... ಲಖನೌಕ್ಕೆ ಮರಳಿ ಬಂದಾಗ ಹೆಪ್ಪುಟಿ ಮತ್ತು ಡೆಪ್ಯಾಯಿನ್ ಸಾಕಷ್ಟು ತಲೆಗೆ ಕುಕ್ಕಿದರು.... ಅದೇ ತಿಂಗಳು ಮದುವೆ ಮಾಡಿದರು...."

"ಇದುವೇ ವಿಚಿತ್ರ...."

"ಏನು ವಿಚಿತ್ರ.... ತಾಯಿ ತಂದೆ ನಿಶ್ಚಯಿಸಿದ ಹುಡುಗಿಯೊಂದಿಗೆ ಮದುವೆ ಮಾಡಿಕೊಳ್ಳಬಾರದೇನು....?"

''ಅರೆ... ನೀವು ಗಂಡಸರು ಬಹಳ ಹರಾಮಿ ಜನ... ಎಲ್ಲರಿಗೂ ಫರಹಾದ್ ಸಾಹೇಬ ಹೇಳಬೇಕಾಗಿತ್ತು... ರಷ್ಕ್‌ಕಮರ್‌ಗಳಿಗೆ ಖುಲ್ಲಂ ಖುಲ್ಲಾ ಹೇಳಿದ್ದರೆ....''

''ಹೆಚ್ಚು ಒದರಬೇಡ.... ನಿನ್ನ ಟರ್....ಟರ್.... ಸಾಕು.''

''ನೀನು ಕೂಡ ನಮ್ಮೊಂದಿಗೆ ಇದನ್ನೇ ಮಾಡಲಿರುವೆ.... ನಮಗೆ ಗೊತ್ತಿದೆ.... ನಿನ್ನ ತಾಯಿ ಹೇಳಿದ ಅದೇ ಕುಮಾರಿ, ಕನ್ಯಾ, ಸುಪುತ್ರಿ, ರಾಜಕುಮಾರಿ, ಸೌಭಾಗ್ಯಲಕ್ಷ್ಮಿಯೊಂದಿಗೆ ಸಪ್ತಪದಿ ಸುತ್ತುವೆ....''

''ನೋಡು.... ಸದಫ್...ನನ್ನ ತಲೆ ತಿನ್ನಬೇಡ.... ಹೋಗಿ ಮಲಗಿಕೋ.... ನೀನೆಲ್ಲಿದ್ದಿ ಎಂಬುದನ್ನು ನೀನು ಮರೆತಿರುವೆ.... ನಿನ್ನನ್ನು....ಹೇಗಿದ್ದವಳನ್ನು ಹೇಗೆ ಮಾಡಿದೆ ಎಂಬುದನ್ನು ನೀನು ಮರೆತು ಬಿಟ್ಟಿರುವೆ... ಅನಾಮಿಕ ಕಲಾವಿದೆ ಆಗಿದ್ದೆ.... ಇನ್ನು ಮುಂದೆ ಹೆಚ್ಚಿನ ಕನಸು ಕಾಣಬೇಡ ಮಹಾರಾಯತಿ... ಜಾತ್ರೆಯಲ್ಲಿ .... ಹಾಡುವ ಮೋತಿಯನ್ನು ಸದಫ್ ಆರಾ ಬೇಗಂಳಲ್ಲಿ ಪರಿವರ್ತನೆಗೊಳಿಸಿದೆ.... ಆದರೂ ಮತ್ತೆ ಟರ್....ಟರ್....ಚಾವ್.....ಚಾವ್....''

''ಹೆಸರು ಬದಲಿಸಿದರೇನು ನಸೀಬ ಬದಲಿ ಆಗ್ತದೇನು.... ಜಮಿಲೀನ್‌ಳ ಹೆಸರು ಬದಲಿಯಾದ್ದರಿಂದ ಅವಳ ಹಸ್ತರೇಖಾ ಬದಲಿಯಾದವೇನು ?.... ಹಾಗೆಯೇ ಬಿದ್ದುಕೊಂಡಿದ್ದಾಳೆ ಕಾಟ್ ಮೇಲೆ.... ಜಾತಿಯಲ್ಲಿ ನಾವು ಹಿಂದೂ.... ನೀನು ನನ್ನನ್ನು ಸದಫ್ ಆರಾ ಬೇಗಂ ಮಾಡಿಟ್ಟೆ.... ಜಮಿಲೀನ್‌ಳನ್ನು ಜಲಬಾಲಾ ಲಹರಿ.... ಇದರಿಂದ ಯಾವ ವ್ಯತ್ಯಾಸವಾಯಿತು.... ದೇವರ ಮನೆಯಿಂದ ನಾವೇನು ಹಣೆಬರೆಹ ಬರೆಯಿಸಿಕೊಂಡು ಬಂದಿರುವೆವೋ ಅದೇ ಆಗುತ್ತದೆ.....''

''ವಿಚಿತ್ರ.... ಹುಚ್ಚು ಹೆಣ್ಣು....''

''ದೇವರ ಅನ್ಯಾಯಕ್ಕೂ ಕೊನೆ ಮೊದಲಿಲ್ಲ.... ದೇವರ ಕೆಲಸವೆಲ್ಲ ಉಲ್ಟಾ ಪಲ್ಟಾ.... ಅನಂತಕಾಲದಿಂದ ಸಂಸಾರ ನಡೆಸುತ್ತ ಬಂದ ದೇವರು ಗಾಬರಿ ಗೊಂಡಿದ್ದಾನೆ.... ಅರೇ.... ವರ್ಮಾ ಸಾಹೇಬ.... ಕೇಳಿಲ್ಲಿ....''

''ಏನು ಮಹಾರಾಯಳೇ....?'' ವರ್ಮಾ ತೂಕಡಿಸುತ್ತ ಕೇಳಿದ....

''ನಾದರ ಹುಟ್ಟಿದಾಗ ಕಮರನ್‌ಳಿಗೆ ತಿಳಿ ಹೇಳಿದ್ದೆ.... ಇವನು ದೊಡ್ಡವನಾದ ಮೇಲೆ ಆಗಾಫರ್‌ಹಾದ್‌ನ ಮೇಲೆ ದಾವಾ ಮಾಡಿಸು.... ಇವರಪ್ಪ ಅಷ್ಟು ದೊಡ್ಡ ಸಂಪತ್ತಿನ ಮಾಲಿಕನಿದ್ದಾನೆ.... ಸ್ವಲ್ಪಾದರೂ ಇವನ ಪಾಲಿಗೆ ಬರಬಹುದು.... ಆದರೆ ಆಕೆ ತೋಬಾ.... ತೋಬಾ.... ಎನ್ನುತ್ತ.... ಇಂಥ ಮಾತುಗಳನ್ನು ಇನ್ನೆಂದೂ ಆಡಬೇಡಾ.... ಎಂದಳು.... ಕಮರನ್. ಅವಳಿಗೆ ಎರಡು ನೂರು ರೂಪಾಯಿ ಖರ್ಚಿ ಗೆಂದು ಕೊಡತೊಡಗಿದ.... ಇದು ಕೂಡ ಉಲ್ಟಾ... ಈಗ ಜೂನ್ ಆಫ್ತಾಬ್ ಹುಟ್ಟಿದ.... ನಾಲ್ಕು ನೂರು ರೂಪಾಯಿ ಕೊಡಬೇಕೋ ಬೇಡವೋ...?''

''ಏ.... ಚಾಡಗಾರ್ತಿ.... ಆಫ್ತಾಬ್ ಅವನ ಮಗನಲ್ಲ....''

"ಅದು ನಮಗೂ ಗೊತ್ತದ.... ಅವನು ಜೂನ ಆರ್ಟಿಸ್ಟ್ ಪಂಜಾಬಿನಿಂದ ಬಂದಿದ್ದನಲ್ಲ... ಅವನ ಮಗ.... ಅವ ಬಂದ.... ಬಂದಂತೆ ಹೋಗಿಯೂ ಬಿಟ್ಟ.... ಆ ಕಥೆ ಮುಗಿದ ಕಥೆ.... ಆಗಾ ಫರಹಾದ್ ಈಗಲೂ ಕಮರನ್‌ಳೊಂದಿಗೆ ಒಡನಾಟ ಇರಿಸಿಕೊಂಡಿದ್ದಾನಲ್ಲ... ಅವನು ಹೆಂಡತಿಗೆ ಹೆದರುತ್ತಾನೆ.... ಕನಿಕರದಿಂದ ಅವಳ ಖರ್ಚಿಗೆ ಕೊಡುತ್ತಾನೆ. ಅದೇ ಕನಿಕರದಿಂದ ಇನ್ನೂ ಎರಡು ನೂರು ಹೆಚ್ಚು ಕೊಡಬೇಕು... ಅವನಲ್ಲಿ ಹಣಕ್ಕೇನು ಕೊರತೆ.... ಪಾಪ.... ಕಮರನ್‌ಳ ಸ್ಥಿತಿ ತುಂಬ ಕೆಟ್ಟದ್ದಾಗಿದೆ..... ಏ ವರ್ವಾ ಸಾಹೇಬ.... ಓ ! ಮಲಗಿಬಿಟ್ಟೆಯಾ...."

ವರ್ವಾ ಈಗ ಗೊರಕೆ ಹೊಡೆಯಲಾರಂಭಿಸಿದ್ದ. ಸದಫ್ ಆರಾ ಬೇಗಂ ಎದ್ದು ಅಡಿಗೆ ಮನೆಯತ್ತ ಹೊರಟಿದ್ದಳು... ಆಗಲೇ ಕಾಲ್ ಬೆಲ್ ಬಾರಿಸಿತು. ಹೋಗಿ ಬಾಗಿಲು ತೆಗೆದಳು.... ಓರ್ವ ದಷ್ಟ ಪುಷ್ಟ, ಸುಂದರ, ಕೆಂಪಗಿನ ಅಪರಿಚಿತ, ನೀಲಿ ಸೂಟ ಹಾಕಿಕೊಂಡ ವ್ಯಕ್ತಿ ನಿಂತು ಮುಗುಳ್ನಗುತ್ತಿದ್ದ.... ತನ್ನ ಹೆಸರು ಹೇಳಿದ.... ಸದಫ್ ಆರಾ ಒಳಗೆ ಹೋಗಿ ವರ್ವಾ ಸಾಹೇಬನನ್ನು ಎಬ್ಬಿಸಿದಳು.....

"ಏ..... ವರ್ವಾ ಸಾಹೇಬ.... ಏಳು.... ಅವನು ಬಂದಿದ್ದಾನೆ...ಆಗಾಷಬ್ ಬೇಗ....."

**-6-**

"ಬಿಜಿಯಾ ಠಾಕಲೀಕಾಗಿ ಹೋಗು.... ಆಗಾಷಬ್‌ದೇಗ ಕರದಿದ್ದಾನೇನು ?"

"ಜಮಿಲೀನ್.... ನೀನು ಸದಫ್ ಆರಾಳ ನಕಲ್ ಮಾಡುತ್ತ ಹುಚ್ಚುಚ್ಚಾಗಿ ಮಾತಾಡಬೇಡ.... ನಾವು ಆಗಾಷಬ್ ಆವೀಜ ಹಮ್ದಾನಿಯೊಂದಿಗೆ 'ಆನ್' ಪಿಕ್ಚರ್ ನೋಡಲು ಹೋಗುತ್ತಿದ್ದೇವೆ....."

"ಷಬ್ ಆವೀಜ.... ಹೆಸರೇ ವಿಚಿತ್ರವಾಗಿದೆ."

"ವಿಶುದ್ಧವಾದ ಈರಾನಿ ಹೆಸರು.... ಹಮ್ದಾನ್‌ದಿಂದ ಅವನ ಅಪ್ಪ ಕಲಕತ್ತೆಗೆ ಬಂದು ನೆಲೆಸಿದ್ದರು....."

"ಏನೇ ಇರಲಿ.... ಬುದ್ಧಿವಂತಿಕೆಯಿಂದ ವ್ಯವಹರಿಸು..... ಇವನೂ ಹೀಗೆಯೇ ಎಲ್ಲರಂತೆ..... ಈರಾನಿ.... ನಿನ್ನನ್ನು ಎಲ್ಲಿಗಾದರೂ ಒಯ್ದು ಹಚ್ಚಬಾರದು....."

"ಕರೀನಾಲಿಗ.... ಥೂ...ಥೂ....."

"ನಿಕಾಹ (ಮದುವೆ) ಮಾಡಿಕೊಳ್ಳುತ್ತಾನೇನು ?"

"ಹಾಂ ! ಹಾಗೆಂದು ಹೇಳಿದ್ದಾನ....."

"ನಿಕಾಹಕ್ಕಾಗಿ ತಯ್ಯಾರ ಇದ್ದಾನ.... ? ಜಮಿಲೀನ್ ಸಂತೋಷದಿಂದ ಎದ್ದು ಕುಣಿದಳು.... ಸರಿಯುತ್ತ... ಸರಿಯುತ್ತ... ಕಮರನ್ ಮೇಕಪ್ ಮಾಡಿಕೊಳ್ಳುತ್ತಿದ್ದಲ್ಲಿಗೆ ಬಂದಳು...."

''ನಿನ್ನೆ ಸಂಜೆ, ಇಲ್ಲಿಂದ ಹೋದ ಕೂಡಲೇ ಪತ್ರ ಬರೆಯುವುದಾಗಿ ಹಾಗೂ ಎರಡು ತಿಂಗಳ ನಂತರ ಕರೆಯಿಸಿಕೊಳ್ಳುವುದಾಗಿ ಹೇಳುತ್ತಿದ್ದ....''

''ಕಲಕತ್ತಾಕ್ಕೆ....?''

''ಅಲ್ಲ.... ಅವನ ಬಿಜಿನೆಸ್ ಬಹಳ ಸ್ಥಳಗಳಲ್ಲೆಲ್ಲ ಹಬ್ಬಿದೆ... ಕರಾಚಿ... ತೆಹರಾನ್.... ಲಂಡನ್.... ಈಗ ಕರಾಚಿಗೆ ಹೋಗುತ್ತಿದ್ದಾನೆ....''

''ವರ್ಮಾ ಸಾಹೇಬನಿಗೆ ಅವನ ಪರಿಚಯ ಚೆನ್ನಾಗಿ ಗೊತ್ತಿದೆಯೇ ?''

''ವರ್ಮಾ ಸಾಹೇಬನ ಹತ್ತಿರವೇ ಬಂದಿದ್ದ ತನ್ನ ಬಿಜಿನೆಸ್‌ಗಾಗಿ. ಸದಫ್ ನನಗೆ ರೇಡಿಯೋ ಸ್ಟೇಶನ್‌ದಲ್ಲಿ ಸಿಕ್ಕಿದ್ದಳು. ಓರ್ವ ಆಗಾ ಕಲಕತ್ತೆಯಿಂದ ಬಂದಿದ್ದಾನೆ.... ಆಗರ್ಭ ಶ್ರೀಮಂತ..... ಮತ್ತು ಸುಂದರ.... ನೀನು ನಿಕಾಹ ಮಾಡಿಕೊ.... ಸಂಗೀತದ ಷೋಕಿ ತುಂಬ ಇದೆ.... ಪಾಪ.... ಆಕೆ ಮಾರನೆಯ ದಿನವೇ ಸಾಂಗ್ ಬರ್ಡ್ಸ್ ಕ್ಲಬ್‌ದ ಪ್ರೋಗ್ರಾಮ ಇರಿಸಿದಳು....''

''ಬಿಜಿಯಾ.... ಒಂದು ಮಾತು ಹೇಳಲಿ...ವರ್ಮಾ ಸಾಹೇಬ ಸದಫ್‌ಳ ಈ ಚಾಳಿಯಿಂದಾಗಿಯೇ ಬಹಳ ಚಿಂತಿತರಾಗಿದ್ದಾರೆ...ನಿನ್ನನ್ನು ಸಾಂಗ್‌ಬರ್ಡ್ಸ್‌ದ ಮುಖಾಂತರ ಜನರಿಗೆ ಆಕೆ ಪರಿಚಯಿಸುತ್ತಾಳೆ. ಸಾಂಗ್ ಬರ್ಡ್ಸ್ ಈ ಕಾರಣದಿಂದಾಗಿ ಕೆಟ್ಟ ಹೆಸರು ಪಡೆಯುತ್ತಲಿದೆ...''

''ಹಾಗಾದರೆ ನಾನೇನು ಮಾಡಲಿ ? ಸತ್ತು ಹೋಗಲೇ ? ಕವಿ ಗೋಷ್ಠಿಗಳ ಆಮಂತ್ರಣ ನಿಂತು ಹೋಗಿವೆ. ರೇಡಿಯೊ ಪ್ರೋಗ್ರಾಮ್‌ಗಳಿಂದ ಖರ್ಚು ನಿಭಾಯಿಸ ಲಾಗುವದಿಲ್ಲ. ಎರಡು ನೂರು ರೂಪಾಯಿ ಫರಹಾದ್‌ನಿಂದ ಬರುತ್ತವೆ.. ಐವತ್ತು ರೂಪಾಯಿ ತಿಂಗಳಿಗೆ ವರ್ಮಾ ಸಾಹೇಬ ಹೆಸರಿಗೆ ಮಾತ್ರ ಇರುವ ಮ್ಯುಜಿಕ್ ಸ್ಕೂಲಿನ ನಾಮ ಮಾತ್ರ ವೈಸ್ ಪ್ರಿನ್ಸಿಪಾಲ ಗಿರಿಗೆ ಕೊಡುತ್ತಾರೆ, ನಿನಗೆ...ಕರುಣೆಯಿಂದ...ಈ ಎರಡೂವರೆ ನೂರು ರೂಪಾಯಿಗಳಲ್ಲಿ ಜೀವನ ಸಾಗುತ್ತದೆಯೇ ? ಇನ್ನು ಮೇಲೆ ಆಫ್ತಾಬನನ್ನು ಸ್ಕೂಲಿಗೆ ಕಳಿಸಬೇಕು...''

''ಬಿಜಿಯಾ..ಈ ಆಗಾ ಹವ್‌ದಾನಿ ನಿಜಕ್ಕೂ ನಿನ್ನೊಂದಿಗೆ ಮದುವೆಯಾಗಲು ಸಿದ್ಧನಿದ್ದಾನೆಯೇ ?''

''ಹೇಳಿದ್ದಾನೆ...ಸಾಫ...ಸಾಫ...ಮಾತುಗಳಲ್ಲಿ...''

''ಬಹುಶಃ ನೀನೇ ಅವನ ಮೇಲೆ ಮೋಹಗೊಂಡಿರಬೇಕು...ಬದ್ಮಾಷ್ ಬಹಳ ಸುಂದರನೂ ಇದ್ದಾನೆ....''

''ಹಾಂ...ಮೋಹಗೊಂಡಿದ್ದೇನೆ...ಪ್ರೇಮಿಸುತ್ತಿದ್ದೇನೆ...ಇಂದಿನವರೆಗೂ ಯಾರ ಮೇಲೂ ಮೋಹಗೊಂಡಿರಲಿಲ್ಲ..ಇವನೆಂದರೆ ಜೀವ ಕೊಡಲು ಸಿದ್ಧ.... ಅವನು ಕೂಡ ನನ್ನನ್ನು ತುಂಬ ಪ್ರೇಮಿಸುತ್ತಾನೆ....''

''ಆದರೆ ಅವನು ನಿನ್ನನ್ನು ಕರಾಚಿ ಅಥವಾ ಲಂಡನ್‌ಗೆ ಕರೆಯಿಸಿಕೊಂಡು ಮದುವೆ ಮಾಡಿಕೊಳ್ಳುತ್ತಾನೆಯೇ ? ಇದು ನನಗೇಕೋ ನಂಬಲಾಗುತ್ತಿಲ್ಲ...''

''ಕರೀನಾಲಿಗೆ...ಥೂ...ಥೂ...ನೀನು ನನ್ನ ಸಂತೋಷ ನೋಡಿ ಕರುಬುತ್ತಿ... ಕುಂಟಿ...ದೆವ್ವ....''

''ದೇವರಿಗಾಗಿ ಇಂಥ ಮಾತನ್ನಾಡಬೇಡ...ಬಿಜಿಯಾ...ನಿನ್ನ ಮೇಲಿನ ಪ್ರೀತಿಯಿಂದಾಗಿ ಇಂಥ ಸಂಶಯ ಉಂಟಾಗುತ್ತದೆ...ಮತ್ತೆಲ್ಲಿ ಮೋಸಕ್ಕೆ ಒಳಗಾಗುತ್ತೀಯೇ ಎನ್ನುವ ಚಿಂತೆ ನನ್ನನ್ನು ಕಾಡುತ್ತದ...''

ಬಿಜಿಯಾ ಪರ್ಸ್ ಎತ್ತಿಕೊಂಡು ಚಕಮಕ ಮಾಡುತ್ತ ಕೋಣೆಯಿಂದ ಹೊರಗೆ ಬಂದು ತಲಬಾಗಿಲ ಪರದೆ ತೆಗೆದು ಮನೆಯಿಂದ ಹೊರಹೊರಟು, ಸೈಕಲ್ ರಿಕ್ಷಾದಲ್ಲಿ ಕುಳಿತಳು. ರಿಕ್ಷಾ ಪಾಯೇನಾಲೆಯಿಂದ ಹೊರಟು ಕಾರಲ್ಟನ್ ಹೋಟಲ್ ಕಡೆ ಸಾಗಿತು.

## -7-

ಹೇ ಪ್ರಭು ! ನಾನು ನಿನ್ನಲ್ಲಿ ಬೇಡಿಕೊಳ್ಳುವೆ
ಮತ್ತೆ ಮತ್ತೆ ನಿನ್ನ ಪದತಲದಲಿ ನತಮಸ್ತಕಳಾಗುವೆ !
ಪುನರ್ಜನ್ಮವಾದಲ್ಲಿ ಹೆಣ್ಣಾಗಿಸಬೇಡ
ಬೇಕಾದರೆ ನರಕ ದಯಪಾಲಿಸು !

ಢೋಲಕ್‌ದೊಂದಿಗೆ ಸದಫ್ ಆರಾ ಹಾಗೂ ಕುಮಾರಿ ಜಲಬಾಲಾ ಲಹರಿಯ ಮಧುರ ಕಂಠದಿಂದ ಹೊರಡುತ್ತಲಿತ್ತು ಈ ಪೂರಬಿ ಗೀತ...

ಪುನರ್ಜನ್ಮವಾದಲ್ಲಿ ಹೆಣ್ಣಾಗಿಸ ಬೇಡ...ಓ ! ಪುನರ್ಜನ್ಮವಾದಲ್ಲಿ...

ಸಾಂಗ್ ಬರ್ಡ್ಸ್ ಮ್ಯುಜಿಕ್ ಸ್ಕೂಲಿನ ಕೋಣೆಯಲ್ಲಿ ಓರ್ವ ಹುಡುಗಿ ಟೇಪರಿಕಾರ್ಡ ಹಚ್ಚಿದ್ದಳು...ಸದಫ್ ಮತ್ತು ಜಮೀಲೀನ್ ಮೊಗಸಾಲೆಯಲ್ಲಿ ಚಾಪೆಯ ಮೇಲೆ ಕುಳಿತಿದ್ದರು. ಜಮೀಲೀನ್‌ಳ ಆಸರೆಗೋಲುಗಳು ಎದುರಿಗಿದ್ದವು. ಸದಫ್ ತಟ್ಟೆಯಿರಿಸಿಕೊಂಡು ಕಾಯಿ ಪಲ್ಲೆ ಹೆಚ್ಚುತ್ತಿದ್ದಳು. ವರ್ಮಾ ಸಾಹೇಬ ಹೊರಗೆ ಹೋಗಿದ್ದ....

''ಇಂದು ಹದಿನೈದನೆಯ ತಾರೀಕು...ಕಮರನ್ ಇಲ್ಲಿಯವರೆಗೆ ಕರಾಚಿ ತಲುಪಿರಬೇಕು...'' ಎಂದು ಸದಫ್ ಹೇಳಿದಳು...

''ಯಾರಿಗೆ ಗೊತ್ತು....'' ಎಂದು ಜಮಲೀನ್ ಮೆಲ್ಲಗೆ ಅನ್ನುತ್ತ ಮತ್ತೆ ಹೇಳಿದಳು– ''ಯಾವೊತ್ತಿಗೆ ತಲುಪುತ್ತಾಳೋ...ಢಾಕಾಪಾಸಪೋರ್ಟದಿಂದ ಹೋಗಿದ್ದಾಳೆ... ಖೋಖರಾಪಾರದ ರಸ್ತೆ ಜೀವ ತೆಗೆದುಕೊಳ್ಳುವ ರಸ್ತೆಯೆಂದು ಕೇಳಿರುವೆ...ತಾರುಣ್ಯ ತುಂಬಿದ ಮಗಳೊಂದಿಗೆ.''

''ಪಾರಾ ಹುಟ್ಟಿ ಹದಿನಾರು ವರುಷ ಕಳೆದು ಹೋದವು...'' ಎಂದು ಸದಫ್ ಅಂದಳು.

''ಈಗ ಅವನು ಬಿಜಿಯಾಳನ್ನು ಗುರುತಿಸಬಲ್ಲನೆ...ಸದಫ್...ಕೆಲವು ಗೀತಗಳು ತುಂಬ ಕೆಟ್ಟವಾಗಿರುತ್ತವೆ...ನೆನಪಿದೆಯೇ ನಿನಗೆ.... ಬಿಜಿಯಾ ಪ್ರತಿಯೊಂದು ಪ್ರೋಗ್ರಾಮಿನಲ್ಲಿ ಅದೇ ಒಂದು ರಾಜಸ್ಥಾನಿ ಮಾಂಡ್ ಗೀತ ಕೇಳಿಸುತ್ತಿದ್ದಳು....

ವಸಂತ ಕಳೆದು ಹೋಗಲಿ
ರೂಪಾನೂ ಇಲ್ಲ ಪ್ರಿಯನೂ ಇಲ್ಲ

ಬದ್ಮಾಷ್‌ನನ ಮಗನಿಗೆ ವಾಪಸ್ಸು ಬರಬೇಕಾಗಿರಲಿಲ್ಲ..ಅಂತೆಯೇ ಬರಲಿಲ್ಲ.. ಅದು ಹೋಗಲಿ...ಒಂದು ಪತ್ರ ಕೂಡ ಬರೆಯಲಿಲ್ಲ..''

''ಇಲ್ಲ..ಮೊದ ಮೊದಲು ಒಂದೆರಡು ಪತ್ರವೇನೋ ಬಂದಿದ್ದವು...'' ಎಂದಳು ಸದಫ್... ''ಆ ನಂತರ ಏನೂ ಇಲ್ಲ..ಬಿಜಿಯಾ ಎಷ್ಟೊಂದು ಪತ್ರ ಬರೆದಳು...ಪ್ರತಿಯೊಂದು ವಿಳಾಸಕ್ಕೆ ಕರಾಚಿ,...ತೆಹರಾನ್...ಲಂಡನ್...ಹದಿನೇಳು ವರ್ಷಗಳವರೆಗೆ ಪತ್ರದ ಹಾದಿ ಕಾಯುತ್ತ ಕಳೆದಳು...ಬೆಳಗ್ಗೆ ಸಂಜೆ ಎರಡೂ ಹೊತ್ತು ಬಾಗಿಲದಲ್ಲಿ ಪತ್ರದ ದಾರಿನೋಡುತ್ತಿದ್ದಳು...ನಮ್ಮನ್ನು ಮತ್ತೆ ಮತ್ತೆ ಕೇಳುತ್ತಿದ್ದಳು... ಯಾವುದಾದರೂ ಪತ್ರ...ತಂತಿ...ಬಂತೇ ಎಂದು... ಹದಿನೇಳು ವರ್ಷ...ಎಷ್ಟೊಂದು ದೀರ್ಘವಾದ ಕಾಯುವಿಕೆ....''

''ಬಹು ಸುದೀರ್ಘ ನಿರೀಕ್ಷೆ...'' ಸದಫ್ ಪುನರುಚ್ಚರಿಸಿದಳು...

''ಮಾ ಪಾರಾ ಹುಟ್ಟಿದಾಗ, ನಿನಗೆ ನೆನಪಿದೆಯೇನು, ವರ್ಮಾ ಸಾಹೇಬ ಆಗಿಂದಾಗಲೇ ಏನು ಹೆಸರು ನಿರ್ಣಯಿಸಿದ್ದನೆಂಬುದು... ಮಾ ದಖ್ತ..ಏಕೆಂದರೆ ಈರಾನಿಯ ಮಗಳು...ಆದ್ದರಿಂದ ಅವಳ ಹೆಸರು... ಮಾ ದಖ್ತ...ಇನ್ನೊಂದು ಹೆಸರು ಆಮ್ರಪಾಲಿ...ಒಂದು ಈರಾನಿ ಹೆಸರು...ಒಂದು ಹಿಂದುಸ್ಥಾನಿ...ತಂದೆಯ ಹತ್ತಿರ, ಇಂಗ್ಲಂಡಕ್ಕೆ ಹೋಗಿ ಇರತೊಡಗಿದಾಗ, ಒಂದು ಇಂಗ್ಲೀಷ ಹೆಸರು ಇಲ್ಲಿ ಇರಿಸಿ ಕೊಳ್ಳುತ್ತಾಳೆ...ಜಮಿಲೀನ್ ಸಿಕ್ಕಾಪಟ್ಟೆ ನಕ್ಕಳು...ಮಾ ಪಾರಾ...ತನ್ನ ಸ್ಕೂಲಿನಲ್ಲಿ ಹುಡುಗಿಯರಿಗೆ, ತನ್ನ ತಂದೆ ಲಂಡನ್ ಮತ್ತು ಕರಾಚಿಯಲ್ಲಿ ದೊಡ್ಡ ಬಿಜಿನಸ್ ಮೆನ್– ಎಂದು ಹೇಳುತ್ತಿದ್ದಳು....''

''ವರ್ಮಾ ಸಾಹೇಬ ಯಾವಾಗಾದರೂ ಫಾರೆನ್‌ದಿಂದ ಏನಾದರೂ ತಂದು ಕೊಟ್ಟಾಗ ಆಕೆಗೆ ಆಮ್ರಪಾಲಿ ಬೇಟಾ ಸ್ಕೂಲಿನಲ್ಲಿ ನಿನ್ನ ಗೆಳತಿಯರಿಗೆ ಇದನ್ನೆಲ್ಲ ನಿನ್ನ ತಂದೆ ಲಂಡನ್‌ದಿಂದ ಕಳಿಸಿದ್ದಾರೆಂದು ಹೇಳಬೇಕು...ಎಂದು ಹೇಳುತ್ತಿದ್ದ....'' ಎಂದು ಹೇಳುತ್ತ ಸದಫ್ ದುಪಟ್ಟಾದಿಂದ ಕಣ್ಣೀರು ಒರಸಿಕೊಂಡಳು....

''ಸದಫ್, ಬಿಜಿಯಾಳಿಗೆ ಢೋಂಗಿ ಸಾಧು, ಫಕೀರರಲ್ಲಿ ಹೋಗಲು ನೀನೇ ಹಚ್ಚಿದೆ....''

''ನಾನೇನು ಮಾಡಲಿ ಜಮಿಲೀನ್...ಕಮರಸ್ ಮಾ ಪಾರಾಳ ಬಗ್ಗೆ ತುಂಬ ಚಿಂತಿತಳಾಗಿದ್ದಳು...ನನ್ನ ಮುಂದೆ ದಿನಾಲೂ ಹೇಳುತ್ತಿದ್ದಳು...ಮಾ ಪಾರಾ ದೊಡ್ಡವ ಳಾಗುತ್ತಿದ್ದಾಳೆ...ಅವಳಿಗೂ ನನ್ನಂಥ ಜೀವನ ಜೀವಿಸುವ ಸರತಿ ಬರಬಾರದು...

ಹೇಗಾದರೂ ಮಾಡಿ ಅವಳನ್ನು ಅವಳ ತಂದೆಗೆ ಒಪ್ಪಿಸಬೇಕೆಂಬ ಇಚ್ಛೆಯಿದೆ... ಸಮಿಲೀನ್‌ಳಂತೂ ದೇವರನ್ನೇ ನಂಬುವುದಿಲ್ಲ....ಅವಳಿಗೇನು ಹೇಳಲಿ...ನೀನು ಯಾವುದಾದರೂ ಮಹಾತ್ಮಾನಲ್ಲಿಗೆ ನನ್ನನ್ನು ಕರೆದೊಯ್ಯಿ...ಇದು ಆಗಿನ ಮಾತು... ಮಾ ಪಾರಾ ಮೂರು ವರ್ಷದವಳಿದ್ದಳು...ಆಗ ಕಮರನ್ ಓರ್ವ ಮಹಾತ್ಮಾನಲ್ಲಿಗೆ ಹೋದಳು...ನಮ್ಮನ್ನು ಜೊತೆಗೆ ಕರೆದುಕೊಂಡು ಹೋಗಿದ್ದಳು...ಆಗ ಅವನ ಬಗ್ಗೆ ಬಹಳ ಪ್ರಚಾರವಿತ್ತು...ಅವನು ಕಮರನ್‌ಳಿಗೆ ಹೇಳಿದ...ನಿನ್ನ ಮೇಲೆ ನಿನ್ನ ವೈರಿಯೊಬ್ಬ ಜಾದೂ ಮಾಡಿದ್ದಾನೆ...ದಾರಿಗಳನ್ನು ಬಂದ್ ಮಾಡಿದ್ದಾನೆ...ನಿನ್ನ ಕೂದಲುಗಳನ್ನು ಎಲ್ಲಿಯೋ ಹುಗಿದಿದ್ದಾನೆ.... ಮೂರು ನೂರು ರೂಪಾಯಿ ಕೊಡು... ಸುಡುಗಾಡಿನಲ್ಲಿ ನಲವತ್ತು ದಿನ ನಿನಗಾಗಿ ಪ್ರಯೋಗಗಳನ್ನು ಮಾಡುತ್ತೇವೆ...ಇದನ್ನೆಲ್ಲ ಕೇಳಿ ನಾವು ಭಯಭೀತರಾದೆವು...ಮರಳಿ ಅಲ್ಲಿಂದ ಹೋಗೋಣವೆಂದು ನಾವು ಕಮರನ್‌ಳಿಗೆ ಹೇಳಿದೆವು...ನಾವಂತೂ ಬಂದೆವು... ಆದರೆ ಆಕೆ ಮತ್ತೆ ಅವನ ಹತ್ತಿರ ಹೋದಳು... ಅವನಿಂದ ನಿರಾಶೆಯಾದಾಗ ಬೇರೆಯವರನ್ನು ಹುಡುಹುಡುಕಿ ಅವರ ಹತ್ತಿರ ಹೋಗುತ್ತಿದ್ದಳು...ಎಷ್ಟೊಂದು ಹಣ ಹಾಳು ಮಾಡಿದಳು...ನಿನಗೆ ಹೆದರುತ್ತಿದ್ದಳು...ಹೀಗಾಗಿ ನಿನಗೇನೂ ಹೇಳಲಿಲ್ಲ...ನಾವು ಸಾಕಷ್ಟು ಆಕೆಗೆ ತಿಳಿ ಹೇಳಿದೆವು... ಆದರೆ ಆಕೆ ಕೇಳಲಿಲ್ಲ...ಷಬ್ ದೀಗನ ಪತ್ರ ಬರಲೆಂಬ ಚಿಂತೆಯೇ ಆಕೆಯನ್ನು ಸದಾ ಕಾಡುತ್ತಿತ್ತು...ಅವನು ಕರೆಯಿಸಿಕೊಳ್ಳಲಿ...ಕರೆಯಿಸಿಕೊಂಡು ಮದುವೆ ಮಾಡಿಕೊಳ್ಳಲಿ...ಅಥವಾ ಮಾ ಪಾರಾಳ ಜವಾಬ್ದಾರಿಯನ್ನಾದರೂ ಹೊತ್ತುಕೊಳ್ಳಲಿ... ಇದಕ್ಕಾಗಿ ಎಲ್ಲ ಪೀರ, ಫಕೀರರು ಕೇಳಿದಷ್ಟು ಹಣ ನೀಡಿದಳು......ಅವರೆಲ್ಲ ಎಲ್ಲ ಸರಿಯಾಗುತ್ತದೆಂಬ ಆಶೆ ತೋರಿಸಿದರು...ಇಂದಿನಿಂದ ಇಪ್ಪತ್ತೊಂದನೆ ದಿನ ಪತ್ರ ಬರುತ್ತದೆ...ಇಂದಿನಿಂದ ಏಳನೇ ದಿನದ ರಾತ್ರಿ ಅವನು ಕನಸಿನಲ್ಲಿ ಬರುತ್ತಾನೆ... ಇಂದಿನಿಂದ ನಲವತ್ತನೆಯ ದಿನ ಪತ್ರ ಬರುತ್ತದೆ...ಶನಿವಾರದ ಸಾಡೇಸಾತ ಕಾಡುತ್ತಲಿದೆ...ಅದು ಮುಗಿದಾಗ ನಿನ್ನ ಆಶೆ ಪೂರೈಸುತ್ತದೆ.... ಓ ! ಎಷ್ಟೊಂದು ಸಾವಿರಾರು ರೂಪಾಯಿ ತೆತ್ತಳು ಈ ಮೋಸಗಾರರಿಗೆಲ್ಲ...ಹಾಗಿದ್ದರೂ ಆಕೆಯ ಆಶೆ ಮಾತ್ರ ಒಡೆದು ಚೂರಾಗಲಿಲ್ಲ....''

''ಈ ಮೋಸಗಾರ ಪೀರ, ಫಕೀರರಿಗಾಗಿ ಆಕೆ ತನ್ನ ವಸ್ತ್ರ–ಒಡವೆ ಕೂಡ ಮಾರಿದಳು...ಇಡೀ ಒಂದು ಸೆಟ್ ಒಡವೆ ಮಾಡಿಸಿಕೊಂಡಿದ್ದಳು. ಒಂದು ಜೊತೆ ಕಡೆ...ನಿನ್ನೊಂದಿಗೆ ಹೋಗಿಯೇ ಮಾಡಿಸಿದ್ದಳಲ್ಲ...ಗಟ್ಟಿ ಕಡೆ...ಎಲ್ಲಿಗೆ ಹೋದರೂ ಒಡವೆ ಹಾಕಿಕೊಳ್ಳುತ್ತಿರಲಿಲ್ಲ...ಆಗ ನಾವು ಕೇಳಿದೆವು...ಮಾ ಪಾರಾಳ ಸಲುವಾಗಿ ಬ್ಯಾಂಕಿನ ಲಾಕರ್‌ನಲ್ಲಿರಿಸಿದ್ದೇನೆ...ಎಂದು ಹೇಳಿದಳು...ಆದರೆ ಈಗ ಆಕೆ ಪಾಕಿಸ್ತಾನಕ್ಕೆ ಹೋದ ಮೇಲೆ ಎಲ್ಲ ಬಯಲಿಗೆ ಬರತೊಡಗಿದೆ...ಎಲ್ಲ ಒಡವೆ ಮಾರಿ ಓರ್ವ ಬನಾವಟಿ, ಮೋಸಗಾರ ಫಕೀರನಿಗೆ ಕೊಟ್ಟಳಂತೆ...ಅವನು ವರ್ಷಾನುಗಟ್ಟಲೆ ಆಕೆಗಾಗಿ ಏನೇನೋ ಪ್ರಯೋಗ ಮಾಡುತ್ತಿದ್ದನಂತೆ....''

''ಒಂದು ಮಾತು ಜಮಿಲೀನ್....ಇದೇ ಮೋಸಗಾರ ಫಕೀರ ಫಲ್ ಫಲ್ ಷಾಹನೇ ಅವಳಿಗೆ ಕರಾಚಿಗೆ ಹೋಗುವಂತೆ ಸಲಹೆ ನೀಡಿದ....''

''ಅವನು ಎಲ್ಲಿರುತ್ತಾನೆ...ನನಗೆ ಸಾಧ್ಯವಿದ್ದಿದ್ದರೆ ಅವನನ್ನು ಜೇಲಿಗೆ ಕಳಿಸುತ್ತಿದ್ದೆ...''

''ಬಕ್ಷಿಯ ಕೆರೆಯ ದಂಡೆಯ ಮೇಲಿರುತ್ತಾನೆ....ಈಗ ಅವನು ಅಲ್ಲಿಂದ ಎಲ್ಲಿಗೋ ಓಡಿ ಹೋಗಿದ್ದಾನೆ... ಒಂದು ದಿನ ನಮ್ಮ ಮುಂದೆ ಕಮರನ್ ತುಂಬ ಸಂತೋಷದಿಂದ ಹೇಳುತ್ತಿದ್ದಳು...ಹುಡುಗಿಯನ್ನು ಕರೆದುಕೊಂಡು ಪಾಕಿಸ್ತಾನಕ್ಕೆ ಹೋಗು. ಅದರ ವ್ಯವಸ್ಥೆ ನಾನು ಮಾಡಿರುವೆ...ಆಕೆಯ ನಕ್ಷತ್ರ ಚೆನ್ನಾಗಿವೆ...ಕರಾಚಿ ತಲುಪಿದ ಕೂಡಲೇ ನಿನ್ನ ಆಶೆಗಳು ಕೈಗೂಡುತ್ತವೆ...ನಿನ್ನ ಪ್ರಿಯಕರನ ತಲೆ ನಿನ್ನ ಕಾಲ ಮೇಲೆ ಇರುತ್ತದೆ...'' ಎಂದು ಫಲ್ ಫಲ್ ಷಾಹ ಹೇಳಿದ್ದನಂತೆ...ಜಮಿಲೀನ್, ಕರಾಚಿಯಲ್ಲಿ ಷಬ್‌ದೀಗ ಅವಳಿಗೆ ಭೇಟಿಯಾಗಬಾರದೇಕೆ...ಎಂದು ನಮಗನ್ನಿಸುತ್ತ ಲಿದೆ... ತನ್ನ ಮಗಳನ್ನು ಕಂಡು ಅವನಿಗೆ ಕನಿಕರ ಬರಬಾರದೇಕೆ... ಏನೂ ಇಲ್ಲ ದಿದ್ದರೂ ಮಾ ಪಾರಾಳ ನಸೀಬವೇಕೆ ತೆರೆಯಬಾರದು...ಅವಳಿಗೆ ಅಲ್ಲಿ ಮದುವೆಯಾಗ ಬಹುದು...ಅವರಿಬ್ಬರೂ ಹೋದಾಗಿನಿಂದ ನಾವು ದಿನವೂ ಪ್ರಾರ್ಥನೆ ಮಾಡು ತ್ತಿದ್ದೇವೆ...ಕೆಲವೊಮ್ಮೆ ಭಗವಾನ್ ಕೇಳಿಸಿಕೊಂಡರೂ ಕೇಳಿಸಿ ಕೊಳ್ಳಬಹುದು...

''ಹಾಂ ! ನೀನು ಇಷ್ಟೊಂದು ಕಾಲದಿಂದ ನಿನಗಾಗಿ ಪ್ರಾರ್ಥಿಸುತ್ತಿರುವೆ...ನಿನ್ನ ಭಗವಾನ್ ಕೇಳಿದ್ದಾನೇನು ?'' ಎಂದು ಜಮಿಲೀನ್ ಕೇಳಿದಳು.

ಸದಫ್ ತಲೆಬಾಗಿ ತರಕಾರಿ ಹೆಚ್ಚುತ್ತಿದ್ದಳು...

''ವಮಾ್ಞ ಸಾಹೇಬ ಈವರೆಗೂ ಬರಲಿಲ್ಲ...ನಾವಿನ್ನು ಹೊರಡುತ್ತೇವೆ...'' ಎನ್ನುತ್ತ ಜಮಿಲೀನ್ ತನ್ನ ಆಸರೆಗೋಲುಗಳನ್ನೆತ್ತಿಕೊಂಡಳು.....

''ತನ್ನ ತೊಂದರೆ, ತಾಪತ್ರಯಗಳಲ್ಲಿಯೇ ತಿರುಗುತ್ತಿದ್ದಾನೆ...ಅವನ ತಂದೆ ಸತ್ತಾಗಿನಿಂದ ತಂದೆಯ ಬಿಜಿನೆಸ್ ಸಂಬಾಳಿಸುತ್ತಿದ್ದಾನೆ... ಇತ್ತ ಸಾಂಗ್ ಬರ್ಡ್ಸ್‌ ನೋಡಿಕೊಳ್ಳುವದು ಹೇಗೆಂಬ ಚಿಂತೆ...ನಿನ್ನೆ ನನ್ನ ಜೊತೆ ಹೇಳುತ್ತಿದ್ದ ಅದನ್ನು ಮುಚ್ಚಿ ಬಿಡುವೆ...ಎಂದು...''

''ಅಂದರೆ...ನೀನು ಎಲ್ಲಿಗೆ ಹೋಗುವೆ...? ಈವರೆಗೂ ಅವನ ತಾಯಿ ನಿನ್ನನ್ನು ಒಪ್ಪಿಕೊಳ್ಳಲು ಸಿದ್ಧವಾಗಲಿಲ್ಲ....''

''ನನ್ನ ನಸೀಬ ಇದ್ದಲ್ಲಿಗೆ...ಜಮಿಲೀನ್ ನಾವು ಅಲ್ಲಿಗೆ ಹೋಗುತ್ತೇವೆ....''

''ನಮ್ಮನ್ನು ರಿಕ್ಷಾದವರೆಗೆ ತಲುಪಿಸಿ ಬಿಡು ಸದಫ್...ಬಿಜಿಯಾ ಒಂದು ವೇಳೆ ಕರಾಚಿ ತಲುಪಿದ್ದಲ್ಲಿ...ಅಲ್ಲಿ ಯಾವ ಯಾವ ತೊಂದರೆಗಳಿಗೆ ಈಡಾಗಿ ತಿರುಗು ತ್ತಿದ್ದಾಳೋ...ಇನ್ನು ನಾವು ಮನೆಗೆ ಹೋಗಿ ಅವಳ ಪತ್ರದ ದಾರಿಕಾಯುವುದನ್ನು ಆರಂಭಿಸುತ್ತೇವೆ....''

-8-

ಪ್ರೀತಿಯ ಬಿಜಿಯಾ–ತಸ್‌ಲೀಮ್–ನಮಸ್ಕಾರ,

ನೀವು ಇಲ್ಲಿಂದ ಹೋಗಿ ಒಂದು ವರ್ಷವಾಯಿತು. ಸುರಕ್ಷಿತ ತಲುಪಿದ ಬಗ್ಗೆ ಕೇವಲ ಒಂದು ಪೋಸ್ಟ್ ಕಾರ್ಡ ಮಾತ್ರ ಬಂದಿತ್ತು. ಅದರ ನಂತರ ನಾಲ್ಕು ತಿಂಗಳು ಕಳೆದ ಮೇಲೆ ಮತ್ತೊಂದು ಪೋಸ್ಟ್ ಕಾರ್ಡ. ನಾನು ಮತ್ತು ಚಿಕ್ಕಮ್ಮ ನಿಮ್ಮ ಚಿಂತೆಯಲ್ಲಿ ಅರ್ಧ ಸತ್ತಂತೆ ಇದ್ದೇವೆ. ದೇವರಿಗಾಗಿ ಎಲ್ಲ ವಿವರ ಬರೆಯಿರಿ. ಬಹುಶಃ ಮನೆ ಬೇರೆ ಮಾಡಿರಬೇಕು...ನಾವು ನಿಮಗೆ ಎಷ್ಟು ಪತ್ರ ಬರೆದರೂ ನಮಗೆ ಉತ್ತರ ಬರುತ್ತಿಲ್ಲ.. ಸದಫ್ ಕೂಡ ಸಾಕಷ್ಟು ಪತ್ರ ಬರೆದಿದ್ದಾಳೆ...ಇನ್ನು ಇಲ್ಲಿಯ ವಿಷಯ ಕೇಳಿ. ತುಂಬ ದುಃಖದಿಂದ ಇದನ್ನೆಲ್ಲ ತಿಳಿಸುತ್ತಿರುವೆ...ಚಿಕ್ಕಪ್ಪ ಬುಧವಾರ ತೀರಿ ಹೋದ...ನಿನ್ನೆ ಮಸೀದೆಯಲ್ಲಿ ಎಲ್ಲ ಧಾರ್ಮಿಕ ಕ್ರಿಯಾಕರ್ಮ ಮುಗಿಸಿದೆವು.. ಬಿಜಿಯಾ...ಇನ್ನೊಂದು ಕೆಟ್ಟಸುದ್ದಿ...ನಿಮ್ಮ ಮಗ ಆಫ್ತಾಬ ನಾನು ಎಚ್ಚರವಾಗಿದ್ದಾಗಲೇ ನನ್ನ ಕೈಯಲ್ಲಿದ್ದ ಬಂಗಾರದ ಬಳೆಗಳನ್ನು ಬಿಚ್ಚಿಕೊಂಡು ಓಡಿಹೋದ.. ನಾನೋ ಜನ್ಮದಿಂದಲೇ ಕಾಲಿಲ್ಲದವಳು...ಅವನನ್ನು ಹಿಡಿಯಲು ಓಡುವುದಾದರೂ ಹೇಗೆ... ಚಿಕ್ಕಮ್ಮ ಎದೆ ಬಡಿದುಕೊಂಡು ಅತ್ತಳು... ನೆನಪಿರಬೇಕಲ್ಲ...ಅವನು ಈ ಮೊದಲೇ, ಫರ್‌ಹಾದ್ ಸಾಹೇಬನ ಹೊಟ್ಟೆ ಬಗೆಯುವೆ...ಅವನು ಹೆಣ್ಣುಮಕ್ಕಳನ್ನು ಗೂಂಡಾಗಳಿಂದ ಅಪಹರಿಸಿರುವ...ಎನ್ನುತ್ತಿದ್ದುದು...ನೀನು ಹೋದ ಮೇಲೆ ಮುಂಬೈಗೆ ಹೋಗಿ ಹೀರೊ ಆಗುವ ಹುಚ್ಚು ಅವನ ತಲೆತುಂಬಿತ್ತು...ನನ್ನ ಬಳೆಗಳನ್ನು ಹಾರಿಸಿಕೊಂಡು ಮುಂಬೈಗೆ ಓಡಿಹೋದ...ಅವನಲ್ಲಿ ಚಾಕು ಚೂರಿ ಹಿಡಿದು ಗುಂಡಾಗರ್ದಿ ಮಾಡುತ್ತ ತಿರುಗುತ್ತಿದ್ದಾನೆಂದು ಕೇಳಿದ್ದೇನೆ...

ಫರ್‌ಹಾದ್ ಸಾಹೇಬನ ಹೊಸ ಬಂಗ್ಲೆ ಬಟ್ಲರ್ ಪ್ಯಾಲೇಸ ಕಾಲೊನಿಯಲ್ಲಿ ಕಟ್ಟಿ ಸಿದ್ಧವಾಗಿದೆ. ಅವನು ಅಲ್ಲಿ ಈಗ ವಾಸವಾಗಿದ್ದಾನೆ...ಅವನ ಹಿರಿಯ ಮಗಳ ಮದುವೆ ಇಂಗ್ಲಂಡದಲ್ಲಿರುವ ಯಾವನೋ ಡಾಕ್ಟರನೊಂದಿಗೆ ಆಗಿತ್ತಲ್ಲ...ಆಕೆ ಅಲ್ಲಿಯೇ ಇದ್ದಾಳೆ...ಸಣ್ಣವಳು ಮದುವೆ ಮಾಡಿಕೊಂಡು ಕರಾಚಿಗೆ ಹೋಗಿದ್ದಾಳಲ್ಲ, ಬಹುಶಃ ನಿನಗೆ ಅಲ್ಲಿ ಯಾವಾಗಲಾದರೂ ಸಿಗಬಹುದು...ಅವಳ ಗಂಡ ಅಲ್ಲಿ ಕರೋಡಪತಿ... ಎಂದು ಕೇಳಿರುವೆ...ನಡುವಿನವಳು ಈಗ ಲಖನೌದಲ್ಲಿಯೇ ಇದ್ದಾಳೆ...ಅವಳ ಗಂಡ ಸೀತಾಪುರದಲ್ಲಿ ದೊಡ್ಡ ಪ್ರಮಾಣದಲ್ಲಿ ಫಾರ್ಮಿಂಗ್ ಆರಂಭಿಸಿದ್ದಾನೆ..ಫರ್‌ಹಾದ್ ಸಾಹೇಬ ಚಿಕ್ಕಪ್ಪನ ಅಂತ್ಯಕ್ರಿಯೆಗಾಗಿ ಐದುನೂರು ರೂಪಾಯಿ ಕಳಿಸಿದ್ದ... ಅವನ ನೌಕರ ಈ ಹಣ ತೆಗೆದುಕೊಂಡು ಬಂದಿದ್ದ...ಅವನೇ ಇದನ್ನೆಲ್ಲ ಹೇಳಿದ...

ಮಾ ಪಾರಾಳ ತಂದೆ ಲಖನೌದಿಂದ ಹೋದ ಮೇಲೆ ಕೆಲದಿನಗಳ ನಂತರ ನಾವೆಲ್ಲ ವರ್ಮಾ ಸಾಹೇಬರಲ್ಲಿ ಕೂಡಿದ್ದೆವು...ಬಿಜಿಯಾ ನಿನಗೆ ನೆನಪಿದೆಯೇ... ನೀನಂತು...ನಮ್ಮ ತಾಯಿ, ಚಿಕ್ಕಮ್ಮ ಮತ್ತು ನಾವಿಬ್ಬರೂ ಇಷ್ಟೊಂದು ಅಭಾಗ್ಯರಾಗಿ ಏಕೆ ಹುಟ್ಟಿದೆವು...ಎಂದೆ. ಅದಕ್ಕೆ ನಾನು ನಿನಗೆ ಹೇಳಿದ್ದೆ...ಜಗತ್ತಿನ ನಿಜವಾದ ಅಭಾಗ್ಯರನ್ನು ನೋಡು ಬಿಜಿಯಾ...ಜನ್ಮಾಂಧರು,ವಿಕಲಾಂಗರು, ಗಿಡ್ಡರು, ಕುರೂಪಿ

ಗಳು, ಗೂನು ಇದ್ದವರು, ಮುಖದ ತುಂಬ ಕಲೆಯುಳ್ಳವರು, ಕುರುಡರು, ಕಿವುಡರು, ಕುಂಟರು...ನನ್ನ ನೋಡಲ್ಲ... ಜಿಗಿಯುತ್ತ ಜಿಗಿಯುತ್ತ ಮುಂದೆ ಹೋಗುತ್ತೇನೆ. ಏನಿಲ್ಲವೆಂದರೂ ನಿನ್ನ ಮುಖ ಅಂದವಾಗಿದೆ...ಮಧುರವಾದ ಕಂಠವಿದೆ...ಅದೇ ನೋಡು...ಭಿಕಾರಿಗಳು...ಜೇಲಿನಲ್ಲಿರುವ ಹೆಂಗಸರು...ನೀನೇ ಯಾವುದಾದರೊಂದು ಕೊಲೆಯ ಖಟ್ಲೆಯಲ್ಲಿ ಸಿಕ್ಕು ಆಜೀವ ಕಾರಾವಾಸವಾಗಿದ್ದರೆ... ಸುಮ್ಮನೇ ಕಲ್ಪಿಸಿಕೊ...ಜಗತ್ತಿನಲ್ಲಿ ಸಾವಿರಾರು ಅಲ್ಲ ಲಕ್ಷಗಟ್ಟಲೆ ಜನ ಆಜೀವ ಕಾರಾಗ್ರಹ ಶಿಕ್ಷೆಯಲ್ಲಿ ಕೊಳೆಯುತ್ತಿದ್ದಾರೆ...ನೂರಾರು ಜನ ಫಾಸಿ ಶಿಕ್ಷೆಗೆ ಒಳಗಾಗಿ ಗಲ್ಲಿಗೇರಿದ್ದಾರೆ... ಕೊಲೆ ಮಾಡಲ್ಪಟ್ಟಿದ್ದಾರೆ. ನೀನು ಮತ್ತು ನಾವು ಆ ಲಕ್ಷಗಟ್ಟಲೇ ಜನರಿಗಿಂತ ಚೆನ್ನಾಗಿದ್ದೇವೆ...ನಮಗಿಂತ ಕೆಟ್ಟ ಸ್ಥಿತಿಯಲ್ಲಿರುವವರನ್ನು ನೋಡು...

ವರ್ಮಾ ಸಾಹೇಬ ಆಗ ಚಪ್ಪಾಳೆ ತಟ್ಟಿ ಹೇಳಿದರು...ಶಹಬ್ಬಾಸ್ ಜಮಿಲೀನ್...That's the Spirit...ಆದರೆ ಈಗ ಬಿಜಿಯಾ, ನಮ್ಮ ಸ್ಪಿರಿಟಿನ ಶಕ್ತಿಯೂ ಕಡಿಮೆಯಾಗುತ್ತ ಸಾಗಿದೆ...ಎಲ್ಲಿಯವರೆಗೆ ಇದು...

ಅದೇ ದಿನ, ನೀನು, ಆ ಬದ್ಮಾಷ್ ಆಗಾಷಬ್ ಹೊರಟು ಹೋದುದರಿಂದ ತುಂಬ ಚಿಂತಿತಳಾಗಿ ಕುಳಿತಿದ್ದೆ...ವರ್ಮಾ ಸಾಹೇಬ ನಿನಗೆ Cheerup ಮಾಡಲು... ರಷ್ಕ್‌ಕಮರ್ ನೀನು 'ಗೋಹರಷಬ್ ಚಿರಾಗ್' ಪತ್ರಿಕೆಗೆ ಒಂದು ಕಥೆ ಬರೆ. ಅಫಸಾನಾ ಲಿಖರಹೀ ಹು....ದಿಲ್ ಬೇಕರಾರ್ ಕಾ... ಆಂಖೊಮೇ ರಂಗ್ ಭರಕೆ ತೇರೆ ಇಂತೀಜಾರ ಕಾ...ಆಗ ನಾನು ಹೇಳಿದ್ದೆ...ಸಿಟ್ಟಿನಿಂದ... ಅಫಸಾನಾ...ಕಥೆ ಬರೆಯಲಿ ಬಿಜಿಯಾಳ ವೈರಿ...ಮತ್ತೆ...ನನ್ನ ಕಣ್ಣುಗಳು ಕಣ್ಣುಗಳಾಗಿರಲಿಲ್ಲ...ಅವು ಬಕೀಟಾಗಿದ್ದವು...ಬಕೀಟಿನಲ್ಲಿ ಬಣ್ಣ ತುಂಬಿ ನಿನ್ನ ನಿರೀಕ್ಷೆಯಲ್ಲಿ... ಎಂದಾಗ ನಾವೆಲ್ಲ ತುಂಬ ನಕ್ಕಿದ್ದೆವು.. ನೀನು ಕೂಡ ನಕ್ಕಿದ್ದೆ...ಮತ್ತೆ ವರ್ಮಾ ಸಾಹೇಬ ಹೇಳಿದ್ದ... ನಿಜಕ್ಕೂ ನಿಮ್ಮಿಬ್ಬರ ಜೀವನದ ಮುಂದೆ ಯಾವುದೇ ಗ್ರೀಕ್ ಟ್ರೆಜಡಿ ಕೂಡ ಒಂದು ರೀತಿ ಪಿಕ್‌ನಿಕ್ ಎನ್ನಿಸುತ್ತದೆ... ಆಗ ನಾನು ಕೇಳಿದ್ದೆ...ಗ್ರೀಕ್ ಟ್ರೆಜಡಿ ಹೇಗಿರುತ್ತದೆ.... ಎಂದು. ಅದಕ್ಕೆ ನೀನು ಉತ್ತರಿಸಿದೆ...ಅದೇ ನಮ್ಮ ಬದುಕಿನ ಮುಂದೆ ಅದು ಪಿಕ್‌ನಿಕ್...ಹಾಗೆ ತೋರುವುದು.

ವರ್ಮಾ ಸಾಹೇಬ ಹೇಳಿದ್ದ...ನೀವು ಏಕಾಕಿಯಲ್ಲ...ನಮ್ಮ ಸಮಾಜದಲ್ಲಿ ಹೆಚ್ಚಾಗಿ ಹೆಂಗಸರ ಬದುಕು ಮೊದಲಿನಿಂದಲೂ ಟ್ರ್ಯಾಜಿಕ್ ಆಗಿಯೇ ಇದೆ... ಅವರನ್ನು ಕೇವಲ ಮೂರ್ಖರನ್ನಾಗಿಸಲು ಅವರಿಗೆ ಸತಿ ಸಾವಿತ್ರಿ, ಪ್ರಾಮಾಣಿಕ ಪುತ್ಥಳಿ, ಐಶ್ವರ್ಯದ ದೇವಿ...ಎಂಬ ಪದವಿ ನೀಡಲಾಗುತ್ತದೆ....ಆಕೆ ಇವುಗಳಿಂದ ಸಂತುಷ್ಟಳಾಗುತ್ತಾಳೆ...

''ಅತ್ಯಂತ ಮೂರ್ಖ ಹೆಂಗಸು...''ಎಂದು ನಾನು ಉರಿದು ಸಿಟ್ಟಿನಿಂದ ಅಂದಿದ್ದೆ...

''ಹೆಣ್ಣು ಹುಟ್ಟಿದರೆ ಅದರ ತಾಯಿ ಅಳುತ್ತಾಳೆ....ಎಂಥ ಹಣೆಬರೆಹ ಹೊತ್ತು ಬಂದಿದ್ದಾಳೋ.... ಎಂದು. ದೊಡ್ಡದಾದಾಗ ಅತ್ತೆಯ ಮನೆಯಲ್ಲಿ ಇವಳ ಮೇಲೆ ಏನು

ನಡೆಯುತ್ತದೆಯೋ ಎಂದು ಗೋಳಾಡುತ್ತಾಳೆ....ಆದರ ಎಂದಾದರೂ ನೀನು ಯಾವುದೇ ಇಂಗ್ಲೀಷ,ಅಮೇರಿಕಾದ ಹುಡುಗಿಯನ್ನು ನೋಡಿದ್ದೆಯಾ... ಅಥವಾ ಆ ಹುಡುಗಿಯರ ಬಗ್ಗೆ ಕೇಳಿದ್ದೀಯಾ...ಅವಳ ಮದುವೆಯ ಸಮಯದಲ್ಲಿ ಅವಳು ಸ್ವತಃ ಅಥವಾ ಅವಳ ತಾಯಿ ತಂದೆ ಎದೆ ಎದೆ ಬಡಕೊಂಡು ಅತ್ತುದನ್ನು...ಮತ್ತೆ ನಮ್ಮ ಹಿಂದೂಸ್ತಾನಿ ಹೆಂಗಸು ವಿಧವೆಯಾದರೆ ಆಕೆ ಎದೆ ಬಡಿದುಕೊಳ್ಳಲು ನಿಜವಾದ ಕಾರಣವೇನೆಂದರೆ... ಆಕೆಯ ಸಂರಕ್ಷಣೆ ಮಾಡುವವರು ಯಾರೂ ಇಲ್ಲವಲ್ಲವೆಂಬುದಕ್ಕಾಗಿ... ಎಂದು ವರ್ಮಾ ಸಾಹೇಬ ಹೇಳಿದ್ದ....''

ಆದರೆ ಬಿಜಿಯಾ...ಇವರೆಲ್ಲರದು ತೋರಿಸುವ ಹಲ್ಲು ಬೇರೆ...ತಿನ್ನುವ ಹಲ್ಲು ಬೇರೆ...ವರ್ಮಾಸಾಹೇಬ ಯಾವಾಗಲೂ ಇಂಥ ದೊಡ್ಡ ದೊಡ್ಡ ಮಾತುಗಳನ್ನೇ ಆಡಿದ...ತಾನು ಸ್ವತಃ ಸದಫ್‌ಳನ್ನು ಮದುವೆ ಆಗಲಿಲ್ಲ...ಎಂಥ ಪ್ರಾಮಾಣಿಕ ಹೆಣ್ಣು ಅವಳು. ಇಪ್ಪತ್ತು ಇಪ್ಪತ್ತೊಂದು ವರ್ಷ ಅವನ ಕಾಲು ತೊಳೆದುಕೊಂಡು ಕುಡಿದಳು... ಮತ್ತೆ ಇನ್ನೊಬ್ಬನನ್ನು ಕಣ್ಣೆತ್ತಿಯೂ ನೋಡಲಿಲ್ಲ... ಅಂಥ ಸಾಧ್ವಿಯನ್ನು ಅವನು ಇತ್ತೀಚೆ ಹಳೆಯ ಚಪ್ಪಲಿಯ ಹಾಗೆ ಕಳೆದು ಒಗೆದ...

ಈಗ ಒಂದಲ್ಲ ಎರಡು ಜೋರದಾರ ಸುದ್ದಿ ಕೇಳು...ಶ್ರೀ ನರೇಂದ್ರಕುಮಾರ ವರ್ಮಾಗೆ ಓರ್ವ ಶ್ರೀಮಂತ ಗುಜರಾತಿ ಲೇಡಿ ಡಾಕ್ಟರ್ ಸಿಕ್ಕಿದ್ದಾಳೆ. ಯುರೋಪದಿಂದ ಬಂದಿದ್ದಳು. ಎಮ್ಮೆಗಿಂತ ಎಮ್ಮೆಯಾಗಿದ್ದಾಳೆ...ವರ್ಮಾನ ಮೇಲೆ ತುಂಬ ಬಲೆ ಹಾಕಿದಳು...ಆಗರ್ಭ ಶ್ರೀಮಂತಳು... ತಂದೆ ಅಹ್ಮದಾಬಾದದಲ್ಲಿ ಮಿಲ್ ಓನರ್... ವರ್ಮಾ ಸಾಹೇಬನ ಸಾಂಗ್ ಬರ್ಡ್ಸ್ ಎಂಟರ್‌ಪ್ರೈಜ ಬಹುಪಾಲು ಹಾಳಾಗಿದೆ.... ತನ್ನ ಮನೆತನದ ಬಿಜಿನೆಸ್‌ನ್ನು ಹಾನಿಯಲ್ಲಿ ನಡೆಸುತ್ತಿದ್ದ.... 'ಗೋಹರ್ ಷಬ್ ಚಿರಾಗ್' ಪತ್ರಿಕೆ ನಿಂತು ಹೋಗಿದೆ. ಅದಕ್ಕಾಗಿ ಇಷ್ಟು ವರ್ಷಗಳಲ್ಲಿ ಬಹಳಷ್ಟು ಹಣ ಹಾಕಿ ಕೈ ಸುಟ್ಟುಗೊಂಡ... ಬಹುಶಃ ಇದನ್ನೆಲ್ಲ ಯೋಚಿಸಿಯೇ ಈ ಡಾಕ್ಟರಳೊಂದಿಗೆ ಮದುವೆ ಮಾಡಿಕೊಂಡಿರಬೇಕು...ಅವಳು ಇವನನ್ನು ಇಲ್ಲಿಂದ ಕರೆದುಕೊಂಡು ಅಹ್ಮದಾಬಾದಗೆ ಹೋದಳು...ಬಿಜಿಯಾ ಸದಫ್‌ಳ ಸ್ಥಿತಿ ಏನಾಯಿತೆಂದು ನೀನು ಯೋಚಿಸಬಲ್ಲೆಯಾ...ತುಂಬ ಕೆಟ್ಟ ಸ್ಥಿತಿ...ತುಂಬ ಅಳುತ್ತಿದ್ದಳು...ಬಿಜಿಯಾ, ಆದರೆ ವರ್ಮಾ ಸಾಹೇಬ ಅವಳ ಹೆಸರಿನಲ್ಲಿ ಬ್ಯಾಂಕಿನಲ್ಲಿ ಹಣವಿರಿಸಿದ್ದ...ಆಕೆ ಅದರಿಂದ ಎರಡು ಕೋಣೆಯ ಒಂದು ಫ್ಲ್ಯಾಟಕೊಂಡಳು. ಅಲ್ಲಿದ್ದಾಳೆ...ಇದೆಲ್ಲ ಆರು ತಿಂಗಳ ಹಿಂದಿನ ಮಾತು...ಆದರೆ ಈಗ ಹೇಳುವ ಕಥೆಗೆ ಇನ್ನೂ ನಾಲ್ಕೇ ತಿಂಗಳಾಗಿದೆ.... ಲಖನೌದಲ್ಲಿ ಹಿಂದೂಸ್ತಾನಿ ಲೋಕ ಸಂಗೀತದ ಬಗ್ಗೆ ಒಂದು ಇಂಟರ್ ನ್ಯಾಷನಲ್ ಕಾನ್‌ಫರೆನ್ಸ್ ನಡೆಯಿತು....ನನಗೆ, ಸದಫ್‌ಗೆ ಆಮಂತ್ರಣ ಕಳಿಸಿದ್ದರು...ಕಾನ್ಫ್‌ರೆನ್ಸ್ ಜನ ನನ್ನನ್ನು ಕುರ್ಚಿಯ ಮೇಲೆ ಕೂಡಿಸಿ ಹೊತ್ತುಕೊಂಡು ಹೋದರು. ನನ್ನಲ್ಲಿ ಈಗ ಹಾಡುವ ಶಕ್ತಿಯಂತೂ ಇರಲಿಲ್ಲ...ಕುಳಿತು ಎಲ್ಲರ ಮುಖ ನೋಡುವ ಕೆಲಸ ಮಾಡಿದೆ...ಕಾನ್ಫರೆನ್ಸ್‌ದಲ್ಲಿ ವಿದೇಶಿಯರೂ ಬಂದಿದ್ದರು. ಓರ್ವ ಉರ್ದು, ಹಿಂದೀ ತಜ್ಞ ಅಮೇರಿಕನ್ ಇದ್ದ... ಬಿಜಿಯಾ....ಆ ಅಮೇರಿಕನ್ ಸದಫ್‌ಳ ಬಗ್ಗೆ ಆಸಕ್ತನಾದ..ಅವಳು ಎಷ್ಟು ಹೊತ್ತು ಹಾಡಿದಳೋ, ಅಷ್ಟೂ ಹೊತ್ತು ಬಾಯಿ

ತೆರೆದುಕೊಂಡು ಅವಳನ್ನೇ ಹುಚ್ಚನ ಹಾಗೆ ನೋಡುತ್ತಿದ್ದ....ಕಾನ್ಫರೆನ್ಸ್ ಮುಗಿದ ನಂತರ ಸದಫ್‌ಳನ್ನು ಹಲವು ಸಲ ಭೇಟಿಯಾದ...ಹದಿನೈದನೆಯ ದಿನ ಅವಳನ್ನು ಕೋರ್ಟಿಗೆ ಕರೆದುಕೊಂಡು ಹೋಗಿ ಸಿವಿಲ್ ಮ್ಯಾರೇಜ ಮಾಡಿಕೊಂಡ...ಸದಫ್‌ಳಿಗಿಂತ ಮೂರು ನಾಲ್ಕು ವರ್ಷ ಅವನು ಸಣ್ಣವನೇ ಇರಬೇಕು...(ನೆನಪಿದೆಯೇ ನಿನಗೆ... ಮಿರ್ಜಾ ಸಾಹೇಬ ಹೇಳುತ್ತಿದ್ದ... ನಮ್ಮ ಸರವನ್‌ಳ ಮೇಲೆ ಯಾವನಾದರೂ ಫಿರಂಗಿ ಆಸಕ್ತನಾದರೆ, ನಾವು ಹೋಗಿ ಅವನನ್ನು ಕೊಲ್ಲುತ್ತೇವೆ...) ಮದುವೆಯ ಮೂರನೇ ದಿನ ಸದಫ್ ಅವನನ್ನು ಕರೆದುಕೊಂಡು ನಮಗೆ ಪರಿಚಯಿಸಲು ಬಂದಿದ್ದಳು...ನನಗೆ ಈತ ಸ್ಟ್ಯಾಟಿ ಎನ್ನುತ್ತಾನೆ...ಮಿಸ್ ಸ್ಟ್ಯಾಟಿ ಥಾಮಸನ್... ಯಾವುದೋ ಪ್ರಸಿದ್ಧ ಇಂಗ್ಲಿಷ ಕಾದಂಬರಿಯ ಹೀರೋಯಿನ್‌ಳ... ಹೆಸರು...ಇದನ್ನು ಮಿರ್ಜಾ ಸಾಹೇಬನಿಗೆ ತಿಳಿಸಬೇಕಾದುದು ಅವಶ್ಯವೆಂದು ನಾನು ಯೋಚಿಸಿದೆ... ಅವನು ಹೆಸರನ್ನು ಸೂಚಿಸುವಲ್ಲಿ ತುಂಬ ಷೋಕಿ ಇರಿಸುತ್ತಿದ್ದ...ಆದರೆ ಈಗ ಮಿರ್ಜಾ ಸಾಬ ಎಲ್ಲಿ...ಅಹ್ಮದಾಬಾದದಲ್ಲಿ ಕುಳಿತು ಮಾವನ ಖಾತೆ-ಕಿರ್ದಿ ನೋಡುತ್ತಿರಬೇಕು...

ಸದಫ್ ತನ್ನ ಗಂಡನೊಂದಿಗೆ ಅಮೇರಿಕಾಕ್ಕೆ ಹೋಗಿ ಇಂದಿಗೆ ಹದಿನೈದು ದಿನಗಳಾಗುತ್ತವೆ...ಹೋಗುವಾಗ ನಮ್ಮನ್ನು ಅಪ್ಪಿಕೊಂಡು ನಿನ್ನ ನೆನಸುತ್ತ ಧಾರಾಕಾರವಾಗಿ ಕಣ್ಣೀರು ಸುರಿಸಿದಳು...ಮೊನ್ನೆ ಪ್ಯಾರಿಸ್‌ನಿಂದ ಅವಳ ಕಾಗದ ಕೂಡ ಬಂದಿದೆ.

ಒಂದು ವೇಳೆ ಬಿಜಿಯಾ....ಇದೇ ರೀತಿ ನಿನ್ನ ಜೀವನದಲ್ಲೂ ಇಂಥ ದಿನಗಳು ಬರುವುದಾದರೆ...ಎಂಥ ಸುಖ...

ಮಿರ್ಜಾ ಸಾಹೇಬನ ಮ್ಯುಜಿಕ್ ಸ್ಕೂಲ ನಿಂತುಹೋದುದರಿಂದ ಇಷ್ಟು ದಿನಗಳವರೆಗೆ ಆತ ಕೊಡುತ್ತಿದ್ದ ಪೆನ್‌ಷನ್ ನಿಂತು ಹೋಯಿತು....ನೀನು ಹೋದ ಮೇಲೆ ಎರಡೂವರೆ ನೂರು ಮಾಸಿಕ ಮಾಡಿದ್ದ...ಫರ್‌ಹಾದ ಸಾಹೇಬನಿಂದ ನಾವು ಒಂದು ಪೈಸೆಯನ್ನೂ ತೆಗೆದುಕೊಳ್ಳುವುದಿಲ್ಲ...ಬಿಜಿಯಾ...ಈಗ ಎಳ್ಳಷ್ಟೂ ನಡೆಯಲಾಗುವುದಿಲ್ಲ...ಪಲ್ಲಂಗದ ಮೇಲೆ ಬಿದ್ದುಕೊಂಡೇ ಪ್ಲ್ಯಾಸ್ಟಿಕ್‌ದ ಬುಟ್ಟಿ, ಬ್ಯಾಗ್, ಸ್ವೆಟರ್ ಹೆಣೆದು ಮಾರಲು ಕೊಡುತ್ತಿದ್ದೇವೆ. ಈಗ ಕಸೂತಿ ಕೆಲಸ ಕೂಡ ಆರಂಭಿಸಿರುವೆ....ಒಂದು ಸೀರೆಗೆ ಹತ್ತು ರೂಪಾಯಿ...ಹೆಚ್ಚು ಕೈ ಕುಸುರಿನ ಕೆಲಸ ಇದ್ದರೆ ಇಪ್ಪತ್ತು...ಇಪ್ಪತ್ತೈದು ರೂಪಾಯಿ....ತುಂಬ ಕಷ್ಟದ ಕೆಲಸ...ಆದರೆ ಈಗ ಸಂಪಾದನೆಯ ಮಾರ್ಗ ಇದೊಂದೇ ಉಳಿದಿರುವುದು...ಉಪವಾಸ ವನವಾಸದ ಅವೇ ಹಳೆಯ ದಿನಗಳು ಮತ್ತೆ ಬಂದಿವೆ...ಬಾಲ್ಯ ಹಾಗೂ ತಾರುಣ್ಯದಲ್ಲಿದ್ದವಲ್ಲ... ವ್ಹಾ....ನಮ್ಮದೂ ಎಂಥ ಜೀವನ....

ಬಿಜಿಯಾ...ನಿನ್ನ ಕೆಲಸ ಅಲ್ಲಿ ಆಗದಿದ್ದಲ್ಲಿ ದೇವರ ದಯೆಯಿಂದ ಇಲ್ಲಿಗೆ ಬಂದು ಬಿಡು. ಚಿಕ್ಕಮ್ಮ ನಿನಗೆ ಶುಭ ಹೇಳಿದ್ದಾಳೆ... ಮಾ ಪಾರಾಳಿಗೆ ಬಹಳ ಅಂದರೆ ಬಹಳ ಪ್ರೀತಿ...

ನಿನ್ನ

ಜಮೀಲ ಅಲ್ಮಾಸಾ

ಈ ಪತ್ರ ಬರೆದವರಿಗೆ ತಲುಪಲಿಲ್ಲ. ಏಕೆಂದರೆ 1971ರಲ್ಲಿ ಇಂಡಿಯಾ–ಪಾಕ್ ಯುದ್ಧ ಆರಂಭವಾಗಿತ್ತು. ಭಾರತ ಮತ್ತು ಪಶ್ಚಿಮ ಪಾಕಿಸ್ತಾನದ ನಡುವೆ ಪೋಸ್ಟ್ ವ್ಯವಸ್ಥೆ ಸಂಪೂರ್ಣ ನಿಂತು ಹೋಗಿತ್ತು.

-9-

ನನ್ನ ಪ್ರೀತಿಯ ಸೋದರಿ ಜಮೀಲ ಅಲ್ಲಸಾ,

ಸಾವಿರಾರು ಪ್ರಾರ್ಥನೆಗಳು...ಶುಭಾಶಯಗಳು.

ನಾನು ಇಲ್ಲಿಗೆ ಬಂದಾಗಿನಿಂದ ನಿನಗೆ ಅವೆಷ್ಟೋ ಪತ್ರಗಳನ್ನು ಬರೆದಿರುವೆ. ಒಂದಕ್ಕೂ ಉತ್ತರ ಬರಲಿಲ್ಲ... ನಿನ್ನ ಮತ್ತು ಚಿಕ್ಕಮ್ಮ, ಚಿಕ್ಕಪ್ಪ ಮತ್ತು ಅಫ್ತಾಬ ಮಗನ ಬಗ್ಗೆ ನಾನು ತುಂಬ ಚಿಂತಿತಳಾಗಿರುವೆ...ನಿನಗೆ ಈ ಮೊದಲೂ ಬರೆದಿದ್ದೆ, ಈಗಲೂ ಬರೆಯುತ್ತೇನೆ, ಏನಾದರೂ ಮಾಡಿ, ಹೊಡೆದು ಬಡಿದಾದರೂ ಅಫ್ತಾಬನನ್ನು ಒಂದು ಹಾದಿಗೆ ತಾ...ಸ್ಕೂಲಿಗೆ ಕಳಿಸು...ಅವನ ಫೀ ಮಾಫ್ ಮಾಡಿಸಲು...ಅವನು ಓದುವಲ್ಲಿ ಆಸಕ್ತಿ ವಹಿಸುವಂತೆ ಅವನಿಗೆ ತಿಳಿಹೇಳಲು ಪರ್ವಾ ಸಾಹೇಬನಿಗೆ ಹೇಳು...ಅವನು ನಾನಿದ್ದಾಗಲೇ ನನ್ನ ಮುಂದೆಯೇ ಮಿತಿಮೀರಿ ಆವಾರಾ ಆಗಿದ್ದ...

ನಾನು ಇಲ್ಲಿನ ವಿಷಯವನ್ನೆಲ್ಲ ಸವಿಸ್ತಾರ ಈಗಾಗಲೇ ಬರೆದಿರುವೆ. ಆ ಪತ್ರ ನಿನಗೆ ತಲುಪಿರಲಿಕ್ಕಿಲ್ಲವೆಂದು ಭಾವಿಸಿ ಇಲ್ಲಿ ಮತ್ತೆ ಬರೆಯುತ್ತಿರುವೆ. ನೀನು ನನ್ನ ಚಿಂತೆಯಲ್ಲಿ ಮುಳುಗಿರಬೇಡ. ದೇವರ ಕರುಣೆಯಿಂದ ಎಲ್ಲ ಸರಿಹೋಗಬಹುದು.

ಖೋಖರಾಪಾರದ ರಸ್ತೆಯಲ್ಲಿ ಬರೇಲಿಯ ಓರ್ವ ಬಡ ಮೌಲ್ವಿ ಸಾಹೇಬ ಹಾಗೂ ಅವರ ವೃದ್ಧ ಪತ್ನಿಯ ಜೊತೆಯಾಯಿತು. ಅವರು ತಮ್ಮ ಮಗನ ಹತ್ತಿರ ಹೋಗಲು ಕರಾಚಿಗೆ ಹೊರಟಿದ್ದರು. ತುಂಬ ಸಭ್ಯ ಜನ...ನೀನು ಹೆಣ್ಣು ಮಗಳು, ಜೊತೆಗೆ ಯೌವ್ವನ ತುಂಬಿದ ಮಗಳು ಬೇರೆ...ಕರಾಚಿಯಲ್ಲಿ ಒಬ್ಬಳೇ ಎಲ್ಲಿ... ಹೇಗಿರುವೆ... ಎಲ್ಲಿವರೆಗೂ ನಿನಗೊಂದು ವ್ಯವಸ್ಥೆ ಆಗುವದಿಲ್ಲವೋ ಅಲ್ಲಿಯವರೆಗೂ ನಮ್ಮೊಂದಿಗೇ ಇರು...ಎಂದು ಹೇಳಿದರು. ನಾನು ಅವರಿಗೆ ಹೀಗೆ ಹೇಳಿದ್ದೆ... ಗಂಡ ನನ್ನನ್ನು ಬಿಟ್ಟಿದ್ದಾನೆ. ಆತ ಆರು ತಿಂಗಳು ಕರಾಚಿ, ಲಂಡನ್‌ದಲ್ಲಿ ಆರು ತಿಂಗಳು ಇರುತ್ತಾನೆ. ನಾನು ಆತನ ಬಗ್ಗೆ ತಿಳಿಯಲು ಪಾಕಿಸ್ತಾನಕ್ಕೆ ಬಂದಿರುವೆ...ಇದನ್ನು ಕೇಳಿದ ಅವರಲ್ಲಿ ನನ್ನ ಬಗ್ಗೆ ತುಂಬ ಕರುಣೆ ಹುಟ್ಟಿತ್ತು...ಅವರ ಮಗಳನ್ನೂ ಅವಳ ಗಂಡ ಮೂರು ಸಲ ತಲಾಕ್ ಎಂದು ಹೇಳಿ ತವರು ಮನೆಗೆ ದಬ್ಬಿದ್ದ...ಆಕೆ ಈಗ ಬರೇಲಿಯಲ್ಲಿದ್ದು ತನ್ನ ಹಣೆಬರಹಕ್ಕಾಗಿ ಅಳುತ್ತಿದ್ದಳು....

ಅಂತೂ...ನಾನು ಅವರೊಂದಿಗೆ ಲಾಲುಖೇತ ತಲುಪಿದೆ. ಇಲ್ಲಿ ಬಡ ಮುಹಾಜಿರರು ವಾಸವಾಗಿದ್ದಾರೆ. ಅವರ ಮಗ ಮುಹ್ಮದ ಲತೀಫ ಖಾನ್ ಯಾವುದೋ ಅಮೇರಿಕನ್‌ನ ಹತ್ತಿರ ಮೋಟರ ಡ್ರೈವರಾಗಿ ಕೆಲಸ ಮಾಡುತ್ತಿದ್ದಾನೆ... ಆತ ಕೂಡ ನಮ್ಮ ಜೊತೆ ತುಂಬ ಚೆನ್ನಾಗಿ ನಡೆದುಕೊಳ್ಳುತ್ತಾನೆ... ಅವರ ಆತನ ಹೆಂಡತಿ, ಮಾ ಪಾಶಾ ಮತ್ತು ನನ್ನ ಬಗ್ಗೆ ಉರಿ ಕಾರುತ್ತಿದ್ದಳು. ನನಗಲ್ಲಿಯಾದರೂ ಅಡಿಗೆ ಕೆಲಸ

ಕೊಡಿಸಿದರೂ ಸಾಕು ಅಲ್ಲಿಗೆ ಹೊರಟು ಹೋಗುತ್ತೇವೆ ಎಂದು ಭಾಯೀ ಲತೀಫ್‌ರಿಗೆ ಹೇಳಿದೆ. ಆತ ನನಗಾಗಿ ನೌಕರಿ ಬೇಟೆ ಆರಂಭಿಸಿದ...ನಾವಿಲ್ಲಿದ್ದು ಹತ್ತು ಹನ್ನೆರಡು ದಿನಗಳಾಗಿದ್ದವು... ಒಂದು ದಿನ ಲತೀಫ ಭಾಯಿಯ ಹೆಂಡತಿ 'ಮಿಲಾದ ಷರೀಫ್' ಆಚರಿಸಿದಳು.....ಅಂದು ನಾನು ಕೆಲ ಶ್ಲೋಕ ಹೇಳಿದೆ...ಅದನ್ನು ಕೇಳಿದ ಅವರೆಲ್ಲ ತುಂಬ ಹೊಗಳಿದರು...ಓಣಿಯವರೆಲ್ಲ 'ಮಿಲಾದ ಷರಿಫ್' ಶ್ಲೋಕ ಪಠಿಸಲು ಕರೆಯ ತೊಡಗಿದರು....ಬಹಳಷ್ಟು ಮನೆಗಳ ಹೆಣ್ಣು ಮಕ್ಕಳು ನನ್ನ ಬಗ್ಗೆ ಕನಿಕರ ಪಟ್ಟು ನಾಲ್ಕಾರು ರೂಪಾಯಿ ಕೂಡ ಕೊಡುತ್ತಿದ್ದರು. ಮತ್ತೊಮ್ಮೆ ಆ ಪ್ರದೇಶದ ಹಳ್ಳಿಗಳಲ್ಲಿ ಅಡ್ಡಾಡುವ ಕಾಲ ಮರಳಿ ಬಂತು...ಏನು ದೇವರ ಲೀಲೆ... ವೈಭವ...

ಒಂದು ದಿನ ಒಂದು ಸಮಾರಂಭದ ಮಿಲಾದದಲ್ಲಿ 'ದರ್ದೊ ಷರೀಫ್' ಓದಲಾಗುತ್ತಿತ್ತು... ಹೊರಗೆ ಒಂದು ಮೋಟರ ಬಂದು ನಿಂತಿತು. ಅದರಲ್ಲಿಂದ ವಿದೇಶದ ಜನ ಕೆಲವರು ಕ್ಯಾಮರಾದೊಂದಿಗೆ ಇಳಿದರು. ಲತೀಫ ಭಾಯಿ ಕೆಲಸ ಮಾಡುತ್ತಿರುವಲ್ಲಿಯ ಜನರಿರಬೇಕೆಂದು ಹೊರಗ ಹೋದೆ. ಅವರು ಯುರೋಪ ದೇಶದ ಟೂರಿಸ್ಟ್‌ರಾಗಿದ್ದರು. ಆ ಸಮಯದಲ್ಲಿ ಒಳಗೆ ಹೆಣ್ಣು ಮಕ್ಕಳು ಜೋರಾಗಿ 'ದರ್ದೊ ಷರೀಫ್' ಹಾಡುತ್ತಿದ್ದರು. ಆ ಜನರಲ್ಲಿಯ ಒಬ್ಬ, ಅವನು ಉದ್ದುದ್ದ ಕೆಂಪು ಕೂದಲು ಬಿಟ್ಟಿದ್ದ ಹಾಗೂ ಮೀಸೆಗಳಿದ್ದವು...ನನ್ನನ್ನು ಕರೆದು ಇಂಗ್ಲೀಷಿನಲ್ಲಿ ಕೇಳಿದ– ''ಈ ಆಲ್ ಮಮ್ಡನ್ ಏನು ?'' ಮೊದಲಿಗೆ ನನಗೆ ಏನೊಂದೂ ಹೊಳೆಯಲಿಲ್ಲ. ಮತ್ತೆ ಯೋಚಿಸಿದೆ... 'ಆಲ್ ಮಹ್ಮದ್' ಅವನ ತಿಳಿವಳಿಕೆಯಲ್ಲಿ All Mohammaden ಆಗಿತ್ತು....ತೂಬಾ...ತೂಬಾ...ಅಷ್ಟರಲ್ಲಿ ಮಾ ಪಾರಾ ಬಂದಳು...ಆಕೆ ಇಂಗ್ಲೀಷಿನಲ್ಲಿ ತಿಳಿಸಿ ಹೇಳಿದಳು...ನಮ್ಮ ಜನರ Religious ಮೀಟಿಂಗ್ ನಡೆದಿದೆ...ಆ ಕೆಂಪು ಮೀಸೆಯವ ಮಾ ಪಾರಾಳನ್ನು ನೋಡುತ್ತಲೇ ಇದ್ದ... ನನ್ನ ಮಗಳೇನು ಎಂದು ನನ್ನನ್ನು ಕೇಳಿದ...ನಾನು 'ಯಸ್' ಎಂದು ಹೇಳಿದೆ...ಆಕೆಯ ಫೋಟೋ ತೆಗೆಯಲು ನನ್ನ ಅಪ್ಪಣೆ ಕೇಳಿದ... ''ಸ್ಟನಿಂಗ್ ಪರ್‌ಷಿಯನ್ ಬ್ಯುಟಿ'' ಎಂದ....ನಾನು ಆಗಬಹುದು ಎನ್ನುವಂತೆ ತಲೆ ಅಲ್ಲಾಡಿಸಿದೆ. ಅವನು ಕೂಡಲೇ ಬಹಳಷ್ಟು ಫೋಟೋ ತೆಗೆದ....ಈಗ ನಮ್ಮ ಸುತ್ತ ಜನ ಸುತ್ತುವರಿದರು...ಕೆಂಪು ಮೀಸೆಯವ ತನ್ನ ಕಾರ್ಡ ಮಾ ಪಾರಾಳ ಕೈಯಲ್ಲಿ ಕೊಟ್ಟ. ಇಂಥ ಹೋಟಲಿಗೆ ನಾಳೆ ಬೆಳಗ್ಗೆ ಹತ್ತು ಗಂಟೆಗೆ ಬರಲು ಹೇಳಿದ... ಅವನು ಅಲ್ಲಿ ಮತ್ತಿಷ್ಟು ಫೋಟೋ ತೆಗೆಯುವುದಾಗಿ ಹೇಳಿದ... ಯಾವುದೋ ಫಾರೆನ್ ಮಾಸಿಕಕ್ಕಾಗಿ...ಅದರಿಂದ ಸಾಕಷ್ಟು ಸಂಭಾವನೆ ಸಿಗುವುದಾಗಿಯೂ ತಿಳಿಸಿದ... ಮಾ ಪಾರಾ ಆ ಕೂಡಲೇ ರಾಜಿ ಆದಳು... ಆದರೆ ಲತೀಫ್ ಭಾಯಿಯನ್ನು ಕೇಳುವುದು ಅವಶ್ಯವೆನ್ನಿಸಿತು ನನಗೆ. ನಾನು ಮಾ ಪಾರಾಗೆ....ನಾಳೆ ಫೋನ್ ಮಾಡಿ ಬರುವುದು ಅಥವಾ ಬರಲಾರದ ಬಗ್ಗೆ ತಿಳಿಸುವುದಾಗಿ ಅವರಿಗೆ ತಿಳಿಸೆಂದು ಹೇಳಿದೆ. ಕೆಲಕ್ಷಣಗಳ ನಂತರ ಅವರು ಅಲ್ಲಿಂದ ಹೊರಟು ಹೋದರು... ಸಾಯಂಕಾಲ ಲತೀಫ್ ಭಾಯಿ ಮನೆಗೆ ಬಂದಾಗ ನಾನು ಇದರ ಬಗ್ಗೆ ಮಾತಡಿದೆ. ಆತ ಬರೇಲಿಯ ಪಠಾಣ ಮತ್ತು ಮೌಲ್ವಿಯ ಮಗ...ಒಮ್ಮೆಲೇ ಕೆಂಪು ಕೆಂಪಾದ...ಹೀಗೆ ಒಪ್ಪಿ ಹೋದರೆ ಈ ಹುಡುಗಿ

ಹಾಳಾಗುವುದಕ್ಕೆ ಮೊದಲ ಹೆಜ್ಜೆಯಾಗುತ್ತದೆ...ಫಾರೆನ್ ಪತ್ರಿಕೆಗಳಿಗಾಗಿ ಇವರು ಎಂಥ ಚಿತ್ರ ತೆಗೆಯುತ್ತಾರೆಂಬುದು ಗೊತ್ತೇನು ? ನಿನ್ನ ಮತ್ತು ನಿನ್ನ ಮಾ ಪಾರಾಳ ಜೀವನ ಚೆನ್ನಾಗಿರಬೇಕೆನ್ನುವುದಾದರೆ, ಹಾಗೂ ನಿನ್ನ ಗಂಡನ ಮೇಲೆ ದಾವಾ ಮಾಡಲು ಸಾಧ್ಯವಾಗಬೇಕೆನ್ನುವುದಾದರೆ ನೀನು ಸಭ್ಯ ರೀತಿಯಲ್ಲಿ ಇರಬೇಕು. ನಾನು ನಿನಗಾಗಿ ಓರ್ವ ಜಾಪಾನಿಯಲ್ಲಿ ಆಯಾದ ಕೆಲಸ ಹುಡುಕಿದ್ದೇನೆ... ಅಲ್ಲಿಗೆ ಹೋಗು...ಅವರು ನಿನಗಿರಲು ಕ್ವಾರ್ಟರ್ ಕೂಡ ಕೊಡುತ್ತಾರೆ. ಹುಡುಗಿ ಯಾವುದಾದರೂ ಇಂಡಸ್ಟ್ರಿಯಲ್ ಹೋಮುದಲ್ಲಿ ಕೆಲಸ ಕಲಿಯುತ್ತಾಳೆ. ಇಂಗ್ಲಿಷ ಕಲಿತಿದ್ದಾಳೆ. ಯಾವುದಾದರೂ ನರ್ಸರಿ ಸ್ಕೂಲಿನಲ್ಲಿ ಅಧ್ಯಾಪಕಿಯಾಗಬಹುದು....ನಾನು ಪ್ರಯತ್ನಿಸುತ್ತೇನೆ....ನಾನು ಆ ಸಭ್ಯ ಗೃಹಸ್ಥನ ಮಾತು ಒಪ್ಪಿದೆ ಹಾಗೂ ಮಾ ಪಾರಾಗೆ ಹೋಟೆಲ್‌ಗೆ ಹೋಗಬೇಡವೆಂದು ಸರಿಯಾಗಿಯೇ ತಿಳಿ ಹೇಳಿದೆ...ಆದರೆ ಆಕೆ ಬೆಳಗು ಹರಿಯುತ್ತಿರುವಂತೆಯೇ ಯಾರಿಗೂ ಗೊತ್ತಿಲ್ಲದಂತೆ ಆಕೆ ಓಡಿ ಹೋದಳು...ಮತ್ತೆ ಎಂದೂ ಲಾಲುಖೇತಕ್ಕೆ ಮರಳಿ ಬರಲಿಲ್ಲ.

ಮುಂದಿನದಲ್ಲ ಬಹಳ ದೀರ್ಘವಾದ ಕಥೆ...ಅದನ್ನೇ ಸಂಕ್ಷಿಪ್ತಗೊಳಿಸಿ ಇಲ್ಲಿ ಬರೆಯುತ್ತೇನೆ... ಮಾ ಪಾರಾಳನ್ನು ವಿದೇಶಿಗಳೊಂದಿಗೆ ಅದೇ ಫೈವ್‌ಸ್ಟಾರ್ ಹೋಟಲಿನಲ್ಲಿ ನೋಡಬಹುದಾಗಿತ್ತು. ಆಕೆ ಹಗಲೆಲ್ಲ ಎಲ್ಲಿರುತ್ತಾಳೆ ಏನು ಮಾಡುತ್ತಾಳೆ ಎಂಬುದನ್ನು ಯಾರೂ ಅರಿಯರು...ಬಹಳ ದಿನಗಳ ನಂತರ ನನಗೆ, ನಾನಿದ್ದ ಜಾಪಾನಿಯರ ಮನೆಗೆ ಫೋನ್ ಮಾಡಿದಳು...ಅಲ್ಲಿ ನನಗೆ ಲತೀಫ್ ಭಾಯಿ ಆಯಾಳ ನೌಕರಿ ಕೊಡಿಸಿದ್ದ... ನಾನು ನನ್ನ ಹೆಸರು ಮೋನಾ ಎಂದಿರಿಸಿಕೊಂಡಿದ್ದೆ. ಹಳೆಯ ನನ್ನ ಗುರುತಿನವರು ನೋಡಿದರೂ ಮೋನಾ ಆಯಾಳನ್ನು ಅವರು ಹೇಗೆ ಗುರುತಿಸುತ್ತಾರೆ... ನಾನು ಆಗಾಷಬ್ ಅವೀಜ ಹಮ್ದಾನಿಯ ಹುಡುಕುವಿಕೆಯನ್ನು ಮುಂದುವರಿಸಿದ್ದೆ...ಹಲವಾರು ಕಡೆ ಫೋನ್ ಮಾಡಿದೆ...ಈಗ ಆತ ಕಾಯಂ ಲಂಡನ್‌ನಲ್ಲಿಯೇ ಇರುತ್ತಾನೆಂದು ಗೊತ್ತಾಯಿತು. ಅಲ್ಲಿಯ ವಿಳಾಸಕ್ಕೆ ಕಾಗದ ಬರೆದೆ...ಎಂದಿನಂತೆ ಉತ್ತರಕ್ಕಾಗಿ ಕಾಯುವುದನ್ನು ಆರಂಭಿಸಿದೆ...ಹಾಗೆಯೇ ಮೊದಲಿನಂತೆ ನಿರಾಶೆಯಾಯಿತು...ಒಂದು ದಿನ ಮಾ ಪಾರಾ ತುಂಬ ಅಂತಃಕರಣದ ದನಿಯಲ್ಲಿ ಫೋನ್ ಮಾಡಿದಳು...ಇಂಥ ಹೋಟಲಿನಲ್ಲಿ ಯಾರೋ ಆಗಾಹಮ್ದಾನಿ ತೆಹರಾನ್‌ದಿಂದ ಬಂದು ಇಳಿದುಕೊಂಡಿದ್ದಾರೆ. ನಾನಂತೂ ಆತನನ್ನು ಕಾಣಲು ಹೋಗುವುದಿಲ್ಲ...ನೀನು ಹೋಗಿಬಾ...ಬಹುಶಃ ಡ್ಯಾಡಿ ಇದ್ದರೂ ಇರಬಹುದು...ನಾನು ಆ ಕೂಡಲೇ ನನ್ನ ಜಾಪಾನಿ ಮೇಮುಳಿಗೆ ಹೇಳಿ ರಜೆ ಪಡೆದೆ. ಎಷ್ಟೋ ವರ್ಷಗಳ ನಂತರ ಶೃಂಗರಿಸಿಕೊಂಡು ಒಳ್ಳೆಯ ಸೀರೆಯುಟ್ಟು, ಹೊಡೆದುಕೊಳ್ಳುತ್ತಿರುವ ಹೃದಯದೊಂದಿಗೆ ಆ ಹೋಟಲ್ ತಲುಪಿದೆ. ರಿಸೆಪ್ಶನ್ ಕೌಂಟರ್‌ದಲ್ಲಿ ಆಗಾ ಹಮ್ದಾನಿಯ ಕೋಣೆಯ ನಂಬರ ವಿಚಾರಿಸಿದೆ...ಎದೆ ಬಡಿತ ಇನ್ನೂ ಹೆಚ್ಚಾಗುತ್ತಲಿತ್ತು...ಬಣ್ಣ ಬಿಳಿಚಿಗೊಳ್ಳುತ್ತಲಿತ್ತು... ಕೌಂಟರದಲ್ಲಿಯ ಹುಡುಗಿಯರು ನನ್ನನ್ನು ಆಶ್ಚರ್ಯದಿಂದ ನೋಡಿದರು...ಅಕಸ್ಮಾತ್ತಾಗಿ ಅದೇ ಸಮಯಕ್ಕೆ ಆಗಾ ಹಮ್ದಾನಿ ಅಲ್ಲಿಗೇ ಬಂದ.... ಆತ ಷಬ್ ಅವೀಜ ಆಗಿರದೇ ಇಪ್ಪತ್ತೈದು ವರ್ಷದ ತರುಣನಾಗಿದ್ದ...ನನಗೆ ಹೇಳುವಷ್ಟು

ಇಂಗ್ಲಿಷ್ ಬರುತ್ತಿಲ್ಲ ಅವನಿಗೆ ಹೇಳುವಷ್ಟು, ಉರ್ದು ಬರುತ್ತಿಲ್ಲ... ನಾನು ಕೇಳಿದೆ...ಆಗಾಷಬ್ ಆಪೀಜ ಹಮ್ದಾನಿ ನಿಮಗೆ ಗೊತ್ತೆ...ಅವರು ಹೇಗಿದ್ದಾರೆ ? ಬಹಳ ಕೂದಲುಳ್ಳ...ಸುಂದರ...ಲಂಡನ್‌ದಲ್ಲಿರುತ್ತಾರೆ... ಹರಕು ಮುರಕು ಉರ್ದು ದಲ್ಲಿ ಹೇಳಿದ. ಆತನ ಹೆಂಡತಿ ಮತ್ತು ನನ್ನ ಚಿಕ್ಕಮ್ಮ ಷೇರಾಜದಲ್ಲಿ ಒಂದೇ ಕಡೆ ಇದ್ದರು...ಅವರೇ ಅಲ್ಲ.....?

ಇಷ್ಟು ಹೇಳಿದ ಆಗಾ ಹಮ್ದಾನಿ ಈರಾನ ಏರ್‌ಲೈನ್‌ದ ಕೋಣೆಯತ್ತ ಹೊರಟು ಹೋದ...ನಾನು ಮಾ ಪಾರಾಳ ಫೋನ್ ಬಂದ ನಂತರ, ಷಬ್ ಆಪೀಜನ ಹೆಸರು ಫರಾ ಬರೆದಿದ್ದಳು, ಅದು ಪರ್ಸದಲ್ಲಿತ್ತು...ಅದನ್ನು ತೆಗೆದು ತುಂಡು ತುಂಡು ಮಾಡಿ ಹರಿದು ಅಲ್ಲಿಯೇ ಇದ್ದ ಡಸ್ಟ್‌ಬಿನ್‌ದಲ್ಲಿ ಹಾಕಿದೆ...ಹೋಟಲ್ಲಿನಿಂದ ಹೊರ ಬಂದ. ಈಗ ಶಾಂತಿಯಿದೆ. ಈಗ ಯಾವುದರ ಪ್ರತೀಕ್ಷೆ ಇಲ್ಲ...ಆದರೆ ಈಗ ಮಾ ಪಾರಾಳ ಚಿಂತೆ ಕಾಡುತ್ತಲಿದೆ.. ಅವಳು ನನ್ನಿಂದ ತುಂಬ ದೂರಾಗಿದ್ದಾಳೆ. ನಾನು ಅವಳ ತಾಯಿಯೆಂಬುದನ್ನು ಕೂಡ ಅವಳು ಯಾರಿಗೂ ಹೇಳುತ್ತಿಲ್ಲ...ಓರ್ವ ಆಯಾಳನ್ನು ನನ್ನ ತಾಯಿಯೆಂದು ಹೇಗೆ ಹೇಳುವುದು–ಎನ್ನುತ್ತಾಳೆ...ನನ್ನ ಹತ್ತಿರ ಬಂದೇಕ ಇರುವುದಿಲ್ಲ... ಎರಡೂವರೆ ನೂರು ರೂಪಾಯಿಗಳ ನೌಕರಿ ಮಾಡಿ ನಿನ್ನ ಸ್ಥಾನವನ್ನೇಕ ಹಾಳು ಮಾಡಿಕೊಳ್ಳುತ್ತಿ... ನನ್ನಲ್ಲಿ ಹಣದ ಕೊರತೆ ಇಲ್ಲ...ಎನ್ನುತ್ತಾಳೆ. ಆದರೆ, ನನಗ ಅವಳ ಹತ್ತಿರ ಇಷ್ಟೊಂದು ಹಣವಿರುವುದೇ ನನಗೆ ಚಿಂತೆಯಾಗಿದೆ...ಅದು ನನ್ನನ್ನು ಕೊಲ್ಲುತ್ತಲಿದೆ...ಆಕೆ ಗುಂಡಾಗಳ ಹೋಟಲದಲ್ಲಿರುತ್ತಾಳೆ. ನಾನಾ ರೀತಿಯ ಗುಂಡಾಗಳ ಜೊತೆ ಆಕೆಯ ದೋಸ್ತಿಯಿದೆ. ಒಮ್ಮೊಮ್ಮೆ ತನ್ನ ಓರ್ವ ಅರಬ್ ಫ್ರೆಂಡ್‌ನೊಂದಿಗೆ ಬೇರುತಗೆ ಹೋಗುವುದಾಗಿ ಹೇಳುತ್ತಾಳೆ... ಫೋನ್ ಮಾಡಿ ಕ್ಯಾಬರ ಡಾನ್ಸ್ ಕಲಿಯಲು ಹಾಂಗ್‌ಕಾಂಗ್‌ಗೆ ಹೋಗುವುದಾಗಿ ಹೇಳುತ್ತಾಳೆ...ವಾರಗಟ್ಟಲೇ ಎಲ್ಲಿರುತ್ತಾಳೋ ಏನೋ...ವಾರದ ನಂತರ ಮುಖ ತೋರಿಸುತ್ತಾಳೆ... ಯಾವಳೋ ಫಿಲ್ಮ ಸ್ಟಾರ್ ಬಂದ ಹಾಗೆ ಬರುತ್ತಾಳೆ...ಬೆಲೆಯುಳ್ಳ ಯುರೋಪದ ಡ್ರೆಸ್, ಬೆಲೆಬಾಳುವ ಅತ್ತರ, ನಿತ್ಯ ಹೊಸ ಹೊಸ ರೀತಿಯ ಹೇರ್ ಸ್ಟೈಲ್... ವಿಗ್...ಪಾಪ ಲತೀಫ ಭಾಯಿ...ಮಿರ್ಜಾ ಸಾಹೇಬನ ಹಾಗೆ ಸಜ್ಜನ ವ್ಯಕ್ತಿ...ನನ್ನ ಬಗ್ಗೆ ತುಂಬ ಸಿಟ್ಟಾಗಿದ್ದಾನೆ... ನನ್ನನ್ನು ನೋಡಲು ಕೂಡ ಬಂದಿಲ್ಲ...ನಾನಾವ ಮುಖ ತಗೊಂಡು ಅವರನ್ನೆಲ್ಲ ನೋಡಲು ಲಾಲುಖೇತಕ್ಕೆ ಹೋಗಲಿ...ಅವರಿಗೆಲ್ಲ ಮಾ ಪಾರಾಳ ಬಗ್ಗೆ ಎಲ್ಲ ತಿಳಿದಿದೆ..... ನಾನಂತೂ ಮಾಪಾರಾಳಿಂದ ಒಂದು ಪೈಸೆ ಕೂಡ ತಗೊಳ್ಳುತ್ತಿಲ್ಲ... ಆದರೆ ಅವರು ನಾನು ತೆಗದುಕೊಳ್ಳುತ್ತಿರಬಹುದೆಂದೇ ತಿಳಿದಿರ ಬೇಕು....

ಈಗ ಆಗಾಷಬ್ ಆಪೀಜರ ಕಡೆಯಿಂದ ಸಂಪೂರ್ಣ ನಿರಾಶೆಯಾಗಿರುವಾಗ ನನಗ ಮಾ ಪಾರಾಳೊಂದಿಗೆ ಇರಲು ಯಾವ ಆತಂಕವಿದೆ...ನನಗೇ ತಿಳಿಯಲಾರದ ಹಾಗಾಗಿದೆ....ಏನು ನಮ್ಮ ತಾಯಿ, ಹರ್‌ಮುಜಿ ಚಿಕ್ಕಮ್ಮ ಹಾಗೂ ನಾನು ಇಡೀ ಆಯುಷ್ಯ ಏನು ಮಾಡಿದೆವೋ ಅದನ್ನೇ ಈಗ ಮಾ ಪಾರಾ ತುಂಬ ದೊಡ್ಡ ರೀತಿಯಲ್ಲಿ, ದೊಡ್ಡ ಸ್ಟೈಲ್‌ನಲ್ಲಿ ಮಾಡುತ್ತಿದ್ದಾಳೆ...ನನ್ನ ಜಾಪಾನಿ ಮೇಮ ಸಾಬ, ನನ್ನ ಬಗ್ಗೆ ಆಕಗ

ಅಪಾರ ಕರುಣೆಯಿದೆ, ನನಗೆ ಆಗಾಗ ಹೇಳುತ್ತಾಳೆ... ಟೋಕಿಯೋದಲ್ಲಿ ಒಂದು ಇಡೀ ಪ್ರದೇಶ ವೈಭವಪೂರಿತವಾದುದು, ಅದರಲ್ಲಿ ಜಾಪಾನದ ಸಾವಿರಾರು ಹುಡುಗಿಯರು ಇದೇ ಧಂಧೆಯಲ್ಲಿ ತೊಡಗಿದ್ದಾರೆ, ಹಳೆಯ ಫ್ಯಾಷನ್ನಿನ ಹುಡುಗಿಯರು ಹಿಂದುಳಿದಿದ್ದಾರೆ...

ಸರಿ, ಆದರೆ ನನಗೆ ಮಾ ಪಾರಾಳಿಂದ ಹಣ ಪಡೆಯಲು ಹಿಂದೇಟು ಏಕೆ ? ಬಹುಶಃ ನಾವು 'ಮರ್ಯಾದೆ' ಮತ್ತು 'ಪ್ರತಿಷ್ಠೆ' ಎಂಬ ಪರದೆಯನ್ನು ನಮ್ಮ ಮುಂದೆ ಹಾಕಿಕೊಂಡಿದ್ದೇವೆ. ಆ ಪರದೆ ಕೇವಲ ಮೋಸದ್ದಾಗಿತ್ತು, ಕೃತ್ರಿಮ ಗಾಂಭೀರ್ಯದ್ದಾಗಿತ್ತು...ಆ ಮೋಸ, ನಮಗೆ ನಾವೇ ಮಾಡಿಕೊಳ್ಳುತ್ತಿದ್ದೆವು....ಬೇರೆಯವರಿಗೂ ಮಾಡುತ್ತಿದ್ದೆವು....ನಿನಗೆ ಬಹುಶಃ ಗೊತ್ತಿದೆ. ಈರಾನದಲ್ಲಿ 'ಖಾಂಗಿ' ಶಬ್ದ ಸೂಳೆಯರಿಗಾಗಿಯೇ ಇದೆ. ಈಗ ಬಹು ದೊಡ್ಡ ''ಹೈ ಕ್ಲಾಸ್ ಪಾರ್ಟಿ ಗರ್ಲ'' ಗಳಿಸಿದ್ದನ್ನು ತಿನ್ನಲು ನನಗೀಗ ನಾಚಿಕೆಯಾಗುತ್ತಲಿದೆ....ಎಂಥ ಅರ್ಥವಿಲ್ಲದ, ಅವಾಸ್ತವ... ಇದು....ಮತ್ತು ಮಾ ಪಾರಾಳ ಕಡೆಯಿಂದ ದಿನದಿನೇ ಇವರ ಬಗೆಗೆ ಒತ್ತಡ ಹೆಚ್ಚಾಗುತ್ತಲೇ ಇದೆ....ನಮ್ಮ ಆ ಸಣ್ಣ ಹಾಗೂ ಕತ್ತಲೆಯಿಂದ ತುಂಬಿದ ಓಣಿಗಳು ಸುರಕ್ಷಿತವಾಗಿದ್ದವು...ಅಲ್ಲಿಯ ಜನ ಇಷ್ಟು ಅಮಾನುಷರಾಗಿದ್ದಿಲ್ಲ....ಇಲ್ಲಿ ಇಂದು ಹೊರಗಿನ ಅಡೆತಡೆಯಿಲ್ಲದ ವಾತಾವರಣದಲ್ಲಿ....ಈ ಕಣ್ಣು ಕುಕ್ಕಿಸುವ ಸಂಪತ್ತು ತುಂಬಿದ ಮಾಡರ್ನ್ ಜಗತ್ತು...ತುಂಬ ಭಯಾನಕವಾಗುತ್ತ ಕ್ರೂರವಾಗುತ್ತ ನಡೆದಿದೆ.... ಮತ್ತು ಮನುಷ್ಯ ಹೆಚ್ಚೆಚ್ಚು ಕೀಳಾಗಿದ್ದಾನೆ....ಅದು ಏನೇ ಇರಲಿ, ನಾನು ನನ್ನ ನಸೀಬದಲ್ಲಿದ್ದುದನ್ನು ಉಣ್ಣುತ್ತಿದ್ದೇನೆ. ದೈವದೊಂದಿಗೆ ಸೇಡು ತೀರಿಸಿಕೊಳ್ಳಲೋಸುಗ ಮಾ ಪಾರಾಳಿಂದ ಯಾವುದೇ ರೀತಿಯ ಸಹಾಯ ಪಡೆಯುತ್ತಿಲ್ಲ....

ಒಂದು ದಿನ ಅಕಸ್ಮಾತ್ತಾಗಿ ಆಗಾ ಫರ್‌ಹಾದ್‌ನ ಸಣ್ಣ ಮಗಳ ಭೇಟಿಯಾಯಿತು. ನನ್ನ ಜಾಪಾನಿ ಮೇಮ್‌ಸಾಬ ತನ್ನ ಯಾವಳೋ ಅಮೇರಿಕನ್ ಗೆಳತಿಯನ್ನು ನೋಡಲು ಹೋಗಿದ್ದಳು. ನಾನೂ ಆಕೆಯೊಂದಿಗಿದ್ದೆ....ಸಮೀಪದ ಬಹುದೊಡ್ಡ ಬಹುಮಹಡಿಯ ಬಂಗ್ಲೆಯ ಗೇಟಿನ ಒಂದು ಬದಿಯಲ್ಲಿ ಆಗಾ ಫರ್‌ಹಾದನ ಕಿರಿಯ ಅಳಿಯನ ಹೆಸರಿನ ಬೋರ್ಡಿತ್ತು....ನನ್ನ ಮೇಮ್‌ಸಾಬ ಅಮೇರಿಕನ್‌ರನ್ನು ನೋಡಲು ಅವರಲ್ಲಿಗೆ ಹೋದಳು....ನಾನು ಹೊರಗೆ ಬಿಸಿಲಿನಲ್ಲಿ ಅತ್ತಿತ್ತ ಅಡ್ಡಾಡುತ್ತಿದ್ದೆ.....ಹೀಗೆ ಅಡ್ಡಾಡುತ್ತ ಮಗ್ಗಲ ಬಂಗ್ಲೆಯ ಗೇಟಿನೊಳಗೆ ಹೋದೆ....ಓ ! ಬಂಗ್ಲೆಯಲ್ಲ...ಅರಮನೆಯ ಅರಮನೆ....ಅದು. ಅಮೇರಿಕನ್ ಪತ್ರಿಕೆಗಳಲ್ಲಿ ಚಿತ್ರಗಳಿರುತ್ತಾವಲ್ಲ, ಹಾಗಿತ್ತು...ಒಳ ಮೊಗಸಾಲೆಯಲ್ಲಿ ಹೋದೆ...ಚಂದ್ರಕಾಂತ ಶಿಲೆಯ ನೆಲ...ಒಳಗೆ ಹಣಕಿಕ್ಕಿದೆ....ಬಿಳಿ ಕಾರ್ಪೆಟ್ ಹಾಸಲಾಗಿತ್ತು....ಬಹು ಬೆಲೆ ಬಾಳುವ ಫರ್ನಿಚರ...ಆಗಾ ಫರ್‌ಹಾದನ ಮಗಳು ಎದುರಿಗೆ ಕಾಣಿಸಿದಳು. ನಾನು ಆ ಕೂಡಲೇ ಗುರುತಿಸಿದೆ....ಅದೆಷ್ಟೋ ಸಲ ಅವಳನ್ನು ಲಖನೌದಲ್ಲಿ ನೋಡಿದ್ದೆ. ಅವಳು ಬಿಳಿ ಬಣ್ಣದ ಟೆಲಿಫೋನ್ ಮೇಲೆ ಬಾಗಿ–''ಚಪ್ಪನ್ ಪೈಲ್....ಚಪ್ಪನ್ ಪೈಲ್....'' ಮಾಡುತ್ತಿದ್ದಳು. ''ಹಾಂ ! ನಾವು ಸೆಕೆಂಡ್ ಫ್ಲೋರ್‌ಗಾಗಿ ಚಪ್ಪನ್ ಪೈಲ್‌ದ ಫರ್ನಿಚರ ಆರ್ಡರ್ ಮಾಡಿದ್ದೇವೆ.

ಫರ್ಸ್ಟ್ ಫ್ಲೋರ್‌ಗಾಗಿ ಕೇವಲ ಆರು ರೂಮುಗಳಿಗೆ ಕೋಯಿನ್ ಎನ್ ಫರ್ನೀಚರ ಬೇಕು. ಹಾಂ ! ಹಾಂ !...ನಾವು ಎಲ್ಲ ಸಾಮಾನು ಯುರೋಪದಿಂದ ತರಿಸಿದ್ದೇವೆ.... ಹೀಗೆ ಮಾತಾಡುತ್ತಿರುವಾಗಲೇ ಅವಳು ನನ್ನತ್ತ ನೋಡಿದಳು....ಕೇಳಿದಳು....''ಏನು ಬೇಕು?'' ''ಏನೂ ಬೇಡ ಬೇಗಂ... ನಿಮ್ಮ ಆಯಾಳನ್ನು ಕಾಣಲು ಬಂದಿದ್ದೆ...'' ಎಂದೆ. ಅದಕ್ಕೆ ಆಕೆ-''ಆ ಕಡೆ ಹೋಗು... ಒಳಗಲ್ಲಿಗೆ ಬರುತ್ತಿರುವೆ....'' ಎಂದಾಗ ನಾನು ಮೊಗಸಾಲೆಯಿಂದ ಕೆಳಗಿಳಿದು ಗೇಟಿನಿಂದ ಹೊರಗೆ ಬಂದೆ.

ನನ್ನ ಜಾಪಾನಿ ಮೆಮ್ ತುಂಬ ಒಳ್ಳೇ ಹೆಂಗಸು, ಆಕೆ ಹೇಳಿದಳು...ಈ ಪತ್ರವನ್ನು ತನ್ನ ತಾಯಿಗೆ, ಟೋಕಿಯೋಕ್ಕೆ ಕಳಿಸುತ್ತಾಳೆ....ಅವಳ ತಾಯಿ ಅದನ್ನು ನಿನ್ನ ವಿಳಾಸಕ್ಕೆ, ಇಂಡಿಯಾಕ್ಕೆ ರೀ ಡೈರೆಕ್ಟ್ ಮಾಡುತ್ತಾಳೆ.....

ಚಿಕ್ಕಮ್ಮ, ಚಿಕ್ಕಪ್ಪ ಅವರಿಗೆ ಶಿ. ಸಾ. ಪ್ರಣಾಮ ಹೇಳು. ಮಮ್ದಾಸಾಹೇಬ ಹಾಗೂ ಸದಫ್‌ಗೆ ನಮಸ್ಕಾರ. ಅಫ್ತಾಬ ಮಗನಿಗೆ ಪ್ರೀತಿ....ನಿನಗೆ ಪ್ರೀತಿ....

ಜಮೀಲನ್ ಪ್ರಾರ್ಥನೆ ಮಾಡು.....ಮಾ ಪಾರಾ ಸರಿಯಾದ ಮಾರ್ಗಕ್ಕೆ ಬರಲಿ....ಈಗೀಗ ತಿಳಿದು ಬಂದಿರುವುದು....ಅವಳು ಸ್ಮಗ್ಲರ್‌ಗಳ ಒಂದು ಗುಂಪಿನಲ್ಲಿ ಸೇರಿದ್ದಾಳೆ....ದೇವರು ಈ ಸುದ್ದಿ ಸುಳ್ಳಾಗುವಂತೆ ಮಾಡಲಿ. ನಾನಂತೂ ಪ್ರಾರ್ಥನೆ ಸಲ್ಲಿಸುತ್ತ....ಸಲ್ಲಿಸುತ್ತ...ದಣಿದು ಹೋಗಿದ್ದೇನೆ....ದಣಿದು ಚೂರು ಚೂರಾಗಿದ್ದೇನೆ.

ನಿನ್ನ

ಬಿಜಿಯಾ

ಈ ಕಾಗದವೂ, ವಿಳಾಸದವರಿಗೆ ತಲುಪಲಿಲ್ಲ. ಏಕೆಂದರ ಜಾಪಾನಿ ಮೇಮ್ ತನ್ನ ತಾಯಿಗೆ ಟೋಕಿಯೋಕ್ಕ ಕಳಿಸಿದಳು. ಆ ಜಾಪಾನಿ ಮಹಿಳೆ ಬೇರೆ ಪತ್ರ ಗಳೊಂದಿಗೆ ಅದನ್ನೂ ತನ್ನ ಮೇಜಿನ ಡ್ರಾದಲ್ಲಿರಿಸಿದಳು. ಇಂಡಿಯಾಕ್ಕೆ ಅದನ್ನು ಕಳಿಸುವುದನ್ನು ಮರೆತುಬಿಟ್ಟಳು.

## -10-

ಪಾಕಿಸ್ತಾನದ ಉರ್ದು ಪತ್ರಿಕೆಗಳಲ್ಲಿಯ ಒಂದು ಸುದ್ದಿ-ಕಲ್ಪಟನ್‌ರಲ್ಲಿ ಓರ್ವ ಸುಂದರ ತರುಣಿಯ ಭಾರೀ ಕೊಲೆ.....ಕೊಲೆಗಡುಕರು ನಾಪತ್ತೆಯಾಗಿದ್ದಾರೆ..... ತರುಣಿಯ ಹೆಣ ಬೆಳಗಿನ ನಾಲ್ಕು ಗಂಟೆಯ ಹೊತ್ತಿಗೆ ಸಮುದ್ರ ತಟದಲ್ಲಿ ಬಿದ್ದಿತ್ತು..... ಈ ಹುಡುಗಿ ಬಹು ದೊಡ್ಡ ಸ್ಮಗ್ಲರ್ ತಂಡದೊಂದಿಗೆ ಸಂಬಂಧ ಹೊಂದಿದ್ದಳೆಂದು ಹೇಳಲಾಗುತ್ತದೆ. ಅವಳ ತಾಯಿ ವಿದೇಶಿಯೊಬ್ಬರ ಮನೆಯಲ್ಲಿ ಮನೆ ಗೆಲಸದವಳಾಗಿದ್ದಾಳೆ. ವಿಚಾರಣೆಯ ನಂತರ ತರುಣಿಯ ಹೆಣ ಗುರುತಿಸಲು ಈಕೆಯನ್ನು ಕರೆಯಿಸಿದಾಗ ಈಕೆ ಹಿಸ್ಟೀರಿಯಾ ಆದವಳಂತೆ ಚೀರಿ ಚೀರಿ ಅನ್ನುತ್ತಿದ್ದಳು....''ಮಮ್ದಾ ಸಾಹೇಬ ನಿಮ್ಮ ಅಮ್ರಪಾಲಿ ಸತ್ತು ಹೋದಳು.... ಮಮ್ದಾ ಸಾಹೇಬ ನಿಮ್ಮ ಅಮ್ರಪಾಲಿಯನ್ನು ಕೊಲೆ ಮಾಡಿದರು.....''ಇದರಿಂದಾಗಿ ಇವರಿಬ್ಬರೂ ತಾಯಿ ಮಗಳು ಭಾರತೀಯ ಗುಪ್ತ

ಜಾರಬಿರಬೇಕೆಂಬ ಸಂಶಯ ವ್ಯಕ್ತಗೊಳಿಸಲಾಗುತ್ತದೆ. ವಿಚಾರಣೆ ಹಾಗೂ ತನಿಖೆಯ ಕಾರ್ಯ ನಡೆದಿದೆ....

## -11-

ಪೋಲಿಸರ ಹೆಣದ ಮನೆಯ ಒಂದು ದೃಶ್ಯ–"ಕೊಲೆಯಾದವಳ ತಂದೆಯ ಹೆಸರೇನು?" ಎಂದು ಪೋಲಿಸ ಆಫೀಸರ ಕೇಳುತ್ತಾನೆ.

"ತಂದೆಯ ಹೆಸರು....? ಈಶ್ವರೀ ಶಕ್ತಿ....ದೇವರು ಬರದು ಕೊಳ್ಳಿ....."

"ವಿಚಿತ್ರ ಹೆಸರಿದೆ...."

"ಪ್ರತಿಯೊಂದು ಹೆಸರು ವಿಚಿತ್ರವಾಗಿರುತ್ತವೆ....."

"ಈಶ್ವರೀ ಶಕ್ತಿ ದೇವರು ಬಂಗಾಲಿಯಿರಬೇಕು."

"ಹೌದು ಸಾಹೇಬರೆ.....ಜನ್ಮ ಸ್ಥಳ ಕಲಕತ್ತಾ....ಬಹುಶಃ ಈ ಅಶಾಶ್ವತ ಜಗತ್ತಿನಿಂದ ಹೊರಟು ಹೋಗಿದ್ದಾನೆ...."

"ಅವನ ಜಾತಿ ಯಾವುದಿತ್ತು?"

"ಬ್ರಿಟಿಷ್....."

"ಆತನ ಪಾಸ್‌ಪೋರ್ಟ ನಂಬರ.....?"

"ಪ್ರವಾಸ....ಪ್ರವಾಸ....ಪ್ರವಾಸ....."

"ಸರಿಯಾಗಿ ಹೇಳು."

"ಹೆಣದ ಪಾಸಪೋರ್ಟ.....?ಸೊನ್ನೆ.....ಸೊನ್ನೆ.....ಸೊನ್ನೆ....."

"ಏನು ಮತ್ತೆ ನಿನಗೆ ಹಿಸ್ಟಿರೀಯಾ ರೋಗ ಮರುಕಳಿಸಲಿದೆಯೇನು?"

"ಹೆಣದ ಪಾಸ್‌ಪೋರ್ಟ.....ಹಾಂ.....ಹಾಂ.....ಹುಂ....ಹುಂ.....ಸಫರ್ ಹೈ ಮುಷ್ಕಿಲ....ಖ್ವಾಬ ಕಬ್‌ತಕ್....ಬಹುತ ಬಡೀ ಮಂಜಿಲ್ ಅದಮ್ ಹೈ... ಹಾಂ....ಹಾಂ....ಹ....ಹಹಹಹಹ....ನಸೀಮ ಜಾಗೊ....ಕಮರ್ ಬಾಂಧೊ.... ಉಠಾವ್ ಬಿಸ್ತರ್....ಅಜಿ ಉಠಾವ್ 'ಬಿಸ್ತರ ಕೆ ರಾತ ಕಮ್ ಹೈ...."ಎನ್ನುತ್ತ ಹಂಗಸು ಹಾಡು ಹಾಡತೊಡಗುತ್ತಾಳೆ....ಪೋಲಿಸರು ಅವಳನ್ನು ಆಶ್ಚರ್ಯದಿಂದ ನೋಡುತ್ತಾರೆ....

"ಜವಾನಿ ವ ಹುಸ್ನ್, ಜಾಂ ದೌಲತ್....ಏ ಚಂದ ಇನ್ಸಾನ್‌ಕೆ ಹೈ ಜಗಹ....ಅಜಲ್ ಹೈ....ಉಸ್ತಾದಾ ದಸ್ತ ಬಿಸ್ತಾ ನೋಯಿದ್ ರುಖ್ಸತ್ ಹರ್ ಏಕ ದಮ್ ಪೈಲಬ್ಸಾನ್ ದಸ್ತಸವಾಲ ಸಾಹಿಲ್ ತಯಿಯಾ ಹರ್ ಏಕ ಮುದಾಸ.... ತಯಿಯಾ ಹರ್ ಏಕ ಮುದಾಸ....ತಯಿಯಾ ಹರ್ ಏಕ ಮುದಾಸ....." ಈಗ ಆ ಮಣ್ಣುಮಾಗಳು ಗ್ರಾಮೋಫೋನ್ ರೆಕಾರ್ಡ ಮೇಲ ಮುಳ್ಳು ನಿಂತು ಹಾಡಿದ್ದನ್ನೇ

ಹಾಡುವ ಹಾಗೆ ಅರ್ಥವಿಲ್ಲದ ಮಾತುಗಳನ್ನೇ ಪುನಃ ಪುನಃ ಹೇಳುತ್ತಿದ್ದಾಳೆ....''ಸಫರ್ ಹೈ ದುಷ್ವಾರ್....ಸಫರ ಹೈ ದುಷ್ವಾರ್....ಬಹುತ ಬಡಿ ಮಂಜಿಲ್ ಅದವ್.... ಅದವ್...ಅದಮ್ಮ.....ಅಜಿ....ಛಾಪ ತಲಕ್ ಸಬ್ ಛಯಿನಿ ಮೋಸೆ ನಿಯಾ ಲಗಾಯೆಕೆ....ಛಾಪ ತಲಕ....ಖುಸ್ರು ನಿಜಾಮ ಕೆ ಬಲ ಬಲ್ ಜಾವು.....ಬಲ. ಬಲ್ ಬಲ್ ಬಲ್ ಬಲ್ ಬಲ್ ಬಲ್....''ಮತ್ತೆ ಆಕೆ ಫಿರ್ಕಿಯ ಹಾಗೆ ತಿರು ತಿರ ಅದನ್ನೇ ಅನ್ನತೊಡಗಿದಳು....ಆಕೆಯ ಜಡೆ ಬಿಚ್ಚಿತು....ನೀಳವಾದ ಕೂದಲು ಹೆಗಲ ಮೇಲೆ ಹರಡಿಕೊಂಡವು. ಈಗ ಆಕೆ ನಾಲಗೆ ಹೊರಗೆ ತೆಗೆದು ಬಗರಿಯ ತಿರುಗತೊಡಗಿದಳು.....ಜೀವನದ ಸುಡುಗಾಡಿನಲ್ಲಿ ಕಾಳಿ ಕುಣಿದ ಹಾಗೆ....

ಇಬ್ಬರು ಸಿಪಾಯಿಗಳು ಗಟ್ಟಿಯಾಗಿ ಹಿಡಿದು ತಂದು ಎಂಬ್ಯೂಲೆನ್ಸ್‌ದತ್ತ ಒಯ್ದರು.....

## -12-

ಬೊಂಬೈಯ ಮಹ್ಮದಅಲಿ ರೋಡಿನಲ್ಲಿರುವ ಪ್ರವಾಸಿಮಂದಿರದ ಕ್ಲಾರ್ಕ್– ''ಪಾಕಿಸ್ತಾನಿ ಏನು?'' ಎನ್ನುತ್ತ ರಿಜಿಸ್ಟರ ತೆರೆದ.

''ಪಾಕಿಸ್ತಾನಿಯೋ, ಹಿಂದೂಸ್ತಾನಿಯೋ ಗೊತ್ತಿಲ್ಲ....ನಿಜವಾಗಿ ಹೇಳಬೇಕೆಂದರೆ ನರಕದವಳು.....''

ಕ್ಲಾರ್ಕ್ ಬಂದ ಹೆಂಗಸನ್ನು ಅಚ್ಚರಿಯಿಂದ ನೋಡಿದ.

''ನೀವು ನನ್ನನ್ನು ಪಾಕಿಸ್ತಾನಿಯೆಂದು ಏಕೆ ತಿಳಿದಿರಿ? ಏನು ನನ್ನ ಹಣೆಯ ಮೇಲೆ ಬರೆದಿದೆಯೇ ಹಾಗೆಂದು?''

''ಇಲ್ಲ. ಬೇಗಂ ಸಾಬ, ನೀವು ಸುತ್ತಲೂ ಎಲ್ಲವನ್ನೂ ನೋಡುವ ರೀತಿ ಕಂಡು, ಇಲ್ಲಿ ಬರುವ ಕೆಲ ಪಾಕಿಸ್ತಾನಿಗಳು ಪ್ರತಿಯೊಂದನ್ನೂ ಸಂಶಯ ದೃಷ್ಟಿಯಿಂದಲೇ ನೋಡುವುದರಿಂದ, ನೀವೂ ಪಾಕಿಸ್ತಾನಿಯಿರಬಹುದೆಂದು ಕೇಳಿದೆ....''

''ನಾನು ಇಡೀ ಜಗತ್ತನ್ನೇ ಸಂಶಯ ದೃಷ್ಟಿಯಿಂದ ನೋಡುತ್ತೇನೆ....ಯಾರಿಗೆ ಗೊತ್ತು, ನೀವು ಕೂಡ ನನ್ನನ್ನು ಗುಪ್ತಚಾರಳಿರಬೇಕಂದು ಪೋಲಿಸ ಠಾಣೆಯಲ್ಲಿ ಬಂಧಿ ಮಾಡಿದರೆ, ಹುಚ್ಚಿಯೆಂದು ಹೆಸರಿಟ್ಟು ಹುಚ್ಚರ ಆಸ್ಪತ್ರೆಗೆ ಸೇರಿಸಿದರೆ, ನನ್ನ ಬೆನ್ನಲ್ಲಿ ಚೂರಿ ಹಾಕಿ ನನ್ನ ಹಣವನ್ನು ಗಡಿಯಲ್ಲಿ ಒಗೆಸಿದರೆ, ನನ್ನ ಆಭರಣ ದೋಚಿ ತಿಂದು ಹಾಕಾದರೆ, ನನ್ನನ್ನು ಮೋಸಗಾರ್ತಿಯೆಂದು ಹಿಡಿದು ಹಾಕಿದರೆ....ನನಗೆ ಕಲಂಕ ತಗಲುವ ಹಾಗೆ ನನ್ನೊಂದಿಗೆ ನೀವು ವರ್ತಿಸಿದರೆ....ನಾನು ಸಾವಿರಾರು ಪತ್ರ ಬರೆದರೂ, ಒಂದಕ್ಕೂ ಉತ್ತರ ಬರೆಯದೆ ಹೋದರೆ.....''

ಕ್ಲಾರ್ಕ್ ಗಾಬರಿಯಿಂದ ಮ್ಯಾನೇಜರನನ್ನು ಕರೆಯಲು ಎದ್ದ.

''ಗಾಬರಿಯಾಗಬೇಡಿ. ನಾನೀಗ ಸಂಪೂರ್ಣ ಚೆನ್ನಾಗಿದ್ದೇನೆ. ಇಲ್ನೋಡಿ

ಮೆಡಿಕಲ್ ಸರ್ಟಿಫಿಕೆಟ್....."ಎನ್ನುತ್ತ ಆಕೆ ತನ್ನ ಪರ್ಸ್ ತೆರೆದಳು.....ಮತ್ತೆ ಮುಚ್ಚಿದಳು.

"ನಾನೊಂದು ಫೋನ್ ಮಾಡಬಹುದೇ.....?"

"ಅವಶ್ಯ...." ಎಂದು ಕ್ಲಾರ್ಕ್ ಹೇಳಿದ.

ಹೆಣ್ಣುಮಗಳು ಟೆಲಿಫೋನ್ ಡಿರೆಕ್ಟರಿಯಲ್ಲಿ ನಂಬರ ಹುಡುಕ ತೊಡಗಿದಳು. ಕೆಲ ಕ್ಷಣಗಳ ನಂತರ ಆಕೆ ಒಂದು ನಂಬರ ಡೈಲ್ ಮಾಡಿದಳು....

"ಹಲೋ....ಹಲೋ....ಶೇಖ ತಾವುಸ್ ಇದ್ದಾರೆಯೇ ? ನಾನು ರಷ್ಕಮರ್ ಮಾತಾಡುತ್ತಿದ್ದೇನೆ...."

"ಓಹೋ....ರಷ್ಕಮರ್ ಸಾಹಿಬಾ, ಈ ಹುಣ್ಣಿಮೆಯ ಚಂದಿರ ಎಲ್ಲಿಂದ ಕಾಣಿಸಿಕೊಂಡ....ನೀವು ಕರಾಚಿಗೆ ಹೋಗಿದ್ದಿರೆಂದು ಕೇಳಿದ್ದೆ....."

"ಹಾಂ !....ಹೌದು.....ಇಂದೇ ಬೆಳಗ್ಗೆ ಹತ್ತು ಗಂಟೆಗೆ ಅಲ್ಲಿಂದ ಮರಳಿ ಬಂದೆ...."

ಇಪ್ಪತ್ತೈದು ವರ್ಷ ಮೊದಲು ಆಕೆ ಅಗಾಫರ್‌ಹಾದ್‌ನೊಂದಿಗೆ ಮುಂಬೈಗೆ ಬಂದಾಗ ಶೇಖ ಸಾಹೇಬನಲ್ಲಿ ಅದೆಷ್ಟೋ ಸಮಾರಂಭಗಳು ಏರ್ಪಟ್ಟಿದ್ದವು....ಶೇಖ ತಾವುಸ್ ಕೂಡ ಆ ಕಾಲದಲ್ಲಿ ಕಥೆಗಳನ್ನು, ಕವಿತೆಗಳನ್ನು ಬರೆಯುತ್ತಿದ್ದ ಹಾಗೂ 'ತಾವುಸ್' ಆತನ ಕಾವ್ಯನಾಮವಾಗಿತ್ತು. ಇತ್ತೀಚಿನ ದಿನಗಳಿಂದ ಸಾಹಿತ್ಯದ ಸಂಪರ್ಕ ಆತನಿಗಿಲ್ಲ...ಈಗ ಬಹು ದೊಡ್ಡ ಕಬ್ಬಿಣದ ವ್ಯಾಪಾರಿಯಾಗಿದ್ದಾನೆ....ಆದರೆ ಆಗಾಗ ಸಂಗೀತ, ಸಾಹಿತ್ಯಕ್ಕೆ ಸಂಬಂಧಿಸಿದ ಸಭೆ ಸಮಾರಂಭಗಳನ್ನು ಹಮ್ಮಿಕೊಳ್ಳುತ್ತಾನೆ....

"ಹಾಗಾದರೆ ಹೇಳಿ, ಯಾವಾಗ ಭೇಟಿ.....?" ಎಂದು ಅವನು ಕೇಳಿದ. "ಆಕಸ್ಮಿಕವಾಗಿ ಮನೆಯಲ್ಲಿ ನಾಳೆಯೇ ಒಂದು ಸಮಾರಂಭ ಇದೆ. ನಿಮ್ಮ ವಾಸ್ತವ್ಯ ಎಲ್ಲಿದೆ?"

"ನೂರಸ್ಸಲಾಮ ಪ್ರವಾಸಿ ಮಂದಿರ...."

"ಓಹೋ....." ಎಂದ.

ಒಂದು ವೇಳೆ ಓಬೆರಾಯ್, ಶೆರ್ಟನ್ ಅಥವಾ ತಾಜ ಹೋಟಲಿನಲ್ಲಿ ಇಳಿದು ಕೊಂಡಿದ್ದರೆ....ನಾನೇ ಸ್ವತಃ ಕಾರು ತೆಗೆದುಕೊಂಡು ಕರೆಯಲು ಬರುವೆ....ಎಂದು ಶೇಖ ತಾವುಸ್ ಹೇಳುತ್ತಿದ್ದ. ಈಗ ಕೊಂಚ ಅನಾಸಕ್ತನಾಗಿ ಉತ್ತರಿಸಿದ–"ನಾಳೆ ನೀವು ಏಳು, ಏಳೂವರೆ ಹೊತ್ತಿಗೆ ಬನ್ನಿ. ನಾನು ವರ್ಲಿ ಸೀಫೇಸ್‌ದಲ್ಲಿರುತ್ತೇನೆ. ನಿಮಗೆ ಸುಲಭವಾಗಿ ಬಸ್ ಸಿಗುತ್ತದೆ. ನನ್ನ ಅಡ್ರೆಸ್ ಬರೆದು ಕೊಳ್ಳಿ....."

ಮಾರನೆಯ ದಿನ ಸಾಯಂಕಾಲ, ಪ್ರವಾಸಿ ಮಂದಿರದ ಕ್ಲಾರ್ಕ್‌ನಿಂದ ಬಸ್ ನಂಬರ ತಿಳಿದುಕೊಂಡು ಒಂದು ಬಸ್ ಸ್ಟಾಪಿನಲ್ಲಿ ಹೋಗಿ ನಿಂತಳು. ಬಹಳ ದೊಡ್ಡ ಕ್ಯೂ ಇತ್ತು. ಅರ್ಧ ಗಂಟೆ ಕಳೆದ ನಂತರ ಒಂದು ಬೇರೆ ಬಸ್‌ನಲ್ಲಿ ಹತ್ತಿದಳು. ಆಕೆಗೆ

ಬೊಂಬೈಯ ರಸ್ತೆಗಳ ಪರಿಚಯವಿರಲಿಲ್ಲ. ಬೇರೊಂದು ಬಸ್‌ಸ್ಟಾಪ್‌ನಲ್ಲಿಳಿದಳು. ಅಲ್ಲಿಂದ ಮತ್ತೊಂದು ಬಸ್ ಏರಿದಳು. ಆ ಬಸ್ಸಿನವನು ಹಾಜಿ ಅಲಿ ಸ್ಟಾಪಿನಲ್ಲಿಳಿಸಿದ. ಆಕೆ ದಣಿದು ಹೋಗಿದ್ದಳು. ಕೊಂಚ ಸುಧಾರಿಸಿಕೊಳ್ಳಲು ಸಮುದ್ರದ ದಂಡೆಯಲ್ಲಿ ಕುಳಿತಳು. ಎದುರಿಗೇನೇ ಒಂದು ಎತ್ತರದ ಸ್ಥಳದ ಮೇಲೆ ಹಾಜಿ ಅಲ್ಲಿಯ ಸುಂದರ ಶ್ವೇತವರ್ಣದ ದರ್ಗಾ, ಬೆಳಕಿನ ಆಗರವಾಗಿ ಗೋಚರಿಸಿತು. ಗುರುವಾರದ ಸಂಜೆ ಅದು....ಬಹಳಷ್ಟು ಭಕ್ತರು ಸಾಲುಸಾಲಾಗಿ ದರ್ಗಾದತ್ತ ಹೊರಟಿದ್ದರು. ಆಕೆ ಅಲ್ಲಿಂದಲೇ ಪ್ರಾರ್ಥನೆ ಸಲ್ಲಿಸಿದಳು....ಹಾಗೂ ಓರ್ವ ಬುರ್ಖಾ ಹಾಕಿಕೊಂಡಿದ್ದ ಹೆಣ್ಣುಮಗಳಿಂದ ವರ್ಲಿ ಸೀಫೇಸ್‌ದ ದಾರಿ ಕೇಳಿಕೊಂಡು ನಡೆದುಕೊಂಡೇ ಹೊರಟಳು. ಕೆಲಹೊತ್ತಿನ ನಂತರ ಒಂದು ವೈಭವಪೂರ್ಣ ಸೌಧದ ಎದುರಿಗೆ ನಿಂತಳು. ಶೇಖ ತಾವುಸ್‌ನ ಸೊಗಸಾದ ಫ್ಲ್ಯಾಟ್ ಐದನೆಯ ಅಂತಸ್ತಿನಲ್ಲಿತ್ತು, ಡ್ರಾಯಿಂಗ್ ರೂಮಿನಲ್ಲಿ ಸಮಾರಂಭ ಭರ್ಜರಿ ಸಾಗಿತ್ತು...ರಷ್ಕ್‌ಕಮರ್ ತನ್ನ ಕೆದರಿದ ಕೂದಲುಗಳಲ್ಲಿ, ಸಾಮಾನ್ಯ ಸೀರೆಯಲ್ಲಿ, ಕಳೆದು ಹೋಗಿರುವ ಸೌಂದರ್ಯ, ವ್ಯಕ್ತಿತ್ವದಿಂದಾಗಿ ಮುನ್ಸಿಪಾಲ್ಟಿಯ ಸ್ಕೂಲ ಟೀಚರ ಹಾಗೆ ಕಾಣಿಸುತ್ತಿದ್ದಳು. ಅಲ್ಲಿದ್ದವರಲ್ಲಿ ಒಬ್ಬನಂತೂ ಕೇಳಿಯೇ ಬಿಟ್ಟ–''ಏನು ತಾವು ಯಾವುದಾದರೂ ಸ್ಕೂಲಿನಲ್ಲಿ ಓದಿಸುತ್ತೀರಾ.....?'' ಬೇಗಂ ತಾವುಸ್ ಕೂಡ ವಿಶೇಷ ಉತ್ಸಾಹ, ಆಸಕ್ತಿ ತೋರಿಸಲಿಲ್ಲ. ಒಂದೆರಡು ಗಜಲ್ ಕೇಳಿ ಅತಿಥಿಗಳು ಔಪಚಾರಿಕ ವಾಹವ್ವಾ....ವಾಹವ್ವಾ ಹೇಳಿ ಉಪೇಕ್ಷೆ ಮಾಡಿದರು...ಆಕೆ ಒಂದು ಮೂಲೆಯಲ್ಲಿ ಸುಮ್ಮನೆ ಕುಳಿತಿದ್ದಳು.....

ರಾತ್ರಿಯ ಹತ್ತುಗಂಟೆಯಾಗಿತ್ತು, ಜನ ಡಿನ್ನರ್‌ಗಾಗಿ ಎದ್ದರು. ಆಗ ಓರ್ವ ಮುಂದೆ ಬಂದು ಆಕೆಯೊಂದಿಗೆ ಮಾತಾಡತೊಡಗಿದ. ಅವಳು ಮನದಲ್ಲಿಯೇ ಅವನಿಗೆ ವಂದನೆ ಸಲ್ಲಿಸಿದಳು. ಪ್ಲೇಟ ತೆಗೆದುಕೊಂಡು ಅವನೊಂದಿಗೆ ಸಮುದ್ರದತ್ತ ಮುಖ ಮಾಡಿ ಒಂದೆಡೆ ಬಂದು ಕುಳಿತರು. ಆತ ಖಾನಸಾಬ ಖಾನಸಾಬ, ಅತ್ಯಂತ ಸಭ್ಯ, ಶಾಲೀನ ಮನುಷ್ಯನಾಗಿ ಕಾಣುತ್ತಿದ್ದ. ಊಟ ಮುಗಿದ ಕೂಡಲೇ ಆಕೆ ಖಾನ ಸಾಹೇಬನಿಂದ ವಿದಾಯ ಹೇಳಿದಳು ಅವನು–''ನನಗೊಂದು ಕೆಲಸಕ್ಕಾಗಿ ಸರಿಯಾಗಿ ಹನ್ನೊಂದೂವರೆ ಗಂಟೆಗೆ ಒಂದೆಡೆ ತಲುಪಬೇಕಾಗಿದೆ....ನಾನು ಕೋಲಾಬಾದಲ್ಲಿರು ತ್ತೇನೆ. ತಾವು ಎಲ್ಲಿಗೆ ಹೋಗುತ್ತೀರಿ....?'' ಎಂದು ರಷ್ಕಕಮರಳನ್ನು ವಿಚಾರಿಸಿದ.

''ಮಹ್ಮದ್ ಅಲಿ ರೋಡ.....''

''ನನಗೂ ಸೌತ್ ಬೊಂಬೈಗೆ ಹೋಗಲಿದೆ. ಆದರೆ ದಾರಿಯಲ್ಲಿ ಕೊಂಚ ಕೆಲಸವಿದೆ. ನಂತರ ನಾನು ತಮ್ಮನ್ನು ತಮ್ಮ ಸ್ಥಳಕ್ಕೆ ತಲುಪಿಸುತ್ತೇನೆ. ತಮಗೆ ಯಾವುದೇ ರೀತಿಯ ಆತಂಕವಿಲ್ಲ ತಾನೇ?''

ಕೆಳಗೆ ಬಂದು ಆಕೆ ಖಾನ ಸಾಹೇಬನ ಕಾರಿನಲ್ಲಿ ಕುಳಿತಳು. ಖಾನ್ ಸಾಹೇಬ ಇಂಜಿನ್ ಸ್ಟಾರ್ಟ ಮಾಡುತ್ತ ಹೇಳಿದ–''ಕಮರ್ ಸಾಹಿಬಾ, ನಾನು ಇಂಪ್ರೆನಾದಲ್ಲಿ Artistes ಬಗ್ಗೆ ವಿಮರ್ಶೆ ಬರೆಯುತ್ತೇನೆ. ತಮ್ಮನ್ನು ನೋಡಿದರೆ, ತಾವು ಕೇವಲ ಸಾಮಾನ್ಯ ಕವಯಿತ್ರಿ ಅನ್ನಿಸುವುದಿಲ್ಲ......ಪರಫಾರ್ಮಿಂಗ್ ಆರ್ಟಿಸ್ಟ್ ಇರ

ಬೇಕೆಂದೆನ್ನಿಸುತ್ತದೆ.......ಅಥವಾ ಇದ್ದಿರಬೇಕೆಂದೆನ್ನಿಸುತ್ತದೆ......ಈ ಸಮಯದಲ್ಲಿ ಯಾವುದೋ ಕಾರಣದಿಂದ ತುಂಬ ಚಿಂತೆಯಲ್ಲಿದ್ದೀರಿ....ನಾನು ಯಾವುದೇ ರೀತಿಯ ಸಹಾಯ ತಮಗೆ ಮಾಡಬಹುದೇ?''

''ತಾವು ಬಹುಶಃ ಕೇಳಿರಬೇಕು ನನ್ನ ಹಾಡುಗಳನ್ನು. ಒಂದು ಕಾಲದಲ್ಲಿ ನಾನು ರೇಡಿಯೋದಲ್ಲಿ ತುಂಬ ಹಾಡುತ್ತಿದ್ದೆ.''

ಖಾನ್‌ಸಾಬ ಕಾರು ನಡೆಸುತ್ತ ನಡೆಸುತ್ತ ಚುಟಕಿ ಬಾರಿಸಿ ಹೇಳಿದ–''ದೇರ್ ಯು ಆರ್....ನನ್ನ ಅನಿಸಿಕೆ ಎಂದೂ ಸುಳ್ಳಾಗುವುದಿಲ್ಲ...ಒಂದು ವೇಳೆ ತಮಗೆ ಸರಿ ಅನ್ನಿಸಿದರೆ, ತಮ್ಮ ತೊಂದರೆಯೇನೆಂಬುದನ್ನು ಹೇಳುತ್ತೀರಾ?.....ನನ್ನ ಈ ಲೈನ್‌ದಲ್ಲಿ ನಾನು ಆರ್ಟಿಸ್ಟ್‌ಗಳ ದುಃಖಮಯ ಜೀವನ ಬಹಳಷ್ಟು ಕಂಡಿದ್ದೇನೆ....ಮನುಷ್ಯ, ಮನುಷ್ಯನನ್ನು ಯಾವ ರೀತಿ ಪೀಡಿಸುತ್ತಾನೆಂದರೆ ಅವನ ನೀಚತನ, ಅಮಾನುಷತೆಯ ಕಂಡು ನನಗೀಗ ಅಚ್ಚರಿ ಎನ್ನಿಸುವುದಿಲ್ಲ....ಅಷ್ಟೊಂದು ದುಃಖಿ ಕಲಾವಿದರನ್ನು ಕಂಡಿದ್ದೇನೆ.....''

''ಇಲ್ಲ....ನನ್ನದೇನು ಹಾಗಿಲ್ಲ.....ನನ್ನ ಸ್ಥಿತಿ ಚೆನ್ನಾಗಿದೆ....ಕೇವಲ ಪ್ರವಾಸದ ದಣಿವು ಅಷ್ಟೇ.....''

ಓ ! ಆತ್ಮ ಗೌರವವುಳ್ಳ ಹೆಣ್ಣು ಮಗಳು....ಖಾನಸಾಬ ಮನಸ್ಸಿನಲ್ಲಿಯೇ ಯೋಚಿಸಿದ. ಮೌನವಾಗಿಯೇ ದಾರಿ ಸಾಗಿತು. ಮೆರಿನ್ ಡ್ರೈವ್‌ದಿಂದ ಸಾಗುವಾಗ ಆತ ವಾಚ್ ನೋಡಿಕೊಂಡು ಹೇಳಿದ–''ಬನ್ನಿ ಎಲ್ಲಿಯಾದರೂ ಕಾಫಿ ಕುಡಿಯೋಣ.'' ಅವರು ಓಬೇರಾಯ್ ತಲುಪಿದರು. ರೆಸ್ಟೋರಾನ್‌ದಲ್ಲಿ ಹೋಗಿ ಕಾಫಿಗೆ ಆರ್ಡರ್ ಕೊಟ್ಟು ಸುಮ್ಮನೆ ಕುಳಿತರು.....ಸಭ್ಯ ಹಾಗೂ ಅಂತಃಕರಣದ, ಅನುಕಂಪದ ಮನುಷ್ಯ....ವರ್ಮಾ ಮತ್ತು ಲತೀಫಖಾನ್‌ನ ಹಾಗೆ....ರಷ್ಕ್‌ಕಮರ್ ಮನದಲ್ಲಿಯೇ ಭಾವಿಸಿದಳು.....ಮತ್ತೆ ತಾನೇ ಎಲ್ಲ ಹೇಳಲಾರಂಭಿಸಿದಳು....

''ನನ್ನ ಗಂಡ ನನ್ನನ್ನು ಬಿಟ್ಟು ಲಂಡನ್‌ಗೆ ಹೋಗಿದ್ದರು. ನಾನು ಅವರ ಸಂಬಂಧಿಗಳ ಹತ್ತಿರ ಕರಾಚಿಗೆ ಹೋಗಿದ್ದೆ, ಮಗಳೊಂದಿಗೆ. ಅಲ್ಲಿ ಅವಳ ಮದುವೆ ಮಾಡಿದೆ. ಈಗ ವಾಪಸ್ ಬಂದಿದ್ದೇನೆ.''

ಅನುಭವಿ ಖಾನಸಾಬನಿಗೆ ಅವಳು ಸತ್ಯ ಹೇಳುತ್ತಿಲ್ಲವೆಂಬುದು ಆ ಕೂಡಲೇ ಗೊತ್ತಾಯಿತು. ಅವಳನ್ನು ಕಾಡಿಸಿ, ಪೀಡಿಸಿ ನಿಜ ಕೇಳುವುದಕ್ಕಿಂತ ಕರುಣೆಯಿಂದ ವಿಚಾರಿಸಿದ–''ಈಗ ಏನು ಮಾಡಬೇಕು ಎನ್ನುತ್ತಿದ್ದೀರಿ?''

''ಇನ್ನೂ ವಿಚಾರ ಮಾಡಿಲ್ಲ. ಲಖನೌಕ್ಕೆ ಹೋಗಿ ಯೋಚಿಸುತ್ತೇನೆ''.

''ತಾವು ಖವ್ವಾಲಿ ಹಾಡಲು ಇಚ್ಛೆ ಪಡುತ್ತೀರಾ?'' ಎಂದು ಕೇಳಿದ ಅವನಿಗೆ, ಮತ್ತೆ ಅನ್ನಿಸಿತು ಇವಳು ಸ್ಟೇಜ ಮೇಲೆ ಖವ್ವಾಲಿ ಹಾಡುವ ವಯಸ್ಸಿನವಳಲ್ಲ... ಎಂದು.

ರಷ್ಕ್‌ಕಮರ್ ಮುಗುಳ್ನಗುತ್ತ ಹೇಳಿದಳು–''ಈ ವಯಸ್ಸಿನಲ್ಲಿ ಖವ್ವಾಲಿ ಹಾಡಬಲ್ಲೆನೆ...?''

''ಪಿಕಿಲ್ಲ....''ಎಂದು ಖಾನ ಸಾಹೇಬ ಮಾತಿಗಾಗಿ ಮಾತಾಡಿದ.... ''ಷಕೀಲಾ ಬಾನು ಭೂಪಾಲಿ ಅದೆಷ್ಟೋ ವರ್ಷಗಳಿಂದ ಹಾಡುತ್ತಿದ್ದಾಳೆ...ನೂರಜಹಾ.... ರಜಿಯಾಬಾನು....ಶಕೀಲಾಬಾನು ಮತ್ತು ನೂರಜಹಾರಂತು ಇಂಗ್ಲಂಡ ಪ್ರವಾಸ ಕೂಡ ಮಾಡಿ ಬಂದರು....ಮತ್ತೆ ಅವನು ತನ್ನ ರಿಸ್ಟ್‌ವಾಚ್ ನೋಡಿ.... ''ಬನ್ನಿ.... ಹೋಗೋಣ...ಎದುರಿಗೆ ಹೋಗಬೇಕು....''

ಅವರು ಹೋಟೆಲಿನಿಂದ ಹೊರಗೆ ಬಂದು ನರಿಮನ್ ಪೋಯಿಂಟ್‌ದಲ್ಲಿಯ ಒಂದು ಥೇಟರಹಾಲ್‌ದಲ್ಲಿ ಹೋದರು....ಅಲ್ಲಿ ''ಕ್ಯಾಬರೆ ಕಾಂಪಿಟೇಶನ್'' ಆರಂಭವಾಗಿತ್ತು....ಸ್ಟೇಜ ಮೇಲೆ ಒಂದು ಹುಡುಗಿ ಬಂಗಾರ ವರ್ಣದ ವಿಗ್ ಹಾಕಿಕೊಂಡು ಬಳ್ಳಿಯ ಹಾಗೆ ಬಳುಕುತ್ತ ಕ್ಯಾಬರೆ ನೃತ್ಯ ಮಾಡುತ್ತಿದ್ದಳು......

''ಇವಳಿಗೆ ಬ್ಯಾಲೆ ಡ್ಯಾನ್ಸಿನ ಎ ಬಿ ಸಿ ಡಿ ಕೂಡ ಗೊತ್ತಿಲ್ಲ....'' ಎಂದು ಖಾನ ಸಾಹೇಬ ಬೇಸರದಿಂದಲೇ ಹೇಳಿದ.....

''ಜನ ಇಷ್ಟೊಂದು ದುಬಾರಿ ಟಿಕೆಟ್ ತೆಗೆದುಕೊಂಡು ಇದನ್ನು ನೋಡಲು ಬರುತ್ತಾರೆ.....''

''ಹಾಂ !.....ಹೌದು....ಹೆಚ್ಚಾಗಿ ಅಂಡರ್‌ವರ್ಲ್ಡ್‌ದ ಜನ....ಹಾಗೂ ಗಲ್ಫ್‌ದ ಅರಬರು...ಬನ್ನಿ ಹೋಗೋಣ....''ಎಂದ.

ಅವರು ಎದ್ದು ಹೊರಗೆ ಬಂದರು. ಮಳೆ ಸುರಿಯುತ್ತಲಿತ್ತು. ಸಮುದ್ರದಲ್ಲಿಯ ದೊಡ್ಡ ದೊಡ್ಡ ತೆರೆಗಳು ಬಂದು, ದಡದಲ್ಲಿದ್ದ ಗೋಡೆಗೆ ಅಪ್ಪಳಿಸುತ್ತಿದ್ದವು. ಬಿರುಗಾಳಿ ಬೀಸುತ್ತಲಿತ್ತು. ಹಾಗೂ ದಾರಿ ನಿರ್ಜನವಾಗಿತ್ತು. ಹಾಗೂ ಎಲ್ಲ ಕಡೆ ನಿಶ್ಶಬ್ದತೆ ಆವರಿಸಿತ್ತು. ಓವರ್‌ಕೋಟದಲ್ಲಿ ಮುಖ ಮುಚ್ಚಿಕೊಂಡು ಓರ್ವ ವ್ಯಕ್ತಿ ಮಳೆಯಲ್ಲಿ ಸುಮ್ಮನೆ ನಿಂತಿದ್ದವನು ರಷ್ಮಕುಮಾರಳಿಗೆ ಫ್ರೆಂಚ್‌ನಲ್ಲಿ ಪಿನೋ ಅಂದ.....ಅವಳು ಹೆದರಿ ಖಾನ್ ಸಾಹೇಬನ ಸಮೀಪಕ್ಕೆ ಸರಿದಳು.

''ಬೊಂಬ್ಬಯ ಅಂಡರ್‌ವರ್ಲ್ಡ್ ತುಂಬ ಭಯಾನಕವಾಗಿದೆ. ಬನ್ನಿ ಇಲ್ಲಿಂದ ಹೊರಟು ಹೋಗೋಣ......'' ಎಂದು ಖಾನಸಾಹೇಬ ಹೇಳಿದ.

''ಮೊಸಿಯೂ.....ಮಾದಾಮ್....''ಎಂದ ಆ ಮನುಷ್ಯ ತುಂಬ ನಿಸ್ಸಹಾಯ ನಾಗಿ ಹರಕು ಮುರಕು ಇಂಗ್ಲಿಷಿನಲ್ಲಿ ಮತ್ತೆ ಹೇಳಿದ– ''ನಾನು ಮಾರಿಷಸ್‌ದಿಂದ ಬಂದಿರುವೆ. ಯಾವುನೋ ಒಬ್ಬ ನನ್ನ ಕಿಸೆ ಕತ್ತರಿಸಿದ.....''

ಖಾನಸಾಹೇಬ ಮತ್ತು ರಷ್ಮಕುಮಾರ ಸುಮ್ಮನೆ ಕಾರಿನಲ್ಲಿ ಹೋಗಿ ಕುಳಿತರು. ಎದುರಿಗೆ ಕುಖ್ಯಾತ ಸ್ಮಗ್ಲರ್‌ನ ಕೆಡಿಲ್ಯಾಕ್ ಕಾರು ಬಂದು ನಿಂತಿತು. ಅವನು ತನ್ನ ಸಂಗಾತಿಗಳೊಂದಿಗೆ ತೂರಾಡುತ್ತ ಕೆಳಗಿಳಿದ....ಖಾನಸಾಹೇಬ ತನ್ನ ಕಾರು ಸ್ಟಾರ್ಟ ಮಾಡಿ–''ಬೊಂಬ್ಬಯ ಅಂಡರ್‌ವರ್ಲ್ಡ್....'' ಎಂದು ಮತ್ತೆ ಅಂದ.

''ಖಾನಸಾಹೇಬ ನನ್ನ ಮಗಳು ಕರಾಚಿಯಲ್ಲಿಯ ಅಂಡರವರ್ಲ್ಡ್‌ನಲ್ಲಿ ಕಾಣೆಯಾದಳು....''ಎಂದ ಅವಳು ಜೋರಾಗಿ ಅಳತೊಡಗಿದಳು....

ಖಾನಸಾಹೇಬ ಕಾರಿನ ವೇಗ ಕಡಿಮೆ ಮಾಡಿದ ಹಾಗೂ ವ್ಯಗ್ರವಾಗಿ—''ನನಗೆ ಸಂಪೂರ್ಣ ಘಟನೆ ತಿಳಿಸಿ....'' ಎಂದ. ಆಗ ಆಕೆ ಸಂಪೂರ್ಣ ಘಟನೆಗಳನ್ನು ಸಂಕ್ಷಿಪ್ತವಾಗಿ ತಿಳಿಸಿದಳು.

ನಂತರ ಸಿಪಾಯಿ ನನ್ನನ್ನು ಆಸ್ಪತ್ರೆಗೆ ತೆಗೆದುಕೊಂಡು ಹೋದರು ಹಾಗೂ ಜಾಪಾನಿ ಸಾಹೇಬನಿಗೆ ಸಮಾಚಾರ ತಲುಪಿಸಿದರು. ಆತ ಬಂದು ನನ್ನನ್ನು ಮೆಂಟಲ್ ಹೋಮ್‌ದಲ್ಲಿ ಸೇರಿಸಿದ. ಎಲೆಕ್ಟ್ರಿಕ್ ಷಾಕ್ ಕೊಡಲಾಯಿತು. ನಾಲ್ಕೈದು ತಿಂಗಳು ಚಿಕಿತ್ಸೆ ನಡೆಯಿತು. ಜಾಪಾನಿ ಎಲ್ಲ ಖರ್ಚನ್ನು ತಾನೇ ನೋಡಿಕೊಂಡ. ಅವರು ಟೋಕಿಯೋಕ್ಕೆ ಮರಳುವವರಿದ್ದರು. ಬೇರೆ ಜಾಪಾನಿ ಅಥವಾ ಅಮೇರಿಕನ್‌ರ ಮನೆಯಲ್ಲಿ ನೌಕರಿ ಕೊಡಿಸಿ ವ್ಯವಸ್ಥೆ ಮಾಡುವುದಾಗಿ ಹೇಳಿದರು. ಆ ಹೊತ್ತಿನಲ್ಲಿಯೇ ಮಸ್ಕತ್‌ದಿಂದ ಪೋಸ್ಟ್ ಮಾಡಿದ ನನಗೊಂದು ಪತ್ರ, ಜಮೀಲನ್ ಬರೆದುದು ಬಂತು. ಕೇವಲ ನಾಲ್ಕು ಸಾಲಿನ ಪತ್ರ.....ಅದರಲ್ಲಿ ಆಕ....ತಾನು ತುಂಬ ಅನಾರೋಗ್ಯ ದಿಂದಿರುವುದಾಗಿಯೂ, ತನಗೆ ಆರ್ಥಿಕ ಸಹಾಯ ನೀಡಲು ಹಾಗೂ ಶುಶ್ರೂಷೆಗಾಗಿ ಯಾರೂ ಇಲ್ಲವೆಂದು ತಿಳಿಸಿದ್ದಳು....ನಾನು ಇಡೀ ಹಗಲು—ಇಡೀ ರಾತ್ರಿ ಅಳುತ್ತಲಿದ್ದೆ....ಜಾಪಾನಿಗಳು ನನ್ನ ಈ ಸ್ಥಿತಿ ಕಂಡು ಹಾಗೂ ಆ ಪತ್ರದ ಆಧಾರದ ಮೇಲೆ ಹಿಂದೂಸ್ತಾನಕ್ಕೆ ಹೋಗಲು ಬೇಕಾದ ಪರವಾನಗಿ ಕಾಗದಗಳ ವ್ಯವಸ್ಥೆ ಮಾಡಿದರು. ಅದರಲ್ಲಿಯೇ ಒಂದು ವರ್ಷ ಕಳೆಯಿತು. ಪರವಾನಗಿ ಸಿಕ್ಕಕೂಡಲೇ ನನಗಾಗಿ ಟಿಕೇಟು ಖರೀದಿಸಿದರು....ಏರ್‌ಪೋರ್ಟಿಗೆ ಸ್ವತಃ ಬಂದು ನನ್ನನ್ನು ತಲುಪಿಸಿದರು. ನನ್ನ ನರನರಗಳಲ್ಲಿ ಅವರಿಗಾಗಿ ಕೃತಜ್ಞತೆ ಮನೆಮಾಡಿದೆ... ಅವರ ಒಳಿತಿಗಾಗಿ ಕೊನೆಯ ವರೆಗೂ ಪ್ರಾರ್ಥನೆ ಸಲ್ಲಿಸುತ್ತೇನೆ....ಆ ದಂಪತಿಗಳು ಸುಖವಾಗಿರಲಿ....ದೇವರೇ.....

''ಹೊರಡಲು ಒಂದು ದಿನ ಮೊದಲು ಮಾ ಪಾರಾಗೆ ಖುದಾಹಾಫೀಜ—ಗುಡ್ ಬಾಯ್—ಹೇಳಲು ಮದುಗಾಡಿಗೆ ಹೋಗಿದ್ದೆ....ಬಹಳ ಹೊತ್ತಿನವರೆಗೆ ಆಕೆಯ ಮಣ್ಣಿನ ಗೋರಿಯ ತಲೆಯ ಕಡೆ ಕುಳಿತುಕೊಂಡಿದ್ದೆ.....ಒಮ್ಮೆಲೇ ಗದ್ದಲ ಕೇಳಿ ಬಂತು...ಯಾವುದೋ ವಿ. ಐ. ಪಿ. ಯ ಹೆಣ ತರುತ್ತಲಿದ್ದರು. ಟೆಲಿವಿಜನ್ ಕ್ಯಾಮರಾ, ಪ್ರೆಸ್ ರಿಪೋರ್ಟರ್ಸ್, ಹೂಗಳ ದೊಡ್ಡ ಗಾಲಿ. ಬಿಳಿಯ ಜಾರ್ಜೆಟ್ ಸೀರೆ ಉಟ್ಟು ಬಿಳಿಯ ಸ್ಯಾಂಡಲ್ ಹಾಕಿಕೊಂಡು, ಬಿಳಿಯ ಪರ್ಸ್‌ತೂಗು ಬಿಟ್ಟುಕೊಂಡು, ಕರಿಯ ಗಾಗಲ್ ಹಾಕಿಕೊಂಡು, ತಿಳುವಾದ ಮೇಕಪ್ ಮಾಡಿಕೊಂಡು, ಸೆರಗಿನಿಂದ ಮುಖಮುಚ್ಚಿಕೊಂಡು, ನೂರಾರು ಹೆಣ್ಣು ಮಕ್ಕಳು ಆ ಹೆಣದ ಜೊತೆಗೆ ಬರುತ್ತಿದ್ದರು....ನಾನು ಬಸ್‌ಸ್ಟಾಪ್ ಕಡೆ ಹೋಗಲೆಂದು ಎದ್ದೆ....ದಾರಿಯುದ್ದಕ್ಕೂ ಬರುತ್ತಿದ್ದ ಬಹು ಬೆಲೆಯ ಕಾರುಗಳ ಕಾರವಾನ್....ಅವೆಲ್ಲ ಹೋಗಲೆಂದು ನಾನು ದಾರಿಯ ಬದಿಯಲ್ಲಿ ನೆಟ್ಟಿದ್ದ ಮೈಲುಗಲ್ಲಿನ ಮೇಲೆ ಕುಳಿತೆ...ಒಂದು ಕಾರಿನಿಂದ ಬಿಳಿ ಉಡುಪು ಹಾಗೂ ಕಪ್ಪು ಕನ್ನಡಕ ಧರಿಸಿದ ಬಿರ್ನ ಬೇಗಂ ಇಳಿದಳು...ನನ್ನನ್ನು ಭಿಕಾರಿಯೆಂದು ತಿಳಿದು ನನ್ನೆಡೆಗೆ ಕೆಲವು ರೊಕ್ಕ ಒಗೆದಳು....ಬಲ್ಕಿಯಾಂ ಲೇಸಿನ

ಬಿಳಿಯ ಸೂಕ್ಷ್ಮ ಕರವಸ್ತ್ರದಿಂದ ತನ್ನ ಮೂಗಿನ ತುದಿ ಒರೆಸುತ್ತ ಮುಂದೆ ಹೋದಳು....."

"ರಷ್ಮಿಕಮಾರ್....ತಾವು ಈಗ ತಾನೇ ಹೇಳಿದಿರಿ...ನಿಮಗೊಬ್ಬ ಮಗನೂ ಇದ್ದಾನೆಂದು...."

"ಹಾಂ !.....ಹೌದು....ಅವನನ್ನು ಸ್ಕೂಲಿಗೆ ಕಳಿಸಿ ಓದಿಸಲು ಬಹಳ ಪರಿಶ್ರಮ ಪಟ್ಟೆ....ಆದರ ಅವನು ಲಖನೌದ ದಿನಗಳಲ್ಲೇ ಅವಾರಾ...ಉಡಾಳನಾಗಿ ತಿರುಗುವ ಹವ್ಯಾಸ ಬೆಳಸಿಕೊಂಡ...ಇತ್ತೀಚೆಗೆ ಲಖನೌದಿಂದ ಕರಾಚಿಗೆ ಬಂದವರು, ಅವನು ಈಗ ಬೊಂಬೈಯಲ್ಲಿ ದಾದಾಗಿರಿ ಮಾಡುತ್ತಿದ್ದಾನೆಂದು ಹೇಳಿದರು....ಇಲ್ಲಿಗೆ ಬಂದಾಗಿನಿಂದ, ಅವನಿಗಾಗಿ ಸುತ್ತಲೂ ನೋಡುತ್ತಿದ್ದೇನೆ....ಎಲ್ಲಿಯಾದರೂ ಕಂಡಾನೆಂದು... ಆದರೆ ಇಂಥ ಆಕಸ್ಮಿಕಗಳು, ಘಟನೆಗಳು ಕೇವಲ ಹಿಂದೂಸ್ತಾನಿ ಫಿಲ್ಮಗಳಲ್ಲಿ ಮಾತ್ರ ಘಟಿಸುತ್ತವೆ....."

ಈಗ ಕಾರು ನೂರಸ್ಸಲಾಮ ಪ್ರವಾಸಿಮಂದಿರ ಇರುವ ಛಂಟಿಬಾಜಾರ ತಲುಪಿತ್ತು. ಖಾನ್‌ಸಾಹೇಬ ಮೆಲ್ಲಗೆ ಹೇಳಿದ–"ತಾವು, ಪಾಕಿಸ್ತಾನದಿಂದ ಎಷ್ಟು ಹಣ ತಂದಿರಲಿಕ್ಕಿಲ್ಲ...."

"ಒಂದು ಪೈಸ ಕೂಡ ಇಲ್ಲ...ನನ್ನ ಕೈಯಲ್ಲಿ...ಇಲ್ನೋಡಿ....ಎರಡು ಬಂಗಾರದ ಬಳೆಗಳಿವೆ. ನಾಳೆ ಬೆಳಗ್ಗೆ ಅವುಗಳನ್ನು ಮಾರಾಟ ಮಾಡಿ ಲಖನೌ ಟಿಕೆಟ್ ಖರೀದಿಸುತ್ತೇನೆ. ಪ್ರವಾಸಿಮಂದಿರದ ಬಾಡಿಗೆ ತುಂಬ ಕಡಿಮೆಯಾಗಿದೆ ಕೇವಲ ಮೂರು ರೂಪಾಯಿ...."ಎಂದಳು.

ಖಾನಸಾಹೇಬನ ಕೈ ಅವನ ಕೋಟಿನ ಜೇಬಿನತ್ತ ಹೋಯಿತು–"ನಾನು ಮುಂದಿನ ವಾರ ಅಜ್ಮೀರದ ಖವ್ವಾಲಿಗಳ ಒಂದು ಪಾರ್ಟಿ ಕರೆದುಕೊಂಡು ಮಿಡ್ಲ್ ಈಸ್ಟ, ಮತ್ತು ಇಂಗ್ಲಂಡ್‌ಗೆ ಪ್ರವಾಸ ಹೋಗಲಿದ್ದೇನೆ. ಆ ಪ್ರವಾಸ ತುಂಬ ಖರ್ಚಿನದಾಗಿದೆ...."ಎನ್ನುತ್ತ ಅವನು ಜೇಬಿನಿಂದ ಪರ್ಸ್ ತೆಗೆದ, ಹಾಗೂ ಖಾನ್ ಸಾಹೇಬ ಹೇಳಿದ–"ಈ ಸಮಯದಲ್ಲಿ ತಮಗೆ ಇಷ್ಟನ್ನು ಮಾತ್ರ ಕೊಡಬಲ್ಲೆ.... ಓರ್ವ ಅನುಕಂಪಿತ ಸ್ನೇಹಿತನಿಂದ ಸ್ವೀಕರಿಸಬೇಕು...."ಎನ್ನುತ್ತ ಪರ್ಸಿನಿಂದ ಕೆಲ ನೋಟು ತೆಗೆದ....

**-13-**

ಸಮೀಪದ ಮಸೀದೆಯಲ್ಲಿ ರಾತ್ರಿಯ ನಮಾಜು ನಡೆದಿತ್ತು. ಆಗ ಆಕೆ ತಟ್ಟಿನ ಪರದೆ ಸರಿಸಿ ತನ್ನ ಅಂಗಳದಲ್ಲಿ ಕಾಲಿಟ್ಟಳು....ಅಮೃತಫಲದ ಗಿಡದ ಟೊಂಗೆಗೆ ಸೈಕಲ್ ರಿಕ್ಷಾದ ಹಳೆಯ ಟ್ಯೂಬ್ ಮತ್ತು ಟೈರ್ ಇಳಿ ಬಿಟ್ಟಿದ್ದು ಕಾಣಿಸಿತು. ಅಷ್ಟಿಗೆ ಮನೆಯ ಮುಂದೆ ಮೂರು ನಾಲ್ಕು ಹುಡುಗರು ಆಡುತ್ತಿದ್ದರು...ಒಬ್ಬಾಕೆ ಒಳಗಿನಿಂದ– "ಯಾರು?" ಎಂದು ಕೂಗಿದಳು....ತನ್ನ ಸಾಮಾನುಗಳನ್ನು ಒಂದೆಡೆಯಿಟ್ಟು–

“ಜಮೀಲಿನ್....ಜಮೀಲಿನ್.....” ಎಂದು ಒದರುತ್ತ ತನ್ನ ಕೋಣೆಯತ್ತ ಓಡಿದಳು. ಓಡುತ್ತಿರುವಂತೆ ಹೊಸಲಿಗೆ ಕಾಲು ತಾಕಿ ಬೆರಳಿಗೆ ನೋವಾಯಿತು. ಒಳಗೆ ಸ್ಟೂಲ್ ಮೇಲೆ ಇರಿಸಿದ್ದ ಲಾಟೀನ್ ಮಂದವಾಗಿ ಉರಿಯುತ್ತಲಿತ್ತು....

“ಜಮೀಲೀನ್....ಚಿಕ್ಕಮ್ಮ....ನಾನು, ಇದೋ ಬಂದಿದ್ದೇವೆ.....” ಎಂದು ಕೂಗಿಕೊಂಡಳು.

ಮುಪ್ಪಾನು ಮುದುಕಿ, ಒಣಗಿ ಹೋದ ದೇಹದ ಹರಮುಚಿ ಚಿಕ್ಕಮ್ಮ, ಕೆಟ್ಟ, ಹೊಲಸಾದ ಹಾಸಿಗೆ ಮೇಲಿಂದ, ಹೊಗೆಯ ತಳ್ಳಿಗಿನ ಗೆರೆಯಂತೆ ಎದ್ದಳು. ಆಕೆಯ ಪಕ್ಕದಲ್ಲಿದ್ದ ಜಮೀಲೀನಳ ಪಲ್ಲಂಗ ಖಾಲಿಯಿತ್ತು, ಅವಳ ಆಸರೆಯ ಕೋಲುಗಳು ಕೋಣೆಯ ಒಂದು ಮೂಲೆಯಲ್ಲಿದ್ದವು.....ರಷ್ಕಕಮರ್‌ಳ ಹೃದಯ ಧಸಕ್ಕೆಂದಿತು.....

“ಚಿಕ್ಕಮ್ಮ ಸಲಾಮು....” ಎನ್ನುತ್ತ ಅವಳು ಪಲ್ಲಂಗದ ಪಟ್ಟಿಯ ಮೇಲೆ ಕುಳಿತು ಚಿಕ್ಕಮ್ಮನನ್ನು ಅಪ್ಪಿಕೊಂಡಳು....ಜೋರಾಗಿ ಅಳುತ್ತಲೇ ಕೇಳಿದಳು–

“ಚಿಕ್ಕಮ್ಮ....ಜಮೀಲೀನ.....ಎಲ್ಲಿ .....ಎಲ್ಲಿ ಜಮೀಲೀನ್.....?”

ಆಗ ಮನೆಯಲ್ಲಿದ್ದ ಹೆಣ್ಣು ಮಗಳು ಹೊರಗೆ ಬಂದಳು, ತನ್ನ ಮಕ್ಕಳೊಂದಿಗೆ. ರಷ್ಕ್‌ಕಮರ್‌ಳ ಹೊರಗಿದ್ದ ಸಾಮಾನುಗಳನ್ನು ತಂದು ಒಳಗಿರಿಸಿದಳು. ಹೊಲಸಾದ ದುಪಟ್ಟಾದಿಂದ ಬೆವರು ಒರಸಿಕೊಳ್ಳುತ್ತ ಹೊಸಲಿಯ ಹತ್ತಿರ ನಿಂತು ಹೊಸದಾಗಿ ಬಂದ ಮನೆಯ ಒಡತಿಯನ್ನು ನೋಡತೊಡಗಿದಳು.....

“ಚಿಕ್ಕಮ್ಮ....ಜಮೀಲೀನ್....?” ರಷ್ಕ್‌ಕಮರ್ ನೊಂದ ದನಿಯಲ್ಲಿ ಕೇಳಿದಳು.

“ಅಲ್ಲಾನ ಮನೆಗೆ ಹೋದಳು...” ಚಿಕ್ಕಮ್ಮ ಕಣ್ಣೀರು ಸುರಿಸುತ್ತ ಹೇಳಿದಳು.... “ಆಕೆಯ ಎರಡೂ ಕಾಲು ಉಪಯೋಗಕ್ಕೆ ಬರದಹಾಗಾದವು.....ದೇವರು ಆಕೆಯ ಕಷ್ಟವನ್ನು ಇಲ್ಲವಾಗಿಸಿದ....” ಎಂದಳು “ಆಕೆಗೆ ಅಪ್ಪಾಮುವುದು ಸಾಧ್ಯವಾಗಲಿಲ್ಲ... ಇವರು ಡಾಗದರನನ್ನು ಕರೆದುಕೊಂಡು ಬಂದರು....ಇಡೀ ದೇಹದಲ್ಲಿ ಹುಣ್ಣಾಗಿವೆ.... ಶರೀರದಲ್ಲಿ ಏನೂ ಉಳಿದಿಲ್ಲ...ಕೀಲುಗಳೆಲ್ಲ ಬಿಗಿದುಕೊಂಡಿವೆ.....ಎಂದರು,” ಎಂದು ಬಾಗಿಲದಲ್ಲಿ ನಿಂತ ಹೆಣ್ಣುಮಗಳು ಹೇಳಿದಳು.

ರಷ್ಕ್‌ಕಮರ್ ತಲೆಯೆತ್ತಿ ಅವಳನ್ನು ನೋಡಿದಳು....

“ಕೊನೆಯ ಗಳಿಗೆಯವರೆಗೂ ಅವಳು ನಿನ್ನ ಪ್ರತೀಕ್ಷೆಯಲ್ಲಿದ್ದಳು.....ಅವಳು ಸತ್ತು ಇದೀಗ ಒಂದು ವರ್ಷವಾಗಲಿದೆ.....” ಎಂದು ಹೇಳಿದಳು ಚಿಕ್ಕಮ್ಮ.

ರಷ್ಕ್‌ಕಮರ್, ಸರತಿಯಂತೆ ಅವರಿಬ್ಬರ ಮುಖ ನೋಡುತ್ತಿದ್ದಳು. ಕಣ್ಣೀರ ಒಂದು ಹನಿಯೂ ಅವಳ ಕಣ್ಣಿಂದ ಉದುರಲಿಲ್ಲ.....ಯಾವುದೇ ಭಾವುಕತೆ ಇಲ್ಲದ ದನಿಯಲ್ಲಿ ಕೇಳಿದಳು–“ಚಿಕ್ಕಮ್ಮ....ನೀವು ನನಗೆ ತಿಳಿಸಲಿಲ್ಲ....”

“ಆಕೆಗೆ ಜಪ್ಪಾದುದನ್ನು ತಿಳಿಸುವ ಪತ್ರವನ್ನು ಬತೂಲಳ ಮ್ಯುದುನ ಮಾಸ್ತರ್‌ಗೆ ಹೊರಟಾಗ ಅವನ ಕೈಯಲ್ಲಿ ಕಳಿಸಿತ್ತು, ಅಲ್ಲಿಂದ ನಿನಗೆ ಪೋಸ್ಟ್ ಮಾಡಲು....ಅವನು

ಕೂಡ ಅಲ್ಲಿಗೆ ಹೋದ ಮೇಲೆ ನಾಪತ್ತೆ...ನಮ್ಮ ಬಂಧು ಯಾರಿದ್ದಾರ ಯುರೋಪ ದಲ್ಲಿ...ಅವರ ಮುಖಾಂತರ ಪತ್ರ ವ್ಯವಹಾರ ಮಾಡಲು....''

ರಷ್ಕ್‌ಕಮರ್ ತಲೆ ಬಾಗಿಸಿ ಜಮಾಲೀನ್‌ಳ ಖಾಲಿ ಪಲ್ಲಂಗವನ್ನು ದಿಟ್ಟಿಸು ತ್ತಿದ್ದಳು...ವಿಚಿತ್ರವಾಗಿದೆ. ಜಮಾಲೀನಳ ಸಾವಿನ ಸುದ್ದಿ ಕೇಳಿಯೂ ನನ್ನ ಕಣ್ಣಿಂದ ಕಣ್ಣೀರು ಸುರಿಯಲಿಲ್ಲ...ಏನು ಮಾ ಪಾರಾಳ ಸಾವಿನಿಂದ....ಅಲ್ಲ.... ಕೋಲೆ ಯಿಂದ....ಕಣ್ಣೀರಿನ ಎಲ್ಲ ಸ್ಟಾಕ್ ಮುಗಿದೇ ಹೋಯಿತೇನು....ನಾನು ಅಳದಿದ್ದರ ಜೀವಿಸುವುದು ಹೇಗೆ?....ಒಮ್ಮೆಲೇ ಅವಳಿಗೆ ಜಮುನ್ ಕಾಕಾ ನೆನಪಾದ....ಬಹುಶಃ ನಮಾಜ ಮುಗಿಸಿ ಇನ್ನೂ ಮಸೀದೆಯಿಂದ ಬಂದಿರಲಿಕ್ಕಿಲ್ಲ....

''ಚಿಕ್ಕಮ್ಮ.....ಚಿಕ್ಕಪ್ಪ ಹೇಗಿದ್ದಾರೆ....?''

''ಯಾರು....ನಿನ್ನ ಚಿಕ್ಕಪ್ಪ.....ಅವರು ತೀರಿ ಹೋಗಿ ಐದು ವರ್ಷಗಳಾದವು... ಸತ್ತ ಜಮಾಲೀನ್ ನಿನಗೆ ಆಗ ಪತ್ರದಲ್ಲಿ ಎಲ್ಲ ತಿಳಿಸಿದ್ದಳು.....''

''ನನಗಾವ ಪತ್ರಗಳೂ ಸಿಕ್ಕಿಲ್ಲ...ಎಲ್ಲಿಂದಲೂ ಯಾವ ಪತ್ರಗಳೂ ಬಂದಿಲ್ಲ...ನನ್ನ ಹೆಸರಿಗೆ....''

ಹರ್‌ಮುಜಿ ಚಿಕ್ಕಮ್ಮ....ಜಮುನ್ ಚಿಕ್ಕಪ್ಪ.....ರಷ್ಕ್‌ಕಮರ್ ಲಖನೌವಿ.... ಜಮೀಲ ಅಲ್ನಿಸಾ ಬೇಗಂ ಉರ್ಫ್ ಕುಮಾರಿ ಜಲಬಾಲಾ ಲಹರಿ....ಮಾ ಪಾರಾ ಖಾನಮ್....ನಾವೆಲ್ಲ ಒಂದು ಹುದುಲಿನಲ್ಲಿ ಸಿಕ್ಕಿಕೊಂಡಿದ್ದೇವೆ....ಸಿಕ್ಕಿಕೊಂಡಿದ್ದವು.... ಹುದುಲಿನಲ್ಲಿ ಸಿಕ್ಕವನು ಹೊರಗೆ ಬರಲು ಕೈಕಾಲು ಬಡಿಯುತ್ತಾನೆ....ಅಳುವುದಿಲ್ಲ... ಅವನಿಗೆ ಅಳಲು ಪುರುಸತ್ತೇ ಇರುವುದಿಲ್ಲ.....ಅವನು ಹುದುಲಿನಿಂದ ಮೇಲೆ ಬರುವ ಹಂಚಿಕೆ ಮಾಡುತ್ತಿರುತ್ತಾನೆ....ಜಮುನ್ ಕಾಕಾ....ಜಮೀಲ ಅಲ್ನಿಸಾ.....ಮಾ ಪಾರಾ ಖಾನಮ್....ಮೂವ್ವರೂ ಹುದುಲಿನಲ್ಲಿ ಹುಗಿದು ಹೋದರು.....ಅವಳು ತನ್ನ ಒಣಗಿದ ಕಣ್ಣುಗಳ ಮೇಲೆ ಬೆರಳಾಡಿಸಿದಳು.....

''ಜಮಾಲೀನ....ಯಾವಾಗ.....ಹೇಗೆ ಸತ್ತಳು.....ಚಿಕ್ಕಮ್ಮ.....?''

''ಮನುಷ್ಯ ಹೇಗೆ ಸಾಯುತ್ತಾನೆ....ಮಗಳೇ? ಸತ್ತು ಹೋಗುತ್ತಾನೆ. ಅಷ್ಟೆ, ಜಮಾಲೀನ್ ರಾತ್ರಿ ಸತ್ತು ಹೋದಳು....ತಾರೀಕು, ತಿಂಗಳು ನೆನಪಿಲ್ಲ. ಬಹಳ ಮಳೆಯಿತ್ತು....ಮನೆಯಲ್ಲಿ ಹೆಣಕ್ಕೆ ಹೊದ್ದಿಸಲು ಅರಿವೆಯಾಗಲಿ, ಹುಗಿಯುವ ಖರ್ಚಿಗಾಗಿ ಹಣವಾಗಲಿ.....ಏನೂ ಇರಲಿಲ್ಲ....ಬಫಾತಿ ಎಲ್ಲಿಯೋ ಇಪ್ಪತ್ತು ರೂಪಾಯಿ ಸಾಲ ತಂದ....ಓಣಿಯವರಲ್ಲಿ ಚಂದಾ ಕೇಳಲೇ.....? ಎಂದ''

''ಬಫಾತಿ.....ಯಾರು?''

''ರಫ್‌ಜೀನಳ ಗಂಡ.....ರಿಕ್ಷಾ ಹೊಡೆಯುತ್ತಾನೆ.....ಜಮಾಲೀನ್‌ಳು ಅವನಿ ಗೊಂದು ಕೋಣೆ ಬಾಡಿಗೆ ಕೊಟ್ಟಿದ್ದಳು. ಅವಳು ಹಾಸಿಗೆ ಹಿಡಿದ ಮೇಲೆ ಹಾಪಲು ಹೊರಗ ಹೋಗುತ್ತಿರಲಿಲ್ಲ. ಹವರ್ ಸಾಹೇಬ ಮತ್ತು ಸದಫ್ ಆರಾ ಸಹಾಯ ಮಾಡುತ್ತಿದ್ದರು....ಹವರ್ ಮದುವೆ ಮಾಡಿಕೊಂಡು ಲಖನೌ ಬಿಟ್ಟು ಹೋದ....

ನವಫ್ ಯಾವನೋ ವಿದೇಶೀಯವನೊಂದಿಗೆ ಯುರೋಪಕ್ಕೆ ಹೊರಟು ಹೋದಳು....ಬಫಾತಿ ಮಸೀದೆಯಲ್ಲಿ ಹೋಗಿ ಚಂದಾ ಕೂಡಿಸುವುದಾಗಿ ಹೇಳಿದ.... ಆದರ ನನ್ನ ಮನಸ್ಸು ಒಪ್ಪಲಿಲ್ಲ....ಅವನನ್ನು ಆಗಾಫರ್‌ಹಾದರಲ್ಲಿಗೆ ಕಳಿಸಿದೆ.... ಇಂದು ಬಂದ ಮೇಲೆ ಇನ್ನೆಂದೂ ಬರುವುದಿಲ್ಲವೆನ್ನುವ ಹಾಗೆ ಮಳೆ ಸುರಿಯುತ್ತಿತ್ತು.... ಫರ್ ಹಾದಮಿಯ್ಯಾ ಅನಾರೋಗ್ಯದಿಂದ ಮಲಗಿದ್ದ ಆದರೂ ತನ್ನ ಮುನ್ನಿಯ ಕೈಯಲ್ಲಿ ಹಣ ಕೊಟ್ಟು ಕಳಿಸಿದ....ಅಂತ್ಯಕ್ರಿಯೆಯ ಎಲ್ಲ ವ್ಯವಸ್ಥೆ ಅವನೇ ಮಾಡಿದ.... ಬಡಮಾಳಿಯಲ್ಲಿ ಹಣ ಒಯ್ದು ಹುಗಿದು ಬಂದ...."

"ಈಗ ಜೀವನೋಪಾಯ ಹೇಗೆ ನಡೆಯುತ್ತದೆ? ದಿವಂಗತ ಜಮಾಲೀನ ಹಾಸಿಗೆಯಲ್ಲಿ ಕುಳಿತೇ ಕೈ ಕುಸುರಿನ ಕೆಲಸ ಮಾಡಿ ತಿಂಗಳಿಗೆ ಇಪ್ಪತ್ತು ರೂಪಾಯಿ ಸಂಪಾದಿಸುತ್ತಿದ್ದಳು. ತಿಂಗಳಿಗೆ ಹದಿನೈದು ರೂಪಾಯಿ ಬಫಾತಿ ಬಾಡಿಗೆ ಕೊಡುತ್ತಿದ್ದ. ಈಗ ಜಮಾಲೀನ ಸತ್ತ ಮೇಲೆ ಬಾಡಿಗೆ ಕೊಡುವುದರ ಬದಲಾಗಿ ಎರಡೂ ಹೊತ್ತು ಊಟ ಮಾಡಿಸುತ್ತಾರೆ....ಅವನಿಗೂ ರಿಕ್ಷಾ ಎಳೆ ಎಳೆದು ಟಿ. ಬಿ. ಆಗಿದೆ. ಅವನ ದುಡಿಮೆಯಿಂದ ಅವರಿಗೇ ಸಾಲುತ್ತಿಲ್ಲ. ನಾಲ್ಕು ಜನ ಮಕ್ಕಳು, ಗಂಡ ಹೆಂಡತಿ ಇವರಿಬ್ಬರು. ಇವರಲ್ಲಿಯೇ ಒಂದು ವರ್ಷದಿಂದ ನನ್ನ ಜೋಪಾನ ಮಾಡುತ್ತಿದ್ದಾರೆ... ನೀನು ಈ ಮನೆ ಖರೀದಿ ಮಾಡಿ ಹೋದದ್ದು ಒಳ್ಳೆಯದಾಯಿತು. ಇಲ್ಲದಿದ್ದರೆ ಇದರ ಬಾಡಿಗೆ ಬೇರೆ ಎಲ್ಲಿಂದ ತರಬೇಕಾಗಿತ್ತು...."ಇಷ್ಟು ಹೇಳುವುದರೊಳಗಾಗಿ ಆಕೆಗೆ ಮಾ ಪಾರಾಳ ನೆನಪಾಯಿತು....ಕೇಳಿದಳು–"ಷ...ಕಮರನ್....ಬಿಟಿಯಾ ಎಲ್ಲಿ... ಆಕೆ ನಿನ್ನೊಂದಿಗೆ ಬರಲಿಲ್ಲವೇನು......?"

"ಮಾ ಪಾರಾಳ ಮದುವೆ ಕರಾಚಿಯಲ್ಲಿ ಆಯಿತು ಚಿಕ್ಕಮ್ಮ...ಬಹಳ ಒಳ್ಳೆಯ ಹುಡುಗ ಸಿಕ್ಕ....ಸಚ್ಚ ಚಾರಿತ್ರ್ಯವಾನ್, ವಿದ್ಯಾವಂತ, ಒಳ್ಳೇ ಪಗಾರ ಪಡೆಯುತ್ತಾನೆ....." ಎಂದು ರಷ್ಕ್‌ಕಮರ ವಿಚಿತ್ರ ದನಿಯಲ್ಲಿ ಉತ್ತರಿಸಿದಳು.

"ದೈವೀಕೃಪೆ....ದೇವರೇ ನಿನ್ನದು ಮಹದುಪಕಾರವಾಯಿತು...ಅಲ್ಲಾ... ಮಹದುಪಕಾರವಾಯಿತು....." ಎನ್ನುತ್ತ ಆಕೆ ಪಲ್ಲಂಗದಿಂದ ಏಳತೊಡಗಿದಳು......

"ಎಲ್ಲಿಗೆ ಹೋಗುವೆ?"

"ಮಾ ಪಾರಾ ಹುಟ್ಟಿದಾಗಿನಿಂದ, ಆಕೆಯ ಮದುವೆಗಾಗಿ ಹದಿನಾಲ್ಕು ಸಲ ನಮಾಜ ಮಾಡುವುದಾಗಿ ಬೇಡಿಕೊಂಡಿದ್ದ....."

"ಹಾಗಾದರೆ ಈಗ ಎಲ್ಲಿಗೆ ಹೊರಟಿರುವೆ ?"

"ನಮಾಜ ಮಾಡುವುದಕ್ಕಾಗಿ ಕೈಕಾಲು ತೊಳೆದುಕೊಳ್ಳಲು....."

"ಚಿಕ್ಕಮ್ಮ ಹಾಯಾಗಿ ಮಲಗಿಕೊಳ್ಳಿ....ನಾಳೆ ಮಾಡಿದರಾಯಿತು...." ಎನ್ನುತ್ತ ಆಕೆ ಹರಮುಜಿ ಬೇಗಮ್‌ಳನ್ನು ಮತ್ತ ಹಾಸಿಗೆಯ ಮೇಲ ಮಲಗಿಸಿದಳು....ಆದರ ಆಕೆ ಮತ್ತೆ ಎದ್ದು ಕೂತಳು....ರಷ್ಕಕಮರ ಆಕೆಯ ಮಿಸಾರ ಬೇರದ ತಿರುಗಿಸಲು ಕೇಳಿದಳು....

''ಆಗಾ ಫರ್‌ಹಾದ್ ಅನಾರೋಗ್ಯದಿಂದ ಮಲಗಿದ್ದಾನೆಂದು ಹೇಳುತ್ತಿದ್ದ.....''

''ಓ ! ಅವನಿಗೆ ಜೀವ ತೆಗೆದುಕೊಳ್ಳುವ ರೋಗ ಅಂಟಿಕೊಂಡಿದೆ. ದೊಡ್ಡ ಅಳಿಯನಲ್ಲಿಗೆ ಚಿಕಿತ್ಸೆಗಾಗಿ ಯುರೋಪಕ್ಕೆ ಹೋಗಿದ್ದಾನೆ. ಹಿರಿಯ ಅಳಿಯ ಅಲ್ಲಿ ಡಾಕ್ಟರ್, ಹೆಂಡತಿ ಎರಡನೆಯ ಮಗಳು, ಅಳಿಯ ಜೊತೆಯಲ್ಲಿ ಹೋಗಿದ್ದಾರೆ. ಹೋಗುವಾಗ ಎರಡು ನೂರು ರೂಪಾಯಿ ಕಳಿಸಿದ್ದ....ನಿನ್ನ ಹೆಸರಿನಲ್ಲಿ ಒಂದು ದೊಡ್ಡ ಪ್ಯಾಕೆಟ್...ಕೊಡುತ್ತೇನೆ....ಸ್ವಲ್ಪ ಲಾಟೀನ ಎತ್ತಿ ಹಿಡಿ......''

ಹರಮಜಿ ಚಿಕ್ಕಮ್ಮ ಮತ್ತೆ ಪಳಬಯಸಿದಳು.....

''ಚಿಕ್ಕಮ್ಮ ಅದು ಎಲ್ಲಿದೆಯೆಂದು ನನಗೆ ಹೇಳು.....ನಾನು ಹುಡುಕುತ್ತೇನೆ......''

''ಅದು....ಆ ಪೆಟ್ಟಿಗೆ ಸ್ವಲ್ಪ ಮುಂದಕ್ಕೆ ಎಳಿ......''

ಕಮರನ್‌ಳು ಜಮ್‌ಲೀನಳ ಪಲ್ಲಂಗದ ಬುಡದಲ್ಲಿದ್ದ ಕೆಂಪು ಬಣ್ಣದ ಟ್ರಂಕನ್ನು ಎಳೆದು ಹೊರತೆಗೆದಳು....ಅದರಲ್ಲಿ ಜಮಲೀನಳ ಬಟ್ಟೆಗಳಿದ್ದವು. ಆಕೆ ಆಗಾಫರ ಹಾದ್‌ನ ಪ್ಯಾಕೆಟ ಹುಡುಕಲು ಒಂದೊಂದೇ ಬಟ್ಟೆ ತೆಗೆದು ನೆಲದ ಮೇಲೆ ಹಾಕುತ್ತ ಹೋದಳು....ಟ್ರಂಕಿನಲ್ಲಿ ಶೀರಕಳಗೆ ಪೇಪರ ಹಾಸಿತ್ತು. ಅದರ ಕೆಳಗಡೆ ಗುಲಾಬಿ ಬಣ್ಣದ ಪ್ಲಾಸ್ಟಿಕ್‌ದ ಎರಡು ಕಪ್ ಸಿಕ್ಕವು....ಎಷ್ಟೋ ವರ್ಷಗಳ ಹಿಂದ ಆಕ ಹಂಡೆಷಾಹನ ಉರಸಿನಲ್ಲಿ ಒಂದೊಂದಕ್ಕೆ ನಾಲ್ಕಾಣೆ ಕೊಟ್ಟು ತನಗೊಂದು ಮತ್ತು ಜಮಲಿನ್‌ಳಿಗೊಂದು ಕೊಂಡು ತಂದಿದ್ದಳು....ಅವುಗಳನ್ನು ಕೆಲ ಹೊತ್ತು ದಿಟ್ಟಿಸಿ ನೋಡುತ್ತ ಕುಳಿತಳು.....ಚಿಕ್ಕಮ್ಮನ ಮಾತಿನಿಂದಾಗಿ ಎಚ್ಚರಗೊಂಡಳು–''ಅಫಾಬಿ ಕೂಡ ಎಲ್ಲಿಯೋ ಓಡಿ ಹೋದ.....ಬೋಂಬ್ಯೆಗೆ ಓಡಿ ಹೋದ......''

ರಷ್ಕ್‌ಕಮರ್ ಮತ್ತೆ ಆಗಾ ಫರಹಾದ್ ಕಳಿಸಿದ ಪ್ಯಾಕೆಟ್ ಹುಡುಕುವಲ್ಲಿ ಮಗ್ನಳಾದಳು....ಅದು ಜಮ್‌ಲೀನ ಅರ್ಧಮರ್ಧ ಹೆಣೆದ ಸ್ವೆಟರಿನ ಕೆಳಗೆ ಇರಿಸಿದ್ದು ಸಿಕ್ಕಿತು. ತುಂಬ ಭಾರವಾಗಿತ್ತು. ಕಮರನ್‌ಳ ಹೃದಯದಲ್ಲಿ ಬೆಳಕು ಆವಿರ್ಭವಿಸಿದ ಅನುಭವವಾಯಿತು. ನೋಟುಗಳ ಕಟ್ಟುಗಳಿರಬೇಕೆಂದು ಭಾವಿಸಿದಳು. ಜಮಲೀನಳ ಪಲ್ಲಂಗದ ಮೇಲೆ ಅವಸರವಸರವಾಗಿ ಹತ್ತಿ ಕುಳಿತಳು.....ಸ್ಟೂಲ ಎಳೆದುಕೊಂಡು ಹತ್ತಿರವಿರಿಸಿಕೊಂಡಳು....ಲಾಟಿನ್ ಬತ್ತಿ ಏರಿಸಿ ಬೆಳಕು ಹೆಚ್ಚಿಸಿದಳು...ನಡುಗುವ ಕೈಗಳಿಂದ ಪ್ಯಾಕೆಟನ್ನು ಬಿಚ್ಚಿದಳು.... ಒಂದು ಮರಾಕೊ ಲೆದರಿನ ಸುಂದರ ನೋಟಬುಕ್ ಕಾಣಿಸಿತು. ಅದರೊಂದಿಗೆ ಒಂದು ಪತ್ರ.....ಆಕ ಪತ್ರ ಓದಲು ಆರಂಭಿಸಿದಳು.....

''ರಷ್ಕ್‌ಕಮರ್.....

ದಿವಂಗತ ಜಮೀಲ ಅಲ್ಲಸಾಳ ವರ್ಣನೆ ನಿನಗೆ ಯಾವ ಶಬ್ದದಲ್ಲಿ ಮಾಡಬೇಕೊ ತಿಳಿಯದು ನಮಗೆ. ನಿನ್ನ ಕರಾಚಿಯ ವಿಳಾಸ ನಮಗೆ ಗೊತ್ತಿಲ್ಲ, ಗೊತ್ತಿದ್ದಲ್ಲಿ ಪತ್ರ ಬರೆಯುತ್ತಿದ್ದೆ....ನೀನು ಉತ್ತರಕೊಡದಿದ್ದರೂ....ಇಪ್ಪತ್ತೈದು ವರ್ಷಗಳು ಕಳೆದು ಹೋದವು.... ಆದರೆ ನಾವು ನಿನ್ನನ್ನು ಮರೆತಿಲ್ಲ.....ನಮ್ಮ ನಮ್ಮ ಹಣೆ ಬರಹದಲ್ಲಿ

ಏನಿತ್ತೋ ಅದು ಪೂರ್ಣವಾಗಿದೆ.....ನೀನು ಲಖನೌ ಬಿಟ್ಟು ಹೋಗಿ ಐದಾರು ವರ್ಷಗಳಾಗುತ್ತ ಬಂದವು. ನೀನು ಹೋದ ನಂತರ ನಾನು ಜಮೀಲ ಅಲ್ಲಸಾಳಿಗೆ ಅದೆಷ್ಟೋ ಸಲ ಆರ್ಥಿಕ ಸಹಾಯ ಮಾಡಬೇಕೆಂದೆ ಆದರ ಆಕೆ ಯಾವಾಗಲೂ ಕಳಿಸಿದ ಹಣವನ್ನು ಮರಳಿಸಿದಳು......ಇಂಥ ಆತ್ಮಾಭಿಮಾನಿ ಹುಡುಗಿಯನ್ನು ಬೇರೆಲ್ಲೂ ನಾನು ನೋಡಲಿಲ್ಲ. ಇಡೀ ಆಯುಷ್ಯದುದ್ದಕ್ಕೂ ಜೀವನದೊಂದಿಗೆ ಹೋರಾಡಿದಳು. ಮತ್ತೆ ಸಾವಿನೊಂದಿಗೂ ಹೋರಾಟ ಮಾಡಿದಳು. ಕೊನೆಯಲ್ಲಿ ಎರಡರಿಂದಲೂ ಸೋತಳು. ದೇವರು ಅವಳಿಗೆ ಪುನರ್ಜನ್ಮದಲ್ಲಿ ಸುಖ, ಶಾಂತಿ ಸಿಗುವಂತೆ ಕರುಣೆದೋರಲಿ....

ರಷ್ಕೆಕಮರ್, ಕಳೆದ ಕೆಲ ವರ್ಷಗಳಲ್ಲಿ ನೀನು ನನಗ ತುಂಬ ನೆನಪಾಗುತ್ತಿದ್ದೆ. ಈಗ ನಾನೂ ಮುದುಕನಾಗುತ್ತಿದ್ದೇನೆ. ಹೆಂಡತಿ ತನ್ನ ಅತ್ತೆ ಹಾಗೂ ತಾಯಿ ಮನೆಯ ರಾಜಕಾರಣದಲ್ಲಿ ಮುಳುಗಿರುತ್ತಾಳೆ. ಹೆಣ್ಣು ಮಕ್ಕಳೆಲ್ಲ ಮದುವೆಯಾಗಿ ತಮ್ಮ ತಮ್ಮ ಮನೆಯಲ್ಲಿದ್ದಾರ...ದೇವರು ನನಗೆ ಸಂಪತ್ತು, ಮಕ್ಕಳು, ವೈಭವ ಎಲ್ಲ ಕೊಟ್ಟ. ಆದರೆ ಮಾನಸಿಕ ಶಾಂತಿ, ಸುಖ ನೀಡಲಿಲ್ಲ.....ನಿನಗಾಗಿ ನಿನ್ನ ಹೆಸರಿನಲ್ಲಿ ಬಹಳಷ್ಟು ಗಜಲ್ ರಚಿಸಿದೆ......ಎಲ್ಲವನ್ನೂ ಒಂದು ನೋಟಬುಕ್‌ನಲ್ಲಿ ಬರೆಯುತ್ತ ಹೋದೆ.... ಇದು ಎಂದಾದರೂ ನಿನಗೆ ಸಿಗಲೆಂಬ ಆಶೆಯಿಂದ.....ಬಹುಶಃ ಎಂದಾದರೂ ನೀನು ಲಖನೌಕ್ಕೆ ಮರಳಿ ಬಂದಲ್ಲಿ...ಸಾರ್ವಜನಿಕರ ನೆನಪಿನ ಶಕ್ತಿ ತುಂಬ ದುರ್ಬಲ ವಾಗಿರುತ್ತದೆ.....ನೀನು ಒಂದು ವೇಳೆ ಮರಳಿ ಬಂದರೆ, ಹಾಗೂ ಕವಿಗೋಷ್ಠಿಗೆ ಆಮಂತ್ರಿಸಿದರೆ (ಈಗ ನಮ್ಮ ಸೂಸೈಟಿ ತುಂಬ ವಿಸ್ತಾರ ಗೊಂಡಿದೆ) ಈ ಗಜಲ್‌ಗಳು ನಿನ್ನ ಉಪಯೋಗಕ್ಕೆ ಬರಬಹುದು.

ಇನ್ನೇನು ಬರೆಯಲಿ, ರಷ್ಕೆಕಮರ್, ಡಾಕ್ಟರ್‌ರು ಕ್ಯಾನ್ಸರ ಎಂದು ಹೇಳಿದ್ದಾರೆ. ನಾನು ನನ್ನ ಹಿರಿಯ ಅಳಿಯನ ಹತ್ತಿರ ಚಿಕಿತ್ಸೆಗಾಗಿ ಲಂಡನ್‌ಕ್ಕೆ ಹೋಗುತ್ತಿದ್ದೇನೆ. ಗುಣವಾಗುತ್ತೇನೆ, ಮರಳಿ ಬರುತ್ತೇನೆ ಎನ್ನುವ ಆಶೆಯಿಲ್ಲ.....ರಷ್ಕೆಕಮರ್ ಇದೋ ಖುದಾಹಾಫಿಜ.....ಗುಡ್ ಬಾಯ್.....ಸಾಧ್ಯವಾದರೆ ನನ್ನನ್ನು ಕ್ಷಮಿಸಿಬಿಡು....

ನಿನ್ನ

ಆಗಾ ಫರ್‌ಹಾದ್''

## -14-

ಬೊಂಬೈಯ ಖಾನ ಸಾಹೇಬ ಕೊಟ್ಟ ಹಣದಲ್ಲಿ ಈಗ ಕೇವಲ ಹತ್ತು ರೂಪಾಯಿಗಳು ಉಳಿದಿವೆ. ರಷ್ಕೆಕಮರ್ ಹಿಂದಿನಂತ ಪೋಸ್ಟ್‌ಮನ್‌ನ ದಾರಿ ಕಾಯುತ್ತ ಗೇಟಿನ ಹತ್ತಿರ ನಿಂತಿದ್ದಳು. ಕೆಲ ಕ್ಷಣಗಳ ನಂತರ ಒಮ್ಮೆಲೇ ಹೊಳೆಯಿತು.....ನಾನೆಂಥ ಮೂರ್ಖ ಳಿದ್ದೀನಿ.....ಹದಿನೆಂಟು ಹತ್ತೊಂಬತ್ತು ವರ್ಷ ಲಂಡನ್ನಿನ ಪತ್ರಕ್ಕಾಗಿ ಪ್ರತೀಕ್ಷೆ ಮಾಡಿದೆ. ಈಗಂತೂ ಎಲ್ಲ ಕಡೆಯಿಂದ ಸದಾ ಕಾಲಕ್ಕೂ ಯಾರಿಗಾಗಿಯೂ, ಯಾವುದಕ್ಕಾಗಿಯೂ ಕಾಯುವುದು ತಪ್ಪಿತು.....ಆಕ ಮೊಗಸಾಲೆಗೆ ಮರಳಿದಳು....ಬಫಾತಿಯ ಹೆಂಡತಿ

ಹಫಿಜಿನ್ ಅಡಿಗೆ ಮನೆಯಲ್ಲಿ ಅಡಿಗೆ ಮಾಡುತ್ತಿದ್ದಳು. ಬಫಾತಿ ಬಹಳ ಬೆಳಗ್ಗೇನೇ ಕಾಫಿ ಕುಡಿದು, ಸ್ನಾನ ಮಾಡಿ ರಿಕ್ಷಾ ತೆಗೆದುಕೊಂಡು ಹೊರಗೆ ಹೋಗಿದ್ದ....ಹುಡುಗರು ಓಣಿಯಲ್ಲಿ ಆಡುತ್ತಿದ್ದವು. ಚಿಕ್ಕಮ್ಮ ಒಳಗೆ ಪಲ್ಲಂಗದ ಮೇಲೆ ಮಲಗಿ ಕೆಮ್ಮುತ್ತಿದ್ದಳು. ರಷ್ಕೆಕಮರ್ ಒಳಗೆ ಬಂದು ಕುಳಿತು ಯೋಚಿಸತೊಡಗಿದಳು.....ಈಗ ಏನು ಮಾಡುವುದು ಎಂದು.....? ಆಗಾ ಫರ್‌ಹಾದ್‌ನ ನೋಟ್ ಬುಕ್ ನೆನಪಾಯಿತು. ಒಳಗೆ ಹೋಗಿ ಅದನ್ನು ತೆಗೆದುಕೊಂಡು ಬಂದಳು. ಪುಟಗಳನ್ನು ತಿರುವಿ ನೋಡಿದಳು. ಗಜಲಿನ ಪ್ರತಿಯೊಂದು ನುಡಿಯ ಕೊನೆಯಲ್ಲಿ 'ಕಮರ್' ಕಾವ್ಯನಾಮವಿತ್ತು. ಅವಳು ನೋಟ್‌ಬುಕ್ ಮುಚ್ಚಿದಳು....ಆಗ ಅವಳ ಕಣ್ಣಿಂದ ಕಣ್ಣೀರಿನ ದೊಡ್ಡದೊಂದು ಹನಿ ನೋಟ್ ಬುಕ್ಕಿನ ಮೇಲೆ ಟಪಕ್ ಎಂದು ಬಿತ್ತು.....ಅವಳು ಕೆಲಹೊತ್ತು ಯೋಚನೆಗೆ ಈಡಾದಳು....ಮತ್ತೆ ಎದ್ದು ಬಟ್ಟೆ ಬದಲಿಸಲು ಕೋಣೆಯೊಳಗೆ ಹೋದಳು.....

ಬಫಾತಿ ಮಧ್ಯಾಹ್ನದ ಊಟಕ್ಕಾಗಿ ತೇಕುತ್ತ ತೇಕುತ್ತ ಮನೆಗೆ ಬಂದ. ರಷ್ಕೆಕಮರ್ ಊಟದ ನಂತರ ಅವನಿಗೆ ಕೇಳಿದಳು–''ಬಫಾತಿ, ನನ್ನನ್ನು ಮನಸೂರ ನಗರದವರೆಗೆ ಕರೆದುಕೊಂಡು ಹೋಗುತ್ತಿಯಾ?''

''ಹಾಂ !...ಜರೂರ...ನಡೆಯಿರಿ ಹೋಗೋಣ...''ಎಂದ.

ಆಕೆ ಹೊರಗೆ ಬಂದು ರಿಕ್ಷಾದಲ್ಲಿ ಕುಳಿತಳು...ವಿಕ್ಟೋರಿಯಾ ಸ್ಟ್ರೀಟ್, ಫಿರಂಗಿ ಮಹಲ್, ಚೌಕ್, ಅಕ್ಬರಿ ದರ್ವಾಜಾ, ಗುಲಾಮ ಹುಸೇನನ ಸೇತುವೆ...

''ಮೊಹರಂ ಬರಲಿದೆ...ಈ ವರ್ಷವೂ ಶಿಯಾ–ಸುನ್ನಿಗಳಲ್ಲಿ ಹೊಡೆದಾಟ ಆಗಲಿದೆಯೆಂದು ಕೇಳಿರುವೆ...'' ಎಂದ ಬಫಾತಿ ರಿಕ್ಷಾ ಹೊಡೆಯುತ್ತ....

''ಈಗಲೂ ಅದೇ ರೀತಿ ಹೊಡೆದಾಟ–ಬಡಿದಾಟ ಆಗುತ್ತಲಿದೆಯೇ?''

''ಹಾಂ ! ಪ್ರತಿ ವರ್ಷ...ಬಹುಜೋರಾಗಿ ಆಗುತ್ತಲಿದೆ...ಮೂರು ನಾಲ್ಕು ವರ್ಷಗಳ ಹಿಂದಿನ ಮಾತು...ಈರಾನದಿಂದ ಕೆಲಜನ ಬಂದಿದ್ದರು. ತಮ್ಮ ಟೆಲಿವಿಜನ್ ದಲ್ಲಿ ತೋರಿಸಲು ಲಖನೌದ ಮೊಹರಂ ಫಿಲ್ಮ ಮಾಡಬಯಸಿದ್ದರು. ಇಲ್ಲಿಗೆ ಅವರು ಬಂದರು...ಇಲ್ಲಿ ಘನಘೋರ ಯುದ್ಧವೇ ನಡೆದಿತ್ತು ಶಿಯಾ ಸುನ್ನಿಗಳಲ್ಲಿ...ಅದನ್ನು ನೋಡಿ ಅವರು ಬಂದ ಹಾದಿಗೆ ಸುಂಕವಿಲ್ಲವೆಂದು ಬಂದಂತೆಯೇ ತಮ್ಮ ದೇಶಕ್ಕೆ ಮರಳಿ ಹೋಗಿಬಿಟ್ಟರು...''

ಮನಸೂರ ನಗರ ತಲುಪಿ ಆಕೆ ಒಂದು ಹಳೆಯ ಮನೆಯ ಮುಂದೆ ಇಳಿದಳು. ಡ್ರಾಯಿಂಗ್ ಹಾಲ್ ತಲುಪಿದಳು. ಒಳಗೆ ಪರ್ವಾ ಹಾಗೂ ಆಗಾ ಫರ್‌ಹಾದ್‌ರ ಪ್ರಿಯ ಕವಿ ಬಂಧು ತನ್ನ ಮಿತ್ರರೊಂದಿಗೆ ಕುಳಿತು ಚಹಾಕುಡಿಯುತ್ತಿದ್ದ..ಅವನು ದೇವರ ಕರುಣೆಯೆಂದ....

''ಓಹೋ......ರಷ್ಕೆಕಮರ್......ನೀವು ಯಾವಾಗ ಬಂದಿರಿ......''ಎಂದು ಮುಂತಾಗಿ ಕೇಳಿದ ಹಾಗೂ ಟಿಫಿನ್ ಚಹಾ ತರಿಸಿದ. ರಷ್ಕೆಕಮರ್ ರೈಲಿನಿಂದಿಳಿದ ನಂತರ ಆ ಸಮಯದವರೆಗೂ ಹೊಟ್ಟೆ ತುಂಬ ಊಟ ಮಾಡಿರಲಿಲ್ಲ....

ಎದುರಿಗಿರಿಸಿದುದನ್ನೆಲ್ಲ ತಿಂದು ಬಿಡಬೇಕೆನ್ನಿಸಿತು...ಬಹಳ ಧೈರ್ಯದಿಂದ ಕೈ ತಡೆದಳು....ಮಾತು ಮಾತಿನಲ್ಲಿ ಕೇಳಿದಳು–

''ಈಗೀಗ ಕವಿಗೋಷ್ಠಿ ಎಲ್ಲೆಲ್ಲಿ ನಡೆಯುತ್ತಲಿವೆ....?''

''ಒಂದಂತೂ ನಾಳಿದ್ದು ಸಾಯಂಕಾಲ ನಡೆಯಲಿದೆ...ಆದಿತ್ಯವಾರದ ದಿನ ಖೈಸರ್ ಬಾಗ್‌ದಲ್ಲಿ...ನೀವು ಬರುತ್ತೀರಾ....?''

''ನೀವು ಕರೆದರೆ ಅವಶ್ಯ ಬರುವೆ.''

''ವಿಷಯವೇನೆಂದರೆ, ಗೋಷ್ಠಿಗಳ ವ್ಯವಸ್ಥಾಪಕ ಕಮೀಟಿಯಲ್ಲಿ ಈಗ ನಾನಿಲ್ಲ..ನಮ್ಮ ತಮ್ಮ ಆ ಕಮೀಟಿಯ ಸೆಕ್ರೆಟರಿಗೆ ಹೇಳುತ್ತಾನೆ....ಅರೇ....ಮಿಯ್ಯಾ ತಾಹಿರ್....''

ತಾಹಿರ್ ಮಿಯ್ಯಾ ಟವಲಿನಿಂದ ಮುಖ ಒರೆಸಿಕೊಳ್ಳುತ್ತ ಒಳಗಿನಿಂದ ಬಂದ. ಬಾಗಿ ರಷ್ಕಮರಳಿಗೆ ಸಲಾಮು ಮಾಡಿದ....

''ತಾಹಿರ್ ಮಿಯ್ಯಾ ರಷ್ಕಮರ್ ಸಾಹಿಬಾ ಅವರನ್ನು ನಿಮ್ಮ ಕವಿಗೋಷ್ಠಿಯಲ್ಲಿ ಕರೆಯಿಸಿಕೊಳ್ಳಿ....ನೀನಿನ್ನೂ ಹುಡುಗನಾಗಿದ್ದೆ....ನಮಗೆ, ಅವರು ಕಾವ್ಯ ಓದುವ ರೀತಿ ಮತ್ತು ಆ ಮಧುರ ಕಂಠದ ನೆನಪು ಈಗಲೂ ಇದೆ....''

''ಬಹಳ ಒಳ್ಳೆಯದು ಅಣ್ಣನವರೆ....ನಾವು ವ್ಯವಸ್ಥೆ ಮಾಡುತ್ತೇವೆ.....''

''ಕವಿಗೋಷ್ಠಿ ಎಷ್ಟು ಹೊತ್ತಿಗೆ ಆರಂಭವಾಗುತ್ತದೆ....?'' ರಷ್ಕಮರ್ ವಿಚಾರಿಸಿದಳು.

''ಎಂಟು ಗಂಟೆಗೆ. ನೀವು ಚಿಂತೆಮಾಡಬೇಕಿಲ್ಲ...ನಾವು ಯಾರನ್ನಾದರೂ ಕಳಿಸಿ ನಿಮ್ಮನ್ನು ಕರೆಯಿಸಿಕೊಳ್ಳುತ್ತೇನೆ, ನಮ್ಮ ಕಾರು ಕಳಿಸಿಕೊಡುತ್ತೇವೆ. ಮನೆಯ ವಿಳಾಸ ಹೇಳಿರಿ ಸಾಕು...'' ಎಂದು ತಾಹಿರ್ ಮಿಯ್ಯಾ ಹೇಳಿದ.

ಆದಿತ್ಯವಾರ ಬೆಳಗ್ಗೇನೇ ಆ ಕವಿಗೋಷ್ಠಿಯ ಸಿದ್ಧತೆ ಆರಂಭಿಸಿದಳು. ಟ್ರಂಕ್ ತೆರೆದು, ಸೀರೆ ತೆಗೆದುಕೊಂಡು ಬಿಸಿಲಿನಲ್ಲಿ ಹರವಿದಳು. ಬ್ಲೌಜ್ ಇಸ್ತ್ರಿ ಮಾಡಿದಳು. ಕೂದಲುಗಳಿಗೆ ಕಪ್ಪು ಬಣ್ಣ ಲೇಪಿಸಿದಳು. ಮಧ್ಯಾಹ್ನ ಆಗಾ ಫರ್‌ಹಾದ್‌ನ ನೋಟ್ ಬುಕ್ ತೆಗೆದು ಎರಡು ಮೂರು ಗಜಲ್‌ಗಳ ಆಯ್ಕೆ ಮಾಡಿದಳು. ಅವುಗಳಿಗೆ ರಾಗ ಜೋಡಿಸತೊಡಗಿದಳು. ಹಫ್‌ಜೀನಳಿಗೆ ಏಳು ಗಂಟೆಗೇನೇ ಅಡಿಗೆ ಮಾಡಲು ಹೇಳಿದಳು. ರಷ್ಕಮರ್ ತುಂಬ ಹಿಂದೆಯೇ ಮನೆಗೆ ಲೈಟ್ ಹಾಕಿಸಿದ್ದಳು. ಆದರೆ ಆಕೆ ಹೋದ ಮೇಲೆ ಲೈಟ್ ಬಿಲ್ ತುಂಬದೇ ಇದ್ದುದರಿಂದ ಕನೆಕ್ಷನ್ ಕಟ್‌ಮಾಡಿದ್ದರು. ಸೂರ್ಯ ಮುಳುಗುವ ಮುನ್ನವೇ ಆಕೆ ಒಳ ಅಂಗಳದಲ್ಲಿ ಕುಳಿತು ಮೇಕಪ್ ಮಾಡಿಕೊಂಡಳು. ಕರಾಚಿಯಲ್ಲಿ ಖರೀದಿಸಿದ ಅಮೇರಿಕನ್ 'ನೈಲಾನ್‌ದ ಹೂವು ಹೂವ್ವಿರುವ ನೀಲಿ ಸೀರೆ ಉಟ್ಟುಕೊಂಡಳು. ಜಲ್ದಿ ಜಲ್ದಿ ಊಟ ಮುಗಿಸಿದಳು. ಹಾಗೂ ತಾಹಿರ್ ಮಿಯ್ಯಾನ ಕಾರಿನ ಹಾದಿ ಕಾಯುತ್ತ ಕುಳಿತಳು. ಎಂಟುಗಂಟೆ ಎಂಟೂವರ

ಗಂಟೆ...ಒಂಬತ್ತು...ಹತ್ತು...ಹನ್ನೊಂದು...ಹನ್ನೊಂದುವರೆ ಆಯಿತು. ಆದರೂ ಆಕೆಯನ್ನು ಕವಿಗೋಷ್ಠಿಗೆ ಕರೆದೊಯ್ಯಲು ಯಾರೂ ಬರಲಿಲ್ಲ.

ಬೆಳಿಗ್ಗೇನೇ ಎದ್ದು ಆಕೆ ಬಘಾತಿಯನ್ನು ಕರೆದಳು. ಅವನು ಅಂಗಳದಲ್ಲಿ ಕುಳಿತು ರಿಕ್ಷಾದ ಟೈರಿನಲ್ಲಿ ಗಾಳಿ ತುಂಬುತ್ತಿದ್ದ.

''ಬಘಾತಿ''...ಅವಳು ಅವನ ಸಮೀಪ ಹೋಗಿ ಹೇಳಿದಳು–''ದಿವಂಗತ ಜಮಾಲೀನ ಗುತ್ತಿಗೆದಾರನ ಸಲುವಾಗಿ ಕಸೂತಿ ಹಾಕುತ್ತಿದ್ದಳಲ್ಲ...ಆತ ನಿನಗೆ ಗೊತ್ತೇನು...?''

''ಹಾಂ! ಗೊತ್ತಿದೆ ಬಿಟಿಯಾ...''

ಆಕೆ ಹೊರಗೆ ಬಂದು ಮುರಿದ ಬೆತ್ತದ ಆಸನದ ಮೇಲೆ ಕುಳಿತಳು. ಹಫೀಜಿನ್ ಆರ್ಟಿಸ್ಟಿಕ್ ಕಪ್‌ನಲ್ಲಿ ಚಹಾ ತಂದು ಕೊಟ್ಟಳು. ಅದನ್ನು ಕಂಡು ಅವಳು ಗಾಬರಿ ಯಾಗಿ ಕೇಳಿದಳು...''ಇದು ಎಲ್ಲಿಂದ ಬಂತು...?''

''ಸದಫ್ ಬಿಟಿಯಾ, ಹೋಗುವಾಗ ತನ್ನ ಭಾಂಡೆಗಳನ್ನೆಲ್ಲ ಕೊಟ್ಟು ಹೋಗಿದ್ದಳು...ಎಲ್ಲವೂ ಮಾರಾಟವಾಗಿ ಹೋದವು..ಇದೊಂದು ಉಳಿದಿದೆ...'' ಎಂದು ಹಫಿಜಿನ್ ಹೇಳಿದಳು.

''ಸದಫ್ ಮತ್ತು ಆಕೆಯ ಅಮೇರಿಕಾದ ಪತಿ ಹೋಗುವಾಗ ಹಣವನ್ನೂ ಕೊಟ್ಟಿದ್ದರು. ಅದಲ್ಲ ಒಂದು ತಿಂಗಳೊಳಗಾಗಿ ಜಮಿಲಿನ್ ಮತ್ತು ಚಿಕ್ಕಮ್ಮನ ಚಿಕಿತ್ಸೆಗಾಗಿ ಖರ್ಚಾಯಿತು.'' ಎಂದ ಬಘಾತಿ ತಲೆಯತ್ತಿ ಮತ್ತೆ ಹೇಳಿದ– ''ಅಮೇರಿಕಾಕ್ಕೆ ಹೋಗುವ ಸಮಯದಲ್ಲಿ ಸದಫ್ ಆರಾ ಬ್ಯಾಂಕಿನಲ್ಲಿರುವ ತನ್ನೆಲ್ಲ ಹಣವನ್ನು ಜಮಿಲಿನ್ ಬಿಟಿಯಾಳ ಹೆಸರಿನಲ್ಲಿ ಮಾಡುವವಳಿದ್ದಳು. ಜಮಿಲಿನ್ ಒಲ್ಲೆಯೆಂದಾಗ ಆಕೆ ಬಹಳ ತಿಳಿ ಹೇಳಿದಳು...ಇಂಥ ಧಿಮಾಕ್ ಮಾಡಬೇಡೆಂದಳು... ಆದರೆ ಆಕೆ ಏನೊಂದೂ ಕೇಳಲಿಲ್ಲ...ಸರಿಯಾದ ಸಮಯಕ್ಕೆ ಊರಿನಿಂದ ಆಕೆಯ ತಂದೆ ಸೋದರ ಬಂದು ತಲುಪಿದರು...ಆ ಹಣದ ಮೇಲೆ ನಮ್ಮ ಹಕ್ಕಿದೆ...ಎಂದು ತಮ್ಮ ಹಕ್ಕು ಸಾಧಿಸಿದರು.''

''ಸದಫ್ ಅಮೇರಿಕಾದಿಂದಲೂ ಹಣ ಕಳಿಸುವುದಾಗಿ ಹೋಗುವಾಗ ಹೇಳಿದ್ದಳು... ಆದರೆ ಜಮಿಲಿನ್ ಬದುಕಲಿಲ್ಲ...'' ಎಂದು ಹಫೀಜನ್ ಗದ್ಗದ ಕಂಠದಿಂದ ಹೇಳಿದಳು. ರಷ್ಕಕಮರ್ ಅದೇ ರೀತಿ ಹೃದಯ ಗಟ್ಟಿಮಾಡಿಕೊಂಡು ಕೇಳಿದಳು.

''ಮತ್ತೆ ಜಮಿಲಿನ್‌ಳ ಅನಾರೋಗ್ಯದ ಸುದ್ದಿ ಕೇಳಿ ಆಗಾ ಫರಹಾದ್ ತನ್ನೊಬ್ಬ ಮನುಷ್ಯನ ಕೈಯಲ್ಲಿ ಹಣ ಕಳಿಸಿದ. ಆದರೆ ಆಕೆ ಅದನ್ನು ತೆಗೆದುಕೊಳ್ಳದೆ ವಾಪಸ್ ಕಳಿಸಿದಳು...ಎರಡನೆಯ ಸಲವೂ ಅವನ ಮನುಷ್ಯ ಹಣ ತಂದ...''

''ಆಗಾ ಫರ್‌ಹಾದ್‌ನಲ್ಲಿ ಸೇವಕರಿದ್ದಾರೇನು?'' ರಷ್ಕ್‌ಕಮರ್ ಕೇಳಿದಳು.

''ಸಂಪೂರ್ಣ ಟೀಮೇ ಇದೆ. ಬಹಳ ಜನ ಕರ್ಮಚಾರಿಗಳು ಕೆಲಸಕ್ಕಿದ್ದಾರೆ ಅಲ್ಲಿ'' ಎಂದು ಬಘಾತಿ ತನ್ನ ಅತ್ಯಂತ ಹೊಸದಾದ ಸೈಕಲ್ ರಿಕ್ಷಾ ಒರಸುತ್ತ ಉತ್ತರಿಸಿದ...

ಲಕ್ಷಗಟ್ಟಲೆ ವ್ಯವಹಾರವಿದೆ...ಷಾಹಜಾಪುರದಲ್ಲಿ ರತ್ನಗಂಬಳಿ ತಯಾರಿಸುವ ಕಾರಖಾನೆ ಬಹಳ ವರ್ಷದಿಂದ ನಡೆಯುತ್ತದೆ...ಸೀತಾಪುರದಲ್ಲಿ ಫಾರಂ ಖರೀದಿಸಿದ್ದಾನೆ. ಮನೆಗಳ ಬಾಡಿಗೆ ಸಾಕಷ್ಟು ಬರುತ್ತಿದೆ...ದೊಡ್ಡದಾದ ಸೌಧ ಕಟ್ಟಿಸಿದ್ದಾನೆ. ಆದರೆ ಭಗವಂತನ ಲೀಲೆ ಹೇಗಿದೆ ನೋಡು...ಇಷ್ಟೆಲ್ಲ ಸಂಪತ್ತು ಆಸ್ತಿ–ಪಾಸ್ತಿ ಗೌರವ ಎಲ್ಲ ಮುಂದುವರಿಸಿಕೊಂಡು ಹೋಗಲು ಒಂದು ಗಂಡು ಮಗುವೂ ಇಲ್ಲ...ಎಲ್ಲದೂ ಅಳಿಯಂದಿರಿಗೆ ಸಿಗುತ್ತದೆ...

ರಷ್ಕಿಕಮರ್ ಮುಖ ಆಚೆ ತಿರುಗಿಸಿಕೊಂಡು ಬೇರೆಡೆ ನೋಡ ತೊಡಗಿದಳು... ಅದೇ ಮನೆಯಲ್ಲಿ ಆಗಾಫರಹಾದ್‌ನಿಗೆ ಗಂಡು ಮಗುವಾಗಿತ್ತು. ಪರ್ವಾಸಾಹೇಬ ಆ ಕೂಡಲೇ ಆ ಮಗುವಿಗೆ ನಾದರ್ ಫರ್ರ್ವೇನ್ ಎಂದು ಹೆಸರಿಟ್ಟಿದ್ದ... ಆ ಮಗು ಎರಡು ವರ್ಷದ್ದಾಗಿ ತೀರಿಹೋಯಿತು. ಈಗಿದ್ದಿದ್ದರೆ ಇಪ್ಪತ್ತೈದು ವರ್ಷದ ತರುಣನಾಗುತ್ತಿದ್ದ... ಒಂದು ವೇಳೆ ಬದುಕಿದ್ದರೂ ಏನು ಮಾಡುತ್ತಿದ್ದ... ಏನೂ ಇಲ್ಲ...ಅಫ್ತಾಬ ಜೀವಂತ ವಿದ್ದಾನಲ್ಲ...ನನ್ನ ದುರ್ದೈವಕ್ಕೆ ಮೇರೆಯೇ ಇಲ್ಲ...

ಹಫ್‌ಜಿನ್ ಬಕೀಟ ಎತ್ತಿಕೊಂಡು ನಳದ ಹತ್ತಿರ ಹೋದಳು...ರಷ್ಕಿಕಮರ್ ಜಮಿಲೀನಳ ಖಾಲಿ ಪಲ್ಲಂಗ ನೋಡಿದಳು...ಜಮೀಲ ಅಲ್ಲಸಾ...ನಿನ್ನನ್ನು ನಿನ್ನ ಸ್ವಾಭಿಮಾನ ಹಾಳು ಮಾಡಿತು. ನಾದರ ಹುಟ್ಟಿದ ಕಾಲದಲ್ಲಿ... ಸಾಂಗ್ ಬರ್ಡ್ಸ್ ಕ್ಲಬ್‌ನಲ್ಲಿ ಒಮ್ಮೆ ಫರ್‌ಹಾದ್...ಇಂಥ ವರ್ಗದ ಹುಡುಗಿಯರಲ್ಲಿ ಬ್ಲ್ಯಾಕ್‌ಮೇಲ್ ಮಾಡಲು ಇದೊಂದೇ ದಾರಿ. ಯಾವನಿಂದಲೋ ಹುಟ್ಟಿದ ಮಗುವನ್ನು ಯಾವನೋ ಶ್ರೀಮಂತನ ಕೊರಳಿಗೆ ಕಟ್ಟಿ ಅವನ ತಲೆ ಬೋಳಿಸುತ್ತಾರೆ. ಅಂದ ಹಾಗೆ ಆಕೆಯ ಮಗುವಿಗೆ ನಾನೇ ತಂದೆಯೆಂಬುದಕ್ಕೆ ಆಕೆಯ ಪುರಾವೇ ಏನಿದೆ...ಎಂದು ಪರ್ವಾನಿಗೆ ಹೇಳುವುದನ್ನು ಕೇಳಿದ ದಿನದಿಂದ, ಜಮಿಲಿನ್‌ಳಿಗೆ ಆಗಾ ಫರ್‌ಹಾದ್‌ನ ಬಗ್ಗೆ ದ್ವೇಷ ಹುಟ್ಟಿತ್ತು. ಅದೇ ಆಗ ಆಗಾಫರಹಾದ್‌ನ ಮದುವೆಯಾಗಿತ್ತು. ಅವನು ಹಟವಾದಿ, ಸಿಟ್ಟಿನ ಶ್ರೀಮಂತನ ಮಗಳಾದ ತನ್ನ ಹೆಂಡತಿಗೆ ತುಂಬ ಹೆದರುತ್ತಿದ್ದ, ಹಾಗೂ ಸಮಾಜದ ನಿರ್ಗತಿಕರ ಬಗ್ಗೆ ಅವನಲ್ಲಿದೆಯೆಂದು ತೋರಿಸುವ ಅನುಕಂಪ, ಅದು ಕೇವಲ ತೋರಿಕೆಯದೆಂದು ಗೊತ್ತಾಗಿ ಹೋಗಿತ್ತು. ಆದರೆ ನಾದರ ಫರದೀನನ ಸಾವಿನ ನಂತರ ಇಂಥ ವರ್ತನೆಯಲ್ಲಿ ಪರಿವರ್ತನೆಯಾಗಿತ್ತು. ರಷ್ಕಿಕಮರ್‌ಳೊಂಂದಿಗಿನ ಸಂಬಂಧ ನಿಂತು ಹೋಗಿತ್ತು. ಎರಡನೂರು ರೂಪಾಯಿ ಪ್ರತಿ ತಿಂಗಳು ಕೊಡಬೇಕೆಂದು ನಿರ್ಣಯಿಸಿದ್ದನ್ನು ಕೃತಜ್ಞತೆಯಿಂದ ಒಪ್ಪಿಕೊಂಡಿದ್ದಳು. ಆದರೆ ಅಪಾಂಗಳಾದ ಜಮಿಲೀನ್ ಈ ಪ್ರೊಫೆಷನ್‌ದಲ್ಲಿ ಎಂದೂ ತಲೆಹಾಕಲಿಲ್ಲ. ಪಲ್ಲಂಗದ ಮೇಲೆ ಮಲಗಿ ತನ್ನ ಶುದ್ಧ ಚಿತ್ತದಿಂದ ಲೋಕವನ್ನು ಪಾರದರ್ಶಕದ ಹಾಗೆ ನೋಡುತ್ತಿದ್ದಳು. ಆಗಾ ಫರ್‌ಹಾದ್‌ನ ಆ ಮಾತುಗಳನ್ನು ಆಕೆ ಎಂದೂ ಮರೆಯಲಿಲ್ಲ ಹಾಗೂ ಅವನನ್ನು ಕ್ಷಮಿಸಲಿಲ್ಲ.

''ಮತ್ತೇನಾಯಿತು ಬಘಾತಿ...?'' ಎಂದು ರಷ್ಕಿಕಮರ್ ಕೇಳಿದಳು.

''ಫರ್‌ಹಾದ್ ಮಿಯ್ಯಾ ಮೂರನೆಯ ಸಲ ಹಣ ಕಳಿಸಿದಾಗ ನಾವು ಇಸಗೊಂಡು

ಇಟ್ಟುಕೊಂಡೆವು, ಆಕೆಗೆ ಒಳ್ಳೆಯ ಡಾಕ್ಟರರಲ್ಲಿ ಚಿಕಿತ್ಸೆ ಕೊಡಿಸೋಣ ಹಾಗೂ ಒಳ್ಳೆಯ ಊಟ ಮಾಡಿಸೋಣವೆಂದು. ಮನೆತನದ ಸ್ಥಿತಿ ಸುಧಾರಿಸಿದಾಗ ಆಕೆ ಕೇಳಿದರೂ ಕೂಡ ಲಾಟರಿ ಹತ್ತಿತ್ತು ಎಂದು ಅಥವಾ ಸಾಲ ತಂದಿರುವುದಾಗಿ ಹೇಳಿದರಾಯಿತೆಂದು ಯೋಚಿಸಿದೆವು. ಆದರೆ ನಮ್ಮ ಓರ್ವ ಮಗ ಆಕೆಗೆ ನಿಜ ಸ್ಥಿತಿ ತಿಳಿಸಿಬಿಟ್ಟ ಇದೆಲ್ಲ ಗೊತ್ತಿಲ್ಲದೆ, ಬಹಳ ಸಿಟ್ಟಿಗೆ ಬಂದಳು, ಒದರಾಡಿದಳು, ಚೀರಾಡಿದಳು. ಆಗ ನಾವು–''ಬಿಟಿಯಾ, ನೀನು ಉಪವಾಸ ವನವಾಸ ಅನುಭವಿಸುತ್ತಿರುವುದನ್ನು ಹಾಗೂ ಯಾತನೆಯಿಂದ ನರಳುತ್ತ ಸಾಯುವುದನ್ನು ನಾವು ಕಣ್ಣಾರೆ ನೋಡಲಾರೆವು–'' ಎಂದು ಕೈಜೋಡಿಸಿ ಬೇಡಿಕೊಂಡೆವು.

ನಮ್ಮ ರಿಕ್ಷಾ ಮುರಿದಿತ್ತು. ನಮ್ಮ ಮಕ್ಕಳ ಮೇಲೆ ಆಸೆಯಿರಿಸಿ ಹೇಳಿದ್ದಳು–ಈ ಹಣದಿಂದ ಹೊಸ ರಿಕ್ಷಾ ಖರೀದಿಸಿ. ನಾನು ಸಾಯಲಿದ್ದೇನೆ. ರಿಕ್ಷಾದಿಂದಲೇ ನಿಮ್ಮ ಸಂಸಾರ ನಡೆಯಬೇಕಾಗಿದೆ.– ಆಕೆಯ ಮಾತು ಮೀರಲಾರದೆ ಈ ರಿಕ್ಷಾ ಖರೀದಿಸಿ ದೆವು. ಉಳಿದ ಹಣದಲ್ಲಿ ನಮ್ಮ ಮಕ್ಕಳಿಗೆ ಬಟ್ಟೆ ಹೊಲಿಸಿದಳು. ಆಕೆ ಮನುಷ್ಯಳಾಗಿರ ಲಿಲ್ಲ. ದೇವದೂತೆಯಾಗಿದ್ದಳು. ಆದರೆ ಹಟಮಾರಿ. ಆಸ್ಪತ್ರೆಗೆ ಸೇರಿಸಬೇಕೆಂದೆವು. ಆಕೆ ಸುತಾರಾಂ ಒಪ್ಪಲಿಲ್ಲ..

''ಆಕೆ ಚೆನ್ನಾಗಿರುವವರೆಗೂ ಸಂಗೀತದ ಕಾರ್ಯಕ್ರಮಗಳು ಸಿಗುತ್ತಿದ್ದವು. ಅನಾರೋಗ್ಯದಿಂದ ಹಾಸಿಗೆ ಹಿಡಿದ ಮೇಲೆ ಕಸೂತಿ ಕೆಲಸ ಆರಂಭಿಸಿದಳು. ಅದರಲ್ಲಿ ಇಪ್ಪತ್ತು ರೂಪಾಯಿ ಸಂಪಾದಿಸುತ್ತಿದ್ದಳು. ನಾವು ಊಟ ಮಾಡುತ್ತಿದ್ದ ಬ್ಯಾಳಿ ಅನ್ನ ಊಟ ಮಾಡಿಸುತ್ತಿದ್ದೆವು. ಆದರೂ ಆಕೆ ಹೊಟ್ಟೆ ತುಂಬ ಉಣ್ಣುತ್ತಿದ್ದಿಲ್ಲವೆಂಬುದು ನಮಗೆ ಗೊತ್ತಿದೆ. ನಿನ್ನ ಹೆಂಡತಿ, ಮಕ್ಕಳ ಹೊಟ್ಟೆ ಕಟ್ಟಿ ನಮಗೆ ಊಟ ಹಾಕುವುದು ಬೇಡ– ಎನ್ನುತ್ತಿದ್ದಳು. ಎರಡು ತುತ್ತು ಉಂಡು ಕೈತೊಳೆದುಕೊಳ್ಳುತ್ತಿದ್ದಳು, ನಮ್ಮ ಹೊಟ್ಟೆ ಸರಿಯಿಲ್ಲ ಎನ್ನುತ್ತಿದ್ದಳು. ಕಂದೀಲಿನ ಬೆಳಕಿನಲ್ಲಿ ಕಸೂತಿ ಹಾಕುತ್ತ ಹಾಕುತ್ತ ಮಲಗುತ್ತಿದ್ದಳು.''

ರಷ್ಕೆಕಮರ್ ಕಲ್ಲಿನ ಮೂರ್ತಿಯ ಹಾಗೆ ಕುಳಿತು ಕೇಳುತ್ತಿದ್ದಳು. ಬಘಾತಿ ರಿಕ್ಷಾ, ಬಟ್ಟೆಯಿಂದ ಸ್ವಚ್ಛಗೊಳಿಸಿ ಹೊರಡಲು ಸಿದ್ಧನಾದ, ಮತ್ತೆ ತಾನೇ ಹೇಳಿದ–''ಈ ರಿಕ್ಷಾ ಖರೀದಿ ಮಾಡಿದ ನಂತರ ಆಗಾ ಫರ್‌ಹಾದ್ ಅವರಲ್ಲಿ ಹೋಗಿ, ಬಿಟಿಯಾ ನಿಮ್ಮ ಹಣ ಈಗಲೂ ತೆಗೆದುಕೊಳ್ಳಲಿಲ್ಲ. ನಮಗೆ ಕೊಟ್ಟು ಬಿಟ್ಟಳು. ಎಂದು ಹೇಳಿ ಬಂದೆವು.''

''ಬಘಾತಿ ಜಮಲೀನಳ ಗುತ್ತಿಗೆದಾರನಿಂದ ನಮಗೆ ಕಸೂತಿ ಹೆಣೆಯುವ ಆರ್ಡರ್ ತಂದುಕೊಡು.''

''ಬಿಟಿಯಾ, ನೀವು ರೇಡಿಯೋದಲ್ಲಿ ಹಾಡು ಹಾಡಿರಿ. ಮೊದಲು ಹಾಡು ತ್ತಿದ್ದೀರಲ್ಲ..''

''ಈಗ ನಮ್ಮ ಸ್ವರ ರೇಡಿಯೋವಲ್ಲಿ ಹಾಡುವಷ್ಟು ಚೆನ್ನಾಗಿ ಉಳಿದಿಲ್ಲ. ನಾವಿಲ್ಲಿದ್ದಾಗಲೇ ಬಹಳ ವರ್ಷದಿಂದ ಹಾಡುವುದನ್ನು ಬಿಟ್ಟು ಬಿಟ್ಟಿದ್ದೆವು...ಕಸೂತಿ ಹಾಕುವ ರೇಟು ಈಗ ಹೇಗಿದೆ...?''

"ಅಂಗಿಯ ಕಸೂತಿಗೆ ಹತ್ತು ಪೈಸೆ...ಒಂದು ಸೀರೆಗೆ ಐದರಿಂದ ಹದಿನೈದು ರೂಪಾಯಿ....ಇನ್ನೂ ಸೂಕ್ಷ್ಮ ಬುಟೇವು ಹಾಕಿದರೆ ಇಪ್ಪತ್ತು ಇಪ್ಪತ್ತೈದು ರೂಪಾಯಿ. ಒಂದು ಎಲೆ ಹಾಕಿದರೆ ಒಂದು ಪೈಸೆ, ಒಂದು ಹೂವಿಗೆ ಒಂದು ಆಣೆ... ಒಂದು ಸೀರೆಯ ಕೆಲಸ ಒಬ್ಬಳಿಂದ ಆಗುವುದಿಲ್ಲ...ಒಂದು ಮನೆಯಲ್ಲಿ ಎಲೆ ಹಾಕಲಾಗುವುದು, ಇನ್ನೊಂದರಲ್ಲಿ ತಳಿರು, ತೋರಣ....ಜಮಿಲೀನ ಬಿಟಿಯಾ ಎಲೆ ಹಾಕುತ್ತಿದ್ದಳು...ಈ ರೀತಿ ಇಲ್ಲಿ ಕಸೂತಿ ಹಾಕಿದ ಸೀರೆಗಳು ಪೇಟೆಯಲ್ಲಿ ಹಾಗೂ ವಿದೇಶಗಳಲ್ಲಿ ನೂರಾರು ರೂಪಾಯಿಗಳಲ್ಲಿ ಮಾರಾಟವಾಗುತ್ತವೆ. ಅವನ್ನು ಮಾರುವವ ಹಣಗಳಿಸುತ್ತಾನೆ...ಕೆಲಸಗಾರರು, ಅವನ್ನು ಕಣ್ಣಲ್ಲಿ ಕಣ್ಣಿಟ್ಟು ಹೆಣೆಯುವವರು ಉಪವಾಸ ಸಾಯುತ್ತಾರೆ..."

ಮಾರನೆಯ ದಿನ ಬೆಳಗ್ಗೆ ಒಂಬತ್ತೂವರೆ ಗಂಟೆಗೆ ಗುತ್ತಿಗೆದಾರ ನಾಲ್ಕು ಅಂಗಿ, ಒಂದು ಬಿಳಿಯ ಸೀರೆ ಮತ್ತು ಬಿಳಿ ದಾರದೊಂದಿಗೆ ಮನೆಗೆ ಬಂದ. ಕಮರನ್ ತಟ್ಟಿನ ಪರದೆಯೊಳಗಿಂದಲೇ ಎಲ್ಲ ಸಾಮಾನು ತೆಗೆದುಕೊಂಡಳು. ಗುತ್ತಿಗೆದಾರ ದಾರ ಅಳೆದು ಕೊಟ್ಟು, ಕಸೂತಿ ಹೆಣೆಯುವ ಹೆಂಗಸು ಹೆಚ್ಚಿನ ದಾರ ಹೊಡಿಬಾರದು ಎಂದು, ಮತ್ತೆ ಅವನು ಪಕ್ಕದ ಮನೆಗೆ ಹೊರಟು ಹೋದ ತನ್ನ ಸಾಮಾನುಗಳೊಂದಿಗೆ.

ಕಮರನ್ ಕಸಬರಿಗೆಯಿಂದ ಸ್ವಚ್ಛಗೊಳಿಸಿದಳು, ಹಲಗೆಯನ್ನು, ಅದರ ಮೇಲೆ ಚಾದರ ಹಾಸಿ ಸೀರೆಯನ್ನು ತನ್ನ ಮುಂದೆ ಅಗಲ ಮಾಡಿ ಹರಡಿ, ಅದರಲ್ಲಿ ಚಿತ್ರಾಂಕಿತವಾದ ಎಲೆ ಬಳ್ಳಿಗಳನ್ನು ದಿಟ್ಟಿಸಿ ನೋಡಿದಳು. ಸೂಜಿಯಲ್ಲಿ ಬಿಳಿದಾರ ಪೋಣಿಸಿದಳು. ಗೋಡೆಗೆ ಆಸರವಾಗಿ ಕುಳಿತು ಸೀರೆಯ ಸೆರಗನ್ನು ಮೊಣಕಾಲ ಮೇಲೆ ಹಾಕಿಕೊಂಡು ಬುಟೇವು ಹಾಕತೊಡಗಿದಳು...

ಆಗ ಆಕೆ ತನ್ನ ತಲೆ ಮೊಣಕಾಲ ಮೇಲಿರಿಸಿ ಬಿಕ್ಕಿ ಬಿಕ್ಕಿ ಅಳತೊಡಗಿದಳು...

Printed at Tarang Printers, Delhi-110092